## Abbreviations

1. Admn - Administration and social life under Vijayanagara by - T.V. Mahalingam
2. ARSIE (MER) - Annual reports of south Indian Epigraphy. The Inscriptions copied in particular years and published in the report are referred to us 1 of 1887, 67 of 1922 etc.
3. ASI - Archaeological survey of India
4. Briggsi Firishtah : History of the Rise of the Mahamedan power in India, tri do by John Briggs, 4 vols
5. EC - Epigraphia carnatica
6. EI - Epigraphia Indica
7. FE - A Forgotten empire, robert swell
8. FSH - Further sources of vijayanagara History
9. Hisi - The Historical inscriptions of south India
10. HSI - A History of south India, from pre historical time of fall of Vijayanagar, by K.A. Nilakanta Sastri
11. I.A - Indian Anti Quary
12. I.H.Q - Indian Historical Quarterly
13. I.P.S - Chronological list of inscriptions of the padu kottai state
14. JAHRS - Journal of the Andra Historical Research society
15. JBBRS - Journal of the Bombay branch of the royal Asiatic society
16. KI - Karnataka inscriptions
17. LGVE - Local Government in the Vijayanagara empire, by A.V.V.Ratnam
18. MAR - Annual reports of the Mysore Archaeological department
19. M.G - Mysore Gazetter, 8 Vols, by C. Hayavadanarao
20. Nel - Ins - NEllore District inscriptions
21. Q.J.M.S - Quarterly Journal of the Mythic Society
22. RITTD - Report on the inscriptions of Tirumalai tirupati Devasthanam, by S. Subramany sastri, II Vol.
23. Sii - South Indian inscriptions
24. Sip - South Indian Polity by T.V. Mahalingam
25. Soc & Pol - Social and Political life in the Vijaya nagara, empire, by B.A. Saletore

26. Studies - Studies in the history of the third dynasty of Vijayanagara, by N. Venkata Romanayya

27. T.T.D - Tirumalai tirupathi devasthanam Inscriptions

28. Vij - Comm - Vijay nagar, Sex - Centenary commanoration volume

29. VRI - Atopographical list of inscriptions of the madras presidency, by V. Rangacharya, I. Volume

## ಕೃತಜ್ಞತೆಗಳು

ಮೊದಲು ನನಗೆ ಸಂಶೋಧನೆ ಮಾಡಲು ಅನುಮತಿ ನೀಡಿದ ಘನತೆವೆತ್ತ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಯನ ವಿಭಾಗದಲ್ಲಿ ಸಂಶೋಧಕನಾಗಿ ಕಾರ್ಯ ನಿರ್ವಹಿಸಿದ ನಾನು ಮಹಾ ಪ್ರಬಂಧವನ್ನು ಸಿದ್ಧಪಡಿಸಿ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸುತ್ತಿರುವ ಈ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲ ಮಹನೀಯರನ್ನು ಕೃತಜ್ಞತೆಯಿಂದ ನೆನೆಸಿಕೊಳ್ಳುವುದು ನನ್ನ ಆದ್ಯ ಕರ್ತವ್ಯ.

ನಾನು ಸಂಶೋಧನೆಯನ್ನು ಕೈಗೊಳ್ಳಲು ಮೂಲ ಕಾರಣರು, ಪ್ರೇರಣರು ಮತ್ತು ಇಂದು ನಾನು ಈ ಹಂತ ತಲುಪಲು ಸ್ಫೂರ್ತಿದಾಯಕರು ಆದ ಸಿ.ಹೆಚ್. ರಾಜಶೇಖರಗೌಡ ಸರ್‌ರವರನ್ನು ಹೇಗೆ ನೆನೆಯಬೇಕೆಂಬುದೇ ಗೊತ್ತಾಗುತ್ತಿಲ್ಲ. ಅವರು ನೀಡಿದ ಧೈರ್ಯ, ಸ್ಥೈರ್ಯ ಅಂತಹುದು. ಅವರಿಗೆ ನನ್ನ ತುಂಬು ಹೃದಯದ ವಂದನೆಗಳು ಸಲ್ಲುತ್ತವೆ.

ಮಾರ್ಗದರ್ಶಕರಾಗಿ ಸಂಶೋಧನೆಯ ಉದ್ದಕ್ಕೂ ನನಗೆ ಎಲ್ಲಾ ರೀತಿಯ ಸಲಹೆ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸಿದ ನನ್ನ ಪ್ರೀತಿಯ ಗುರುಗಳೂ ಹಾಗೂ ಪ್ರಾಧ್ಯಾಪಕರಾದ ಡಾ. ಪುಟ್ಟಯ್ಯರವರನ್ನು ಹೃದಯ ಪೂರಕವಾಗಿ ನೆನೆಯುತ್ತೇನೆ.

ನನಗೆ ಯಾವುದೇ ಸಂದೇಹ ಬರಲಿ ನಾನು ಮೊದಲಿಗೆ ಬೇಟಿಯಾಗುತ್ತಿದ್ದದು ಪ್ರಸ್ತುತ ಇತಿಹಾಸ ವಿಭಾಗದ ಮುಖ್ಯಸ್ಥರಾದ ಪ್ರೊ. ಸರಸ್ವತಿ ಮೇಡಮ್ ಅವರನ್ನು. ಇವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಸಂಶೋಧನೆ ಅವಧಿಯಲ್ಲಿ ಎಲ್ಲಾ ರೀತಿಯಲ್ಲೂ ಸಹಕಾರ ನೀಡಿದ ನನ್ನ ಗುರುಗಳಾದ ಪ್ರೊ. ಆರ್.ರಾಜಣ್ಣ, ಪ್ರೊ. ಅಶ್ವತ್ಥನಾರಾಯಣ, ಪ್ರೊ. ಸೆಬಾಸ್ಟಿಯನ್ ಜೋಸೆಫ್, ಪ್ರೊ. ಸುಗೀತ ಸುವರ್ಣ, ಪ್ರೊ.ಕೆ. ಸದಾಶಿವ, ಪ್ರೊ.ವೈ.ಎಚ್.ನಾಯಕವಾಡಿ, ಸಹ ಪ್ರಾಧ್ಯಾಪಕರಾದ ಡಾ. ಸೋಮಶೇಖರ್ ಹಾಗೂ ಡಾ.ಸಿ.ಗುರುಸಿದ್ದಯ್ಯರವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಸಂದರ್ಭದಲ್ಲಿ ನನಗೆ ಅಗತ್ಯವಾದ ಗ್ರಂಥಗಳನ್ನು ನೀಡಿ ಸಹಕರಿಸಿದ ಇತಿಹಾಸ ಅಧ್ಯಯನ ವಿಭಾಗದ ಗ್ರಂಥಪಾಲಕರಾದ ಕೆ. ರಾಜೇಂದ್ರ ಕೊಡಂಬಳ್ಕರ್ ಹಾಗೂ ಕಛೇರಿಯ ಎಲ್ಲಾ ಸಿಬ್ಬಂದಿ ವರ್ಗದವರನ್ನು ಆತ್ಮೀಯವಾಗಿ ಸ್ಮರಿಸುತ್ತೇನೆ.

ಈ ನನ್ನ ಸಂಶೋಧನಾ ಅವಧಿಯಲ್ಲಿ ಅನೇಕ ಸಂಸ್ಥೆಗಳು, ಗ್ರಂಥಾಲಯಗಳು ನನ್ನ ಸಂಶೋಧನೆಗೆ ಮಾಹಿತಿಯನ್ನು ನೀಡಿ ಸಹಕರಿಸಿದೆ. ಅವೆಲ್ಲವನ್ನು ಕೃತಜ್ಞತೆಯಿಂದ ನೆನೆಯುವುದು ನನ್ನ ಆದ್ಯಕರ್ತವ್ಯ. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ ಹಾಗೂ ಇತಿಹಾಸ ವಿಭಾಗದ ಗ್ರಂಥಾಲಯ, ಮೈಸೂರು ಅರಮನೆಯಲ್ಲಿರುವ ಗ್ರಂಥಾಲಯ, ಮೈಸೂರು ವಸ್ತು ಪ್ರಾಧಿಕಾರ ಕರ್ನಾಟಕ ಪುರಾತತ್ವ ಇಲಾಖೆ ಮತ್ತು

ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಈ ಎಲ್ಲಾ ಸಂಸ್ಥೆ ಮತ್ತು ಗ್ರಂಥಪಾಲಕರಿಗೆ ಆಡಳಿತ ಅಧಿಕಾರಿಗಳಿಗೆ ನಾನು ಆಬಾರಿಯಾಗಿದ್ದೇನೆ.

ನಾನು ಶೈಕ್ಷಣಿಕವಾಗಿ ಈ ಹಂತವನ್ನು ತಲುಪಲು ನನ್ನ ತಂದೆ ಕೆ. ಗೌಡಯ್ಯ, ತಾಯಿ ಶಾರದ ಗೌಡಯ್ಯರವರ ಆಶೀರ್ವಾದ ಹಾಗೂ ಸಹೋದರಿಯರು ಮತ್ತು ನನ್ನನ್ನು ಸ್ನೇಹ ಬಾಂಧವ್ಯದಿಂದ ಕಾಣುವ ಬಾವ ಮಾಯಪ್ಪ ಎಂ.ಡಿ ಇವರುಗಳ ಸಹಕಾರ ಮಾತುಗಳಲ್ಲಿ ಹೇಳುವಂತಹುದಲ್ಲ. ಇವರಿಗೆಲ್ಲಾ ನಾನು ಎಂದೆಂದೂ ಚಿರ ಋಣಿ.

ನನ್ನ ಈ ಸಂಶೋಧನಾ ಅವಧಿಯಲ್ಲಿ ಕ್ಷೇತ್ರಕಾರ್ಯಕ್ಕೆ ಹೊರಟಾಗ ಮತ್ತಿತರ ಸಂದರ್ಭಗಳಲ್ಲಿ ಸಹಕರಿಸುತ್ತಿದ್ದ ನನ್ನ ಆತ್ಮೀಯ ಸ್ನೇಹಿತರಾದ ಮಂಜುನಾಥ್,ಪಿ. ನೇತ್ರಾನಂದ್,ಸಿ ಹರ್ಷ.ಬಿ.ಕೆ, ಹನುಮಂತ.ಜಿ ರವರನ್ನು ನೆನೆಯಲೇಬೇಕು. ನಾನು ಈ ಸಂದರ್ಭದಲ್ಲಿ ಪ್ರತ್ಯೇಕವಾಗಿ ಸ್ಮರಿಸಿಕೊಳ್ಳಲೇಬೇಕಾದ ವ್ಯಕ್ತಿಗಳೆಂದರೆ ಡಾ. ನಿರ್ಮಲಾರಾಜ್ ಮತ್ತು ಡಾ.ಬಿ. ವೆಂಕಟರಾಮಣ್ಣ ಸರ್, ಇವರ ಸಲಹೆ ಸೂಚನೆಗಳು ಇಂದು ಈ ಮಹಾಪ್ರಬಂಧ ಅಚ್ಚುಕಟ್ಟಾಗಿ ಮೂಡಿಬರಲು ಕಾರಣವಾಗಿದೆ ಎಂದರೆ ತಪ್ಪಾಗಲಾರದು.

ಕೊನೆಯದಾಗಿ ಈ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಅಂದವಾಗಿ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಎನ್.ಜ್ಯೋತಿರವರಿಗೂ ನನ್ನ ಕೃತಜ್ಞತೆಗಳು ಸಲ್ಲಿಸುತ್ತೇನೆ.

ಮಹೇಶ್. ಜಿ

## ಅನುಬಂಧ - ೧

## ವಿಜಯನಗರ ಕಾಲದಲ್ಲಿ ಕಂಡುಬರುವ ತೆರಿಗೆ ಮತ್ತು ಮಾನ್ಯಗಳು

ವಿಜಯನಗರ ಸಾಮ್ರಾಜ್ಯವು ಅನೇಕ ಆಶ್ರಿತ ಸಂಸ್ಥಾನಗಳನ್ನು ಹೊಂದಿದ್ದರೂ ದಕ್ಷಿಣ ಭಾರತದಲ್ಲಿ ಹಿಂದಿನ ಯಾವುದೇ ರಾಜ್ಯಗಳಿಗಿಂತ ಹೆಚ್ಚು ಕೇಂದ್ರೀಕೃತವಾಗಿದ್ದಿತು. ರಾಜ್ಯಾಧಿಪತಿಯನ್ನು ಮಹಾರಾಜನೆಂದು ಕರೆಯಲಾಗುತ್ತಿದ್ದರೂ ಅಧಿಕಾರವೆಲ್ಲ ಬಹುವೇಳೆ ಅವನ ಮಂತ್ರಿಯ, ಮಹಾಪ್ರಧಾನನ ಕೈಗಳಲ್ಲೇ ಕೇಂದ್ರೀಕೃತವಾಗಿರುತ್ತಿತ್ತು. ಮಹಾರಾಜನ ಕೈಕೆಳಗೆ ಒಂದು ದೊಡ್ಡ ರಾಜ್ಯ ಸಮಾಲೋಚನಾ ಸಮಿತಿ ಇದ್ದಿತು. ಇದರಲ್ಲಿ ಆಸ್ಥಾನಿಕರಲ್ಲದೆ ಮುಖ್ಯ ಸಾಮಂತ ಪ್ರಭುಗಳು, ವರ್ತಕ ಸಮುದಾಯಗಳ ಪ್ರತಿನಿಧಿಗಳು ಇರುತ್ತಿದ್ದರು. ಪ್ರಾಂಶುಪಾಲರು ನೇರವಾಗಿ ಮಹಾಪ್ರಧಾನನಿಗೆ ಜವಾಬ್ದಾರರಾಗಿರುತ್ತಿದ್ದರು. ಯಾವುದೇ ಪ್ರತ್ಯೇಕತಾ ಚಟುವಟಿಕೆಯ ಅಪಾಯವನ್ನು ತಪ್ಪಿಸಲೋಸುಗ ಈ ಪ್ರಾಂತಪಾಲಕರನ್ನು ಸಾಮಾನ್ಯವಾಗಿ ಪ್ರತಿ ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಬದಲಾಯಿಸಲಾಗುತ್ತಿತ್ತು. ಈ ಪ್ರಾಂತಪಾಲಕರು ರಾಜ್ಯ ಭೂಮಿಗಳಿಂದ ಭೂ ಕಂದಾಯಗಳನ್ನು, ಕಪ್ಪಕಾಣಿಕೆಗಳನ್ನು ಸಾಮಂತ "ಅಮರನಾಯಕ" ಭೂಮಾಲೀಕರಿಂದಲೂ ಆಶ್ರಿತ ರಾಜರುಗಳಿಂದಲೂ ವಸೂಲು ಮಾಡಿ ರಾಜ್ಯಭಂಡಾರಕ್ಕೆ ಕಳುಹಿಸಿಕೊಡುತ್ತಿದ್ದರು. ಭೂಗಂದಾಯದಲ್ಲಿ ಒಂದು ಸ್ವಲ್ಪಭಾಗವನ್ನು ತಾವೇ ಇರಿಸಿಕೊಳ್ಳಲು ಅವರು ಹಕ್ಕು ಹೊಂದಿದ್ದರು.

ಯೋಧ-ಸಾಮಂತರಿಗೆ - ಅಮರನಾಯಕರಿಗೆ ಅವರು ಸಲ್ಲಿಸಿದ ಸೈನ್ಯ ಸೇವೆಗೆ ಪ್ರತಿಫಲವಾಗಿ ರಾಜ್ಯ ಭೂಮಿಗಳನ್ನು ಕೆಲವು ಶರತ್ತುಗಳೊಂದಿಗೆ ನೀಡಲಾಗುತ್ತಿತ್ತು. ಅಮರನಾಯಕರು ಇಕ್ತದಾರರಂತಿರಲಿಲ್ಲ. ಏಕೆಂದರೆ ಅಮರನಾಯಕರೇ ರೈತರಮೇಲೆ ಹಾಕಲಾಗುತ್ತಿದ್ದ ತೆರಿಗೆಗಳ ಪ್ರಮಾಣಗಳನ್ನು ಗೊತ್ತುಪಡಿಸುತ್ತಿದ್ದರು ಮತ್ತು ತಮ್ಮ ಭೂಮಿಗಳನ್ನು ಪರಾಧೀನಗೊಳಿಸುವ ಹಕ್ಕು ಅವರಿಗಿದ್ದಿತು. ಅಮರ ನಾಯಕರು ರಾಜ್ಯ ಭಂಡಾರಕ್ಕೆ ಸಲ್ಲಿಸುತ್ತಿದ್ದ ಕಾಣಿಕೆಯು ಅವರು ರೈತರಿಂದ ವಸೂಲು ಮಾಡಿದ ತೆರಿಗೆಗಳ ಗಾತ್ರದೊಂದಿಗೆ ಸಂಬಂಧ ಹೊಂದಿರಲಿಲ್ಲ. ಇದು ರಾಜ್ಯ ಆಸ್ಥಾನದಲ್ಲಿ ಆ ಅಥವಾ ಈ ಸಾಮಂತ ಪ್ರಭುವಿನ ಮೇಲೆ ಅವಲಂಬಿಸಿದ್ದಿತು. ಸಾಮಾನ್ಯವಾಗಿ ಅಮರ ನಾಯಕರು ತಮ್ಮ ಸೈನಿಕ ದಳಗಳ ಪಾಲನೆ ಪೋಷಣೆಗೆ ಸಂಬಂಧಿಸಿದ ವೆಚ್ಚಗಳನ್ನು ಭರಿಸಿ ನಂತರ ತಮ್ಮ ಎಸ್ಟೇಟುಗಳಿಂದ ಪಡೆದ ಆದಾಯದಿಂದ ಸುಮಾರು ೧/೩ ಪಾಲನ್ನು ಭಂಡಾರಕ್ಕೆ ನೀಡುತ್ತಿದ್ದರು. ಆದರೆ ಅಮರ ನಾಯಕರು ತಮ್ಮ ಆದಾಯಗಳನ್ನು ಹೆಚ್ಚಿಸಿಕೊಳ್ಳಲೋಸುಗ ವೆಚ್ಚಗಳ ಪ್ರಮಾಣಗಳನ್ನು ತಗ್ಗಿಸಲು ಯತ್ನಿಸುತ್ತಿದ್ದರು.

## ಭೂಗಂದಾಯ

ವಿಜಯನಗರದ ಅರಸರು ಪೂರ್ವ ಮರ್ಯಾದೆಯನ್ನು ಪಾಲಿಸುವವರು. ಅವರು ಕರ್ನಾಟಕದಲ್ಲಿ ಹಿಂದಿನ ಸಂಪ್ರದಾಯಗಳನ್ನು ಪಡೆದುಕೊಂಡಿದ್ದುದು ಮಾತ್ರವಲ್ಲದೆ ನೂತನ ತತ್ವಗಳನ್ನು ವಿಕಾಸಗೊಳಿಸಿ ವ್ಯವಸ್ಥೆಯನ್ನು ಸಮರ್ಪಕವಾಗುವಂತೆ ಮಾಡುತ್ತಿದ್ದರು. ತೆರಿಗೆಯ ಯಾವುದೇ ವ್ಯವಸ್ಥಿತ ಪದ್ಧತಿಯಂತೆ ವಿಜಯನಗರ ಸಾಮ್ರಾಜ್ಯದ ಭೂಗಂದಾಯ ವ್ಯವಸ್ಥೆಯಲ್ಲಿ ಎರಡು ಹಂತಗಳಿದ್ದವು. ಕಂದಾಯ ನಿಗದಿ ಮತ್ತು ಕಂದಾಯ ವಸೂಲಿ ಭೂಗಂದಾಯ ನಿಗದಿ ಪದ್ಧತಿಯಲ್ಲಿ ಮೊದಲನೆಯ ತತ್ವ ಕೃಷಿಕನು ಕೊಡಬೇಕಾದ ತೆರಿಗೆಯನ್ನು ಮುಖ್ಯವಾಗಿ ಮಣ್ಣಿನ ವರ್ಗ ಮತ್ತು ಬೇಸಾಯದ ಪರಿಸ್ಥಿತಿ ಇವುಗಳ ಆಧಾರದಿಂದಲೇ ನಿರ್ಣಯಿಸಬೇಕು. ವಿಜಯನಗರ ಕಾಲದಲ್ಲಿಯೂ ಈ ನಿಯಮವನ್ನೇ ಅನುಸರಿಸುತ್ತಿದ್ದರು. ಅದಕ್ಕಾಗಿ ನಾಲ್ಕು ಬಗೆಯ ಬೇಸಾಯವನ್ನು ಪರಿಗಣಿಸಲಾಗುತ್ತಿತ್ತು. ಕಾಡಾರಂಭ (ಒಣಬೇಸಾಯ), ನೀರಾರಂಭ (ಗದ್ದೆ ಬೇಸಾಯ), ತೋಟಾರಂಭ ಮತ್ತು ಕುಮರಿ (ಸ್ಥಳ ವರ್ಗಾಯಿಸುವ ಬೇಸಾಯ.)

ಶಾಸನಗಳಲ್ಲಿ ಇವುಗಳನ್ನು ಬೇರೆ ಬೇರೆಯಾಗಿ ಉಲ್ಲೇಖಿಸಿರುವುದರಿಂದ ಬೇರೆ ಬೇರೆ ದರಗಳಲ್ಲಿ ಕಂದಾಯ ನಿಗದಿಯಾಗಿತ್ತೆಂದು ಹೇಳಬಹುದು. ಯಾವ ಬಗೆಯ ಭೂಮಿಗೆ ಸೇರಿದೆ ಎಂಬುದರ ಮೇಲೂ ಅದು ನಿಗದಿಯಾಗುತ್ತಿತ್ತು ಗದ್ದೆಗಳನ್ನು ಉತ್ತಮ, ಮದ್ಯಮ, ಕನಿಷ್ಠ ಎಂದು ಮೂರು ಬಗೆಯಾಗಿ ವಿಂಗಡಿಸಲಾಗಿತ್ತು.

ತೋಟದ ಭೂಮಿಗೆ ಸಂಬಂಧಿಸಿದಂತೆ ಕಂದಾಯ ನಿಗದಿಪಡಿಸುವ ಮೊದಲು ಅಲ್ಲಿನ ಉತ್ಪನ್ನಗಳನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದರು. ತೆಂಗು, ಅಡಕೆ, ಮಾವು, ಹಲಸು, ವೀಳ್ಯದೆಲೆ ಮತ್ತು ಬಾಳೆ ಮರಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸುತ್ತಿದ್ದರು. ಗದ್ದೆಯಲ್ಲೂ ಸಹ ಕಬ್ಬು ಮತ್ತು ಧಾನ್ಯಗಳಿಗೆ ಪ್ರತ್ಯೇಕವಾಗಿ ತೆರಿಗೆ ಇರುತ್ತಿತ್ತು.

ಹೀಗೆ ವಿಜಯನಗರದ ಅರಸರು ಪ್ರತ್ಯೇಕ ತೆರಿಗೆ ಪದ್ಧತಿಯನ್ನು ಕೃಷಿಗೆ ಸಂಬಂಧಿಸಿದಂತೆ ಅನುಸರಿಸುತ್ತಿದ್ದರು ಎಂದು ವೇದ್ಯವಾಗುತ್ತದೆ. ಕಂದಾಯ ನಿಗದಿಯ ವ್ಯವಸ್ಥಿತ ರೂಪದ ಎರಡನೆಯ ನಿಯಮ ರೈತರೊಂದಿಗೆ ಕಂದಾಯವನ್ನು ಕುರಿತು ಇತ್ಯರ್ಥ ಮಾಡಿಕೊಳ್ಳುವುದಕ್ಕೆ ಮುಂಚೆ ಅದನ್ನು ಸರ್ವೇ ಮಾಡಿ ಅಳತೆ ಮಾಡಬೇಕು ಎನ್ನುವುದು. ಇದು ಕರ್ನಾಟಕದಲ್ಲಿ ಹಿಂದಿನಿಂದಲೂ ಬಂದ ಪದ್ಧತಿ. ವಿಜಯನಗರ ಕಾಲಕ್ಕಿಂತ ಮುಂಚಿನಿಂದಲೂ ಇಲ್ಲಿ ಜಮೀನು ಅಳತೆಯ ಅನೇಕ ಘಟಕಗಳು ಚಾಲ್ತಿಯಲ್ಲಿದ್ದವು. ಕದಂಬರ ಕಾಲದಲ್ಲಿ ನಿರ್ವರ್ತನ, ಮತ್ತರು ಮತ್ತು ಮಣ್ಣು ನೆಲ ಅಳತೆಯ ಮಾನಕಗಳಾಗಿದ್ದವು. ಗಂಗರ ಶಾಸನಗಳಲ್ಲಿ ಗಂಗ ಕೋಲು, ಹೊಯ್ಸಳರ ಕಾಲದಲ್ಲಿ ಬೇರುಂಡ ಕೋಲು, ಕಚ್ಛವಿ ಕೋಲು ಮತ್ತು ಏರಸೈ ಕೋಲು ರಾಜನ ಮಟ್ಟದ ದಂಡ ಅಥವಾ ಕೋಲು ಇವುಗಳ ಉಲ್ಲೇಖವಿದೆ. ಇವಲ್ಲದೆ ೧೮ ಮೊಳದ ಅಳತೆ ಬರುತ್ತದೆ.

## ಕೃಷಿಯೇತರ ತೆರಿಗೆಗಳು

೧೪ನೆಯ ಶತಮಾನದಿಂದ ಕಂಡುಬಂದ ಆರ್ಥಿಕ ಪರಿವರ್ತನೆಯ ಕುರುಹುಗಳು ಕೃಷಿಯೇತರ ಚಟುವಟಿಕೆ ಮತ್ತು ಉತ್ಪಾದನೆಗಳಿಗೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚು ಪ್ರಧಾನವಾದವು. ಅರ್ಥ ವ್ಯವಸ್ಥೆಯು ವಿಸ್ತಾರಗೊಳ್ಳುತ್ತಿದ್ದುದಕ್ಕೆ ಮೊದಲನೆಯ ಸಾಕ್ಷಿಯನ್ನು ಉತ್ಪಾದನೆ ಮತ್ತು ವಿನ್ಯಾಸದಲ್ಲಾದ ಪರಿವರ್ತನೆಯಲ್ಲಿ ಗಮನಿಸಬಹುದು. ಅಂದರೆ "ತಮ್ಮ ಅನುಭೋಗಕ್ಕಾಗಿ ಉತ್ಪಾದನೆ" ಎಂಬುದು ಮಾರುಕಟ್ಟೆಗಾಗಿಯೂ ಉತ್ಪಾದನೆ ಎಂದಾಯಿತು. ಇದರಿಂದ ವ್ಯಾಪಾರ ವಹಿವಾಟು ಪ್ರಮಾಣದಲ್ಲಿ ಅಧಿಕವಾಯಿತು. ಇದು ವಿಸ್ತಾರಶೀಲ ಅರ್ಥವ್ಯವಸ್ಥೆಗೆ ಪೂರಕವಾಗುವಂತೆ ಸಂತೆಗಳು ಮತ್ತು ಮಾರುಕಟ್ಟೆಗಳು ಹೆಚ್ಚಲು ಅವಕಾಶ ಮಾಡಿತು. ಈ ವಾಣಿಜ್ಯ ಚಟುವಟಿಕೆಯನ್ನು ರಾಜರು, ಸ್ಥಳೀಯ ಉದ್ಯಮಿಗಳು, ಸರ್ಕಾರಿ ಅಧಿಕಾರಿಗಳು, ಮಂಡಲಿಗಳು ಮತ್ತು ಕಸಬು ಪಂಗಡಗಳು ಪ್ರತ್ಯಕ್ಷ - ಪರೋಕ್ಷ ರೀತಿಯಲ್ಲಿ ಪ್ರೋತ್ಸಾಹಿಸಿದರು. ಈ ಕಾಲದಲ್ಲಿ ಗೃಹ ಕೈಗಾರಿಕೆಗಳು ಗ್ರಾಮಾಂತರ ಪ್ರದೇಶಗಳಲ್ಲೂ, ಪಟ್ಟಣಗಳಲ್ಲೂ ಇದ್ದವು. ಗ್ರಾಮಗಳಲ್ಲಿ ಬಡಗಿ ಮತ್ತು ಕಮ್ಮಾರರು ಪ್ರಮುಖ ಕುಶಲ ಕರ್ಮಿಗಳಾಗಿದ್ದರು. ಅವರನ್ನು ಓಜರೆಂದು ಕರೆಯುತ್ತಿದ್ದರು. ಬಡಗಿ - ಬೇವೋಜ, ಕಮ್ಮಾರ, ಲಿಂಗೋಜ ಎಂಬ ಹೆಸರುಗಳನ್ನು ನೋಡಬಹುದು.

## ವ್ಯಾಪಾರ ವಾಣಿಜ್ಯ

ವಿಜಯನಗರ ಕಾಲದಲ್ಲಿ ವ್ಯಾಪಾರ ವ್ಯವಸ್ಥೆ ಅಚ್ಚುಕಟ್ಟಾಗಿತ್ತು. ಪ್ರಮುಖ ಸ್ಥಳಗಳಲ್ಲಿ ವಾರದ ಸಂತೆಗಳನ್ನು ಸ್ಥಾಪಿಸುತ್ತಿದ್ದರು. ಸಂತೆ ಊರಿನ ಮುಖ್ಯಸ್ಥರನ್ನು ಪಟ್ಟಣಸ್ವಾಮಿ ಎಂದು ಕರೆಯುತ್ತಿದ್ದರು. ಕೆಲವು ಶಾಸನಗಳಲ್ಲಿ ಪಟ್ಟಣಶೆಟ್ಟಿ ಎಂಬ ಮಾತು ಬರುತ್ತದೆ. ಇಂಥ ಸಂತೆಗಳನ್ನು ಸ್ಥಾಪಿಸುವಾಗ ಸ್ಥಳೀಯ ರೈತರನ್ನು, ಕೃಷಿ ಕರ್ಮಿಗಳಾದ ಪಾಂಚಾಲರನ್ನು ಮತ್ತು ಪ್ರಮುಖ ವರ್ತಕ ಶ್ರೇಣಿಗಳನ್ನು ಸಭೆಗೆ ಕರೆದು ತೀರ್ಮಾನ ಮಾಡುತ್ತಿದ್ದರು. ಸಂತೆ ಸ್ಥಾಪನೆ ವ್ಯಾಪಾರದ ಅಭಿವೃದ್ಧಿಗೆ ಸಹಾಯಕವಾಗಿತ್ತು. ಮಾನವಿಕ ಕರ್ನಾಟಕ, ಸಂ. 39, ಸಂಚಿಕೆ ಪ್ರಸಾರಾಂಗ, ಮೈಸೂರು 2011

## ಅನುಬಂಧ - ೨

## ವಿಜಯನಗರ ಕಾಲದ ಕೆಲವು ತೆರಿಗೆಗಳ ವಿವರಗಳ ಪಟ್ಟಿ

ತಿರುವೈಗಾವೂರು ದೇವಾಲಯದ ಗೋಡೆಯ ಮೇಲಿನ ಶಾಸನದಲ್ಲಿ ಕೊಟ್ಟಿರುವ ತೆರಿಗೆಗಳ ಪಟ್ಟಿಯು ಪುನರ್ನಿಗದಿತ ತೆರಿಗೆ ದರಗಳಾಗಿದ್ದುವು. ಅದು ಭೂಕಂದಾಯವೇ ಮೊದಲಾದ ತೆರಿಗೆಗಳು ಮತ್ತು ಇತರ ಸುಂಕಗಳ ಸ್ವಾರಸ್ಯವಾದ ನಿರೂಪಣೆಯನ್ನು ಕೊಡುತ್ತದೆ. ಶಾಸನದ ವಿವರಗಳು ಹೀಗಿವೆ :

| ಕ್ರ.ಸಂ. | ಜಮೀನಿನ ವರ್ಗ | ವಸ್ತುರೂಪದ ತೆರಿಗೆ ದರ (ಬತ್ತ) (ಜಮೀನಿನ ಒಂದು ವೇಲಿಗೆ, ಅರಸುಪೆರು ಇಳೈಕ್ಕಿ ಇತ್ಯಾದಿ) | (ಕಾಣಿಕೈ, ಸಮ್ಮಂದಂ ಕಾಸಿ-ಕುಳಿ ಇತ್ಯಾದಿ) (ಪ್ರತಿ ವೇಲಿ ಜಮೀನಿಗೆ) |
|---|---|---|---|
| 1 | 2 | 3 | 4 |
| | | (೧) | |
| 1 | ಬತ್ತದ ಗದ್ದೆಗಳು | 40 ಕಳಂ ಬತ್ತ ಹಾಗೂ $^1/_4$ ಪಣಂ | 20 ಪಣಂ |
| 2 | ಹೊಸದಾಗಿ ಕೃಷಿಗೆ ತಂದ ಬಂಜರು ಭೂಮಿ | 40 ಕಳಂ ಬತ್ತ | 18 ಪಣಂ |
| 3 | ಕೃಷಿಗೆ ಅಳವಡಿಸಿದ ಅರಣ್ಯ ಪ್ರದೇಶ | 20 ಕಳಂ ಬತ್ತ | 2 ಪಣಂ |
| 4 | ಕಡೈಪ್ಪು ಜಮೀನು ಹಾಗೂ ಏತ ನೀರಾವರಿಯಿಂದ ಬೆಳೆ ತೆಗೆಯುವ ಜಮೀನು | 20 ಕಳಂ ಬತ್ತ | 10 ಪಣಂ |
| | | (೨) | |
| 1 | ಗದ್ದೆಗಳಲ್ಲಿನ ಬಾಳೆ ಮತ್ತು ಕಬ್ಬಿನ ತೋಟಗಳು | | 60 ಪಣಂ |
| 2 | ಒಡ್ಡುಗಳಡಿಯ ಬಾಳೆ ಮತ್ತು ಕಬ್ಬಿನ ಗದ್ದೆ | | 50 ಪಣಂ |
| 3 | ಕೆಂಪು ತಾವರೆ ಬೆಳೆಯುವ ಜವುಗು ಭೂಮಿ | | 40 ಪಣಂ |
| 4 | ಅರಿಶಿನ, ಶುಂಠಿ, ಈರುಳ್ಳಿ ಬೆಳೆಯುವ ನೆಲ | | 25 ಪಣಂ |

| | | |
|---|---|---|
| 5 | ಬದನೆಕಾಯಿ ಬೆಳೆಯುವ ಹೊಲಗಳು | 30 ಪಣಂ |
| 6 | ಹರಳು, ಸಾಸಿವೆ, ಕಡಲೆ ಬೆಳೆಯುವ ಜಮೀನು | 20 ಪಣ (ಅರಸು ಪೆರು ಮತ್ತು ನಿರೊಲೈ ಕೂಡಿ) |
| 7 | ಹೆಸರುಕಾಳು ಮೊದಲಾದ ದ್ವಿದಳಧಾನ್ಯ ಬೆಳೆಯುವ ಹೊಲ | 1 ಪಣಂ |
| 8 | ಎಳ್ಳು ಬೆಳೆಯುವ ಭೂಮಿ (ಮೊದಲ ಬೆಳೆಗೆ ತೆರಿಗೆ) | |
| 9 | ವೆರಿಕೂಲಂದು ಬೆಳೆಯುವ ಜಮೀನು | 200 ಪಣಂ |
| 10 | ಒಲಿಮುದು ಕೊಲಂದು ಬೆಳೆಯುವ ಜಮೀನು | 100 ಪಣಂ |

**(ಇ) ಒಣಬೆಳೆ (ಪಾನ್ ಪಯಿರು)**

| | | |
|---|---|---|
| 1 | 1500 ಅಡಿಕೆಕಾಯಿ ಕೊಡುವ ಪ್ರತಿ ಐದು ಅಡಕೆ ಮರಗಳು | 1 ಪಣಂ (ಅರಸು ಪೆರು ಸೇರಿ) |
| 2 | 40 ಕಾಯಿಗಳಿಗಿಂತ ಕಡಮೆಯಿಲ್ಲದಷ್ಟು ಫಸಲು ಕೊಡುವ ಪ್ರತಿ ತೆಂಗಿನ ಮರ (ಬಂಜರಾದ ಇನ್ನೂ ಸಸಿಯಾದ, ಮನೆಯ ಹಿತ್ತಲಲ್ಲಿ ಇರುವ ಮರಗಳಿಗೆ ವಿನಾಯಿತಿ) | $^{1}/_{2}$ ಪಣಂ |
| 3 | ಒಂದು ಮರಕ್ಕೆ 20ಕ್ಕಿಂತ ಕಡಿಮೆಯಿಲ್ಲದ ಹಣ್ಣು ಕೊಡುವ ಹಲಸಿನ ಮರ | ಉಪಲಬ್ಧವಿಲ್ಲ |

**(ಠ)**

| | | |
|---|---|---|
| 1 | ನಾಟ್ಟಾರ್ ಅಥವಾ ಹಳ್ಳಿಯ ಮುಖಂಡರ ಮನೆ (ಪ್ರತಿಯೊಂದಕ್ಕೆ) ಪಣಂ ಇತ್ಯಾದಿ ಸೇರಿ) | 3 ಪಣಂ (ವಿಲೈ ಅಸರುದಿ, ವಾಸಲ್ |
| 2 | ತಂತ್ರವನ್ನು ಅನುಸರಿಸುವ ಪ್ರತಿಯೊಬ್ಬನ ಮನೆ (ತಂತ್ರಿಮಾರ್) | $1^{1}/_{2}$ ಪಣಂ |
| 3 | ಮಕ್ಕಳ್‌ಗೆ ಸೇರಿದ ಪ್ರತಿಯೊಂದು ಮನೆ | $1^{1}/_{2}$ ಪಣಂ |
| 4 | ಅಂಗಡಿಗೆ ತಕ್ಕ ಚಾವಣಿಯುಳ್ಳ (ಶೆಡ್ಡು) ವರಾಂಡ (ಜನರು ವಾಸವಾಗಿಲ್ಲದ ಮನೆಗಳಿಗೆ ತೆರಿಗೆಯಿರಲಿಲ್ಲ) | $^{3}/_{4}$ ಪಣಂ |

(ಇ)

| | | |
|---|---|---|
| 1 | ಪ್ರತಿಯೊಬ್ಬ ಸೆಟ್ಟಿ ಮಾಲಕ | 3 ಪಣಂ (ಅರಸು ಪೆರು, ವಟ್ಟಂ ಕಾಣಿಕ್ಕೈ ಸೇರಿ) |
| 2 | ಪ್ರತಿಯೊಬ್ಬ ಮುಖ್ಯ ತೆರಿಗೆ ವಸೂಲಿಗಾರ | 4 ಪಣಂ |
| 3 | ಒಂದು ಮಗ್ಗವು ಕೆಲಸಮಾಡುತ್ತಿರುವ ಪ್ರತಿಯೊಬ್ಬ ಕೈಕ್ಕೋಲ ನೇಕಾರ | 4 ಪಣಂ |
| 4 | ಕೆಲಸ ಮಾಡದಿರುವ ಒಂದು ಮಗ್ಗವಿರುವ ಪ್ರತಿ ಕೈಕ್ಕೋಲ ನೇಕಾರ | 2 ಪಣಂ |
| 5 | ತನ್ನ ಮನೆಯಲ್ಲೇ ಅಂಗಡಿ ತೆರೆಯುವ ಪ್ರತಿ ಅಂಗಡಿಕಾರ (ಮನ್ನೈ ಕಡೆಕಾರನ್) | 3 ಪಣಂ |
| 6 | ಪ್ರತಿಯೊಬ್ಬ ನೇಕಾರ (ಸಲಿಯ) ಪ್ರತಿ ಮಗ್ಗಕ್ಕೆ | 9 ಪಣಂ |
| 7 | ಪ್ರತಿಯೊಬ್ಬ ನ್ಯಾಯಾಧೀಶ (ನ್ಯಾಯತ್ತಾರ್) | 5 ಪಣಂ |
| 8 | ಗ್ರಾಮಸಭೆಯ (ಮನ್ರಡಿ) ಪ್ರತಿ ಸದಸ್ಯ | $^1/_2$ ಪಣಂ |
| 9 | ಕೆಲಸ ಮಾಡುತ್ತಿರುವ ಪ್ರತಿ ಕಸೂತಿ ಮಗ್ಗ | 3 ಪಣಂ |
| 10 | ಕೆಲಸಮಾಡದ ಪ್ರತಿ ಕಸೂತಿ ಮಗ್ಗ | $1^1/_2$ ಪಣಂ |
| 11 | ಪ್ರತಿಯೊಬ್ಬ ಕಮ್ಮಾರ, ಬಡಗಿ, ಚಿನಿವಾರ ಮತ್ತು ಅಕ್ಕಸಾಲಿಗ | 5 ಪಣಂ (ಕೊಟ್ಟು, ಕಿರು ಅರಸು ಪೆರು ಕಾಣಿಕ್ಕೈ ಕೂಡಿ) |
| 12 | ಪ್ರತಿಯೊಬ್ಬ ಮುಖ್ಯ ಕುಂಬಾರ | 5 ಪಣಂ (ತಿರಿಗೈ ಆಯಂ ಸೇರಿ) |
| 13 | ಪ್ರತಿಯೊಬ್ಬ ಮುಖ್ಯ ಕ್ಷೌರಿಕ | 4 ಪಣಂ (ಕರಿವಿ ಆಯಂ ಸೇರಿ) |
| 14 | ಪ್ರತಿಯೊಬ್ಬ ಮುಖ್ಯ ಅಗಸ | 4 ಪಣಂ (ಕಲ್ಲಾಯಂ ಒಗೆಯುವ ಕಲ್ಲಿನ ಮೇಲೆ ತೆರಿಗೆ ಸೇರಿ) |
| 15 | ಪ್ರತಿಯೊಂದು ಕನ್ನಕ್ಕಾನಂ (ಕುಲುಮೆ) | 6 ಪಣಂ |
| 16 | ಪ್ರತಿಯೊಬ್ಬ ಮುಖ್ಯ ಗಾಣಿಗ | 20 ಪಣಂ (ಕರು ಆಯಂ ಸೇರಿ) |

| 17 | ಪರಿಯ ಜಾತಿಯ ಪ್ರತಿಯೊಬ್ಬ ವ್ಯಕ್ತಿ (ಕೆಲವು ನಿರ್ದಿಷ್ಟ ವ್ಯಕ್ತಿಗಳಿಗೆ ತೆರಿಗೆ ಇರುತ್ತಿರಲಿಲ್ಲ) | 6 ಪಣಂ |
|---|---|---|

ವಿಜಯನಗರದ ಇಮ್ಮಡಿದೇವರಾಯ, ಪು. 141, 143 ಡಾ.ಎಚ್.ಎಂ. ನಾಗರಾಜು, 1999

# Bibliography

## Primary Sources


### I. Archaeological sources

* A topographical list of the inscriptions of the Madras presidency by Rangacharya, 1 to 3, Madras, 1932
* Andhra Pradesh Government Archaeological Series
* Annual Report of South Indian Epigraphy, 1887-1945
* Annual Report of Indian Epigraphy, 1945-1946
* Annual Report on Kannada Research in Bombay province for 1939-40 (ed.) R.S. Panchamukhi, Dharwar, 1941.
* Archaeological Survey of Indian Reports, Calutta, 1887 onwards
* Epigraphia Carnatica, Vols. I to XVI, Banglaore
* Epigraphia Indica, Calcutta, 1892 onwards
* Epigraphia Indo - Moslemics
* Inscriptions of the Deccan, Naik A.V., Poona, 1947
* Karnataka Inscriptions, Vols. 1-5 (ed.) R.S. Panchamuki, Dharwar.
* List of Inscriptions, Topographically arranged - 3 Volumes, Raghavachari, V.
* Mysore Archaeological Reports, 1906-1956.
* Mysore and Coorg from Inscriptions, Rice, Banglaore, 1909
* Selected South Indian Inscriptions, (ed.) Ramachandra Dikshitar, V.R.
* South Indian Inscriptions - Vols. 1 to 15, 17 and 20, 1890 onwards.
* The Inscriptions of the Madras Presidency, Vols. I and II, (ed.) Rangacharya, V.
* The Historical Inscriptions of Southern India, Sewell and S.K. Iyengar.
* The Madras Epigraphicst's Reports, 1932.

### II. Literary Works

* Kanakadasa: Mohanatarangini
* Krishnadeva Raya: Amuktamalyada, (Extract translated in Sources of Vijayanagara Histroy)
* Kesiraja: Sabdamanidarpana, (ed.) D.L. Narasimhachar, Mysore, 1959.
* Madhava. Parasara - Madhavigamn or Vidyaranya Smrithi: A portion of this work on law and government was translated by A.C. Burnell, Under the Title Dayabhaga (Madras, 1868)
* Nijaguna Shivayogi, V. Vekachintamani: (ed.) G.M. Umapathi Sastri, Mysore 1966.
* Someswara: Vikramankabhy udaym, (ed.) Murari Lal Nagar, Baroda (GOS), 1966.

* Raghavanka: Siddaramacharitra, (ed.) T.S. Venkannayya and D.L. Narasimhachar, Shimgoa, 1941)

## III. Chronicles and Traveller's Accounts

* Abdur Razzaq: Elliot's History of India as told by its own historians, Vol. IV.
* Ancient India and South Indian History and Culture, 2 Vols, Poona, 1941.
* Altekar A.S : History of Village Communities in Western India, Bombay, 1927.
* Barbosa: The Book of Durate Barbosa - 2 Vols. Translated with notes etc., by Longsworth Dames, London, 1918.
* Evolution of the Hindu Administrative Institutions of Southern India, Madras, 1931.
* Desai P.G : Jainism in South India.
* Dikshit G.S : Local Self-Government in Medieval Karnataka, Dharwar, 1964.
* Dikshitar V.R.R : Hindu Administrative Institutions, Madras, 1920.
* Gururajachar S : Some Aspects of Economic and Social Life in Karnataka (A.D. 1000-1300), Mysore, 1973.
* Gururaja Bhat P : Studies in Tuluva History and Culture, 1975.
* Hears H : The Aravidu Dynasty of Vijayanagara, Madras, 1927.
* Kannada Sahitya Charitre, Mysore, 1960.
* Mukherjee R.K : The Economic History of India (1600 to 1800) Bombay.
* Nanjundiah, H.V. and Ananthakrishna Iyer : The Mysore Tribes and Castes, Vols. 1 to 4, Bangalore.
* Narasimhacharya R : History of Kannada Literature, 3 Vols. Bangalore, 1919-1929.
* Narasimha Murthy A.V : The Coins of Karnataka, Mysore, 1975,
* Nilakanta Sastri K.A : History of South India, II Edn. Madras, 1966.
* Further Sources of Vijayanagara History, 3 Vols. Madras, 1946.

  Pal, B.N. Pricniples of Agricultural Economics, Allahabad, 1939.

  Puttanna, M.S. History of Ikkeri.
* Rama Sharma, M.H (ed.) The History of the Vijayanagara Empire : Decline and Disappearance, Two Volumes.
* Ramesh Dutt : The Economic History of India, (1757-1837), London, 1956.

  The Economic History of India (1837-1900), London, 1956
* Ramesh, K.V : A History of South Kanara, Dharwar, 1970. Tulunadina Itihasa, Mysore, 1969.
* Rice, B. Lewis : Mysore and Coorg from the Inscriptions, London, 1909.
* Mysore Gazetters, 2 Vols, Westimnster, 1897.
* Rice, E.P : A History of Karnataka Literature, (Revised Edition), Bangalore, 1921.

* Robert Sewell : A Forgotten Empire, I, Indian Edn. Delhi, 1902
* Sources of Vijayanagara History, Madrdas, 1919.
* Shivanna K.S : The Agrarian Sytem of Karnataka 1336-1761, Mysore, 1982.
* Smith V.A : History of Fine Arts of India and Ceylon, Oxford, 1930
* Sundaram K : Studies in Economic and Social Conditions of Medieval Andhra, Madras, 1968,
* Venkataramanaiya N : Further Sources of Vijayanagara History, Madras, 1946.
* Studies in the History of the Third Dynasty of Vijayanagara, Madras, 1935.
* Venkata Ratnam A.V : Local Government in the Vijayanagara Empire, Mysore, 1972.
* Vijayanagara Six-Centenary Commemoration Volumes, Dharwar, 1936.

## Periodicals and Other Publications - English

* Acharyalu, Raghava K : 'Rayavachakamu and other Telugu Sources for Krishnadeva Raya's Reign', J.A.H.R.S. IV, pp. 221-226.
* Aiyangar, Krishnaswamy S : 'Social Legislation Under Hindu Government's Q.J.M.S. VI, pp. 47-67.
* 'Landmark in South Indian History', Q.J.M.S.V, pp. 27-37
* 'Mysore and Decline of the Vijayanagara Empire' Q.J.M.S. XIII, pp. 621-627.
* 'Foundation of Vijayanagara', Q.J.M.S. XI, pp. 742, 754.
* 'A Little known chapter of Vijayanagara History from 1450-1509' Hindustan Review, 1911.
* 'Virupaksha II, Bhandarkar Commemoration Volume, pp. 255-264, 1917.
* 'Ramaraya of Vijayanagara' Sardesai Commemoration Volume, 1938.
* Baden Powell B.H : 'The Origin of the Village Land Tenure in India', J.R.A.S. 1896, pp. 650-616.
* Dikshit G.S : 'Economic Conditions in the Time of Krishnadeva Raya' Vijayanagara Sex-Centenary, pp. 213-231.
* 'Group Organisation in Medieval Karnataka', JKU (HUM) 1 (2) 1957.
* Iswara Dutt K : 'Studies in Vijayanagara polity', A.D. 1336-1542' J.A.H.R.S. Vol. IV, 1930, pp. 165-188; Vol. V, 1931, pp. 7-20
* Esara Dutt, K. 'Studies in Vijayanagara polity' J.A.H.R.S. Vol. IV (1929-30).
* Fleet, J.F. 'Copper-plate grants of the Vijayanagara Kings' J.B.B.R.A.S. XII,
* 'Early Relations between Vijayanagara and Portugal', Q.J.M.S. Vol. XI, pp. 63-74.
* 'Ramaraya of Vijayanagara' J.H.O.
* 'Three Contemporary letters on the Vijayanagara King Venkata II of the Aravidu Dynasty', Aioc 3, 1924.

* Iyengar, Krishnaswamy, B.S. 'Expansion of Vijayanagara in South', H.J.M.U. Vol. XI, pp. 21-30.
* Job, T.J. 'Land and People of Vijayangar' M.R. LXVV, 1940.
* Jogindranath Chaudhry. 'Administration of Bahamani Kingdom', J.H.O. Vol. 2.
* 'Economic Condition in Medieval Karnataka', Q.J.M.S. 39(3), 1949.
* Karmarkar, A.P. 'Economic Condition in Medieval Karnataka', Q.J.M.S. 39(3), 1949.

## Dictionaries, Encyclopaedias, Gazetteers, Journals, Etc.

A Kannada - English Dictionary by F. Kittel (ed.)

Revised and Enlarged by M. Mariyappa Bhat, Madras, 1968-70

Annals of Bhandaraka Research Institute, Poona. Asiatic Researches.

Bombay University Journal

Encycolpaedia Brittanica

Encyclopedia of Religion and Ethics (ed.), James Hastings

Encyclopedia of the Social Sciences (Editer-in-Chief),

Edwin R.A. Seligman

Half yearly Journal of the Mysore University

Imperial Gazetter of India, Indian Empire, Vol. II

New Delhi, 1928

Indian Historical Quarterly

Journal of the Andhra Historical Research Society

Journal of the Bombay Branch of the Royal Asiatic society.

Journal of the Department of Letters, Calcutta.

Journal of the Department of Letters, Calcutta

Journal of Indian History, Trivandrum.

Journal of the Karnataka University (Humanities), Dharwar.

Journal of the Oriental Research, Madras.

Journal of the Royal Asiatic society of Bengal.

Kannada Sahitya Parishat patrike, Bangalore.

Manavika Karnataka, Mysore

Mysore Castes and Tribes, L.K. Aiyar, Bangalore.

Mysore Gazetter (ed.C. Hayavadana Rao), 5 vols.

Bangalore, 1927-50

Prabhudha Karnataka, Mysore.

Proceedings of Indian History Congress

Quarterly Journal of the Mythic Society, Bangalore.

## Secondary Sources

**Books in English**

Altekar : State Government in Ancient India, Delhi

Acharya, P.K : Indian Architecture accoutding to manasara Silpasastra, Patna, 1979

Aiyangar, S.K. : Ancient India and South Indian History and Culture, Poona, 1941

Annaraya, Appanna : Swami Samantabhadracharya

Aiyangar, S.K. : Contributions of South India to Indian Culture, calcutta, 1923

Altekar, A.S. : Education of Ancient India, Varanasi, 1957

Do : The Position of women in Hindu civilization, Delhi, 1962

Appadurai, A. : Economic Conditions in Southern India, Vols. I and II, Madras, 1936

Bhandakar, R.G. : Vaishnavism, Saivism and Other Minor Religions, Poona, 1929.

Bulher, G. : Indian palaeography, Calcutta, 1959

Burton stein : The New Cambride history of India Vijayanagara, New Delhi, 1994

Burton stein : Peasant state and society in Medieval south India, Delhi, 1980

Basavaradhya, N : Raghavanka, Harichandra Kavya, Bangalore, 1955

Bellave : Pampa, Vikramarjuna Vijayam

Bruce Forte : The Foote collection of Indian pre historic and proto historic antiquities, govt. museum, Madras, 1916

Bhargavi, S. Krishnadevaraya : His life and achievements karnataka university, Dharwad, 1988.

Venkatanarayanappa (Ed.) : Bangalore, 1931. Also (ed.) Gangasuta, Dharwad, 1976

Bilhana : Vikramankadeva Charita with an Introduction by George Buhler Bombay, 1975

Chakravarti, R. : Santale, the queen of Vishnuvardhana

Chidanandamurthy M. : Kanida sasanagala samsritika Adhyana (Kannada) prasaranga, Mysore university, Mysore, 1966

Dalla piccola, AL : (Ed) Vijayanagara city and empire; New currents of research, ssuttgart; steiner verlag wiesbadea GMBH, 1985

Devakunjari, D : Hampi, Archacological survey of India, New Delhi, 1988

Dikshit, G.S. : Okkalu, a corporate body of Madiaeval Karnataka

Derrett, J.D.M. : The Hoysala, Oxford, 1956.

Deveerappa, H. (Ed.) : Nanjunda Kavi, Ramantha Charita, Mysore, 1964

Deveerappa, H. and padmanabha Sharma (Ed.) : Janna, Anantanathapurana Mysore, 1972

Diwarkar, R.R. (Ed.) : Karnataka Through the Ages, Bangalore, 1965

Dr.R. Gopal : Cultural study of Hoysala Inscritptions Directorate of Arecheology & museum in Karnataka 2000

Dubois, Abbe J.A. : Hidnu manners, customs and cermonies, translated and edited by H.K. Beace champ, oxford university press, London, 1936

Gharpure, J.R. : Devannabhatta, Smrithi Chandrika, Vyavahara Khanda Parts I - III - An English translation, Bombay, 1950

Gururajachar, S : Some aspects of economic and social life in karnataka, Mysore, 1974

Hire math R.C (Ed) : Kanaka dasara mohana tarangini, kannada adhyana pitha, Dharwad, 1973.

Hayavadana rao, C : Mysore Gazetter, Vol. II, pt. 111. government of Mysore, Bangalore, 1930.

Joshi, S.K : Defence architecture in early karnataka, Sandeep prakashan, Delhi, 1985

| | | |
|---|---|---|
| Kamat, Jyotsna B | : | Social life in medieval karnataka, Abhinav publications, New Delhi, 1980. |
| Kamat U. Suryanath | : | Karnataka gazetteer, Pt, I and II, governament of Karnataka, Bangalore, 1982 |
| Kivudanavar Jagadeesh | : | Festivals in Vijayanagara empire unpublished thesis, Karnataka University, Dharwad, 2001. |
| Karahshima Noboru | : | South Indian history and society - studies from inscriptions (A.D. 850-1800), New Delhi, 1984 |
| Mahalingam. T.V | : | South Indian policy, Madras, 1955 and 1967 |
| Mahalingam T.V | : | Economic life in the Vijayangara Empire, Madras, 1951 |
| Mahalingam T.V | : | Administration and social life under Vijayanagara part I & II, Madras, 1940 |
| Ramasharma. M.H | : | The History of Vijayanagar Empire, Vol II, Bombay, 1980 |
| Resesh, K.V. and other (Ed.) | : | Srikantika, Mysore, 1973 |
| Rice Lewis, B | : | Mysore and Coorg from the Inscripitons, London, 1969 |
| Saletore, B.A. | : | Social life in the Vijayanagara Empire, Volumes II, Madras, 1934 |
| Shama sastri, K. (Trans.) | : | Kautilya Artha Sastra, Mysore 1921 |
| Shamasastry, R. (Ed.) | : | Nayasena, DharmaMrita, Mysore 192, 1926 |
| Shastry Chandrashekar, S | : | Economic Conditions under Hoysalas |
| Venkata Ramanaya.N | : | Studies in the History of third Dynasty of Vijayangara, Madras, 1935 |
| Yazdane, C. | : | The early history of the deccan, Two vols, Bombay, 1960. |

## ಕನ್ನಡ ಕೃತಿಗಳು


* "ಅಶ್ವಶಾಸ್ತ್ರ" ಅಭಿನವಚಂದ್ರ 1400, ಮದ್ರಾಸ್ ಸರ್ಕಾರದ ಪ್ರಾಚ್ಯ ಶಾಖೆ, 1950
* ಆಂಧ್ರಪ್ರದೇಶದ ಕನ್ನಡ ಶಾಸನಗಳು, ಗಡಿಯಾರಂ ರಾಮಕೃಷ್ಣಶಾಸ್ತ್ರಿ, ಆಂಧ್ರಪ್ರದೇಶ
* ಇತಿಹಾಸ ದರ್ಶನ, ಸಂ. 19, 2004 ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು
* ಎಸ್.ವೈ. ಸೋಮಶೇಖರ್ ವಿಜಯನಗರ ಕಾಲದ ಯುದ್ಧನೀತಿ ಮತ್ತು ಸೈನ್ಯ, ಹಂಪಿ, 2011
* ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಪರಂಪರೆ (ಸಂ.2) ಬೆಂಗಳೂರು, 1992
* ಕನ್ನಡ ಅಧ್ಯಯನ ಸಂಸ್ಥೆ (ಸಂ.) ಕನ್ನಡ ವಿಷಯ ವಿಶ್ವಕೋಶ, 1976
* 'ಕನ್ನಡ ಸಂಸ್ಕೃತಿತ' ಎಂ. ಮರಿಯಪ್ಪ, ಬೆಂಗಳೂರು 1967
* ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟಗಳು 1-5 ಹಂಪಿ, 2000
* 'ಕನಕದಾಸ ಕೀರ್ತನೆಗಳು', 1550, ಉಡುಪಿ 1948
* 'ಕರ್ನಾಟಕ ಕವಿಚರಿತೆ' ಭಾಗ - 2 ಆರ್. ನರಸಿಂಹಾಚಾರ್
* ಕರ್ನಾಟಕ ಚರಿತ್ರೆ (ಸಂ) ಕೆ.ಎಸ್. ಶಿವಣ್ಣ, 1997, ಹಂಪಿ
* 'ಕೃಷ್ಣರಾಜಭಾರತ', ತಿಮ್ಮಣ್ಣಕವಿ, 1500, ಕೃಷ್ಣಯ್ಯಶೆಟ್ಟಿ, ಬೆಂಗಳೂರು
* ಕರಾವಳಿ ಕರ್ನಾಟಕ ಕ್ರೈಸ್ತರ ಇತಿಹಾಸ (ಕ್ರಿ.ಶ. 1500-1763) ಡಾ. ಪಿ.ಯುಸ್ ಫಿಡೆಲಿಸ್ ಪಿಂಟೊ, 1999- ಮಂಗಳೂರು
* ಕೌಟಿಲ್ಯನ ಅರ್ಥಶಾಸ್ತ್ರ (ಅನು) ಶಾಮಾಶಾಸ್ತ್ರಿ, ಆರ್ (ಐದನೆಯ ಮುದ್ರಣ) ಮೈಸೂರು, 1956
* ಚಿದಾನಂದಮೂರ್ತಿ.ಎಂ.: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, 1966
* ತಮಿಳುನಾಡಿನ ಕನ್ನಡ ಶಾಸನಗಳು, ಹಂಪಿ 2000
* ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, 1668
* ದೀಕ್ಷಿತ್.ಜಿ.ಎಸ್. (ಸಂ.) ಸಂಗಮರ ಕಾಲದ ವಿಜಯನಗರ ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ, ಬೆಂಗಳೂರು 1991
* ನಾಗೇಗೌಡ.ಎಚ್.ಎಲ್. (ಸಂ): ಪ್ರವಾಸಿ ಕಂಡ ಇಂಡಿಯಾ (ಸಂ.2), ಮೈಸೂರು 1966
* ಪಂಚಲಿಂಗೇಗೌಡ (ಸಂ.) ರಾಮಧಾನ್ಯ ಚರಿತೆ, ಮೈಸೂರು
* ಪುಟ್ಟಣ್ಣ.ಎಂ.ಎಸ್. : ಚಿತ್ರದುರ್ಗದ ಪಾಳೇಯಗಾರರು, ಬೆಂಗಳೂರು, 1929
* 'ಪುರಂದರದಾಸರ ಕೀರ್ತನೆಗಳು' ಪುರಂದರದಾಸರು, 1550, ಉಡುಪಿ 1950
* ಬಸಪ್ಪ.ಎಸ್ (ಸಂ.) : ಶಿವತತ್ವ ಚಿಂತಾಮಣಿ, ಮೈಸೂರು, 1980
* ಬೆಟಗೇರಿ ಕೃಷ್ಣಶರ್ಮ, : ಕರ್ನಾಟಕ ಜನಜೀವನ, ಧಾರವಾಡ, 1955

* ಭೂಸನೂರಮಠ, ಸಂ.ಶಿ. ವಿಜಯಕಲ್ಯಾಣ, ಹಂಪೆ 1988
* ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಮೂಲ: ರಾಬರ್ಟ್ ಸಿವೆಲ್, ಅನು: ಸದಾನಂದಕನವಳ್ಳಿ, ಹಂಪಿ, 2010
* ಮುಗಳಿ, ಆರ್.ಎಸ್ : ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು, 1995
* 'ಮೋಹನ ತರಂಗಿಣಿ', 1550 ಸಂ. ಎಂ.ಎ. ರಾಮಾನುಜಯ್ಯಂಗಾರ್, 1913
* ವರದರಾಜರಾವ್.ಜಿ (ಸಂ.) ಶ್ರೀಪಾದರಾಯರ ಕೀರ್ತನೆಗಳು, ಮೈಸೂರು, 1973
* ವಸುಂದರಾ ಫಿಲಿಯೋಜ - ವಿಜಯನಗರ ಸ್ಥಾಪನೆ ಬೆಂಗಳೂರು 1986
* ವೆಂಕಟರತ್ನಂ. ಎ.ವಿ : ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಮೈಸೂರು, 1974
* ವಿಜಯನಗರ ಅಧ್ಯಯನ - ಸಂಪುಟಗಳು ಹಂಪಿ ಪ್ರಾಸರಂಗ 2000
* ವಿಜಯನಗರ ಕಾಲದ ಸಂಸ್ಕೃತಿ, ಡಾ. ವಿರೂಪಾಕ್ಷ ಪೂಜಾರಹಳ್ಳಿ, ಹಂಪಿ 2008
* ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ, ಎಸ್. ಶ್ರೀನಿವಾಸಾಚಾರ್, ಕರ್ನಾಟಕ ಪುರಾತತ್ವ, ಹಂಪಿ, 1995
* ಶ್ರೀಕಂಠಶಾಸ್ತ್ರಿ, ಕೆ. : ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಮೈಸೂರು 1987
* ಶ್ರೀಮನ್ಮಧ್ವ ಸಿದ್ಧಾಂತಿ ಗ್ರಂಥಾಲಯ (ಸಂ.) ಪುರಂದರ ದಾಸರ ಕೀರ್ತನೆಗಳು, ಉಡುಪಿ
* ಶಾಮರಾವ್, ಜಿ.ಎನ್. : ವಿದೇಶಿಯರು ಕಂಡ ವಿಜಯನಗರ, ಬೆಂಗಳೂರು, 1987
* ಶ್ರೀಮನ್ಮಧ್ವ ಸಿದ್ಧಾಂತಿ ಗ್ರಂಥಾಲಯ (ಸಂ.) ಕನಕದಾಸ ಕೀರ್ತನೆಗಳು, ಉಡುಪಿ, 1948
* ಶ್ರೀಮನ್ಮಧ್ವ ಸಿದ್ಧಾಂತಿ ಗ್ರಂಥಾಲಯ (ಸಂ.) ಪುರಂದರದಾಸರ ಕೀರ್ತನೆಗಳು, ಉಡುಪಿ.
* ಶಾಮರಾವ್,ಜಿ.ಎನ್ : ವಿದೇಶಿಯರು ಕಂಡ ವಿಜಯನಗರ, ಬೆಂಗಳೂರು, 1929
* ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, 1986 ಬಿ.ಆರ್. ಹಿರೇಮಠ
* ಶಾನ್‌ಭಾಗ್, ಡಿ.ಎನ್. ಗಂಗಾದೇವಿಯ ಮಧುರಾ ವಿಜಯಂ, ಧಾರವಾಡ, 1984
* ಸತ್ಯನಾರಾಯಣ.ಎ. : ಕೃಷ್ಣದೇವರಾಯ ಮತ್ತು ಮೈಸೂರು ವಿಜಯನಗರ ಅಧ್ಯಯನ ಸಂ. 2, ಸಂಪಾದಕರು, ಎಂ.ಎಲ್. ಶಿವಶಂಕರ್, ಮೈಸೂರು 1997
* ಸಾಮ್ರಾಜ್ಯ ಮತ್ತು ಸಂಸ್ಥಾನ, ಡಾ.ಎನ್. ಚಿನ್ನಸ್ವಾಮಿ ಸೋಸಲೆ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, 2004
* ಹಂಪಿ, ಕರ್ನಾಟಕ ಪುರಾತತ್ವ, 1995

## ಮಾರ್ಗದರ್ಶಕರ ಪ್ರಮಾಣಪತ್ರ

ಶ್ರೀ ಮಹೇಶ್.ಜಿ ಅವರು ನನ್ನ ಮಾರ್ಗದರ್ಶನದಲ್ಲಿ "ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ (ಕ್ರಿ.ಶ. 1336-1565)" ಎಂಬ ವಿಷಯದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಇತಿಹಾಸ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ನಾನು ತಿಳಿದಮಟ್ಟಿಗೆ ಇದುವರೆಗೂ ಯಾವುದೇ ವಿಶ್ವವಿದ್ಯಾನಿಲಯದ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ :

(ಡಾ. ಪುಟ್ಟಯ್ಯ)
ಸಹ ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ
ಮಾನಸ ಗಂಗೋತ್ರಿ, ಮೈಸೂರು - 570 006

## ಪ್ರಮಾಣ ಪತ್ರ

ಶ್ರೀ ಮಹೇಶ್ ಜಿ ಆದ ನಾನು "ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ (ಕ್ರಿ.ಶ. 1336-1565)" ಎಂಬ ವಿಷಯದಲ್ಲಿ ಡಾ. ಪುಟ್ಟಣಯ್ಯ, ಸಹ ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು ಇವರ ಮಾರ್ಗದರ್ಶನದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ ಇತಿಹಾಸ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಗಳ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಸಂಶೋಧಕರು

ಅಧ್ಯಕ್ಷರು

# ಅಧ್ಯಾಯ 1

# ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು ಒಂದು ಅಧ್ಯಯನ

## 1.1. ಪ್ರಸ್ತಾವನೆ

ಭಾರತೀಯ ಸಂಸ್ಕೃತಿಯ ಪ್ರತಿಷ್ಠಿತ ಪ್ರತೀಕವೆಂದು ಘೋಷಿಸಲ್ಪಟ್ಟದ್ದು ವಿಜಯನಗರ ಸಾಮ್ರಾಜ್ಯ. ಇದು ದಕ್ಷಿಣ ಭಾರತದ ಇತಿಹಾಸದಲ್ಲಿ ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ ವೈಭವದಿಂದ ಆಳ್ವಿಕೆ ನಡೆಸಿತೆಂಬುದು ವಿದ್ವಾಂಸರ ಅಭಿಪ್ರಾಯ. ದಕ್ಷಿಣ ಭಾರತದ ಪ್ರಬಲ ಶಕ್ತಿಯಾಗಿ ಹೊರಹೊಮ್ಮಿದ ಈ ಸಾಮ್ರಾಜ್ಯ ಮಧ್ಯಕಾಲೀನ ರಾಜಕೀಯ ಹಾಗೂ ಸಾಂಸ್ಕೃತಿಕ ಸನ್ನಿವೇಶಗಳ ಪ್ರತಿನಿಧಿಯೆನಿಸಿ ಪ್ರಖ್ಯಾತಿ ಪಡೆದುದು ಐತಿಹಾಸಿಕ ಸತ್ಯ. ಭಾರತದಲ್ಲಿ ಹಿಂದೂ ಚಕ್ರಾಧಿಪತ್ಯ ಸ್ಥಾಪನೆಯ ಕಲ್ಪನೆ ಹಾಗೂ ಸಾಧ್ಯತೆಗಳನ್ನು ತಾತ್ವಿಕವಾಗಿ ಪ್ರಶ್ನಿಸುವ ಐರೋಪ್ಯ ವಿದ್ವಾಂಸರ ಪ್ರಯತ್ನ ಅವ್ಯಾಹತವಾಗಿ ನಡೆಯತೊಡಗಿದುದು ಒಂದೆಡೆಯಾದರೆ, ದಕ್ಷಿಣದ ಮಟ್ಟಿಗೆ, ಚೋಳರು ಮತ್ತು ಆ ನಂತರದ ವಿಜಯನಗರದವರನ್ನು ಸಾಮ್ರಾಟರೆಂದೇ ಎತ್ತಿ ಹೇಳುವ ದೇಸೀ ವಿದ್ವಾಂಸರ ಹಠದ ನಿಲುವು ಇನ್ನೊಂದೆಡೆ. ಇಂಥ ಚರ್ಚೆಗಳ ನಡುವೆ ವಿಜಯನಗರ ಸಾಮ್ರಾಜ್ಯ ಭಾರತೀಯ ಸಂಸ್ಕೃತಿಯನ್ನು ಯಾವ ನೆಲೆಯಿಂದ ಪ್ರತಿನಿಧಿಸುತ್ತಿದೆ ಎಂಬ ಪ್ರಶ್ನೆ ಎದುರಾಗುತ್ತದೆ. ರಾಜಕೀಯದಷ್ಟೇ ಸಾಂಸ್ಕೃತಿಕವಾಗಿ ಔನ್ನತ್ಯವನ್ನು ಸಾಧಿಸಿತೆನ್ನಲಾಗುವ ವಿಜಯನಗರದ ಪರಿಸ್ಥಿತಿ ವಾಸ್ತವದಲ್ಲಿ ಇದ್ದುದಾದರೂ ಹೇಗೆ ? ಅಂದಿನ ಸಾಮಾಜಿಕ ಸಂದರ್ಭದಲ್ಲಿ ಆಡಳಿತಗಾರರು ಅಧಿಕಾರಿವರ್ಗದವರು, ಶಿಷ್ಟ ವರ್ಗದವರೂ ಹಾಗೂ ಇನ್ನು ಕೆಲವು ವರ್ಗದವರನ್ನು ಹೊರತುಪಡಿಸಿದರೆ ಉಳಿದ ಜನಸಮುದಾಯದ ಸ್ಥಿತಿ ಯಾವ ರೀತಿ ಇತ್ತು ? ವಿಜಯನಗರದ ಸಂಸ್ಕೃತಿಯೆಂಬುದು ಇವರಲ್ಲಿ ಯಾವ ವರ್ಗದವರನ್ನು ಪ್ರತಿನಿಧಿಸುತ್ತಿತ್ತು? ಎಂಬ ಕುತೂಹಲವೇ ಪ್ರಸ್ತುತ ಸಂಶೋಧನೆಗೆ ಪ್ರೇರಣೆಯಾದುದು.

ಅನೇಕ ರಾಜಕೀಯ ಒತ್ತಡಗಳಲ್ಲಿ ಉದಯಿಸಿದ ವಿಜಯನಗರ ರಾಜ್ಯವು ಸುಮಾರು ನಾಲ್ಕು ಶತಮಾನಗಳ ಕಾಲ ತನ್ನದೇ ಆದ ತತ್ವ ಹಾಗೂ ಪರಾಕ್ರಮದಿಂದ ಆಳ್ವಿಕೆ ಮಾಡಿ ಬೃಹತ್ ಸಾಮ್ರಾಜ್ಯವೆನಿಸಿಕೊಂಡು ಭಾರತದ ಚರಿತ್ರೆಯಲ್ಲಿಯೇ ಅಲ್ಲದೆ ಪ್ರಪಂಚದ ಚರಿತ್ರೆಯ ಪುಟಗಳಲ್ಲಿ ತನ್ನ ಛಾಪನ್ನು ಮೂಡಿಸಿದೆ. ಈ ಸಾಮ್ರಾಜ್ಯವನ್ನು ಸಂಗಮ, ಸಾಳುವ ಮತ್ತು ಅರವೀಡು ವಂಶದವರು ಕ್ರಮವಾಗಿ ಆಳ್ವಿಕೆ ಮಾಡಿದರು. ೧೩೩೬ರಲ್ಲಿ ವಿಜಯನಗರ ಸ್ಥಾಪನೆಯಾಯಿತು. ಅದಕ್ಕೂ ಮುಂಚೆ ದಕ್ಷಿಣ ಭಾರತದಲ್ಲಿ ಪ್ರಮುಖವಾಗಿ ಆರು ಹಿಂದೂ ಸಾಮ್ರಾಜ್ಯಗಳು ರಾಜ್ಯವಾಳಿದವು.

೧. ಯಾದವರ ರಾಜ್ಯ : ದೇವಗಿರಿ ರಾಜಧಾನಿ. ಇದು ಮುಂದೆ ಬಂದಂತಹ ಸಾಮ್ರಾಜ್ಯದ ಪಶ್ಚಿಮೋತ್ತರ ಭಾಗಗಳನ್ನು ವ್ಯಾಪಿಸಿತ್ತು.

೨. ಕಾಕತೀಯರ ರಾಜ್ಯ : ಓರಂಗಲ್ಲು ರಾಜಧಾನಿ

೩. ಚೋಳರ ರಾಜ್ಯ : ತಂಜಾವೂರು ರಾಜಧಾನಿ

೪. ಪಾಂಡ್ಯರ ರಾಜ್ಯ : ಮಧುರೆ ರಾಜಧಾನಿ

೫. ಚೇರರ ರಾಜ್ಯ : ತಿರುವನಂತಪುರ, ಕೊಚ್ಚಿನ್, ಕಲ್ಲಿಕೋಟೆಯ ಪ್ರಾಂತ್ಯಗಳನ್ನು ವ್ಯಾಪಿಸಿತ್ತು

೬. ಹೊಯ್ಸಳರ ರಾಜ್ಯ : ಹಳೇಬೀಡು ಇದರ ರಾಜಧಾನಿ. ದೇವಗಿರಿಯ ಯಾದವರು ಹೊಯ್ಸಳರಿಂದ ಈಗಿನ ಬೊಂಬಾಯಿ ಪ್ರಾಂತ್ಯದ ಮಧ್ಯೆ ಮತ್ತು ದಕ್ಷಿಣ ಭಾಗಗಳನ್ನು ಗೆದ್ದುಕೊಂಡಿದ್ದರು.

ಕ್ರಿ.ಶ. ೧೨೯೪ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಯಾದವ ವಂಶಸ್ಥರನ್ನು ಸೋಲಿಸಿ ದೆಹಲಿಗೆ ಹಿಂದಿರುಗುವಾಗ ಅಮೂಲ್ಯ ವಸ್ತುಗಳನ್ನು ಅಪಹರಿಸಿಕೊಂಡು ಹೋದನೆಂದು ಫೆರಿಷ್ತಾ ಹೇಳುತ್ತಾನೆ. ೧೪ನೇ ಶತಮಾನದ ಪ್ರಾರಂಭದಲ್ಲಿ ಮುಸಲ್ಮಾನರು ದಕ್ಷಿಣ ಭಾರತಕ್ಕೆ ದಂಡಯಾತ್ರೆ ಕೈಗೊಂಡು ಪ್ರಸಿದ್ಧ ಹಿಂದೂ ಸಾಮ್ರಾಜ್ಯಗಳನ್ನು ಕೊಳ್ಳೆ ಹೊಡೆದರು. ಅಲ್ಲಾವುದ್ದೀನನ ಪ್ರಸಿದ್ಧ ಸೇನಾಧಿಪತಿಯಾಗಿದ್ದಂತಹ ಮಲ್ಲಿಕಾಫರನು ಕ್ರಿ.ಶ. ೧೩೦೬ರಿಂದ ೧೩೩೦ರವರೆಗೆ ದಕ್ಷಿಣ ಭಾರತವನ್ನು ತನ್ನ ಹತೋಟಿಗೆ ಒಳಪಡಿಸಿಕೊಳ್ಳಲು ಪ್ರಯತ್ನಿಸಿದನು. ದೇವಗಿರಿಯನ್ನು ಗೆದ್ದು ಅಲ್ಲಿಯ ರಾಜನನ್ನು ಶೂಲಕ್ಕೇರಿಸಿದನು. ತದನಂತರ ಓರಂಗಲ್ಲಿನ ಉತ್ತರ ಪ್ರಾಂತ್ಯವನ್ನು ಜಯಿಸಿದನು. ಮುಂದುವರೆದು ಕೇರಳದ ಅನೇಕ ದೇವಾಲಯಗಳನ್ನು ನಾಶಮಾಡಿ ತನ್ನ ಪ್ರತಿನಿಧಿಯನ್ನು ರಾಮೇಶ್ವರದಲ್ಲಿ ಸ್ಥಳ ಊರಿಸಿದನು. ಪಾಂಡ್ಯ ರಾಜ್ಯಕ್ಕೆ ಬಂದು ವಿಶ್ವವಿಖ್ಯಾತ ಮಧುರೆ ದೇವಾಲಯವನ್ನು ಕೊಳ್ಳೆ ಹೊಡೆದನು. ವೀರಕಂಪಣನ ರಾಣಿ ಕವಯಿತ್ರಿ ಗಂಗಾದೇವಿಯು ತನ್ನ ಮಧುರಾವಿಜಯಂ ಎಂಬ ಐತಿಹಾಸಿಕ 'ಸಂಸ್ಕೃತ' ಕಾವ್ಯದಲ್ಲಿ ಇವರ ದಬ್ಬಾಳಿಕೆಗೆ ತುತ್ತಾದ ಶ್ರೀರಂಗಂ ಮೊದಲಾದ ಸ್ಥಳಗಳ ದುಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾಳೆ.

ಉತ್ತರ ಭಾರತವನ್ನಾಳಿದಂತಹ ಮುಸ್ಲಿಂ ದೊರೆ ಮಹಮದ್‌ಬಿನ್ ತುಘಲಕ್ ಕಾಲದಲ್ಲಿಯೇ ಅವನ ಸಾಮ್ರಾಜ್ಯದಲ್ಲಿ ಒಡಕು ಹುಟ್ಟಿಕೊಂಡಿತು. ಇದರಿಂದಾಗಿ ದಕ್ಷಿಣ ಭಾರತದಲ್ಲಿದ್ದಂತಹ ಮುಸ್ಲಿಂ ರಾಜ್ಯಗಳಲ್ಲಿ ಒಡಕುಂಟಾಯಿತು. ಅಖಂಡವಾಗಿದ್ದಂತ ದಕ್ಷಿಣದ ಮುಸ್ಲಿಂ ರಾಜ್ಯವು ಗುಲ್ಬರ್ಗಾ, ಬಿಜಾಪುರ, ಗೋಲ್ಕೊಂಡ, ಅಹಮದ್ ನಗರ, ಬೀದರ್‌ಗಳಾಗಿ ವಿಂಗಡಣೆಯಾಯಿತು. ಮಲ್ಲಿಕಾಫರನ ಕನಸು ನುಚ್ಚು ನೂರಾಯಿತು. ಇದೇ ವೇಳೆಗೆ ದೆಹಲಿಯ ಸುಲ್ತಾನರಿಗೆ ತಿಳಿಯದೆಯೇ ದಕ್ಷಿಣದ ಹಿಂದೂ ಸಾಮ್ರಾಜ್ಯವೆನಿಸಿಕೊಂಡಿದ್ದ ಹೊಯ್ಸಳ ರಾಜ್ಯವು ಸಂಗಮ ವಂಶದ ರಾಜರಿಗೆ ಹಸ್ತಾಂತರವಾಯಿತು. ದಕ್ಷಿಣ ಭಾರತದಲ್ಲಿನ ಮಧುರೆಯಲ್ಲಿದ್ದಂತ ದೆಹಲಿಯ ಪ್ರತಿನಿಧಿಗೂ ಇದು ತಿಳಿದಿರಲಿಲ್ಲ. ಹೀಗೆ ವಿಜಯನಗರ ಸಾಮ್ರಾಜ್ಯವು ೧೩೩೬ರಲ್ಲಿ ಹಕ್ಕಬುಕ್ಕರಿಂದ ಸ್ಥಾಪನೆಯಾಯಿತು.

ವಿಜಯನಗರ ಸಾಮ್ರಾಜ್ಯ ಕ್ರಿ.ಶ. ೧೬೪೦ರವರೆಗೆ ಒಟ್ಟು ೩೦೫ ವರ್ಷಗಳ ಕಾಲ ಆಳ್ವಿಕೆ ನಡೆಸಿತು. ಮೊದಲನೆಯ ಮತ್ತು ಎರಡನೆಯ ವಂಶಗಳ ಆಳ್ವಿಕೆ ಕಾಲದಲ್ಲಿ ಹುಟ್ಟಿ ಬೆಳೆದು ಒಂದು ಹಂತವನ್ನು ಮುಟ್ಟಿತು.

ತುಳುವಂಶದ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ತನ್ನ ವೈಭವದ ತುತ್ತತುದಿಯನ್ನು ಮುಟ್ಟಿ ವಿಶ್ವದಲ್ಲೆಲ್ಲಾ ಬೆಳಗಿತು. ಕೃಷ್ಣದೇವರಾಯನ ಆಳ್ವಿಕೆಯ ಅನಂತರ ಈ ಸಂಸ್ಥಾನವು ಕ್ಷೀಣಿಸಲಾರಂಬಿಸಿತು. ಕ್ರಿ.ಶ. ೧೫೬೫ರಲ್ಲಿ ನಡೆದಂತಹ ರಕ್ಕಸತಂಗಡಿ ಯುದ್ಧದಲ್ಲಿ ಮುಸಲ್ಮಾನ್ ರಾಜ್ಯಗಳಿಂದ ಸೋಲನ್ನು ಕಂಡಿತು. ಆದರೂ ಅನಂತರ ೧೧೫ ವರ್ಷಗಳ ಸಂಪೂರ್ಣ ನಶಿಸಿ ಹೋಗದೆ ಕ್ರಿ.ಶ. ೧೬೮೦ರವರೆಗೆ ಅಳಿದುಳಿದಿತ್ತಾದರೂ ಪ್ರಗತಿಯನ್ನು ಕಾಣದೆ ಕೊನೆಗೆ ಅಸ್ತಂಗತವಾಯಿತು.

ವಿಜಯನಗರ ಸಾಮ್ರಾಜ್ಯಕ್ಕೆ ಮೂಲ ಸ್ಥಳ ಕುಮ್ಮಟ ದುರ್ಗ. ಈ ನಾಯಕರ ಸಂಬಂಧಿ ಸಂಗಮ ಅಥವಾ ಭಾವಸಂಗಮ. ಈ ಸಂಗಮ ಮತ್ತು ಕುಮಾರ ರಾಮನ ತಂಗಿ ಮಾರಮ್ಮನಿಗೆ ಹರಿಹರ, ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐವರು ಮಕ್ಕಳು. ಸಂಗಮನ ಮೂಲವನ್ನು ಕೆಲವು ವಿದ್ವಾಂಸರು ಯಾದವ ವಂಶವೆಂದೂ, ತಿಳಿಸಿದರೆ ಬರೌನಿಯು ವಾರಂಗಲ್ಲಿನ ಕನ್ನನಾಯಕನಿಗೆ ಸಂಬಂಧಿಗಳೆಂದು ತಿಳಿಸುತ್ತಾನೆ. ಇಬನ್ ಬತೂತನು ಕಂಪಿಲಿಯು ವಿನಾಶವಾದ ಮೇಲೆ ನಾಯಕನ ೧೧ ಜನ ಮಕ್ಕಳನ್ನು ದಿಲ್ಲಿಗೆ ಕರೆದುಕೊಂಡು ಹೋಗಿ ಅವರನ್ನು ಇಸ್ಲಾಂ ಧರ್ಮಕ್ಕೆ ಪರಿವರ್ತಿಸಿದನಂತೆ, ಎಂದು ತಿಳಿಸಿದ್ದಾನೆ. ಆದರೆ ಹರಿಹರ ಬುಕ್ಕರು ವಾರಂಗಲ್ಲಿನ ಕಾಕತೀಯ ಪ್ರತಾಪರುದ್ರನ ಆಸ್ಥಾನದಲ್ಲಿದ್ದು ಅನಂತರ ಆನೆಗೊಂದಿ - ಹಂಪೆ ಪರಿಸರಕ್ಕೆ ಬಂದು ಸಾಮ್ರಾಜ್ಯ ಸ್ಥಾಪಿಸಿದರೆಂಬುದು ಉಚಿತ.

ಇದುವರೆಗೆ ವಿಜಯನಗರದ ಇತಿಹಾಸವನ್ನು ಕುರಿತಂತೆ ನೂರಾರು ಕೃತಿಗಳು ಪ್ರಕಟವಾಗಿವೆ. ಅವುಗಳಲ್ಲಿ ಹೆಚ್ಚು ಕೃತಿಗಳು ರಾಜಕೀಯ ಇತಿಹಾಸವನ್ನು ಕುರಿತದ್ದಾಗಿವೆ. ಇನ್ನು ಕೆಲವು ಆಡಳಿತ, ಆರ್ಥಿಕ ವ್ಯವಸ್ಥೆ, ನೀರಾವರಿ, ಮಹಿಳೆಯರ ಸ್ಥಾನಮಾನ, ವಿಜಯನಗರ ಕಾಲದ ದೇವಾಲಯಗಳು, ಹಂಪಿಯ ಪರಿಸರ ಮೊದಲಾದ ವಿಚಾರಗಳನ್ನು ಕುರಿತ ಕೃತಿಗಳು. ಇನ್ನು ಕೆಲವು ವಿಜಯನಗರ ಕಾಲದ ಊಳಿಗಮಾನ್ಯ ವ್ಯವಸ್ಥೆ ತೆರಿಗೆ ಪದ್ಧತಿ ಮುಂತಾದ ವಿಚಾರಗಳನ್ನು ಒಳಗೊಂಡ ಗ್ರಂಥಗಳು. ಈ ಬಗೆಯ ಅಧ್ಯಯನಗಳ ವ್ಯಾಪ್ತಿಗೆ ನಿಲುಕಲಾರದ ಕೆಲವು ವಿಷಯಗಳು ಸಂಶೋಧಕರಿಗೆ ಸಾಮಗ್ರಿಯನ್ನು ಒದಗಿಸುತ್ತವೆ. ವಿಜಯನಗರ ಸಾಮ್ರಾಜ್ಯವು ಇಡೀ ದಕ್ಷಿಣ ಭಾರತದಲ್ಲಿಯೇ ಏಕೆ ಏಷ್ಯಾ ಖಂಡದಲ್ಲಿಯೇ ಖ್ಯಾತಿ ಪಡೆದ ಮಹಾಸಾಮ್ರಾಜ್ಯವಾಗಿತ್ತು. ವೈಭವ ಮತ್ತು ಪ್ರಭಾವಶಾಲಿಯಾಗಿದ್ದ ವಿಜಯನಗರದಲ್ಲಿ ಅನೇಕ ವೃತ್ತಿ ನಿರತ ಜಾತಿಗಳು ಇದ್ದು ಸಾಮ್ರಾಜ್ಯಕ್ಕೆ ತಮ್ಮ ಅನುಪಮ ಕಾಣಿಕೆ ಸಲ್ಲಿಸಿದ ಚರಿತ್ರೆ ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಟ್ಟಿರುವುದು ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಆ ಕಾಲದ ವೃತ್ತಿ ಆಧಾರಿತ ಜಾತಿಗಳನ್ನು ಕುರಿತು ವಿಶ್ಲೇಷಣೆ ಮಾಡುವ ಉದ್ದೇಶ ಈ ಅಧ್ಯಯನದ್ದು.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು ಬೆಳಕನ್ನು ಚೆಲ್ಲುತ್ತವೆ. ಮೊಟ್ಟ ಮೊದಲಿಗೆ ರಾಬರ್ಟ್ ಸಿವೆಲ್ ಬರೆದ 'ಎ ಫರ್‌ಗಾಟನ್ ಎಂಪೈರ್ ೧೯೦೨) ಕ್ರಿ.ಶ. ೧೮೦೦ರಿಂದಲೇ ಪ್ರಕಟಗೊಂಡ ಗ್ಯಾಸೆಟಿಯರ್‌ಗಳು, ಸರ್ ಥಾಮಸ್ ಮನ್ರೋನ ವರದಿಗಳು, ಜಾನ್ ಕೆಲ್‌ಶಟ್‌ನ ಬಳ್ಳಾರಿ ಜಿಲ್ಲೆಯ ಗ್ಯಾಸೆಟಿಯರ್.

೧೯೭೪ರಲ್ಲಿ ಬಿ.ಎನ್. ಸತ್ಯನ್‌ರು 'ಮೈಸೂರು ಸ್ಟೇಟ್ ಬಳ್ಳಾರಿ ಡಿಸ್ಟ್ರಿಕ್ ಗ್ಯಾಸೆಟಿಯರ್; ಕೆ ಅಭಿಶಂಕರ್ ಅವರು ೧೯೭೨ರಲ್ಲಿ ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್‌ಗಳಲ್ಲಿ ವಿಜಯನಗರದ ಬಗ್ಗೆ ಮಾಹಿತಿ ಕೊಟ್ಟಿದ್ದಾರೆ. ಬಿ. ಸೂರ್ಯನಾರಾಯಣರಾವ್ ಅವರ 'ಮರೆಯಲಾಗದ ಮಹಾಸಾಮ್ರಾಜ್ಯ' ಕೃತಿ ಕೆಲವು ಹೊಸ ಒಳನೋಟಗಳನ್ನು ನೀಡುತ್ತದೆ. ಬರ್ಟನ್‌ಸ್ಟೈನ್‌ರು 'ದ ನ್ಯೂ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾ ವಿಜಯನಗರ' ಎಂಬ ಕೃತಿಯಲ್ಲಿ ಅನೇಕ ವಿಚಾರಗಳನ್ನು ಮಂಡಿಸಿದ್ದಾರೆ. ಎ.ಎಚ್. ಲಾಂಗ್‌ಹರ್ಸ್ಟ್‌ರ ಹಂಪಿರ್‍ಯೂಯಿನ್ಸ್; ಸಿ.ಟಿ.ಎಂ. ಕೊಟ್ರಯ್ಯನವರ 'ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ; (೨೦೦೧/ ಅ.ನ. ಕೃಷ್ಣರಾಯರು ಕೃಷ್ಣದೇವರಾಯ, ಜಿ.ಎಸ್. ದೀಕ್ಷಿತರ ಸಂಗಮ ಕಾಲದ ವಿಜಯನಗರ (೧೯೯೧). ಎ.ಎಸ್. ನಂಜುಂಡಸ್ವಾಮಿಯವರ: ವಿಜಯನಗರ ಇತಿಹಾಸ (೧೯೯೯). ಡಾ.ಎಸ್. ರಾಜಶೇಖರ್ ಸಂಗ್ರಹಿಸಿದ ವಿಜಯನಗರ ಕಾಲದ ಘಟನಾವಳಿಗಳ ಸೂಚಿ, ಬಿ. ರಾಘುವೇಂದ್ರರಾವ್‌ರ ವಿಜಯನಗರ (೧೯೮೫), ಪಿ. ರಾಮಶರ್ಮ ಅವರ 'ಎ ಹಿಸ್ಟರಿ ಆಫ್ ವಿಜಯನಗರ ಎಂಪೈರ್' (೧೯೯೮). ವಸುಂದರಾ ಫಿಲಿಯೋಜ ಅವರ ಅಳಿದುಳಿದ ಹಂಪೆ (೧೯೮೭) ಮತ್ತು ವಿಜಯನಗರ; ಕಾಲದಲ್ಲಿ ಕಲೆ, ಸಾಹಿತ್ಯ, ಶಾಮರಾವ್ ಜಿ.ಎಸ್. ಅವರ ವಿದೇಶಿಯರು ಕಂಡ ವಿಜಯನಗರ. ವಿ. ಸೀತಾರಾಮಯ್ಯನವರ: ಕೃಷ್ಣದೇವರಾಯನ ದಿನಚರಿ.

ಸೂರ್ಯನಾಥ್ ಕಾಮತ್‌ರ ವಿಜಯನಗರ ಸಾಮ್ರಾಜ್ಯ, ಎಸ್.ಕೆ ರಾಮಚಂದ್ರರಾವ್‌ರ ತಿರುಪತಿ ತಿಮ್ಮಪ್ಪ (೧೯೮೦), ಸದ್ಯೋಜಾತ ಸ್ವಾಮೀಜಿ ಅವರ ವಿಜಯನಗರ ಕಾಲದ ಧಾರ್ಮಿಕ ಸ್ಥಿತಿಗತಿ (೧೯೭೧) ಆಮುಕ್ತ ಮಾಲ್ಯದ ಅನುಪಮಾ (೧೯೭೯). ವಿರೂಪಾಕ್ಷಿ ಪೂಜಾರ ಹಳ್ಳಿಯವರ ವಿಜಯನಗರ ಕಾಲದ ಸಂಸ್ಕೃತಿ (೨೦೦೮), ಎನ್. ಚಿನ್ನಸ್ವಾಮಿ ಸೋಸಲೆ ಅವರ ಸಾಮ್ರಾಜ್ಯ ಮತ್ತು ಸಂಸ್ಥಾನ, ಡಾ.ಎಸ್. ಸರಸ್ವತಿಯವರ ವಿಜಯನಗರ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನ (೨೦೦೭), ಕೆ. ಶ್ರೀಕಂಠಯ್ಯನವರ ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ ಡಾ.ಪಿಯುಸ್, ಫಿಡೆಲಿಸ್ ಪಿಂಟೊ ಅವರ ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ (೧೯೯೯) ಇನ್ನೂ ವಿಪುಲವಾದ ಅಧ್ಯಯನಗಳು ಈ ಬಗ್ಗೆ ನಡೆದಿದೆ.

## 1.2. ಭೌಗೋಳಿಕ ಹಿನ್ನೆಲೆ

ಭೌಗೋಳಿಕವಾಗಿ ವಿಜಯನಗರ ಸಾಮ್ರಾಜ್ಯ ತುಂಗಭದ್ರ ನದಿಯಿಂದ ಹಿಡಿದು ದಕ್ಷಿಣಕ್ಕೆ ಇದ್ದ ಎಲ್ಲ ಭಾಗಗಳನ್ನು ಆವರಿಸಿತ್ತು. ಈ ಬಲಿಷ್ಠ ರಾಜ್ಯದ ಪ್ರಭಾವ ದಕ್ಷಿಣದಲ್ಲಿ ಶ್ರೀಲಂಕದವರೆಗೂ ಈಶಾನ್ಯದಲ್ಲಿ ತೆಲಂಗಾಣ ಮತ್ತು ಒರಿಯಾವರೆಗೂ ಹರಡಿತ್ತು. ವಿಜಯನಗರ ರಾಜ್ಯಭಾರ ಅತ್ಯಂತ ವ್ಯವಸ್ಥಿತವಾಗಿತ್ತು. ರಾಜ್ಯವನ್ನು ಪ್ರಾಂತಗಳಾಗಿಯೂ, ಉಪ ಪ್ರಾಂತಗಳಾಗಿಯೂ ವಿಂಗಡಿಸಿ ಅಲ್ಲಿನ ಅಧಿಕಾರಿಗಳಿಗೆ ಸ್ಪಷ್ಟವಾದ ಕರ್ತವ್ಯಗಳನ್ನು ಅಧಿಕಾರವನ್ನು ಕೊಡಲಾಗಿತ್ತು.

ದೀರ್ಘವಾದ ಕಡಲತೀರ, ಭೌಗೋಳಿಕ ವೈವಿಧ್ಯತೆ, ಫಲವತ್ತಾದ ಭೂಮಿ, ಹಿರಿದಾದ ನದಿಗಳು ಅವುಗಳ ಅನೇಕ ಉಪ ನದಿಗಳು ಇವೆಲ್ಲದರ ಸಮುದಾಯ ಸಂಪತ್ತನ್ನು ವಿಜಯನಗರ ಅರಸರು ಆರ್ಥಿಕ ಪ್ರಗತಿಗೆ ಉಪಯೋಗಿಸಿಕೊಳ್ಳುತ್ತಿದ್ದರು. ಇವೆಲ್ಲವೂ ಸೇರಿ ವಿಜಯನಗರದ ಶ್ರೀಮಂತಿಕೆಯನ್ನು ಬಲವನ್ನು ಹೆಚ್ಚಿಸಿದವು.

ವಿಜಯನಗರ ಸಾಮ್ರಾಜ್ಯದ ಭೌಗೋಳಿಕ ವಿಸ್ತಾರವನ್ನು ಕುರಿತು ರಾಬರ್ಟ್ ಸಿವೆಲ್‌ರವರು ತಮ್ಮ 'ಮರೆತು ಹೋದ ಸಾಮ್ರಾಜ್ಯ' ಎಂಬ ಕೃತಿಯ ಪೀಠಿಕ ಭಾಗದಲ್ಲಿ ವಿವರಣೆಯನ್ನು ಕೊಡುತ್ತಾರೆ. ಆ ಪ್ರಕಾರ ಭಾರತದ ಭೂಪಟದ ಮೇಲೆ ಮುಂಬಯಿಯಿಂದ ಮದ್ರಾಸಿನವರೆಗೆ ಒಂದು ನೇರ ರೇಖೆ ಎಳೆದುದಾದರೆ ಸುಮಾರು ಮಧ್ಯ ದೂರದಲ್ಲಿ ತುಂಗಭದ್ರಾ ನದಿ ಸಿಕ್ಕುತ್ತದೆ. ಮೈಸೂರಿನಿಂದ ಉತ್ತರಕ್ಕೆ ಹರಿಯುವ ಎರಡು ನದಿಗಳು ಕೂಡಿ ಆಗಿರುವ ಅದು ಉತ್ತರಕ್ಕೆ ಮತ್ತು ಪೂರ್ವಕ್ಕೆ ವಿಶಾಲವಾದ ಆವರ್ತವಾಗಿ ಹರಿಯುತ್ತ ಕರ್ನೂಲಿನಿಂದ ಅನತಿ ದೂರದಲ್ಲಿ ಕೃಷ್ಣೆಯನ್ನು ಸೇರುತ್ತದೆ.

ತನ್ನ ಮಾರ್ಗಮಧ್ಯದಲ್ಲಿ ತುಂಗಭದ್ರಾ, ಬಳ್ಳಾರಿಯ ವಾಯವ್ಯದಲ್ಲಿ ಸುಮಾರು ನಲವತ್ತು ಮೈಲು ದೂರವಿರುವ ಹಾಗೂ ಧಾರವಾಡದಿಂದ ಬಳ್ಳಾರಿಗಿರುವ ರೈಲು ಮಾರ್ಗದ ಉತ್ತರಕ್ಕಿರುವ ದುರ್ಗಮ ಗುಡ್ಡಗಾಡು ಪ್ರದೇಶವನ್ನು ಭೇದಿಸುತ್ತದೆ. ಈ ಪ್ರದೇಶದಲ್ಲಿ ನದಿಯ ಉತ್ತರ ತೀರದ ಮೇಲೆ ಆನೆಗುಂದಿ ಎಂಬ ಕೋಟೆಗಳಿಂದ ಸುತ್ತುವರಿದ ಪಟ್ಟಣ ಸುಮಾರು ಕ್ರಿ.ಶ. 1330ರಲ್ಲಿ ಅಸ್ತಿತ್ವದಲ್ಲಿತ್ತು. ಅದನ್ನೇ ನಮ್ಮ ಚರಿತ್ರಕಾರರು ನಾಗುಂಡಿಮ್ ಎಂದು ಕರೆದರು. ಅದು ಸಮೀಪದಲ್ಲಿದ್ದ ಚಿಕ್ಕ ರಾಜ್ಯದ ದೊರೆಗಳ ಮನೆತನದ ವಾಸಸ್ಥಾನವಾಗಿತ್ತು. ಅವರು ಮುಂಚಿನ ವರ್ಷಗಳಲ್ಲಿ ಆ ಪ್ರದೇಶವನ್ನಾವರಿಸಿದ ಬೆಣಚುಕಲ್ಲಿನ ಉತ್ತುಂಗ ಗುಡ್ಡಗಳ ಪ್ರಯೋಜನ ಪಡೆದು ನದಿಯನ್ನು ದಾಟಲಸಾಧ್ಯವಾಗಿತ್ತು. ನದಿ ವರ್ಷದ ಎಲ್ಲ ಋತುಗಳಲ್ಲಿಯೂ ತುಂಬಿ ಹರಿಯುತ್ತಿತ್ತು. ಮತ್ತು ನೆರೆಗಾಲದಲ್ಲಿ ತನ್ನ ಸುತ್ತುವರಿದ ಹಾಸಿನಲ್ಲಿ ಹಲವಾರು ಸ್ಥಳಗಳಲ್ಲಿ ಗಂಡಾಂತರಕಾರಿ ಜಲಪಾತಗಳುಳ್ಳ ಪ್ರಕ್ಷುಬ್ಧವಾಗಿ ನುಗ್ಗುವ ರಭಸದ ಪ್ರವಾಹಗಳನ್ನು ನಿರ್ಮಿಸಿತ್ತು. ಆನೆಗೊಂದಿ ದೊರೆಗಳ ಬಗೆಗೆ ನಮಗೆ ಬಹಳ ಗೊತ್ತಿಲ್ಲ. ಆದರೆ, ಅವರು ಬಹುಶಃ ಹೊಯ್ಸಳ ಬಲ್ಲಾಳರ ಸಾಮಂತರಾಗಿದ್ದರು. ಕ್ರಿ.ಶ. 1350ಕ್ಕಿಂತ ಏಳು ಶತಮಾನ ಹಿಂದಿನಿಂದಲೂ ಅವರು ರಾಜಮನೆತನದವರಾಗಿ ಅಸ್ತಿತ್ವ ಪಡೆದಿದ್ದರೆಂದು ಫೆರಿಸ್ತಾ ಸಾರುತ್ತಾನೆ. (ಮರೆತುಹೋದ ಮಹಾಸ್ರಾಮ್ರಾಜ್ಯ ವಿಜಯನಗರ; ಅನು: ಸದಾನಂದ ಕನವಳ್ಳಿ, ಪುಟ 5)

## 1.3. ಪ್ರಾಕ್ತನಾಧಾರಗಳು

ಆಧಾರಗಳಿಲ್ಲದೆ ಇತಿಹಾಸವಿಲ್ಲ ಆಧಾರಗಳಿಲ್ಲದೆ ಇತಿಹಾಸ ಅಡಿಪಾಯವಿಲ್ಲದ ಮನೆಯಂತೆ. ದಕ್ಷಿಣ ಭಾರತವನ್ನಾಳಿದ ಅನೇಕ ರಾಜ ಮನೆತನಗಳಲ್ಲಿ ವಿಜಯನಗರ ಅತ್ಯಂತ ಪ್ರಬಲವಾದುದು. ಅನೇಕ ದೃಷ್ಟಿಗಳಿಂದ

ವಿಜಯನಗರದ ಇತಿಹಾಸಕ್ಕೆ ಮಹತ್ವವಿದೆ. ದಕ್ಷಿಣ ಭಾರತವನ್ನಾಳಿದ ಸಾಮ್ರಾಜ್ಯಗಳಲ್ಲಿ ಇದು ಕೊನೆಯದು. ಕ್ರಿ.ಶ. ೧೩೩೬ರಲ್ಲಿ ಉದಯಿಸಿದ ಈ ಸಾಮ್ರಾಜ್ಯದ ಇತಿಹಾಸ ರಚನೆಗೆ ಸಾಕಷ್ಟು ಆಧಾರಗಳು ಲಭಿಸುತ್ತದೆ.

ಈ ಆಧಾರಗಳನ್ನು ಪ್ರಾಕ್ತನಾಧಾರಗಳು ಮತ್ತು ಸಾಹಿತ್ಯ ಆಧಾರಗಳೆಂದು ಪ್ರಧಾನವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಪ್ರಕ್ತನಾಧಾರಗಳಲ್ಲಿ ಶಾಸನಗಳು, ಸ್ಮಾರಕಗಳು, ನಾಣ್ಯಗಳು ಬರುತ್ತವೆ. ಸಾಹಿತ್ಯ ಆಧಾರಗಳಲ್ಲಿ ದೇಶೀಯ ಮತ್ತು ವಿದೇಶಿ ಆಧಾರಗಳೆಂದು ಎರಡು ರೀತಿಯಲ್ಲಿ ಅಧ್ಯಯನ ಮಾಡಬಹುದು. ದೇಶೀಯ ಆಧಾರಗಳಲ್ಲಿ ಸಂಸ್ಕೃತ, ತಮಿಳು, ಕನ್ನಡ ಮತ್ತು ತೆಲುಗು ಕೃತಿಗಳು ವಿಜಯನಗರದ ಇತಿಹಾಸ ರಚನೆಗೆ ಆಧಾರವಾದರೆ, ವಿದೇಶಿಯ ಬರಹಗಳು ಅಷ್ಟೇ ಮುಖ್ಯವಾಗುತ್ತವೆ. ವಿಜಯನಗರದ ವೈಭವದ ಕಾಲದಲ್ಲಿ ಅನೇಕ ವಿದೇಶಿ ಪ್ರವಾಸಿಗರು ಈ ಸಾಮ್ರಾಜ್ಯಕ್ಕೆ ಭೇಟಿಕೊಟ್ಟರು. ತಾವು ಕಣ್ಣಾರೆ ಕಂಡ ಕಿವಿಯಾರೆ ಆಲಿಸಿದ ಅನೇಕ ಮಹತ್ವದ ವಿಚಾರಗಳನ್ನು ತಮ್ಮ ಪ್ರವಾಸಿ ಕಥನಗಳಲ್ಲಿ ದಾಖಲಿಸಿದ್ದಾರೆ. ಇವೆಲ್ಲ ಆಕರಗಳು ವಿಜಯನಗರದ ಸಾಮ್ರಾಜ್ಯವನ್ನು ಕುರಿತ ಸಂಶೋಧನೆ ನಡೆಸುವ ಅಧ್ಯಯನಕಾರರಿಗೆ ಅಮೂಲ್ಯ ಆಕರಗಳಾಗುತ್ತವೆ.

ಪ್ರಸ್ತುತ ನನ್ನ ಅಧ್ಯಯನ ಸಂಶೋಧನಾ ವಿಷಯವಾದ 'ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು' ಎಂಬ ವಿಷಯಕ್ಕೆ ಈ ಅವಧಿಯಲ್ಲಿ ಸಿಕ್ಕುವ ಸಾವಿರಾರು ಶಾಸನಗಳು, ಅಸಂಖ್ಯಾತ ವಿವಿಧ ಭಾಷೆಯ ಕೃತಿಗಳು, ವಿದೇಶಿ ಬರಹಗಳು, ಕೈಫಿಯತ್ತುಗಳು ಬಖೈರೆಗಳು ಆಧಾರವಾಗಿವೆ. ಇದೇ ಸಂಶೋಧನೆಯ ಜೀವಾಳವೆನ್ನಬಹುದು.

## 1. ಶಾಸನಗಳು (Epigraphy or inscriptions)

ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಶಾಸನಗಳು ವಿವಿಧ ಭಾಷೆಯಲ್ಲಿ ದೊರೆತಿವೆ. ಇದಕ್ಕೆ ಕಾರಣ ಈ ಸಾಮ್ರಾಜ್ಯ ದಕ್ಷಿಣ ಭಾರತವನ್ನು ಪೂರ್ಣವಾಗಿ ವ್ಯಾಪಿಸಿದ್ದಿತು. ಈಗ ಲಭ್ಯವಿರುವ ಕರ್ನಾಟಕದ 25000 ಶಾಸನಗಳಲ್ಲಿ 10,000ಕ್ಕೂ ಅಧಿಕ ಸಂಖ್ಯೆಯ ಶಾಸನಗಳು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದವುಗಳಾಗಿವೆ.

**ಅ. ಕನ್ನಡ ಶಾಸನಗಳು :** ಹಂಪೆಯಲ್ಲಿ ಪ್ರಾಪ್ತವಾಗಿರುವ ಶಾಸನಗಳಲ್ಲಿ ಹೆಚ್ಚಿನವು ಕನ್ನಡದಲ್ಲಿವೆ. ಉಳಿದವು ಸಂಸ್ಕೃತದಲ್ಲಿವೆ. ಕ್ರಿ.ಶ. 1340ರ ಬಾದಾಮಿ ಶಾಸನ 1ನೇ ಹರಿಹರನ ರಾಜ್ಯ ವಿಸ್ತರಣೆಯ ಬಗ್ಗೆ ಮಾಹಿತಿಯನ್ನೊಳಗೊಂಡಿದೆ. 1346ರ ಶೃಂಗೇರಿ ಶಾಸನ ಸಂಗಮ ವಂಶದವರು ನೀಡಿದ ದತ್ತಿಗಳ ವಿವರಗಳನ್ನೊಳಗೊಂಡಿದೆ. ಎರಡನೇ ಬುಕ್ಕರಾಯನ 1368ರ ಶ್ರವಣ ಬೆಳಗೊಳದ ಶಾಸನ ಜೈನರು ಮತ್ತು ವೈಷ್ಣವರ ನಡುವೆ ಉಂಟಾದ ಧಾರ್ಮಿಕ ವಿವಾದವನ್ನು ಕುರಿತುದಾಗಿದೆ. ಉತ್ಸವ ವೇಳೆಯಲ್ಲಿ ಪಂಚವಾದ್ಯಗಳನ್ನು ಜೈನರು ಬಳಸಕೂಡದೆಂದು ಶ್ರೀವೈಷ್ಣವರು ಅಡ್ಡಿಪಡಿಸಲಾಗಿ ವಿವಾದ ತಲೆದೋರಿತ್ತು. ಕೊನೆಗೆ ಬುಕ್ಕರಾಯ

ಈರ್ವರಿಗೂ ಅದರ ಹಕ್ಕು ನೀಡುವುದರ ಮೂಲಕ ಸಮಸ್ಯೆ ಬಗೆಹರಿಸಿದ್ದನು. ಎರಡನೇ ಹರಿಹರನ 1418ರ ಶಾಸನ ವೀರ ಪಾಂಚಾಲರಾದ ಅಕ್ಕಸಾಲಿಗರು, ಕಮ್ಮಾರರು, ಬಡಿಗರು, ಕಲ್ಲು ಕುಟಿಗರು, ಚಮ್ಮಾರರ ಮೇಲಿನ ತೆರಿಗೆಗಳನ್ನು ಮಾಫಿ ಮಾಡಿದ ವಿಚಾರವನ್ನೊಳಗೊಂಡಿದೆ.

ಕ್ರಿ.ಶ. 1432ರ ಚಿಕ್ಕಬಳ್ಳಾಪುರದ ಶಾಸನ ಎಲ್ಲ ಜಾತಿಯವರೂ ತೆರಬೇಕಾಗಿದ್ದ ವಿವಾಹ ತೆರಿಗೆಯನ್ನು ಎರಡನೇ ದೇವರಾಯ ರದ್ದುಗೊಳಿಸಿದ ವಿಚಾರವನ್ನು ಒಳಗೊಂಡಿದೆ. ಹೆಚ್ಚಾಗಿ ಕನ್ಯಾಶುಲ್ಕ, ವರದಕ್ಷಿಣೆಗಳನ್ನು ಸಹ ನಿಷೇಧಿಸಲಾಗಿದೆ. ಇಮ್ಮಡಿ ದೇವರಾಯನ ಎರಡು ಬಾರಕೂರು ಶಾಸನಗಳು ಅಲ್ಲಿನ ವರ್ತಕರ ವಿವಾದಗಳನ್ನು ಬಗೆಹರಿಸಿದ ವಿಚಾರಗಳನ್ನೊಳಗೊಂಡಿದೆ.

ಶೃಂಗೇರಿ ಮಠದ ಶಾಸನಗಳು ವಿಜಯನಗರದ ಎಲ್ಲ ಚಕ್ರವರ್ತಿಗಳ ದಾನಶಾಸನಗಳಾಗಿವೆ. ಅವುಗಳಲ್ಲಿ ಗ್ರಾಮದತ್ತಿ, ಪುದುವಟ್ಟು ದತ್ತಿ, ಅಗ್ರಹಾರಗಳ ಸ್ಥಾಪನೆ ಮೊದಲಾದ ವಿಚಾರಗಳ ಉಲ್ಲೇಖವಿದೆ. ಮಠದ ಪಾರುಪತ್ತೆಗಾರರು ವಿಧವೆಯರು ಹಾಗೂ ದೇವದಾಸಿಯರ ಪುತ್ರಿಯನ್ನು ಶ್ರೀಮಂತವರ್ತಕರು ಮತ್ತು ಜಮೀನ್ದಾರರಿಗೆ ಮಾರಾಟ ಮಾಡಿದ ದಾಖಲೆಗಳನ್ನೂ ಅವುಗಳಲ್ಲಿ ಕಾಣಬಹುದಾಗಿದೆ.

ಕೃಷ್ಣದೇವರಾಯನ ಅಳಿಯನಾದ ರಾಮರಾಯ ತಿರುಪತಿಯ ದೇವಾಲಯಗಳಿಗೆ ವಾರ್ಷಿಕ 200 ವರಹಗಳ (ವರಹಗಳ ಮೇಲೆ 'ಚಿನ್ನದ ರೇಖಾಮುದ್ರೆಗಳಿದ್ದುದರಿಂದ ಅವುಗಳನ್ನು ತಮಿಳಿನಲ್ಲಿ 'ರೇಖೈಪೂನ್' ಎಂದು ಕರೆಯುತ್ತಿದ್ದರು.)ಗಳ ಆದಾಯದ 8 ಗ್ರಾಮಗಳ 10,000 ಕುಳಿ (ಅಥವಾ ಕುಂಟೆ ಇರಬಹುದು) ಭೂಮಿ ದಾನ ನೀಡಿದ ಬಗ್ಗೆ ಶಾಸನಗಳಿವೆ.

ಸಾಮಂತರಾದ ಮಲ್ಲರಸ, ಲಕ್ಕನಾಯಕ, ಸಲಕರಾಜರು ಕೂಡ ಹೊರಡಿಸಿರುವ ದಾನಶಾಸನಗಳಿವೆ. ನರಸಿಂಹ ವಿಗ್ರಹದ ಮುಂದೆ ಕೃಷ್ಣದೇವರಾಯನ ಶಿಲಾ ಶಾಸನವಿದೆ.

**ಆ. ತೆಲುಗು ಶಾಸನಗಳು :** ಗುತ್ತಿ ತಾಲ್ಲೂಕಿನ ರಾಗುಲಪಾಡು, ತಿಮ್ಮಚರ್ಲ ಶಾಸನಗಳು ಉದಯಗಿರಿ, ಪೆನುಗೊಂಡ ಮೊದಲಾದ ರಾಜ್ಯಗಳ ಮತ್ತು ಒಳಿತುಗಳು (ಒಳನಾಡುಗಳ) ವಿವರಗಳನ್ನು ಒಳಗೊಂಡಿವೆ. 2ನೇ ಹರಿಹರನ ಬಾಗೆಪಲ್ಲಿ ತಾಮ್ರಶಾಸನ, 1ನೇ ಬುಕ್ಕನ ಚಿತ್ರಗುಂಟ ತಾಮ್ರಶಾಸನ (ನಲ್ಲೂರು ಜಿಲ್ಲೆ) ಆರಂಭ ಕಾಲದ ಬಗ್ಗೆ ಮಾಹಿತಿಯುಳ್ಳವಾಗಿವೆ. ಗೋಜಲವೀಡು ಶಾಸನ 1ನೇ ಬುಕ್ಕರಾಯ ಸ್ವತಂತ್ರ ರಾಜನೆಂಬ ಅಂಶ ತಿಳಿಸುತ್ತದೆ.

ನೆಲ್ಲೂರು ಜಿಲ್ಲೆಯ ವಾಗುಪಲ್ಲಿ (ಗೋಜಲವೀಡು) ಶಾಸನದಲ್ಲಿ 1ನೇ ಬುಕ್ಕರಾಯನನ್ನು 'ಸಮಸ್ತ ಭುವನ ಆಶ್ರಯ' 'ಅರಿರಾಯವಿಭಾಡ' 'ಭಾಷೆಗೆ ತಪ್ಪುವರಾಯರ ಗಂಡ' ಮೊದಲಾಗಿ ಪ್ರಶಂಸಿಸಲಾಗಿದೆ. ಈ ತೆಲುಗು ಶಾಸನದಲ್ಲಿ ಕನ್ನಡ ಬಿರುದುಗಳು ಉಲ್ಲೇಖಗೊಂಡಿವೆ. ಮೇಲಾಗಿ ಕನ್ನಡ ಮೂಲವನ್ನು ಇದು ಸಮರ್ಥಿಸುವ ಶಾಸನವೂ ಆಗಿದೆ.

ನರಸಗ್ರಾಮದ ಶಾಸನ ಬುಕ್ಕರಾಯನ ದಾನ ದತ್ತಿಯ ವಿವರಗಳನ್ನೊಳಗೊಂಡಿದೆ. ಕಲ್ಯಾಣ ದುರ್ಗದ ನರಸಾಪುರಂ ಶಾಸನವು ಅಲ್ಲಿನ ಕ್ಷೌರಿಕರಿಗೆ ಕೊಟ್ಟ ತೆರಿಗೆ ರಿಯಾಯತಿಯ ಬಗ್ಗೆ ಮಾಹಿತಿಯನ್ನೊಳಗೊಂಡಿದೆ. ಅನಂತಪುರದ ಶಾಸನ ಆ ಪ್ರಾಂತದ ಅನಂತರಸನೆಂಬ ಮಹಾಮಂಡಲೇಶ್ವರನ ಬಗ್ಗೆ ವಿವರವನ್ನೊಳಗೊಂಡಿದೆ. ಆಲೂರು ಮತ್ತು ಗುಂಟೂರು ಶಾಸನಗಳು ಅಂದಿನ ವರ್ತಕ ಶ್ರೇಣಿಗಳ ಮುಖ್ಯಸ್ಥರಾದ ವಲ್ಲಭಶೆಟ್ಟಿ ಮೊದಲಾದವರ ಬಗ್ಗೆ ಮಾಹಿತಿ ಒಳಗೊಂಡಿದೆ. ತಿರುಪತಿಯ 1408ರ ಶಾಸನ ತಿರುಪತಿ ದೇವಸ್ಥಾನದ ಧರ್ಮದರ್ಶಿಯನ್ನು ಸ್ಥಾನಾತ್ತರ್ ಎಂದು ಉಲ್ಲೇಖಿಸಿದೆ. ಬೆಂಗಳೂರು ತಾಲ್ಲೂಕಿನ ದಾಸವಾರ ಶಾಸನ (1633) 2ನೇ ಜಗದೇವರಾಯನ ದಾನದತ್ತಿಗಳ ಬಗ್ಗೆ ಮಾಹಿತಿಯನ್ನೊಳಗೊಂಡಿದೆ.

**ಇ. ತಮಿಳು ಶಾಸನಗಳು :** ಮಧುರೈ, ತಂಜಾವೂರು, ತಿರುಚನಾಪಳ್ಳಿ, ರಾಮನಾಡು, ಪುದುಕೋಟೆ ಜಿಲ್ಲೆಗಳಲ್ಲಿ ದೊರೆತಿರುವ ವಿಜಯನಗರದ ಶಾಸನಗಳಲ್ಲಿ ಕೆಲವು ತಮಿಳು ಲಿಪಿಯಲ್ಲೂ ಮತ್ತೆ ಕೆಲವು ಸಂಸ್ಕೃತ ಲಿಪಿಯಲ್ಲೂ ಇವೆ. ಇವು ಅಲ್ಲಿನ ದೇವಾಲಯಗಳಿಗೆ ನೀಡಿದ ದಾನದತ್ತಿಗಳ ವಿವರವನ್ನೊಳಗೊಂಡಿವೆ. ಕೊಯಮತ್ತೂರು ಜಿಲ್ಲೆಯ ಹೆಚ್ಚಿನ ಶಾಸನಗಳು ದೇವಾಲಯಗಳ ನರ್ತಕಿಯರಿಗೆ, ಉತ್ಸವಗಳಿಗೆ, ದೈನಂದಿನ ದೀಪಾರಾಧನೆಗೆ ನೀಡಿದ ದತ್ತಿಯ ವಿವರವನ್ನೊಳಗೊಂಡಿವೆ. ಇವುಗಳಲ್ಲದೆ ಆ ಕಾರ್ಯಗಳಿಗಾಗಿ ಮೀಸಲಿಟ್ಟ ಹಣದ ಮೇಲೆ ಬಂದ ಬಡ್ಡಿಯನ್ನು ದೀಪಾರಾಧನೆ ಕಾರ್ಯಗಳಿಗೆ ಬಳಸುವ ಪದ್ಧತಿಯನ್ನು ಕಾಣಬಹುದಾಗಿದೆ. ನಿಧಿಯನ್ನು ದುರುಪಯೋಗಪಡಿಸಿದವರಿಗೆ ವಿಧಿಸಬಹುದಾದ ಶಿಕ್ಷೆಗಳ ವಿವರವನ್ನು ಅವು ಒಳಗೊಂಡಿವೆ. ಸೂರೈಕೂಡಿ ದೇವಾಲಯದ ಶಾಸನದಲ್ಲಿ ದಿನನಿತ್ಯದ ವೇದ ಪಾರಾಯಣಕ್ಕೆ ನಿಧಿಯನ್ನು ಒದಗಿಸಿರುವ ಅಂಶ ಕಂಡುಬರುತ್ತದೆ. ತಿರುಕ್ಕಲಿ ಕುಂಡ್ರಮ್, ಸೆಲಿಯಂಗನಲ್ಲೂರು ಮೊದಲಾದ ಶಾಸನಗಳಲ್ಲಿ 18 ಜಾತಿಯ ಜನರ ಮೇಲೆ ವಿಧಿಸಲಾದ ಜಾತಿ ತೆರಿಗೆ ಹಾಗೂ ವಿನಾಯತಿಗಳ ವಿವರವಿದೆ. 1356ರ ಬುಕ್ಕರಾಯನ ತಮಿಳು ಶಾಸನ ಶಂಭುರಾಯನ ಮನೆತನ ರಾಜಗಂಭೀರ ರಾಜನಾರಾಯಣನನ್ನು (ಚಂಗಲ್ ಪೇಟೆ) ಜಯಿಸಿದ ಬಗ್ಗೆ ವಿವರವನ್ನೊಳಗೊಂಡಿದೆ. ಶಾಸನದಲ್ಲಿ ಆ ಪ್ರದೇಶವನ್ನು ರಾಜಗಂಭೀರಮಲೈ ಎಂದು ಉಲ್ಲೇಖಿಸಲಾಗಿದೆ. ಕಂಚಿಯ ಮತ್ತೊಂದು ತಮಿಳುಶಾಸನದಲ್ಲಿ ಬುಕ್ಕ (ವೀರಕೆಂಪಣರಾ) ಅಲ್ಲಿನ ಸುಲ್ತಾನ ಅಲಾ ಉದ್ದೀನ್ ಸಿಕಂದರ್‌ನನ್ನು ಕದನದಲ್ಲಿ ಕೊಂದು ರಾಜ್ಯ ವಶಪಡಿಸಿಕೊಂಡ ಬಗ್ಗೆ ಮಾಹಿತಿ ಇದೆ. ಅಲ್ಲಿನ ಈಶ್ವರ ದೇವಾಲಯ ಮತ್ತು ಶ್ರೀರಂಗನಾಥ ದೇವಾಲಯಗಳಲ್ಲಿ ವಿಗ್ರಹ ಸ್ಥಾಪನೆ ದತ್ತಿಯ ವಿಚಾರವನ್ನೂ ಆ ಶಾಸನ ಒಳಗೊಂಡಿದೆ. ಅಲ್ಲದೆ ತಿರುಪತಿಯ ದೇವಸ್ಥಾನದ ವಿವಿಧ ಅಧಿಕಾರಿಗಳು (ಸ್ಥಾನತ್ತರ್) ಸೇವಕರು, (ಕೈಗೊಳರ್), ಕಲ್ಲು ಕೆಲಸದವರು (ಸಿಪ್ಪಿಯಾರ್), ದೇವದಾಸಿಯರು (ತಿರುವಿಧಿಶಾನಿಯರು) ಉಲ್ಲೇಖಗೊಂಡಿದ್ದಾರೆ. ಶ್ರೀಕೃಷ್ಣದೇವರಾಯ ತಿರುಪತಿಗೆ 7 ಬಾರಿ ಭೇಟಿ ಇತ್ತಾಗಲೆಲ್ಲ ದೇವಾಲಯಕ್ಕೆ ನೀಡಿದ ದಾನ ದತ್ತಿಗಳ ವಿವರ ಅಲ್ಲಿನ ಗೋಡೆಗಳ ಮೇಲಿದೆ. ಕೇರಳದ ಭುವನೈಕ ಮಿತ್ರಮ್, ಚತುರ್ವೇದ ಮಂಗಳಮ್ ಮೊದಲಾದ ಶಾಸನಗಳಲ್ಲಿ ಗ್ರಾಮ ಮುಖಂಡರ ಸಭೆಗಳು, ವರ್ತಕರ ಸಭೆಗಳು ನೀಡಿದ ದಾನ ದತ್ತಿಗಳ ಮಾಹಿತಿ ಇದೆ.

**ಈ. ಸಂಸ್ಕೃತ ಶಾಸನಗಳು :** ಹರಿಹರ, ಬುಕ್ಕರಾಯ, ಕೃಷ್ಣದೇವರಾಯ ಮೊದಲಾದವರ ದಿಗ್ವಿಜಯಗಳನ್ನು ವಿವರಿಸುವ ಸಂಸ್ಕೃತ ಪ್ರಶಸ್ತಿಗಳನ್ನು (Eulogies) ತಾಮ್ರಪಟಗಳ ಮೇಲೆ ಬರೆಯಲಾಗಿದೆ. ಹಂಪಿಯಲ್ಲಿ ದೊರೆತಿರುವ ಈ ಪ್ರಶಸ್ತಿಗಳಲ್ಲಿ ಚಕ್ರವರ್ತಿಗಳನ್ನು 'ಪೂರ್ವ ಪಶ್ಚಿಮ ಸಮುದ್ರಾಧಿಪತಿ', 'ಮಹಾರಾಜಾಧಿರಾಜ', 'ಕರ್ನಾಟಕ ಚಕ್ರವರ್ತಿ', 'ಆಂಧ್ರಭೋಜ', 'ಪ್ರತಾಪದೇವ' ಮೊದಲಾದ ಬಿರುದುಗಳಿಂದ ವರ್ಣಿಸಿರುವುದನ್ನು ಕಾಣಬಹುದಾಗಿದೆ. ಇವುಗಳಲ್ಲಿ ವಿಶೇಷವಾಗಿ ಶಾಸನಗಳಿಗೆ ಸಂಬಂಧಿಸಿದ ವ್ಯಕ್ತಿಗಳ ಗುಣಾವಗುಣಗಳನ್ನು ಕುರಿತು ಹೊಗಳಿಕೆಯ (ಅಂತವುಗಳನ್ನು ಪ್ರಶಸ್ತಿಗಳೆಂದು ಕರೆಯಲಾಗುತ್ತದೆ) ಮಾತುಗಳನ್ನಾಡಲಾಗಿದೆ.

## 1.4. ಸಾಹಿತ್ಯಾಧಾರಗಳು

**ಅ. ಕನ್ನಡ :** ವಿಜಯನಗರ ಸಾಮ್ರಾಜ್ಯದ ಬಗ್ಗೆ ಐತಿಹಾಸಿಕ ಅಂಶಗಳನ್ನೊಳಗೊಂಡ ಹಲವಾರು ಗ್ರಂಥಗಳಿವೆ. ಅವುಗಳಲ್ಲಿ ಪ್ರಮುಖವಾದುವು: ಕೆಳದಿ ಬಸವಪ್ಪನಾಯಕನ (ಸಾಮಂತ) ಶಿವತತ್ವ ರತ್ನಾಕರ, ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ' ನಂಜುಂಡ ಕವಿಯ 'ಕುಮಾರ ರಾಮನ ಸಾಂಗತ್ಯ' ಚಾಮರಸನ 'ಪ್ರಭುಲಿಂಗಲೀಲೆ' ಲಕ್ಷ್ಮೀಶನ 'ಜೈಮಿನಿ ಭಾರತ' ನರಹರಿ ಕವಿಯ 'ತೊರವೆ ರಾಮಾಯಣ', ಕುಮಾರವ್ಯಾಸನ 'ಗದುಗಿನ ಭಾರತ', ಕನಕದಾಸನ 'ಮೋಹನ ತರಂಗಿಣಿ', ರತ್ನಾಕರವರ್ಣಿಯ 'ಭರತೇಶ ವೈಭವ' ರಾಮೋಜಿ ತಿರುಮಲಹರಿಕಾರ ಪಂಪನ 'ರಾಮರಾಯನ ಬಖೈರ್' (1621) ಇತ್ಯಾದಿ.

**ಆ. ತೆಲುಗು :** ಶ್ರೀನಾಥನ ಹರವಿಲಾಸಮು, ಅಲ್ಲಸಾನಿ ಪೆದ್ದನನ ಮನುಚರಿತಮು, ಕೃಷ್ಣದೇವರಾಯ ಅಂಕಿತದ ಅಲ್ಲಸಾನಿ ಪೆದ್ದನನ ಅಮುಕ್ತಮಾಲ್ಯದ, ಮಲ್ಲಣ್ಣ ಕವಿಯ ರಾಜಶೇಖರ ಚರಿತಮು, ದೂರ್ಜಟಿಯ ಕೃಷ್ಣರಾಜ ವಿಜಯಮು, ವಿಶ್ವನಾಥನಾಯಕ ರಾಯವಾಚಕಮು, ಅನಾಮಿಕನ ರಾಮರಾಜೀಯಮು, ನಂದಿ ತಿಮ್ಮಣ ಕವಿಯ ಪಾರಿಜಾತ ಅಪಹರಮು ಕೃತಿಗಳಲ್ಲಿ ಕೃಷ್ಣದೇವರಾಯನ ಆಂಧ್ರ ಮತ್ತು ಒರಿಸ್ಸಾದ ದಿಗ್ವಿಜಯಗಳನ್ನು ಕುರಿತು ಮಾಹಿತಿ ಇದೆ. ಮನುಚರಿತಮು, ಅಮುಕ್ತಮಾಲ್ಯದ ಮತ್ತು ರಾಯವಾಚಕಮು ಮೊದಲಾದವುಗಳಲ್ಲಿ ರಾಜನೀತಿಯನ್ನೂ, ಆಡಳಿತದ ವಿವರಗಳನ್ನೂ, ರಾಜನ ದಿನಚರಿಯನ್ನೂ ಕಾಣಬಹುದಾಗಿದೆ.

**ಇ. ತಮಿಳು :** ವಿಜಯನಗರ ಸಾಮ್ರಾಜ್ಯ ಕಾಲಕ್ಕೆ ಸಂಬಂಧಿಸಿದ ತಮಿಳು ಸಾಹಿತ್ಯಕ ಆಧಾರಗಳಲ್ಲಿ ಸ್ಥಳಪುರಾಣಗಳು (ತಲವರಲ್) ಅಧಿಕವಾಗಿವೆ. ಅವುಗಳಲ್ಲಿ ಕೆಲವು ಹೀಗಿವೆ. ತಲವರಲ್ ಮಧುರೈ, ತಲವರಲ್ ಕಂಚಿ, ತಲವರಲ್ ತಂಜಾವೂರ್ ಇತ್ಯಾದಿ. ತಮಿಳು ಅರೆ ಐತಿಹಾಸಿಕ ಕೃತಿಗಳನ್ನು ಪರಣಿ, ಕಾಲಂಬಾಕಂ, ಉಳ ಎಂದು ವರ್ಗೀಕರಿಸಲಾಗಿದೆ. ಉದಾ: ಜಯಗೊಂಡರ ಕವಿಯ ಕಳಿಂಗತ್ತುಕಾಲಪರಣಿ ವಿಜಯನಗರದ ಆರಂಭಕಾಲಕ್ಕೆ ಮಾಹಿತಿಯನ್ನೊಳಗೊಂಡಿದೆ. ಅನಾಮಿಕ ಕವಿಯ ನಂದಿ ಕಲಾಂಬಾಕಂ, ಒಟ್ಟ(ತ್ರ), ಕೂತರ್

ಕವಿಯ 'ಮೂವರ್‌ನ ಉಳ' (ula- ಎಂದರೆ ಲಾವಣಿ: Ballads) ಅಲಾಮಿಕನ ಏಕಾಂಬರನಾಥ ಎಂಬ ಕೃತಿಯು ಕಂಚಿಯ ಸಾಮಂತರಾದ ಶಂಭುವ ರಾಯ್ ಮನೆತನದ ಬಗ್ಗೆ ಮಾಹಿತಿಯನ್ನೊಳಗೊಂಡಿದೆ. ಇವಲ್ಲದೆ ಶತಕ ಸಾಹಿತ್ಯದಲ್ಲಿ ಆತ್ಮಾನಂದ ದೇಶಿಕರ ತೊಂಡೈಮಂಡಲ ಶತಕಂ, ಚೋಳಮಂಡಲ ಶತಕಂಗಳು ಐತಿಹಾಸಿಕ ಸಂಗತಿ ಒಳಗೊಂಡಿವೆ. ಪಲ್ಲು ಸಾಹಿತ್ಯ ಪ್ರಕಾರವು ದೈನಂದಿನ ಜೀವನ ಹಾಗೂ ರಾಜಕೀಯ ಘಟನಾವಳಿಗಳನನು ಒಳಗೊಂಡಿದೆ. ಅವುಗಳಲ್ಲಿ 'ಮುಕುಂದರ್' ಪಲ್ಲು ಒಂದು ಉತ್ತಮ ಕೃತಿ. ದೇವಾಲಯ ದಾಖಲೆಗಳನ್ನು 'ಕೊಯಿಲ್ ಒಲುಗು' (Koil olugu) ಎಂದು ಕರೆಯಲಾಗಿದೆ. ಅವುಗಳಲ್ಲಿ 'ಶ್ರೀರಂಗಂ ಕೊಯಿಲ್ ಒಲುಗು', 'ಮಧುರೈ ಕೊಯಿಲ್ ಒಲುಗು' ಪ್ರಮುಖವಾಗಿವೆ. ಇವು ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ.

**ಈ. ಸಂಸ್ಕೃತ :** ಈ ಕಾಲದ ಬಗ್ಗೆ ಐತಿಹಾಸಿಕ ಸಾಮಾಗ್ರಿಯನ್ನು ಈ ಕೆಳಕಂಡ ಸಂಸ್ಕೃತ ಗ್ರಂಥಗಳಿಂದಲೂ ಸಂಗ್ರಹಿಸಿಕೊಳ್ಳಬಹುದಾಗಿದೆ. ಅವುಗಳಲ್ಲಿ ಮುಖ್ಯವಾದವು : ಗಂಗಾದೇವಿಯ ಮಧುರಾ ವಿಜಯಂ (ವೀರಕಂಪಣರಾಯಚರಿತಂ), ರಾಜನಾಥ ಡಿಂಡಿಮನ ಸಾಳ್ವಾಭ್ಯುದಯಂ, ಅಕಚ್ಚುತಾಬ್ಯದಯಂ, ವೇದಾಂತ ದೇಶಿಕರ ಯಾದವಾಭ್ಯುದಯಂ, ವಿದ್ಯಾರಣ್ಯ ಕಾಲಜ್ಞಾನ, ವಿದ್ಯಾರಣ್ಯ - ವೃತ್ತಾಂತ, ವಿದ್ಯಾರಣ್ಯ - ರಾಜಕಾಲನಿರ್ಣಯ ಮಾಧವ ಕವಿಯ ಪರಾಶರ ಮಾಧವೀಯಂ. ರಾಜಕೀಯ ವಿದ್ಯಮಾನಗಳ ಮೇಲೆ ಬೆಳಕು ಚೆಲ್ಲುತ್ತವೆ. ಅನಾಮಿಕನ ಮದನ ಪಾರಿಜಾತ, ವಿವಾದ ರತ್ನಾಕರ, ವಿವಾದ ಚಿಂತಾಮಣಿ, ವಿವಾದ ಚಂದ್ರ, ಗೃಹಸ್ತ ರತ್ನಾಕರ, ಬೃಹದ್ಧಮ್ಮ ಪುರಾಣ ಮೊದಲಾದವು ಅಂದಿನ ಸಾಮಾಜಿಕ ಜೀವನ ತಿಳಿಯಲು ಸಹಾಯಕವಾಗಿವೆ.

## 1.5. ವಿದೇಶಿ ಪ್ರವಾಸಿಗರ ದಾಖಲೆಗಳು (ಪ್ರವಾಸ ಕಥನಗಳು)

ವಿಜಯನಗರ ಹಿರಿಮೆ ಅಪಾರ. ಅದು ಪ್ರತಿಯೊಬ್ಬ ಭಾರತೀಯನಿಗೂ ಹೆಮ್ಮೆ ತರುವಂತಹುದಾಗಿದೆ. ಅದರ ಹಿರಿಮೆಯನ್ನು ಕಣ್ಣಾರೆ ಕಂಡು ಬೆರಗಾದ ವಿದೇಶಿಯರ ಅನುಭವ ಅಸದಳ. ಅವರು ವಿವಿಧ ದೇಶ ಹಾಗೂ ಭಾಷೆಗಳಿಗೆ ಸೇರಿದವರಾದರೂ ವಿಜಯನಗರದ ಹಿರಿಮೆ ಹಾಗೂ ಅದರ ಭವ್ಯತೆಯ ಬಗ್ಗೆ ಅವರೆಲ್ಲರದೂ ಒಂದೇ ಅಭಿಪ್ರಾಯ.

ಪ್ರಮುಖ ಪ್ರವಾಸಿಗರು

| ವಿದೇಶ | ಪ್ರವಾಸಿ | ಕಾಲ | ಅಂದಿನ ಅರಸ |
|---|---|---|---|
| ಚೀನಾ | ಅನಾಮಿಕ | 1374 | 1ನೇ ಬುಕ್ಕ |
| ಇಟಲಿ | ನಿಕೊಲೊಕಾಂಟಿ | 1420 | 1ನೇ ದೇವರಾಯ |
| ಪರ್ಶಿಯ | ಅಬ್ದುಲ್ ರಜಾಕ್ | 1422 | 2ನೇ ದೇವರಾಯ |

| | | | |
|---|---|---|---|
| ರಷ್ಯಾ | ನಿಕಿಟನ್ | 1480 | ವಿರೂಪಾಕ್ಷ |
| ಪೋರ್ಚುಗಲ್ | ಬರ್ಬೋಸ | 1516 | ಕೃಷ್ಣದೇವರಾಯ |
| ಪೋರ್ಚುಗಲ್ | ಡೊಮಿಂಗ್ ಪೇಸ್ | 1522 | ಕೃಷ್ಣದೇವರಾಯ |
| ಪೋರ್ಚುಗಲ್ | ನ್ಯುನಿಜ್ | 1535 | ಅಚ್ಯುತರಾಯ |
| ಇಟಲಿ | ಫ್ರೆಡೆರಿಕ್ ಸೀಜರ್ | 1567 | ಸದಾಶಿವರಾಯ (ಪೆನುಗೊಂಡದಲ್ಲಿ) |
| ಪೋರ್ಚುಗಲ್ | ವೇಮಸ್ | 1570 | " |
| ಪೋರ್ಚುಗಲ್ | ಪೆರ್ನಿಯೋ | 1570 | " |
| ಪೋರ್ಚುಗಲ್ | ಬರ್ರಡ್ರಸ್ | 1570 | " |

ಇಟಲಿಯ ಪ್ರವಾಸಿ ನಿಕೊಲೊಕಾಂಟಿ ವರ್ಣನೆ ಹೀಗಿದೆ : "ಗುಡ್ಡಗಳ ಪಕ್ಕದಲ್ಲಿರುವ ವಿಜಯನಗರ ಸುಮಾರು 60 ಮೈಲಿ ಸುತ್ತಳತೆಯುಳ್ಳದ್ದಾಗಿದೆ. ಗುಡ್ಡದ ಬುಡದವರೆಗೂ ಇದರ ಕೋಟೆಯ ಗೋಡೆಗಳು ಚಾಚಿವೆ. ಇಲ್ಲಿ 90,000 ವೀರ ಯೋಧರಿದ್ದಾರೆ. "ನಿಕೊಲೊಕಾಂಟಿಯ ಕಥನವನ್ನು ಮೇಜರ್ ಎಂಬುವನು ಲ್ಯಾಟಿನ್ನಿನಿಂದ ಇಂಗ್ಲಿಷಿಗೆ ಭಾಷಾಂತರಿಸಿದನು.

ಪರ್ಶಿಯಾದ ಪ್ರವಾಸಿ ಅದ್ಬುಲ್ ರಜಾಕನ ಅಭಿಪ್ರಾಯ : ಒರ್ಮಜ್ (ಪರ್ಶಿಯ್)ನ ಹಖ್‌ಷಾನ ರಾಯಭಾರಿಯಾಗಿ ಮಂಗಳೂರು ಮೂಲಕ ಬಂದ ಇವನು ಹೊನ್ನಾವರದ ಮೂಲಕ ಹಿಂತಿರುಗಿದನು. ಅವನ 'ಮತ್ಲಸ್ ಸದೈನ್' (ರೆಹಲ) ವಿಜಯನಗರದ ಬಗ್ಗೆ ಮಾಹಿತಿ ಒಳಗೊಂಡಿದೆ. ಒಂದೆಡೆ ಹೀಗೆ ಹೇಳಿದ್ದಾನೆ: "ಇಡೀ ಪ್ರಪಂಚದಲ್ಲಿಯೆ ಇಂತಹ ಮತ್ತೊಂದು ಪಟ್ಟಣವಿರುವುದನ್ನು ಯಾರೂ ಕಣ್ಣಿಂದ ನೋಡಿರಲಾರರು. ಕಿವಿಯಿಂದ ಕೇಳಿರಲಾರರು. ಇಲ್ಲಿ ಸಂಪತ್ತಿನ ಹೊಳೆಯು ಹರಿಯುತ್ತಿದೆ. ನಗರದ ಉದ್ಯಾನವನ ವಿಶಾಲ ಬೀದಿಗಳಿಂದ ಕಂಗೊಳಿಸುತ್ತಿದೆ. ಗುಲಾಬಿ ಹೂಗಳ ಮಾರಾಟ ಇಲ್ಲಿ ವಿಶೇಷ. ಇಲ್ಲಿನ ಜನ ಗುಲಾಬಿಪ್ರಿಯರು. ಅವರಿಗೆ ಆಹಾರದಷ್ಟೇ ಅವು ಅವಶ್ಯವೆಂದು ತೋರುತ್ತದೆ. ರತ್ನ ವಜ್ರ ವೈಡೂರ್ಯಗಳನ್ನು ಇಲ್ಲಿನ ಪೇಟೆ ಬೀದಿಗಳಲ್ಲಿ ಯಾವ ವಿಧವಾದ ಭೀತಿಯೂ ಇಲ್ಲದೆ ಬಹಿರಂಗವಾಗಿ ಮಾರುತ್ತಾರೆ."

ಪೋರ್ಚುಗಲ್ಲಿನ ಡುವರ್ಚೋ ಬರ್ಬೋಜ : ಇವನು ಕೃಷ್ಣದೇವರಾಯನ ಕಾಲದಲ್ಲಿ ಆಗಮಿಸಿದ್ದನು. ಈಕಾಲದ ವಿಜಯನಗರ ಇತಿಹಾಸಕ್ಕೆ ಇವನ ಬರವಣಿಗೆಯಿಂದ ಸಾಕಷ್ಟು ಮಾಹಿತಿ ಲಭ್ಯವಾಗಿದೆ. ರಾಜ್ಯದ ಸಂಪತ್ತನ್ನು ಕುರಿತು ಒಂದೆಡೆ ಈ ರೀತಿ ಅಭಿಪ್ರಾಯಪಟ್ಟಿದ್ದಾನೆ. "ವಿಜಯನಗರ ಸಾಮ್ರಾಜ್ಯ ಸಂಪದ್ಭರಿತವಾಗಿದೆ. ಅದರ ಅರಸನಾದ ರಾಯನು ಕರುಣಾಮಯನು. ರಾಜಧಾನಿ ಭವ್ಯ ಅರಮನೆಗಳು, ಭವನಗಳು, ದೇವಾಲಯಗಳು, ವಿಶಾಲವಾದ ಬೀದಿಗಳಿಂದ ಕಂಗೊಳಿಸುತ್ತಿದೆ. ಸಿಲೋನ್, ಪೆಗಲ ಮೊದಲಾದ ದೇಶಗಳಿಂದ ಮುತ್ತುರತ್ನಗಳು ಇಲ್ಲಿಗೆ ಆಮದಾಗುತ್ತವೆ. ಈ ರಾಜ್ಯದಲ್ಲೇ ವಜ್ರಗಳ ಗಣಿ ಇದೆ. ರಾಯನಿಗೂ ದಖನ್ನಿನ ಸುಲ್ತಾನರಿಗೂ ಆಗಾಗ್ಗೆ ಕದನ ಸಂಭವಿಸುತ್ತಿವೆ."

ರಷ್ಯಾದ ನಿಕಿಟಿನ್ : ವಿಜಯನಗರ ಮತ್ತು ಬಹಮನಿ ರಾಜ್ಯಗಳೆರಡರಲ್ಲೂ ಪ್ರವಾಸ ಮಾಡಿ ಅವೆರಡರ ನಡುವೆ ಸಂಭವಿಸುತ್ತಿದ್ದ ಕದನಗಳ ಬಗ್ಗೆ ಉಪಯುಕ್ತ ಮಾಹಿತಿ ಇವನ ದಾಖಲೆಗಳಿಂದ ಲಭ್ಯವಾಗಿದೆ. ಅಂದಿನ ರಕ್ಷಣಾ ವ್ಯವಸ್ಥೆ ಕುರಿತು ನಿಕಿಟನ್ ಈ ರೀತಿ ಅಭಿಪ್ರಾಯಪಟ್ಟಿದ್ದಾನೆ: "ವಿಜಯ ನಗರದ ಸೈನ್ಯ ಒಂದು ಲಕ್ಷ ಕಾಲ್ದಳ, ಐವತ್ತು ಸಾವಿರ ಅಶ್ವದಳ ಹೊಂದಿತ್ತು. ವಿಜಯನಗರವನ್ನು ಮೂರು ಕಡೆ ಬೆಟ್ಟಗಳೂ ಒಂದು ಕಡೆ ನದಿಯೂ ಸುತ್ತುವರಿದಿದೆ. ಅದೊಂದು ದುರ್ಗಮವಾದ ಸುರಕ್ಷಿತ ನಗರ."

ಪೋರ್ಚುಗಲ್ಲಿನ ಡೋಮಿಂಗೋ ಪೇಸ್ : ಕೃಷ್ಣದೇವರಾಯನ ಹನ್ನೆರಡು ರಾಣಿಯರ ಅರಮನೆಗಳು ಮತ್ತು ಅವನ ಅರಮನೆಯ ದಿನಚರಿ ಹಾಗೂ ವೇಷಭೂಷಣಗಳು ಮೊದಲಾದ ವಿಚಾರಗಳ ಬಗ್ಗೆ ಸಾಕಷ್ಟು ಮಾಹಿತಿ ಇವನ ದಾಖಲೆಗಳಿಂದ ತಿಳಿದುಬರುತ್ತದೆ. ರಾಜ್ಯದ ವ್ಯಾಪಾರವನ್ನು ಕುರಿತು ಹೇಳುತ್ತ "ವಿಜಯನಗರವು ರೋಮ್ ನಗರದಷ್ಟು ದೊಡ್ಡದಾಗಿದೆ. ಇಲ್ಲಿ ಮಣಿ, ಮಾಣಿಕ್ಯ, ವಜ್ರ, ವಸ್ತ್ರ, ಲಿಂಬೆ, ಹಲಸು, ಮಾವು, ದ್ರಾಕ್ಷಿ, ಬಾಳೆ, ದಾಳಿಂಬೆ ಮೊದಲಾದವು ದೊರೆಯುತ್ತವೆ" ಎಂಬುದಾಗಿ ವರ್ಣಿಸಿದ್ದಾನೆ. ದಸರಾ ಮಹೋತ್ಸವವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸಲಾಗುತ್ತಿತ್ತು. ಮಹಾನವಮಿ ದಿಬ್ಬದ ಬಳಿ ಜರುಗುತ್ತಿದ್ದ ಆ ದಿನದ ಕಾರ್ಯಕ್ರಮವನ್ನು ಈ ರೀತಿ ಉದ್ಗರಿಸಿದ್ದಾನೆ: "ಮನ್ನೆಯರ ಹಾಗೂ ಉಚ್ಚಸ್ಥಾನದ ವ್ಯಕ್ತಿಗಳ ಎಲ್ಲ ವೈಭವಾಡಂಬರವನ್ನು ನೋಡುವುದು ಹಾಗೂ ಅದನ್ನು ಬಣ್ಣಿಸಲು ನನ್ನಿಂದ ಸಾಧ್ಯವಾಗದ ಕೆಲಸ, ಕಣ್ಣಿಗೆ ಹಬ್ಬ ಮತ್ತು ಅದನ್ನು ಬಣ್ಣಿಸಲು ನನ್ನಲ್ಲಿ ಶಬ್ದಗಳಿಲ್ಲ. ನಾನು ಕಂಡದ್ದನ್ನೆಲ್ಲ ನಿಮಗೆ ಹೇಳುವುದು ಹತಾಶೆಯ ಕೆಲಸ."

ಇಟಲಿಯ ಫ್ರೆಡರಿಕ್ ಸೀಜರ್ : ತಾಳಿಕೋಟೆ ಯುದ್ಧವಾದ ಎರಡು ವರ್ಷಗಳಲ್ಲಿ (1567) ವಿಜಯನಗರವನ್ನು ಸಂದರ್ಶಿಸಿದ್ದ ಇವನು ರಾಮಾರಾಯನ ವ್ಯಕ್ತಿತ್ವ ಹಾಗೂ ಅವನ ಇಬ್ಬರು ಮುಸ್ಲಿಂ ದಳಪತಿಗಳು (ಗಿಲಾನಿ ಸೋದರರು) ತಮ್ಮ ಅನುಯಾಯಿಗಳೊಂದಿಗೆ ಶತ್ರುಗಳ ಕಡೆ ಸೇರಿದುದು ಮತ್ತು ರಾಜಧಾನಿಯ ಸಂಪತ್ತನ್ನು ಶತ್ರುಗಳು, ಕಾಡುಕುರುಬರು, ಲಂಬಾಣಿಗಳು ದೋಚಿದುದನ್ನು ವಿವರಿಸಿದ್ದಾನೆ.

ಇವರಲ್ಲದೆ ಪೋರ್ಚುಗಲ್ಲಿನ ವೇಮಸ್, ಫೆರ್ನಿಯೋ, ನ್ಯೂನಿಜ್, ಬರ್ರಡ್ರಸ್, ಇಡಲಿಯ ಸೀಜರ್ ಫ್ರೆಡರಿಚ್ ಮೊದಲಾದವರು ಇಲ್ಲಿನ ತಮ್ಮ ಅನುಭವಗಳ ಜೊತೆಗೆ ವಿಜಯನಗರದ ವೈಭವವನ್ನು ಕುರಿತು ಹೇಳಿದ್ದಾರೆ. ಒಟ್ಟಾರೆ ಅವರೆಲ್ಲರ ಸಾಂಸ್ಕೃತಿಕ ಹೇಳಿಕೆಗಳಿಂದ ವ್ಯಕ್ತವಾಗುವ ಅಂಶವೆಂದರೆ ವಿಜಯನಗರ ಸಾಮ್ರಾಜ್ಯ ಸಿರಿಸಂಪತ್ತಿನಿಂದ ಕೂಡಿದ್ದು ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಪೂರ್ವ ಸಾಧನೆ ಮಾಡಿದ್ದಿತು. ಒಟ್ಟಿನಲ್ಲಿ ವಿದೇಶೀಯರ ಅಭಿಪ್ರಾಯದಲ್ಲಿ ಯಾವ ಅತಿರೇಕವೂ ಇಲ್ಲ. ನೈಜತೆ ಒಡಮೂಡಿದೆ ಹಾಗೂ ಗತಕಾಲದ ಭಾರತೀಯ ಸಂಸ್ಕೃತಿಯ ವೈಭವದ ಚಿತ್ರ ನಮ್ಮ ಕಣ್ಣ ಮುಂದೆ ಸುಳಿದ ಭಾಸವಾಗುತ್ತದೆ.

ಈ ವಿದೇಶಿ ಪ್ರವಾಸಿಗರಲ್ಲದೆ ಈ ಕೆಳಕಂಡ ಇತರ ವಿದೇಶಿ ವಿದ್ವಾಂಸರ ಇತಿಹಾಸಗಳು ಕೂಡ ವಿಜಯನಗರದ ಬಗ್ಗೆ ತಿಳಿಯಲು ನೆರವಾಗಿವೆ. ಲಿಸ್ಬನ್ನಿನ ಇಂಡೊ - ಪೋರ್ಚುಗೀಸ್ ಕಛೇರಿಯಲ್ಲಿ

ಅಧಿಕಾರಿಯಾಗಿದ್ದ ಬರೋಸ್ ವಿಜಯನಗರವನ್ನು ಕುರಿತು ನಾಲ್ಕು ಸಂಪುಟಗಳಲ್ಲಿ ಡಿಕೆಡಾಸ್ (ದಶಮಾನಗಳು) ಎಂಬ ಕೃತಿಯನ್ನು ರಚಿಸಿದನು (1552-63). ಇದೇ ಕಛೇರಿಯಲ್ಲಿ ನಂತರ ಅಧಿಕಾರಿಯಾಗಿ ಬಂದ ಕೊಟೊ (Couto) ಎಂಟು ಸಂಪುಟಗಳಲ್ಲಿ ಡಿಕೆಡಾ - ಏಷ್ಯಾ ಎಂಬ ಮತ್ತೊಂದು ಕೃತಿ ರಚಿಸಿದನು (1616). ಇವನು ಭಾರತದಲ್ಲಿ ಕೂಡ ಹಲವು ವರ್ಷ ಕೆಲಸ ಮಾಡಿದ್ದನು. ಗೋವಾದಲ್ಲಿ ಅಧಿಕಾರಿಯಾಗಿದ್ದ ಮತ್ತೊಬ್ಬ ಪೋರ್ಚುಗೀಸ್, ಸೆನೂರ್ ಲೋಪೆಸ್ (Senhor Lopes) ಎಂಬುವನು 'ಕ್ರಾನಿಕೋಸ್ ಡೋಸ್ ರಾಯ್ಸ್ ಐ ಬಿಸ್ನಾಗ' (ವಿಜಯನಗರದ ಘಟನಾವಳಿ ಕತೆ) ಬರೆದಿದ್ದಾನೆ. ಈ ಮೇಲಿನ ಆಕರಗಳು ನನ್ನ ಸಂಶೋಧನೆಗೆ ಬೇಕಾದ ಸಮಗ್ರ ಮಾಹಿತಿಯನ್ನು ಒದಗಿಸಿವೆ.

## 1.6. ಉದ್ದೇಶ

ಈ ಎಲ್ಲಾ ಕೃತಿಗಳು ವಿಜಯನಗರದ ಇತಿಹಾಸವನ್ನು ಕುರಿತು ವಿಪುಲ ಮಾಹಿತಿಗಳನ್ನು ನೀಡುತ್ತವೆ. ಆದರೆ ಈ ಸಾಮ್ರಾಜ್ಯದಲ್ಲಿ ಬಹು ವ್ಯಾಪಕವಾಗಿದ್ದು ಮತ್ತು ಹಿಂದಿಗಿಂತಲೂ ಹೆಚ್ಚು ಪ್ರಭಾವಿತವಾಗಿದ್ದ ವೃತ್ತಿನಿರತ ಜಾತಿಗಳ ಪ್ರತ್ಯೇಕ ಅಧ್ಯಯನ ನಡೆದಿಲ್ಲ. ಈ ಅಧ್ಯಯನದಲ್ಲಿ ವಿಜಯನಗರ ಕಾಲದಲ್ಲಿ ವೃತ್ತಿ ಆಧಾರಿತ ಜಾತಿಗಳು ಆಡಳಿತಗಾರರಾಗಿ, ಕೃಷಿಕರಾಗಿ - ಬೇಟೆಗಾರರಾಗಿ, ಪಶು ಸಂಗೋಪನೆಕಾರರಾಗಿ, ಧರ್ಮಪ್ರವರ್ತಕರಾಗಿ ಪುರೋಹಿತರಾಗಿ, ಕುಶಲ ಕರ್ಮಿಗಳಾಗಿ, ವರ್ತಕರಾಗಿ, ಅಡುಗೆಯವರಾಗಿ, ಸಂಗೀತ ನೃತ್ಯಕಲೆ, ತಳವಾರಿಕೆ, ಗೃಹ, ಗುಡಿ ಕೈಗಾರಿಕೆ ಮುಂತಾದ ವೃತ್ತಿಗಳಲ್ಲಿ ನಿರತರಾಗಿ ಸಮಾಜದ ವಿವಿಧ ಅಂಗಗಳಲ್ಲಿ ಮತ್ತು ರಂಗಗಳಲ್ಲಿ ಹೇಗೆ ತಮ್ಮದೆ ಆದ ಛಾಪನ್ನು ಒತ್ತಿ ವಿಜಯನಗರ ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸಿದರು ಎಂಬುದನ್ನು ಕುರಿತು ಕೂಲಂಕುಷವಾಗಿ ಪರಿಶೀಲಿಸಲಾಗಿದೆ.

ಪರಂಪರೆಯಿಂದ ಅನುಷ್ಠಾನದಲ್ಲಿದ್ದ ವರ್ಣ ಅಥವಾ ಜಾತಿ ಪದ್ಧತಿಯ ಆಧಾರದ ಮೇಲೆ ವಿಜಯನಗರ ಸಾಮ್ರಾಜ್ಯ ನಿಂತಿದ್ದಿತು. ಧರ್ಮಶಾಸ್ತ್ರಗಳ ಪ್ರಕಾರ ವರ್ಣಗಳು ನಾಲ್ಕು. ಅವುಗಳ ಪೈಕಿ ಮೊದಲನೆಯ ವರ್ಗ ಬ್ರಾಹ್ಮಣ ವರ್ಗ (ಪುರೋಹಿತ ವರ್ಗ), ಎರಡನೆಯ ವರ್ಗ ಕ್ಷತ್ರಿಯರೆಂದು ಕರೆಯುವ ಯೋಧವರ್ಗ, ವೈಶ್ಯ ಅಥವಾ ವ್ಯಾಪಾರಸ್ಥರದು ಮೂರನೆಯ ವರ್ಗ, ಉಳಿದವರನ್ನು ಶೂದ್ರರೆಂದು ಪರಿಗಣಿಸಿ ನಾಲ್ಕನೆಯ ವರ್ಗದಲ್ಲಿ ಗುರುತಿಸಲಾಗಿತ್ತು. ಈ ವರ್ಗದಲ್ಲಿ ಕುಶಲಕರ್ಮಿಗಳು ಮತ್ತು ವ್ಯವಸಾಯ ವೃತ್ತಿಯಲ್ಲಿ ನಿರತರಾದವರು ಇದ್ದರು.

ಈ ನಾಲ್ಕು ವಿಭಾಗಗಳಿಂದ ಮನ್ನಣೆ ಪಡೆದ ಅನೇಕ ಜಾತಿಗಳಿದ್ದವು. ಇವುಗಳಿಗೆ ತಮ್ಮದೇ ಆದ ನಡೆ, ನುಡಿ, ಆಚಾರ ವಿಚಾರಗಳು ಇದ್ದವು. ಬ್ರಾಹ್ಮಣರಿಗೆ ಸಮಾಜದಲ್ಲಿ ಅತ್ಯುತ್ತಮ ಸ್ಥಾನವಿತ್ತು. ಆಡಳಿತ ವರ್ಗದ ಪ್ರಧಾನ ಶ್ರೇಣಿಗಳಲ್ಲಿ ಬ್ರಾಹ್ಮಣರಿಗೆ ಮೀಸಲಾಗಿದ್ದವು. ಬ್ರಾಹ್ಮಣರು ಪುರೋಹಿತರಾಗಿಯೂ, ಮಂತ್ರಿಗಳಾಗಿಯೂ, ವ್ಯಾಪಾರಿಗಳಾಗಿಯೂ, ಕೃಷಿಕರಾಗಿಯೂ, ಪ್ರಾಂತೀಯ ಗೌರ್ನರ್‌ಗಳಾಗಿಯೂ

ಕೋಟೆಗಳಲ್ಲಿ ಸೇನಾಧಿಕಾರಿಗಳಾಗಿಯೂ ಹಲವು ಉದ್ಯೋಗಗಳನ್ನು ಅವಲಂಬಿಸಿದ್ದರು. ವ್ಯಾಪಾರದಲ್ಲಿ ಚತುರರಾಗಿದ್ದರು. ಲೆಕ್ಕಪತ್ರಗಳನ್ನು ನಿರ್ದಿಷ್ಟವಾಗಿ ತೋರುತ್ತಿದ್ದರು. ಕೆಲವೊಮ್ಮೆ ಸೈನ್ಯಾಧಿಪತಿಗಳಾಗಿಯೂ ಸೈನ್ಯದ ಮುಂಚೂಣಿಯನ್ನು ವಹಿಸುತ್ತಿದ್ದರು. ವಿಜಯನಗರದ ಇತಿಹಾಸದಲ್ಲಿ ಕ್ಷತ್ರಿಯರೆನ್ನುವ ಹೆಸರು ಕಂಡು ಬರದಿರುವುದು ಕುತೂಹಲಕಾರಿಯಾಗಿದೆ. ಬಿ.ಎ. ಸಾಲೆತೊರೆಯವರು ಶ್ರೀಮಂತರು ಮತ್ತು ಉನ್ನತ ಅಧಿಕಾರಿಗಳು ಕ್ಷತ್ರಿಯ ಪಂಗಡದಲ್ಲಿ ಸೇರಿದ್ದರು ಎಂದಿದ್ದಾರೆ.

ಸಮಾಜದಲ್ಲಿ ಮತ್ತೊಂದು ವರ್ಗವಾದ ಕುಶಲ ಕರ್ಮಿಗಳನ್ನು ವೀರ ಪಾಂಚಾಲರೆಂದು ಕರೆಯುತ್ತಿದ್ದರು. ಈ ವರ್ಗವು ಕಮ್ಮಾರ, ಅಕ್ಕಸಾಲಿಗ, ಕಂಚುಗಾರ, ಬಡಗಿ, ಶಿಲ್ಪಿಗಳು ಮುಂತಾದ ಸಮುದಾಯವಾಗಿದೆ. ಇವರು ಸಾಮಾನ್ಯವಾಗಿ ದೇವಸ್ಥಾನಗಳ ಹತ್ತಿರದಲ್ಲಿ ವಾಸಮಾಡುತ್ತಿದ್ದರು. ಇವರು ದೇವಸ್ಥಾನದ ಅಧಿಕಾರವನ್ನು ಹೊಂದಿದ್ದರು ಮತ್ತು ಸ್ಥಳೀಯ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದರು. ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ತಮ್ಮ ಉದ್ಯೋಗವನ್ನಾಗಿಸಿಕೊಂಡು ಸಮಾಜದಲ್ಲಿ ಕೆಲವು ಹಕ್ಕು ಬಾದ್ಯತೆಗಳನ್ನು ಹೊಂದಿದ್ದರು.

ವಿಜಯನಗರ ಕಾಲದಲ್ಲಿ ಹದಿನೆಂಟು ಪಂಗಡಗಳಿದ್ದವು ಅವರು ಪಾಂಚಾಲರು (ಕಮ್ಮಾರರು ಐದು ಪಂಗಡಗಳು) ಕುಂಬಾಲಿಕರು, ಕಂಬಾರರು, ತಂತು ವಾಯಿನ್ (ನೇಕಾರರು) ಇವರಿಗೆ ಕೈಕೋಲರೆಂದು ಹೆಸರು. ವಸ್ತ್ರಭೇಧಿಕರು (ಬಟ್ಟೆಗೆ ಬಣ್ಣ ಹಾಕುವವರು), ತಿಲಘಾತಕರು (ಎಣ್ಣೆ ತಯಾರಿಸುವ ಗಾಣಿಗರು), ಕುದಂತರು (ಪಾದರಕ್ಷೆ ತಯಾರಿಸುವವರು), ವಸ್ತ್ರ ರಕ್ಷಕರು (ದರ್ಜಿಗಳು), ದೇವಾಂಗರು ಪರಿಕೇಲಿನ (ಹೇರುವರುವ ಎತ್ತುಗಳನ್ನಿಟ್ಟವರು), ಗೋರಕ್ಷಕರು (ಗೋವಾಳಿಗರು), ಕಿರಾತಕರು (ಬೇಟೆಗಾರರು), ರಜಕರು (ಅಗಸರು) ಕ್ಷುರಕರು (ಚಾರ ಮಾಡುವವರು) ಇವರಲ್ಲಿ ಪಾಂಚಾಲರು ಮತ್ತು ವೀರಪಾಂಚಾಲರು ಅತ್ಯುತ್ತಮವಾಗಿ ವ್ಯವಸ್ಥಿತರಾಗಿದ್ದರು. ವೃತ್ತಿ ಜಾತಿಗಳನ್ನು ಆಧರಿಸುವ ಈ ಸಂಘಗಳ ಜೊತೆಗೆ ಹಂಜಮಾನ ಮತ್ತು ಏಳೂಮೆ ಎಂಬ ಕಸಬು ಸಂಘಗಳಿದ್ದವು.

ವರ್ತಕಗಿಲ್ಡುಗಳ ಜೊತೆಗೆ ವೈಣಿಕ ಸಂಘಗಳಿದ್ದು ಇವು ಸಾಮ್ರಾಜ್ಯದ ಮುಖ್ಯ ನಗರಗಳಲ್ಲಿದ್ದವು. ಇವು ಅರೆ ರಾಜಕೀಯ ಸಂಸ್ಥೆಗಳಾಗಿದ್ದು ಮೂಲತಃ ವರ್ತಕ ಸಂಘಗಳಾಗಿದ್ದವು. ವ್ಯಾಪಾರ ವಾಣಿಜ್ಯಗಳನ್ನು ಬೆಳೆಸುವುದು ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಕರ್ತವ್ಯಗಳನ್ನು ನಿರ್ವಹಿಸುವುದು ಇವುಗಳ ಉದ್ದೇಶವಾಗಿತ್ತು. ವರ್ತಕ ಸಂಘಗಳನ್ನು ರಚಿಸಿಕೊಂಡು ವಾಣಿಜ್ಯದಲ್ಲಿ ಬಹುಮುಖ್ಯ ಪಾತ್ರವನ್ನು ಇವರು ನಿರ್ವಹಿಸುತ್ತಿದ್ದರು.

ವಿಜಯನಗರ ಕಾಲದಲ್ಲೂ ಅನಂತರವೂ ಅನೇಕ ಪಾಳೆಪಟ್ಟುಗಳು ತಲೆ ಎತ್ತಿದ್ದವು. ಪರಿಣಾಮವಾಗಿ ಒಂದೊಂದು ಪ್ರದೇಶದಲ್ಲೂ ಬೇರೆ ಬೇರೆ ವೃತ್ತಿಯ ಜಾತಿಗಳು ಕಂಡುಬರುತ್ತವೆ. ವಿಜಯನಗರ ಕಾಲದಲ್ಲಿ ಗಮನಿಸಬೇಕಾದ ವಿಚಾರವೆಂದರೆ ಹಿಂದಿಗಿಂತಲೂ ಹೆಚ್ಚು ಅವಕಾಶಗಳು ಜನಸಾಮಾನ್ಯರಿಗೆ ಸಿಕ್ಕವು. ವಿಪುಲವಾದ ಭೂಮಿ ಲಭ್ಯವಿತ್ತು. ಕೃಷಿ, ನೀರಾವರಿ, ಪಶುಪಾಲನೆ, ಮಾರುಕಟ್ಟೆ, ವ್ಯಾಪಾರ ವೃದ್ಧಿಸಿದವು. ಮಿಗಿತ ಉತ್ಪನ್ನ

ಕಾರಣವಾಗಿ ಅನೇಕ ಉಪಕಸುಬಗಳು ತಲೆ ಎತ್ತಿದ್ದವು. ಕಂಬಾರರಿಂದ ಕುಂಬಾರರವರೆಗೆ, ಬೆಸ್ತರಿಂದ ಬುಟ್ಟಿ ಹೆಣೆಯುವವರೆಗೆ ಹೀಗೆ ವಿಪುಲ ಅವಕಾಶಗಳ ಹಿನ್ನೆಲೆಯಲ್ಲಿ ಈ ಕಾಲದಲ್ಲಿ ಅನೇಕ ವೃತ್ತಿನಿರತ ಜಾತಿಗಳು ಹುಟ್ಟಿಕೊಂಡವು.

ಆದರೆ ವಿಜಯನಗರ ಕಾಲದ ವೈಶಿಷ್ಟ್ಯವೆನ್ನಬಹುದಾದ ವೃತ್ತಿನಿರತ ಜಾತಿಗಳ ಅಧ್ಯಯನ ಪ್ರತ್ಯೇಕವಾಗಿ ಮತ್ತು ವಿಸ್ತೃತವಾಗಿ ನಡೆದಿಲ್ಲ. ಈ ಕಾರಣದಿಂದ ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳನ್ನು ಮತ್ತು ವಿಜಯನಗರ ಸಾಮ್ರಾಜ್ಯದಲ್ಲಿ ಆದಂತಹ ಸಾಂಸ್ಕೃತಿಕ ಸಂಚಲನವನ್ನು ಕಟ್ಟಿಕೊಡುವ ಪ್ರಯತ್ನ ಇದಾಗಿದೆ.

## 1.7. ಇದುವರೆಗಿನ ಅಧ್ಯಯನ

ಹಂಪೆ ಮತ್ತು ವಿಜಯನಗರ ಸಾಮ್ರಾಜ್ಯ ಕುರಿತಂತೆ ಇತ್ತೀಚೆಗೆ ಅಧ್ಯಯನ, ಸಂಶೋಧನೆಗಳು ನಡೆದ ಬಗ್ಗೆ ಸೂಕ್ಷ್ಮವಾಗಿ ಇಲ್ಲಿ ನೋಡಬಹುದು. ಆನೆಗೊಂದಿ ಮತ್ತು ಹಂಪೆ ವಿಜಯನಗರದ ರಾಜಧಾನಿಗಳಾಗಿದ್ದ ಸ್ಥಳಗಳು. ರಾಜಕೀಯ, ಧಾರ್ಮಿಕ, ಮೋಕ್ಷ ಹಾಗೂ ತ್ಯಾಗಮಯ ಕ್ಷೇತ್ರವಾದ ಹಂಪೆ ನಾನಾ ಬಗೆಯಲ್ಲಿ ಖ್ಯಾತಿ ಪಡೆದಿರುವುದು ಗಮನಾರ್ಹ. ಹಂಪೆ ಮತ್ತು ವಿಜಯನಗರ ಸಾಮ್ರಾಜ್ಯಕ್ಕೆ ಅವಿನಾಭಾವ ಸಂಬಂಧವಿದೆ. ಹೀಗಾಗಿ ಇವೆರಡು ಕ್ಷೇತ್ರಗಳನ್ನು ಕುರಿತಂತೆ ವಿಪುಲ ಅಧ್ಯಯನಗಳು ನಡೆದಿವೆ. ವಿಜಯನಗರ ಕಾಲದಲ್ಲಿ ಹಂಪೆಯನ್ನು ಕನ್ನಡ - ತೆಲುಗು ಇತರ ಭಾಷೆಗಳ ಕವಿಗಳು ಪರಿಚಯಿಸಿದ್ದು ಒಂದೆಡೆಯಾದರೆ, ವಿದೇಶಿ ಯಾತ್ರಿಕರು, ಸಮಕಾಲೀನ ಬರಹಗಾರರು ಮತ್ತೊಂದೆಡೆ ಪರಿಚಯಿಸಿದ್ದಾರೆ. ಶಾಸನ, ಶಿಲ್ಪ, ಸ್ಮಾರಕ, ನಾಣ್ಯ, ಕಾವ್ಯ, ಇತರ ಆಕರಗಳಲ್ಲಿ ಅಂದಿನ ಜನ-ಜೀವನದ ಚಿತ್ರಣವನ್ನು ಚಿತ್ರಿಸಿದ್ದಾರೆ. ವಿಜಯನಗರೋತ್ತರ ಹಾಗೂ ಬ್ರಿಟಿಷರ ಕಾಲದಲ್ಲಿ ಹಂಪೆ ಹಾಗೂ ವಿಜಯನಗರ ಸಾಮ್ರಾಜ್ಯವನ್ನು ಕುರಿತು ಅನೇಕ ವಿದ್ವಾಂಸರು ಪರಿಚಯಿಸಿದ್ದಾರೆ. ಈ ಬಗ್ಗೆ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಅನೇಕ ಬಗೆಯ ಸಂಶೋಧನೆಗಳಾಗಿವೆ. ಪ್ರಮುಖವಾಗಿ ಇ.ಸಿ. ರಾವೆನ್‌ಷಾ, ಸರ್. ಥಾಮಸ್ ಮನ್ರೋ, ಎಫ್. ಡಬ್ಲೂ, ರಾಬರ್ಟ್‌ಸನ್, ರಾಬರ್ಟ್‌ಸಿವೆಲ್, ಲಾಂಗ್‌ಹರ್ಟ್ಸ್, ಬರ್ಟನ ಸ್ಟೈನ್, ಜಾರ್ಜ್ ಮಿಶೆಲ್, ಜಾನ್‌ಫ್ರಿಡ್ಜ್, ವಸುಂಧರಾ ಫಿಲಿಯೋಜಾ, ಅನಿಲಾವರ್ಗೀಸ್ ಮೊದಲಾದವರ ಅಧ್ಯಯನಗಳು ಇಲ್ಲಿ ಪರಿಗಣನಾರ್ಹ. ಅದೇ ರೀತಿ ದಕ್ಷಿಣ ಭಾರತದ ಇತಿಹಾಸಕಾರರು ಹೊಸ ಸಂಶೋಧನೆಗಳನ್ನು ಕೈಗೊಂಡಿರುವರು. ಕರ್ನಾಟಕದಲ್ಲಿ ಡಾ.ಪಿ.ಬಿ. ದೇಸಾಯಿ, ಆರ್.ಎಸ್. ಪಂಚಮುಖಿ, ಡಾ. ಶ್ರೀನಿವಾಸ ರಿತ್ತಿ, ಬಿ. ಸೂರ್ಯನಾರಾಯಣರಾವ್, ಎನ್. ವೆಂಕಟರಮಣಯ್ಯ, ಎಸ್. ಶ್ರೀಕಂಠಯ್ಯ, ಟಿ.ವಿ. ಮಹಾಲಿಂಗಂ, ಓ. ರಾಮಚಂದ್ರಯ್ಯ, ಡಾ.ಜಿ.ಎಸ್. ದೀಕ್ಷಿತ್, ಡಾ.ಕೆ. ಶ್ರೀಕಂಠಶಾಸ್ತ್ರಿ, ಡಾ.ಎ.ಎಸ್. ಆಳ್ತೇಕರ್, ಕೆ.ಎ. ನೀಲಕಂಠಶಾಸ್ತ್ರಿ, ಡಾ. ಅ. ಸುಂದರ, ಡಾ.ಎಸ್. ರಾಜಶೇಖರ, ಡಾ.ಕೆ.ಆರ್. ಬಸವರಾಜ ಮೊದಲಾದವರು ಸಮಗ್ರ ಅಧ್ಯಯನ ಮಾಡಿರುವುದು ಸ್ಪಷ್ಟ. ಇನ್ನು ಕೆಲವು ಇತಿಹಾಸಕಾರರು ಬಿಡಿ ಬಿಡಿ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ.

ವಿಜಯನಗರ ಚರಿತ್ರೆಯ ಬಗ್ಗೆ ೧೮೦೭ರ ಹೊತ್ತಿಗೆ ಫ್ರಾನ್ಸಿಸ್‌ಬುಕಾನನ್ ತಮ್ಮ ಅನುಮಾನಗಳನ್ನು ಬಹಿರಂಗಗೊಳಿಸಿದರು. ಕರ್ನಲ್ ಮಿಲ್ಕ್ಸ್, ಎಚ್.ಎಸ್. ವಿಲ್ಸನ್, ವಿ.ಎಸ್.ಸ್ಮಿತ್, ವಿ. ರಂಗಾಚಾರಿ, ಫಾದರ್ ಹೆರಾಸ್, ಎನ್. ವೆಂಕಟರಮಣಯ್ಯ, ಎಸ್. ಶ್ರೀಕಂಠಯ್ಯ ಇತರರು ಸಂಶೋಧನೆ ನಡೆಸಿದ್ದಾರೆ. ವಿಜಯನಗರ ಮೂಲದ ಸ್ಥಾಪಕರು (ತೆಲುಗು-ಕನ್ನಡಿಗರು), ಜಾತಿ, ಮತ, ಧರ್ಮ ಕುರಿತು ಅಧ್ಯಯನ ನಡೆಸಿದ್ದಾರೆ. ೧೯೦೦ರಲ್ಲಿ ರಾಬರ್ಟ್ ಸಿವೆಲ್, ೧೯೦೫ರಲ್ಲಿ ಬಿ. ಸೂರ್ಯನಾರಾಯಣರಾವ್, ೧೯೧೬ರಲ್ಲಿ ರಾಮಸ್ವಾಮಿ ಅಯ್ಯಂಗಾರ್, ಕೆ. ಈಶ್ವರದತ್ತ, ಆಲೂರು ವೆಂಕಟರಾಯ, ೧೯೩೧ರಲ್ಲಿ ಪಿ. ಕುಲಕರ್ಣಿ ಮೊದಲಾದವರ ಸಂಶೋಧನೆಗಳು ಮೂಲಭೂತ ಸಮಸ್ಯೆಗಳನ್ನು ಕುರಿತಂತವು. ಟಿ.ವಿ. ಮಹಾಲಿಂಗಂ (ಆರ್ಥಿಕ ಇತಿಹಾಸ) ಮೊದಲಾದ ಲೇಖಕರು ಗಮನಾರ್ಹ ಸಾಧನೆ ಮಾಡಿದ್ದಾರೆ. ೧೯೬೧ರಲ್ಲಿ ಹಂಪೆ-ಆನೆಗೊಂದಿ ಪರಿಸರದ ಸ್ಮಾರಕ, ಚರಿತ್ರೆ, ಸಂಸ್ಕೃತಿಯನ್ನು ಡಾ.ಅ.ಸುಂದರ ಅವರು ಬೆಳಕಿಗೆ ತಂದರು. ಕೆ. ವೆಂಕಟರಾಮಪ್ಪ, ಡಾ.ಎ.ವಿ. ವೆಂಕಟರತ್ನಂ, ನಿರುಪಮಾ, ಡಾ.ಜಿ.ಎಸ್. ದೀಕ್ಷಿತ್, ಸಿ.ಟಿ.ಎಂ. ಕೊಟ್ರಯ್ಯ, ಕೆ.ಎಸ್.ಶಿವಣ್ಣ ಮೊದಲಾದ ಇತಿಹಾಸಕಾರರು ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಕಲಾ, ಸಾಹಿತ್ಯ, ಮೌಖಿಕ ಇತಿಹಾಸ ಕುರಿತಂತೆ ಈ ಕ್ಷೇತ್ರದಲ್ಲಿ ಅಧ್ಯಯನ ಮಾಡಿದ್ದಾರೆ.

ವಿಜಯನಗರ ಕಾಲದ ಶಾಸನಗಳು ಸಹಸ್ರಾರು ಸಂಖ್ಯೆಯಲ್ಲಿ ಬೆಳಕಿಗೆ ಬಂದಿವೆ. ಹಂಪಿಯ ಬಳಿ ಸಿಂಗನಾಯಕನಹಳ್ಳಿ ಶಾಸನದಲ್ಲಿ ಕೃಷ್ಣದೇವರಾಯ ಪಟ್ಟಾಭಿಷೇಕವಾದ ವರ್ಷ ಕ್ರಿ.ಶ. ೧೫೦೯ರ ಬದಲಾಗಿ ಕ್ರಿ.ಶ. ೧೫೧೦ ಎಂದು ದಿ.ಡಾ. ಚನ್ನಬಸಪ್ಪ ಎಸ್. ಪಾಟೀಲ್ ತಿಳಿಸಿದ್ದಾರೆ. ಡಾ. ಶ್ರೀನಿವಾಸ ಪಾಡಿಗಾರ ಅವರು ಲಕ್ಷ್ಮೇಶ್ವರದ ಎರಡು ಜಯಪತ್ರ ಕುರಿತು ಲೇಖನ ಪ್ರಕಟಿಸಿದ್ದಾರೆ. ಹಂಪೆಯ ಪರಿಸರದಲ್ಲಿ ನವಶೋಧಿತ ಶಾಸನಗಳಲ್ಲಿ ಸು. ೩೮ ಶಾಸನಗಳನ್ನು ಡಾ.ಟಿ.ಎಂ. ಮಂಜುನಾಥಯ್ಯನವರು ಬೆಳಕಿಗೆ ತಂದಿರುವರು. ವಿಜಯನಗರ ಕಾಲದಲ್ಲಿ ಬೇಡರು ವಹಿಸಿದ ಪಾತ್ರ ದೊಡ್ಡದು. ಬೇಟೆ, ಪಶುಪಾಲನೆ, ಕೃಷಿಯಲ್ಲಿ ತೊಡಗಿರುವಂತೆ ಇವರು ತಳವಾರರು, ಸೈನಿಕರು, ಪಾಳೆಯಗಾರರು ಆಗಿದ್ದರು. ಖಾಸ ಬೇಡರ ಪಡೆ, ಮೀಸಲು ಪಡೆ, ಬೇಡಪಡೆಗಳು ವಿಜಯನಗರ ಸಾಮ್ರಾಜ್ಯದ ಅಸ್ತಿತ್ವಕ್ಕೆ ಹೆಗಲು ಕೊಟ್ಟದ್ದು ನಿಜ. ಹಂಪಿ ಪರಿಸರದಲ್ಲಿರುವ ಬೇಟೆಕಾರರ ಹೆಬ್ಬಾಗಿಲು, ತಳವಾರಘಟ್ಟವು ಇದನ್ನು ಸಾಕ್ಷೀಕರಿಸುತ್ತವೆ. ಮ್ಯಾಸಬಾಡ್ಕಿ ನಾಯಕತನ ಎಂಬ ಪದವಿಯನ್ನು ವಿಜಯನಗರದವರು ಬೇಡರಿಗೆ ಕೊಟ್ಟ ಸಂಗತಿ ತಿಳಿಯುವುದು. ವಿಜಯನಗರ ಕಾಲದಲ್ಲಿ ಮೀನುಗಾರರು, ಅಂಬಿಗರು ಇದ್ದ ಬಗ್ಗೆ ಸಂಶೋಧನ ಲೇಖನಗಳನ್ನು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಪ್ರಕಟಿಸಿದ್ದಾರೆ. ಒಟ್ಟಾರೆ ವಿಜಯನಗರ ಸಾಮ್ರಾಜ್ಯದಲ್ಲಿ ಬೇಡರು ನಿರ್ಣಾಯಕ ಪಾತ್ರವಹಿಸಿದ್ದರು. ತಾಳಿಕೋಟೆ ಕಾಳಗದಲ್ಲಿ ಸು. ೪೦ ಸಾವಿರ ಬೇಡ ಪಡೆ ಹತವಾಯಿತೆಂದು ಅವರ ಮಡದಿಯರು ಅನಾಥರಾದರೆಂದು ತಿಳಿಯುತ್ತದೆ. ವಿಜಯನಗರ ಅಧ್ಯಯನ, ಇತಿಹಾಸ ದರ್ಶನ ಹಾಗೂ ಹಂಪಿ ಪರಂಪರೆ ಕೃತಿಗಳಲ್ಲಿ ಮೇಲಿನ ಸಂಗತಿಗಳಿವೆ.

ಕೆಳದಿ ಗುಂಡಾ ಜೋಯಿಸರು ವಿಜಯನಗರ ಚರಿತ್ರೆ ಮತ್ತು ಸಂಸ್ಕೃತಿಗೆ ತಮ್ಮದೇ ಆದ ಕಾಣಿಕೆ ಸಲ್ಲಿಸಿದ್ದಾರೆ. ಕೆಳದಿ ಅರಸರು ಮತ್ತು ವಿಜಯನಗರ, ರಾಯರೇಖೆ, ಹಸ್ತಪ್ರತಿ, ಕಂಚಿನ ಪತ್ರಗಳ ಬಗ್ಗೆ ಇವರು ತಿಳಿಸಿದ್ದಾರೆ. ಇತ್ತೀಚಿನ ಸಂಶೋಧನೆಗಳಲ್ಲಿ ಗಮನಾರ್ಹವಾದುದು ವಿಜಯನಗರ ಸ್ಥಾಪಕ ಗುರುಗಳು ಯಾರು? ಎಂಬುದು. ಈ ಬಗ್ಗೆ ೧೮೬೮ರಲ್ಲಿ ರಾಯಲ್ ಏಷಿಯಾಟಿಕ್ ಸೊಸೈಟಿ ಪತ್ರಿಕೆಯಲ್ಲಿ ಮಾಧವ ಮತ್ತು ಸಾಯಣರ ಬಗ್ಗೆ ಭಾವುದಾಜಿಯವರು ಬರೆದಿದ್ದರು. ಶಾಂತರಸ ಕವಿಗಳು ಕ್ರಿಯಾಶಕ್ತಿ ಬಗ್ಗೆ ಬರೆದಿದ್ದಾರೆ. ಅನಂತರ ಇಂಥ ದೊಡ್ಡ ಸಂಗತಿಯನ್ನು ಹಂಪಿ ಕನ್ನಡ ವಿ.ವಿ.ಯ ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ. ದೇವರಕೊಂಡಾರೆಡ್ಡಿಯವರು ಮಾಧವ ವಿದ್ಯಾರಣ್ಯ, ಕ್ರಿಯಾಶಕ್ತಿ ಮತ್ತು ವಿಜಯನಗರ ಸಾಮ್ರಾಜ್ಯದ ಸಂಬಂಧ ಕುರಿತ ಲೇಖನದಲ್ಲಿ ಹೊಸ ಬೆಳಕು ಚೆಲ್ಲಿದ್ದಾರೆ. ಈ ಸಂಶೋಧನೆಯ ಫಲವಾಗಿ ಅವರು ವಿಜಯನಗರ ಸ್ಥಾಪನೆಯಲ್ಲಿ ಮಾಧವ, ಸಾಯಣ, ವಿದ್ಯಾರಣ್ಯ, ಕ್ರಿಯಾಶಕ್ತಿಯ ಪಾತ್ರವೇನು ಇಲ್ಲ ಎಂದಿದ್ದಾರೆ.

ಹಂಪಿ ಸ್ಮಾರಕಗಳು ವಿವಿಧ ಸಂದರ್ಭದಲ್ಲಿ ವ್ಯಕ್ತಿಗಳಿಗೆ ಪ್ರೇರಣೆ ನೀಡಿದ ಸಂಗತಿಯನ್ನು ಕುರಿತು ಪ್ರೊ. ಲಕ್ಷ್ಮಣ್ ತೆಲಗಾವಿಯವರು ಅನೇಕ ಮಹಾನುಭಾವರನ್ನು ಉದಾಹರಿಸಿದ್ದಾರೆ. ಇವರು ವಿಜಯನಗರ ಕಾಲದ ನಾಣ್ಯ, ಶಾಸನ, ಶಿಲ್ಪ ಹಾಗೂ ಸಾಹಿತ್ಯ ಕೃತಿಗಳ ಬಗ್ಗೆ ಅಪಾರ ಕಾಳಜಿಯಿಂದ ಶೋಧನೆ ಕಾರ್ಯದಲ್ಲಿ ತೊಡಗಿರುವವರು.

ವಿಜಯನಗರ ಸಾಮ್ರಾಜ್ಯ ಬಹು ವಿಸ್ತಾರವಾದುದು. ರಾಜಧಾನಿ ಹಂಪಿಯಂತೆ ಇತರ ಸ್ಥಳಗಳು ಸಹಾ ಚಾರಿತ್ರಿಕ, ಧಾರ್ಮಿಕ ಕ್ಷೇತ್ರಗಳಾಗಿದ್ದು ಇವುಗಳ ಅಧ್ಯಯನವು ಸಹಾ ನಡೆದಿದೆ. ಆನೆಗೊಂದಿ, ಶ್ರೀಶೈಲ, ಚಂದ್ರಗಿರಿ, ತಿರುಪತಿ, ಕಾಳಹಸ್ತಿ, ಪೆನುಗೊಂಡ, ರಾಮೇಶ್ವರ, ತಂಜಾವೂರು, ಅಹೊಬಲಂ, ಲೇಪಾಕ್ಷಿ, ಶ್ರೀರಂಗಪಟ್ಟಣ ಮೊದಲಾದ ಯಾತ್ರಾ ಮತ್ತು ಐತಿಹಾಸಿಕ ಕ್ಷೇತ್ರಗಳಲ್ಲಿ ವಿಜಯನಗರದವರ ಸ್ಮಾರಕಗಳಿವೆ. ಮತ್ತು ಅವುಗಳ ಬಗ್ಗೆ ಅಧ್ಯಯನ ಆಗಿರುವುದು ಸಂತಸದ ಸಂಗತಿ. ಇತ್ತೀಚೆಗೆ ಡಾ.ಬಿ.ಎ. ವಿವೇಕ ರೈ ಸಂಪಾದಿಸಿರುವ ಪ್ರವಾಸಿ ಕಂಡ ವಿಜಯನಗರ ಕೃತಿಯಲ್ಲಿ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕ್ ಕಂಡ ವಿಜಯನಗರದ ವರ್ಣನೆ ಇದೆ. ಎರಡನೇ ದೇವರಾಯನ ಕಾಲವು ಸಮೃದ್ಧವಾಗಿತ್ತು. ಬೀದಿಗಳು, ವೇಶ್ಯೆಯರು, ಮಹಾನವಮಿ ಹಬ್ಬ, ರಾಜ-ಜನರ ನಡುವೆ ಸೌಹಾರ್ದ ಸಂಬಂಧವಿತ್ತೆಂದು ತಿಳಿಯುವುದು. ಈ ಸಾಮ್ರಾಜ್ಯದ ಏಳಿಗೆ ಸುವರ್ಣಯುಗ ಆಗಿತ್ತಲ್ಲದೆ, ಕೃಷ್ಣದೇವರಾಯನ ವಿದೇಶಿ ನೀತಿ ವಿಘಟನೆಗೆ ಕಾರಣವಾಯಿತೆಂಬ ಹೊಸ ಅಂಶವನ್ನು ಡಾ.ಬಿ.ಸಿ. ಮಹಾಬಲೇಶ್ವರಪ್ಪ ತಿಳಿಸಿದ್ದಾರೆ. ಮುಂದುವರೆದು ಅವರು, ವಿಜಯನಗರವು ೧೩೩೬ರಿಂದ ೧೫೬೫ರವರೆಗೆ ನಾಲ್ಕು ಅರಸು ಮನೆತನಗಳು ವೈರತ್ವವನ್ನು, ಪದಚ್ಯುತಗೊಳಿಸಲು ನಿರತವಾಗಿದ್ದವು. ಕೃಷ್ಣದೇವರಾಯನ ಯುದ್ಧ ನೀತಿ, ಗಡಿ ವಿಸ್ತರಣೆ, ಒರಿಸ್ಸಾ ಯುದ್ಧ ಮೊದಲಾದ ಸಂಗತಿಗಳು ಇಲ್ಲಿ ಚರ್ಚಿತಗೊಂಡಿವೆ. ಈ ಕಾಲವು ಸಂಗೀತ, ನೃತ್ಯಕ್ಕೆ ಹೆಚ್ಚಿನ ಒತ್ತು ನೀಡಿದ್ದು ಸ್ಪಷ್ಟ. ಡಾ.ಕೆ.ಜಿ. ವಸಂತ ಮಾದವ ವಿಜಯನಗರೋತ್ತರ ಕಾಲದ ವ್ಯಾಪಾರದ ಕುರಿತು, ಶ್ರೀಮತಿ ವಿನೋದ ಪಾಟೀಲರು ವಿಜಯನಗರ

ಕಾಲದ ತಿಂಡಿ, ತಿನಿಸು, ಅಡಿಗೆಗಳ ಬಗ್ಗೆ ಲೇಖನ ಪ್ರಕಟಿಸಿರುವರು. ಈ ಎಲ್ಲ ಅಧ್ಯಯನಗಳು ವಿಜಯನಗರ ಸಾಮ್ರಾಜ್ಯದ ಸಮಗ್ರ ಚರಿತ್ರೆಯನ್ನು ಪುನಾರಚನೆ ಮಾಡುವಲ್ಲಿ ಸಹಾಯಕ ಆಕರಗಳಾಗಿವೆ.

ವಿಜಯನಗರ ಸಾಮ್ರಾಜ್ಯದಲ್ಲಿನ ವಿವಿಧ ಜಾತಿಯ ಧರ್ಮ ಮತ್ತು ಕೃಷ್ಣದೇವರಾಯನ ಕಾಲದ ಕ್ರೈಸ್ತ ಮಿಷನರಿಗಳು ಹಾಗೂ ಹಿಂದೂ ಮುಸ್ಲಿಂ ಮತ್ತು ಕ್ರೈಸ್ತಧರ್ಮಗಳ ಪ್ರಭಾವವನ್ನು ಗುರುಮೂರ್ತಿ ಪೆಂಕಕೂರ ಅವರು ಗುರುತಿಸಿದ್ದಾರೆ. ವಿಜಯನಗರ ಕಾಲದ ನಾಣ್ಯಗಳ ಬಗ್ಗೆ, ವಿಜಯನಗರದ ನಿರ್ಣಾಯಕ ಯುದ್ಧದಲ್ಲಿ ರಾಮರಾಯನ ಸಾವು ಮತ್ತು ಯುದ್ಧ ನಡೆದ ಸ್ಥಳದ ಬಗ್ಗೆ ಕೃಷ್ಣಕೊಲ್ಲಾರ ಕುಲಕರ್ಣಿಯವರು ವಿವರಿಸಿದ್ದಾರೆ. ವಿಜಯನಗರ ಅವಧಿಯ ಶಾಸನ ಹಸ್ತಪ್ರತಿ ಹಾಗೂ ಸಾಹಿತ್ಯದ ಬಗೆಗೂ ಸಾಕಷ್ಟು ಕೆಲಸವಾಗಿದೆ. ಡಾ. ವಿರೂಪಾಕ್ಷ ಪೂಜಾರ ಹಳ್ಳಿಯವರು ಚರಿತ್ರೆ ವಿಭಾಗದ ಸಾಂಸ್ಥಿಕ ಯೋಜನೆಯಾಗಿ ಕೈಗೊಂಡ ವಿಜಯನಗರ ಕಾಲದ ಸಂಸ್ಕೃತಿಯಲ್ಲಿ ಬೇಟೆ, ಪಶುಪಾಲನೆ ಮತ್ತು ಕೃಷಿಯನ್ನು ಕುರಿತು ವಿಶ್ಲೇಷಿಸಿದ್ದಾರೆ. ಹಂಪೆ-ವಿಜಯನಗರ ಕುರಿತ ಇತ್ತೀಚಿನ ಸಂಶೋಧನೆಗಳು ಸಾಂಸ್ಕೃತಿಕ ಚರಿತ್ರೆಯನ್ನು ಒಳಗೊಂಡಿವೆ. ಒಟ್ಟಿನಲ್ಲಿ ಬಹುತೇಕ ಅಧ್ಯಯನಗಳು ಇಂಥ ಅಲಕ್ಷಿತ ವಿಷಯಗಳ ಕುರಿತು ಸಂಶೋಧನೆಯನ್ನು ಒಳಗೊಂಡಿವೆ. ಚರಿತ್ರೆಕಾರರು ಚರಿತ್ರೆ ನಿರ್ಮಾಣದಲ್ಲಿ ಸಿದ್ಧಾಂತ ವಾದ ಹಾಗೂ ವೈಧಾನಿಕತೆಗೆ ಒತ್ತು ನೀಡಿದ್ದಾರೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಬೇರೆ ಯಾವುದೇ ರಾಜಮನೆತನಕ್ಕಿಂತಲೂ ವಿಜಯನಗರದ ಬಗ್ಗೆ ವ್ಯಾಪಕ ಅಧ್ಯಯನಗಳಾಗಿವೆ. ಈ ಅಧ್ಯಯನಗಳು ಒಟ್ಟಾರೆಯಾಗಿ ಸರ್ವಕ್ಷೇತ್ರಗಳಿಗೂ ಸಂಬಂಧಿಸಿದ್ದು - ಇತಿಹಾಸದ ಎಲ್ಲ ಮಜಲುಗಳನ್ನು ಪರಿಚಯ ಮಾಡಿಕೊಳ್ಳಲು ಸಹಕರಿಸುತ್ತಿವೆ. ಅಂತಹವುಗಳಲ್ಲಿ ಪ್ರಸ್ತುತ ಸಂಶೋಧನಾ ವಿಷಯವೂ ಒಂದು.

## 1.8. ಸಂಶೋಧನಾ ಮಾರ್ಗ

ಪ್ರಸ್ತುತ ಸಂಶೋಧನೆಯಲ್ಲಿ ಸಂಶೋಧನಾ ಮಾರ್ಗದ ತತ್ವಗಳನ್ನು ಅಳವಡಿಸಿಕೊಳ್ಳಲಾಗುವುದು. ಇತಿಹಾಸ ಸಂಶೋಧನೆಯಲ್ಲಿ ಮಾರ್ಗದರ್ಶನ ಮಾಡುವುದಕ್ಕಾಗಿ ಇತಿಹಾಸ ಸಂಶೋಧನಾ ಮಾರ್ಗವೆಂಬ ಪ್ರತ್ಯೇಕ ಶಾಸ್ತ್ರವೇ ಬೆಳೆದು ಬಂದಿದೆ. ಅದರಲ್ಲಿ ಸೂಚಿಸಿರುವ ಸೂತ್ರಗಳಾದ ವಿಷಯ ಸಂಗ್ರಹಣೆ ಬಾಹ್ಯ ಮತ್ತು ಆಂತರಿಕ ವಿಮರ್ಶೆಯ ಸೂತ್ರಗಳು, ವಿಶ್ಲೇಷಣಾ ಕ್ರಮಗಳು, ಜೋಡಣೆಯ ವಿಧಾನ, ನಿರೂಪಣಾ ತತ್ತ್ವಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗುವುದು.

## 1.9. ವ್ಯಾಪ್ತಿ

ಪ್ರಸ್ತುತ ಮಹಾ ಪ್ರಬಂಧವನ್ನು ಅಧ್ಯಯನ ದೃಷ್ಟಿಯಿಂದ ಒಟ್ಟು ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಪೀಠಿಕ ರೂಪದಲ್ಲಿದ್ದು ಹಿನ್ನೆಲೆ, ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿಗಳನ್ನು ಒಳಗೊಂಡಿದೆ.

ಈ ಭಾಗದಲ್ಲಿ ವೃತ್ತಿ ಆಧಾರಿತ ಜಾತಿಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ಸಂಶೋಧನಾ ವಿಧಾನವನ್ನು ಕುರಿತು ತಿಳಿಸಲಾಗಿದೆ. ಇದುವರೆಗಿನ ಅಧ್ಯಯನದ ವಿವರಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ವಿಜಯನಗರ ಸ್ಥಾಪನೆಯ ಕಾಲದಿಂದ ಪತನದವರೆಗಿನ ವಿಚಾರಗಳನ್ನು ಕುರಿತಂತೆ ದೇಶೀಯ ಸಂಶೋಧಕರು ವಿದೇಶೀ ಬರಹಗಾರರು ಹೆಚ್ಚು ಸಂಶೋಧನಾ ಗ್ರಂಥಗಳನ್ನು, ಲೇಖನಗಳನ್ನು ಪ್ರಕಟಿಸಿದ್ದಾರೆ. ಅದರ ಆಯ್ದ ವಿವರಗಳನ್ನು ಮೊದಲ ಅಧ್ಯಾಯದಲ್ಲಿ ಕೊಡಲಾಗಿದೆ. ವಿಜಯನಗರ ಕಾಲದ ರಾಜಕೀಯ ಇತಿಹಾಸವನ್ನು ಕುರಿತು ಪ್ರಸ್ತುತ ಮಹಾ ಪ್ರಬಂಧಕ್ಕೆ ಹಿನ್ನೆಲೆಯಾಗಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಕ್ರಿ.ಶ. 1336ರಲ್ಲಿ ಸ್ಥಾಪಿತವಾದ ವಿಜಯನಗರದ ರಾಜಕೀಯ ಇತಿಹಾಸವನ್ನು ಅನುಕ್ರಮವಾಗಿ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳ ಪ್ರಮುಖ ರಾಜರುಗಳ ಇತಿಹಾಸವನ್ನು ಕುರಿತಂತೆ ಈ ಭಾಗದಲ್ಲಿ ಕಟ್ಟಿಕೊಡಲಾಗಿದೆ.

ಎರಡನೇ ಅಧ್ಯಾಯ : ವಿಜಯನಗರ ಕಾಲದ ಸಾಮಾಜಿಕ ಸ್ಥಿತಿಗತಿಗಳು ಹಾಗೂ ವಿಜಯನಗರ ಸಾಮ್ರಾಜ್ಯ ಹಿಂದಿನ ದಕ್ಷಿಣ ಭಾರತೀಯ ಸಮಾಜದ ಲಕ್ಷಣಗಳು, ವರ್ಣ ವ್ಯವಸ್ಥೆ, ವರ್ಗ ವ್ಯವಸ್ಥೆ, ಜಾತಿ ವ್ಯವಸ್ಥೆ ಕುರಿತು ಚರ್ಚಿಸಲಾಗಿದೆ. ವಿಜಯನಗರ ಕಾಲದಲ್ಲಿ ಆಯಗಾರರು ತಮ್ಮ ತಮ್ಮ ಪಾಲಿನ ವೃತ್ತಿಯನ್ನು ಮಾಡಿ ಆಯಾವನ್ನು ಪಡೆದು ಜೀವನ ಸಾಗಿಸುತ್ತಿದ್ದರು. ಇದರಿಂದ ವಿಜಯನಗರದ ಅರಸರಿಗೆ ಅಗತ್ಯ ಸೇವೆಗಳು ದೊರೆಯುತ್ತಿದ್ದವು. ಪ್ರಸ್ತುತ ಕಾಲದಲ್ಲಿ ವಿವಿಧ ಸಮುದಾಯಗಳು ವಿಜಯನಗರದ ಸಾಮಾಜಿಕ ವ್ಯವಸ್ಥೆಯಲ್ಲಿ ವಹಿಸಿದ ಪಾತ್ರ, ಜಾತಿಯ ಉಗಮ, ವಿಕಾಸ, ಜಾತಿ ಮತ್ತು ವೃತ್ತಿಗಳ ಸಂಬಂಧದಿಂದ ವಿವಿಧ ವೃತ್ತಿಗಳ ಉಗಮ, ವಿಕಾಸ ಸಾಮಾಜಿಕ ವ್ಯವಸ್ಥೆಯಲ್ಲಿ ಆದಂತಹ ಬದಲಾವಣೆಗಳು, ಜಾತಿ ಮತ್ತು ಉಪಜಾತಿಗಳ ನಡುವಿನ ಸಂಬಂಧಗಳು, ಜಾತಿಯ ಶ್ರೇಷ್ಟತೆ ಮತ್ತು ಕನಿಷ್ಟತೆ ಬ್ರಾಹ್ಮಣರ ಜಾತಿಗಳು, ಉಪಜಾತಿಗಳು ಅದರ ಸ್ಥಾನಮಾನಗಳು ಮತ್ತು ಶ್ರೇಣೀಕೃತ ವ್ಯವಸ್ಥೆಯಲ್ಲಿ ಇತರ ಜಾತಿಗಳ ಸ್ಥಾನಮಾನಗಳೇನು ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ.

ಇದೇ ಭಾಗದಲ್ಲಿ ಮಹಿಳೆಯರ ಸ್ಥಾನಮಾನಗಳು, ದೇವದಾಸಿ ಪದ್ಧತಿ, ಸತಿಸಹಗಮನ ಪದ್ಧತಿ, ಸೂಳೆಗಾರಿಕೆ ಮುಂತಾದ ವಿಚಾರಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಅಂದಿನ ದಾಸ ಶ್ರೇಷ್ಟರು ತಮ್ಮ ಕೀರ್ತನೆಗಳ ಮೂಲಕ ವಿಡಂಬನೆ ಮಾಡಿರುವುದು ಈ ಅಧ್ಯಯನದ ಮೇಲೆ ಹೆಚ್ಚು ಪರಿಣಾಮ ಬೀರುವಂತಹದ್ದು. ಶ್ರೇಷ್ಟ ಕೀರ್ತನೆಕಾರರಾದ ಕನಕದಾಸರು, ಪುರಂದರದಾಸರು ಮತ್ತು ವಚನಕಾರನಾದ ಸರ್ವಜ್ಞ ಮೊದಲಾದವರು ವಿಜಯನಗರ ಕಾಲದ ಸಮಾಜಕ್ಕೆ ಕನ್ನಡಿ ಹಿಡಿದಂತೆ ತಮ್ಮ ಅನುಭವಗಳನ್ನು ಕಟ್ಟಿಕೊಟ್ಟಿದ್ದಾರೆ. ಇಂತಹ ಹಲವಾರು ವಿಚಾರಗಳು ಈ ಭಾಗದಲ್ಲಿ ಸ್ಥಾನವನ್ನು ಪಡೆದಿದೆ.

ಮೂರನೇ ಅಧ್ಯಾಯ : ವಿಜಯನಗರ ಕಾಲದ ಅರ್ಥ ವ್ಯವಸ್ಥೆಯಲ್ಲಿ ವೃತ್ತಿ ಆಧಾರಿತ ಜಾತಿಗಳ ಪಾತ್ರ. ವಿಜಯನಗರದ ಅರಸರು ಕೃಷಿಗೆ ಕೊಟ್ಟ ಮಹತ್ವ ಮತ್ತು ರೈತರಿಗೆ ನೀಡಿದ ಸೌಲಭ್ಯಗಳಿಂದಾಗಿ ಹೆಚ್ಚು ಭೂಮಿ ವ್ಯವಸಾಯಕ್ಕೆ ಒಳಪಟ್ಟಿತ್ತು.

ರೈತರು ಬೆಳೆದ ಅಧಿಕ ಉತ್ಪನ್ನಕ್ಕೆ ವ್ಯಾಪಾರ ಅವಶ್ಯವಾಯಿತು. ರೈತನ ಕೃಷಿ ವ್ಯವಸ್ಥೆಗೆ ಪೂರಕವಾಗಿ ಅನೇಕ ಕೈಕಸುಬುಗಳು ಹುಟ್ಟಿಕೊಂಡವು. ಗುಡಿ ಕೈಗಾರಿಕೆಗಳು ಸ್ಥಾಪನೆಗೊಂಡವು. ಕಂಬಾರನಿಂದ ಕುಂಬಾರನವರೆಗೆ ಅನೇಕ ವೃತ್ತಿ ಸಮುದಾಯಗಳು ತಲೆ ಎತ್ತಿದವು. ಲಾಭದಾಯಕವಾದ ಈ ವೃತ್ತಿಗಳು ತಲತಲಾಂತರವರೆಗೆ ಅನುವಂಶಿಕವಾಗಿ ಮುಂದುವರೆದವು. ಮುಂದೆ ಈ ವೃತ್ತಿ ಸಮುದಾಯಗಳು ಜಾತಿಗಳಾಗಿ ಉಳಿದುಕೊಂಡವು. ಹೀಗೆ ಕೃಷಿಗೆ ಪೂರಕವಾಗಿ ಬೆಳೆದು ಬಂದ ವೃತ್ತಿಗಳು ಆರ್ಥಿಕ ವ್ಯವಸ್ಥೆಯ ಬೆಳವಣಿಗೆಯಲ್ಲಿ ಬೆನ್ನೆಲುಬಾಗಿ ನಿಂತು ಮುಖ್ಯಪಾತ್ರ ವಹಿಸಿದವು. ಸಂತೆಗಳು ಸ್ಥಾಪನೆಗೊಂಡು ವ್ಯಾಪಾರ, ವಹಿವಾಟು ಹೆಚ್ಚಾಗಿ ದೇಶೀಯ ಮತ್ತು ವಿದೇಶೀಯ ವ್ಯಾಪಾರಕ್ಕೆ ಕಾರಣವಾಯಿತು. ಹಣದ ಬಳಕೆ ಹೆಚ್ಚಾಯಿತು. ಶೆಟ್ಟಿ, ಪಟ್ಟಣಸ್ವಾಮಿ, ನಾನಾದೇಶೀ ಮುಂತಾದ ವರ್ತಕ ಸಮುದಾಯಗಳು ಅರ್ಥ ವ್ಯವಸ್ಥೆಯಲ್ಲಿ ವಿಶೇಷ ಪಾತ್ರವನ್ನು ವಹಿಸಿದವು. ಒಟ್ಟಿನಲ್ಲಿ ವಿಜಯನಗರ ಕಾಲದ ಆರ್ಥಿಕ ಪ್ರಗತಿಗೆ ವೃತ್ತಿ ಆಧಾರಿತ ಜಾತಿಗಳೇ ಆಧಾರ ಸ್ತಂಭಗಳಾಗಿ ನಿಂತವು ಎಂಬುದನ್ನು ಈ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

ನಾಲ್ಕನೇ ಅಧ್ಯಾಯ : ವಿಜಯನಗರ ಕಾಲದ ಸಾಂಸ್ಕೃತಿಕ ವೈವಿಧ್ಯತೆ ಕುರಿತಾದದು. ಈ ಅಧ್ಯಾಯದಲ್ಲಿ ವಿಜಯನಗರದ ಅರಸರು ತಮ್ಮ ಅಧಿಕಾರ ಅವಧಿಯಲ್ಲಿ ಚಿತ್ರಕಲೆ, ಶಿಲ್ಪಕಲೆ, ನೃತ್ಯ ಮುಂತಾದ ಕಲೆಗಳಿಗೆ ನೀಡಿದ ಪ್ರೋತ್ಸಾಹವನ್ನು, ಕೊಟ್ಟ ಕೊಡುಗೆಗಳನ್ನು, ಬಿಟ್ಟ ದತ್ತಿಗಳನ್ನು, ನೆಟ್ಟ ಶಾಸನಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಸೈನ್ಯ ವ್ಯವಸ್ಥೆಯಲ್ಲಿ ನಾಯಿಂದರು, ಮುಸ್ಲಿಂಮರು, ಕ್ರೈಸ್ತ ಮಿಷನರಿಗಳು ಪಾಲುಗೊಳ್ಳುತ್ತಿದ್ದರು. ಇವರಿಗೂ ಸಹ ವಿಜಯನಗರ ಅರಸರು ಸಕಲ ಸವಲತ್ತುಗಳನ್ನು ನೀಡಿದರು. ಧರ್ಮಾತೀತವಾಗಿ ನಡೆದುಕೊಂಡಿದ್ದರು. ವಿಜಯನಗರದ ಸಾಮ್ರಾಜ್ಯದ ವಿಸ್ತರಣೆಯಲ್ಲಿ ಇವರ ಪಾತ್ರವನ್ನು ಕಡೆಗಣಿಸುವಂತಿಲ್ಲ. ವಿಜಯನಗರ ಕಾಲದ ಸಾಂಸ್ಕೃತಿಕ ವೈವಿಧ್ಯತೆಗೆ ಈ ಸಮುದಾಯಗಳ ಕೊಡುಗೆಯೂ ಮುಖ್ಯವಾಗಿರುತ್ತದೆ.

ಐದನೇ ಅಧ್ಯಾಯ : ವಿಜಯನಗರ ಕಾಲದಲ್ಲಿ ವೃತ್ತಿ ಸಂಘಗಳು ಹಾಗೂ ವ್ಯಾಪಾರ ವಾಣಿಜ್ಯ: ಯಾವುದೇ ಒಂದು ಸಾಮ್ರಾಜ್ಯದ ಪ್ರಗತಿಗೆ ಅಲ್ಲಿಯ ವ್ಯಾಪಾರ ಮತ್ತು ವಾಣಿಜ್ಯ ಕಾರಣವಾಗುತ್ತದೆ. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಾದಂತೆಲ್ಲಾ ವರ್ತಕ ಸಂಘಗಳು ಬಲಿಷ್ಟವಾಗುತ್ತವೆ. ವಿಜಯನಗರ ಕಾಲದಲ್ಲಿ ಅನೇಕ ಸಮುದಾಯಗಳ ವರ್ತಕ ಸಂಘಗಳು, ವೃತ್ತಿ ಸಂಘಗಳು ಹೆಚ್ಚು ಪ್ರಗತಿಯನ್ನು ಹೊಂದಲು ಕಾರಣವಾದುದು ಅಂದಿನ ಆರ್ಥಿಕ ಸಂಪನ್ಮೂಲಗಳ ಅಭಿವೃದ್ಧಿಯೆ ಆಗಾಗಿ ಈ ಭಾಗದಲ್ಲಿ ವೃತ್ತಿ ಸಂಘಗಳ ಉಗಮ, ವಿಕಾಸವನ್ನು ಒಳಗೊಂಡಂತೆ ವೃತ್ತಿ ಸಂಘಗಳೂ ಮತ್ತು ವರ್ತಕ ಸಂಘಗಳು ವಿಜಯನಗರ ಕಾಲದಲ್ಲಿ

ವಹಿಸಿದ ಪಾತ್ರ ನೀಡಿದ ಕೊಡುಗೆ ಮುಂತಾದ ವಿಚಾರಗಳನ್ನು ಕುರಿತು ವಿವರಿಸಲಾಗಿದೆ. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆ, ವೃತ್ತಿ ಪದದ ಅರ್ಥ ಸಂಘಗಳ ಉಗಮ, ಬೆಳವಣಿಗೆ, ಉಪಯೋಗ ಮೊದಲಾದ ಸಮಗ್ರ ವಿಚಾರಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಆರನೇ ಅಧ್ಯಾಯ : ವಿಜಯನಗರ ಕಾಲದ ಬೇಟೆ, ಪಶುಪಾಲನೆ ಮತ್ತು ತಳವಾರಿಕೆ ಕುರಿತದ್ದಾಗಿದೆ. ವೈಭವ ಮತ್ತು ಪ್ರಭಾವಶಾಲಿಯಾಗಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಕುಶಲಕರ್ಮಿಗಳು, ಬುಡಕಟ್ಟು ಜನರು, ನಿಮ್ನ ವರ್ಗದ ಅನೇಕ ಶೋಷಿತ ಸಮುದಾಯಗಳು ಸಮಾಜದ ದೃಷ್ಟಿಯಲ್ಲಿ ನಿರ್ಲಕ್ಷಿತರಾಗಿದ್ದರೂ ಅವರು ಸಾಮ್ರಾಜ್ಯಕ್ಕೆ ನೀಡಿದ ಕಾಣಿಕೆ ಅನುಪಮವಾದುದು. ಈ ಹಿನ್ನೆಲೆಯಲ್ಲಿ ಆ ಕಾಲದ ಬೇಟೆ, ಪಶುಪಾಲನೆ ಮತ್ತು ತಳವಾರಿಕೆ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ವಿಜಯನಗರ ಕಾಲದಲ್ಲಿ ಅರಸರನ್ನೂ ಒಳಗೊಂಡಂತೆ ವಿವಿಧ ಸಮುದಾಯದ ಜನರು ಬೇಟೆ, ಪಶುಪಾಲನೆಯಲ್ಲಿ ಪಾಲುಗೊಳ್ಳುತ್ತಿದ್ದರು. ತಳವಾರರು ಮೂಲತಃ ಬೇಟೆಗಾರರೆ ಆಗಿದ್ದು, ವಿಜಯನಗರದ ಬೇಹುಗಾರಿಕೆ ವ್ಯವಸ್ಥೆಯಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದರು. ಮೀನಿನ ಬೇಟೆಯನ್ನು ಮಾಡುತ್ತಿದ್ದವರನ್ನು ಬೆಸ್ತರೆಂದು, ಪಶು ಸಂಗೋಪನೆ ಮಾಡುತ್ತಿದ್ದವರನ್ನು ಗೊಲ್ಲರೆಂದು ಗುರುತಿಸಲಾಗಿದೆ. ವಿಜಯನಗರದ ಅರಸರು ಈ ಸಮುದಾಯಗಳಿಗೂ ಕೂಡ ಭೂಮಿ, ಹುಲ್ಲುಗಾವಲು, ಕೆರೆಕಟ್ಟೆಗಳ ಉಸ್ತುವಾರಿಗಳನ್ನು ನೀಡಿ ಅವರ ಆರ್ಥಿಕ ಮತ್ತು ಸಾಮಾಜಿಕ ಬದುಕಿಗೆ ಸಹಕರಿಸಿದರು. ಇಂತಹ ಪ್ರಮುಖ ವಿಚಾರಗಳು ಪ್ರಸ್ತುತ ಅಧ್ಯಾಯದಲ್ಲಿ ಸ್ಥಾನವನ್ನು ಪಡೆದಿವೆ.

ಕೊನೆಯ ಅಧ್ಯಾಯವಾದ ಉಪಸಂಹಾರದ ಭಾಗದಲ್ಲಿ ಮಹಾಪ್ರಬಂಧದ ಒಟ್ಟು ನೋಟವನ್ನು ಸಂಕ್ಷಿಪ್ತವಾಗಿ ಮತ್ತು ಅನುಕ್ರಮವಾಗಿ ಕಟ್ಟಿ ಕೊಡಲಾಗಿದೆ. ಅಂತಿಮವಾಗಿ ಅನುಬಂಧಗಳು, ಸಂಕ್ಷಿಪ್ತ ಸೂಚಿ ಪಾರಿಭಾಷಿಕ ಪದಗಳ ಅರ್ಥ, ಭೂಪಟ ಮತ್ತು ಛಾಯಾಚಿತ್ರಗಳು ಹಾಗೂ ಗ್ರಂಥ ಋಣವನ್ನು ಕೊಡಲಾಗಿದೆ.

## 1.10. ರಾಜಕೀಯ ಇತಿಹಾಸ

ದಕ್ಷಿಣ ಭಾರತದ ರಾಜಕೀಯ ಇತಿಹಾಸವು ೧೩ನೇ ಶತಮಾನದ ಅಂತ್ಯದಲ್ಲಿ ಹೊಸ ತಿರುವನ್ನು ಪಡೆಯಿತು. ಅದೇನೆಂದರೆ ಉತ್ತರ ಭಾರತದ ಮುಸ್ಲಿಂ ದೊರೆಗಳು ಕ್ರಿ.ಶ. ೧೨೯೪ರಿಂದ ಇಲ್ಲಿಯ ಸಂಪತ್ತಿನ ಮೇಲೆ ಕಣ್ಣು ಹಾಯಿಸಿ ಅದನ್ನು ತಮ್ಮದಾಗಿಸಿಕೊಳ್ಳುವುದಕ್ಕೋಸ್ಕರ ಪ್ರಮುಖ ರಾಜ್ಯಗಳಾದ ದೇವಗಿರಿ, ವಾರಂಗಲ್, ದೋರಸಮುದ್ರ ಮತ್ತು ಮಧುರೆಯನ್ನು ಧಾಳಿ ಮಾಡಿದರು. ಕ್ರಿ.ಶ. ೧೨೯೪ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಮೊದಲ ಬಾರಿಗೆ ದೇವಗಿರಿಯ ಮೇಲೆ ಧಾಳಿ ಮಾಡಿ ಸೇವುಣ ರಾಮಚಂದ್ರನನ್ನು ಸೋಲಿಸಿ ಅವನಿಂದ ವಾರ್ಷಿಕ ಕಪ್ಪವನ್ನು ತೆಗೆದುಕೊಂಡಿದ್ದಲ್ಲದೇ ಅವನನ್ನು ತನ್ನ ಸಾಮಂತನನ್ನಾಗಿಸಿಕೊಂಡನು. ಇದರೊಂದಿಗೆ ದಕ್ಷಿಣ ಭಾರತವು ತನ್ನ ಇತಿಹಾಸದಲ್ಲಿ ಮೊತ್ತಮೊದಲ ಬಾರಿಗೆ ಉತ್ತರ ಭಾರತದ ಮುಸ್ಲಿಂ ದಾಳಿಗೆ ತುತ್ತಾಗಿ ಇಲ್ಲಿ ಅವರ ಅಸ್ತಿತ್ವಕ್ಕೆ ನಾಂದಿ ಹಾಡಲಾಯಿತು. ಈ ವಿಜಯದಿಂದ ಪ್ರೇರಣೆಗೊಂಡ ಉತ್ತರ ಭಾರತದ

ಇತರ ಮುಸ್ಲಿಂ ದೊರೆಗಳು ದಕ್ಷಿಣ ಭಾರತದ ದಂಡಯಾತ್ರೆಗಳನ್ನು ಬಹಳ ಗಂಭೀರವಾಗಿ ಪರಿಗಣಿಸಿ ಅದನ್ನು ಲಾಭದಾಯಕ ದೃಷ್ಟಿಯಿಂದ ನೋಡಲಾರಂಭಿಸಿದರು. ಅವರ ಎರಡನೆ ದಾಳಿಯು ೧೩೦೩ರಲ್ಲಿ ತೆಲಂಗಾಣದ ಮೇಲೆ ನಡೆದು ಅದು ಸಫಲವಾಗದೇ ಮತ್ತೆ ೧೩೦೭ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ಸೇನಾನಿ ಮಲ್ಲಿಕಾಪೂರ್‌ನು ದೇವಗಿರಿಯ ಮೇಲೆ ದಾಳಿ ಮಾಡಿದನು. ಈ ದಾಳಿಯ ಸಮಯದಲ್ಲಿ ರಾಮಚಂದ್ರನನ್ನು ಸಂಪೂರ್ಣವಾಗಿ ೨ನೇ ಬಾರಿ ಸೋಲಿಸಿ, ಅವನ ಸಹಾಯದಿಂದ ಕಾಕತೀಯರ ರಾಜಧಾನಿ ವಾರಂಗಲ್ಲನ್ನು ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡರು. ಅಲ್ಲಿಂದ ಮುಂದೆ ಸಾಗಿ ಹೊಯ್ಸಳರ ರಾಜಧಾನಿ ದೋರಸಮುದ್ರವನ್ನು ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡು ಮೂರನೇ ಬಲ್ಲಾಳನ ಮಗನನ್ನು ಸೆರೆಹಿಡಿದು ಅವರಿಂದ ಅಪಾರ ಪ್ರಮಾಣದ ಕಪ್ಪ ಸಂಗ್ರಹಿಸಿದನು. ಹೊಯ್ಸಳರನ್ನು ಸೋಲಿಸಿದ ಮೇಲೆ ಅವರ ನೆರವಿನಿಂದ ಇಡೀ ಚೋಳಮಂಡಲವನ್ನು ಹಾದು ರಾಮೇಶ್ವರದವರೆಗೂ ದಂಡೆತ್ತಿ ಹೋಗಿ ಅಲ್ಲಿ ಲೂಠಿ ಮಾಡಿ ದೆಹಲಿಗೆ ಹಿಂತಿರುಗಿದನು.

ಈ ದಾಳಿಗಳಿಂದ ಅಪಾರ ಅಪಮಾನ ಮತ್ತು ನಷ್ಟಕ್ಕೆ ಗುರಿಯಾದ ದಕ್ಷಿಣ ಭಾರತದ ರಾಜರು ಎಚ್ಚೆತ್ತುಕೊಂಡು ತಮ್ಮ ತಮ್ಮಲ್ಲಿದ್ದ ವೈಮನಸ್ಸುಗಳನ್ನು ತೊರೆದು ಒಗ್ಗಟ್ಟಾಗಿ ದೆಹಲಿ ಸುಲ್ತಾನರಿಗೆ ವಾರ್ಷಿಕ ಕಪ್ಪವನ್ನು ನೀಡಲು ನಿರಾಕರಿಸಲಾರಂಭಿಸಿದರು. ಇದನ್ನು ಸಹಿಸಲಾರದ ದೆಹಲಿ ಸುಲ್ತಾನರು ೧೩೧೮ರಲ್ಲಿ ಮುಬಾರಕ್ ಷಾನ ನೇತೃತ್ವದಲ್ಲಿ ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದು ಯಾದವರ ಹರಿಪಾಲದೇವನನ್ನು ಕೊಂದು ಯಾದವ ವಂಶವನ್ನು ನಿರ್ನಾಮ ಮಾಡಿದನು. ಅದೇ ವರ್ಷದಲ್ಲಿ ಖುಸ್ರು ಖಾನನು ವಾರಂಗಲ್ ಮೇಲೆ ದಂಡೆತ್ತಿ ಹೋಗಿ ಅಲ್ಲಿಯ ರಾಜನನ್ನು ತನ್ನ ಸಾಮಂತನನ್ನಾಗಿಸಿಕೊಂಡನು. ಇದಲ್ಲದೇ ೧೩೩೨ರಲ್ಲಿ ಗಿಯಾಸ್-ಉದ್-ದೀನ್ ತೊಘಲಕ್‌ನು ವಾರಂಗಲ್ ಮೇಲೆ ದಂಡೆತ್ತಿ ಹೋಗಿ ವಾರಂಗಲ್ಲಿನ ರಾಜನನ್ನು ಸೆರೆಯಾಳಾಗಿ ಹಿಡಿದುಕೊಂಡು ದೆಹಲಿಗೆ ಹೋದನು. ನಂತರ ೧೩೨೭-೨೮ರಲ್ಲಿ ಮಹಮ್ಮದ್-ಬಿನ್-ತೊಘಲಕ್‌ನು ಹೊಯ್ಸಳರನ್ನು ಸಂಪೂರ್ಣವಾಗಿ ಸೋಲಿಸಿ ಅವರ ನೆರವಿನಿಂದ ಪಾಂಡ್ಯರ ರಾಜಧಾನಿ ಮಧುರೆಯನ್ನು ವಶಪಡಿಸಿಕೊಂಡು ಅಪಾರ ಸಂಪತ್ತಿನೊಂದಿಗೆ ದೆಹಲಿಗೆ ಮರಳಿದನು. ಇದಾದ ಕೆಲವೇ ವರ್ಷಗಳಲ್ಲಿ ಮಧುರೆಯಲ್ಲಿ ಸುಲ್ತಾನರ ಅಧಿಕಾರವನ್ನು ಸ್ಥಾಪಿಸಲಾಯಿತು. ೧೩೪೭ರಲ್ಲಿ ಸೈಯದ್ ಹಸನ್ ಇವನ ವಿರುದ್ಧ ದಂಗೆಯೆದ್ದು ತನ್ನದೇ ಆದ ಬಹಮನಿ ರಾಜ್ಯವನ್ನು ಕಟ್ಟಿ ಗುಲ್ಬರ್ಗಾದಿಂದ ತನ್ನ ಆಳ್ವಿಕೆ ಆರಂಭಿಸಿದನು.

ಕ್ರಿ.ಶ. ೧೩೪೭ರಿಂದ ದಕ್ಷಿಣ ಭಾರತವು ಪ್ರಮುಖವಾಗಿ ಎರಡು ವಿಭಿನ್ನ ಗುಂಪುಗಳ ಆಳ್ವಿಕೆಗೊಳಪಟ್ಟಿತು. ಉತ್ತರದಲ್ಲಿ ಬಹಮನಿ ಹಾಗೂ ದಕ್ಷಿಣದಲ್ಲಿ ವಿಜಯನಗರ ರಾಜ್ಯಗಳು ತುಂಗಭದ್ರಾ ನದಿಯನ್ನು ಎಲ್ಲೆಯಾಗಿಟ್ಟುಕೊಂಡು ಆಳಲಾರಂಭಿಸಿದವು. ಸುಮಾರು ೨೦೦ಕ್ಕೂ ಹೆಚ್ಚು ವರ್ಷಗಳ ಕಾಲ ಇವೆರಡು ರಾಜ್ಯಗಳು ನಿರಂತರವಾಗಿ ರಾಯಚೂರು ದೊಅಬ್ ಪ್ರಾಂತ್ಯವನ್ನು ತಮ್ಮದಾಗಿಸಿಕೊಳ್ಳಲು ಹಲವಾರು

ಯುದ್ಧಗಳನ್ನು ಮಾಡಿದವು. ಕರ್ನಾಟಕದಲ್ಲಿ ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯವು ಕೆಲವು ವೈಶಿಷ್ಟ್ಯತೆಗಳಿಂದ ಕೂಡಿದೆ. ಅವುಗಳೆಂದರೆ ಇದು ಇತರೆ ರಾಜ್ಯಗಳಂತೆ ಅಥವಾ ರಾಜಮನೆತನಗಳಂತೆ ಒಂದು ಭಾಷಾವಾರು ಪ್ರಾಂತ್ಯಕ್ಕೆ ಸೀಮಿತಗೊಳ್ಳದೆ ದಕ್ಷಿಣ ಭಾರತದ ಹೆಚ್ಚು ಪ್ರಾಂತ್ಯಗಳನ್ನು ತನ್ನ ಅಧೀನಕ್ಕೊಳಪಡಿಸಿಕೊಂಡಿತ್ತು ಮತ್ತು ಇದು ಒಂದು ರಾಜವಂಶದಿಂದ ಆಳಲ್ಪಡದೇ ನಾಲ್ಕು ರಾಜಮನೆತನಗಳಾದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಸಂತತಿಗಳಿಂದ ಆಳಲ್ಪಟ್ಟಿತು. ಇದಲ್ಲದೆ ಇದು ದಕ್ಷಿಣ ಭಾರತದ ಕೊನೆಯ ಅತ್ಯಂತ ಪ್ರಸಿದ್ಧ ಸಾಮ್ರಾಜ್ಯ.

**ಅ. ಸಂಗಮ ವಂಶ :** ವಿಜಯನಗರ ಸಾಮ್ರಾಜ್ಯವನ್ನು ಕ್ರಮವಾಗಿ ಆಳಿದ ಮೂರು ರಾಜವಂಶಗಳಲ್ಲಿ ಸಂಗಮವಂಶವು ಮೊದಲನೆಯದು. ಸಂಗಮನ ಐವರು ಮಕ್ಕಳಲ್ಲಿ ಮೊದಲನೆಯವನಾದ ಒಂದನೇ ಹರಿಹರನು ಈ ವಂಶದ ಪ್ರಥಮ ದೊರೆ. ಇವನು ತನ್ನ ನಾಲ್ವರು ಸಹೋದರರ ಸಹಾಯದಿಂದ ಕ್ರಿ.ಶ. 1336ರಲ್ಲಿ ವಿಜಯನಗರವೆಂಬ ಹೊಸ ರಾಜ್ಯವನ್ನು ಸ್ಥಾಪಿಸಿದನು. ಇವನು ತನ್ನ ಸಹೋದರರ ಸಹಕಾರದಿಂದ ಸುಮಾರು 20 ವರ್ಷಗಳು (ಕ್ರಿ.ಶ. 1336-1356) ರಾಜ್ಯಭಾರ ಮಾಡಿದನು. ಇವನ ನಾಲ್ವರು ಸಹೋದರರೂ ಕೂಡ ಬೇರೆ ಬೇರೆ ಪ್ರಾಂತ್ಯಗಳ ಅಧಿಕಾರವನ್ನು ವಹಿಸಿಕೊಂಡಿದ್ದರು. ಹರಿಹರನು ಒಂದು ಹೊಸ ರಾಜ್ಯವನ್ನು ಸ್ಥಾಪಿಸಿದ್ದಷ್ಟೇ ಅಲ್ಲದೆ, ಅದಕ್ಕೊಂದು ಉತ್ತಮ ಸರ್ಕಾರವನ್ನು ರಚಿಸಿ, ತನ್ನ ಸಾಮ್ರಾಜ್ಯದಲ್ಲಿ ಶಾಂತಿ ಮತ್ತು ಸುಭಿಕ್ಷವನ್ನು ಸ್ಥಾಪಿಸುವಲ್ಲಿಯೂ ಯಶಸ್ವಿಯಾದನು. ಇವನ ಕಾಲದಲ್ಲಿ ಅಲ್ಲಾವುದ್ದೀನ್ ಹಸನ್ ಬಹಮನ್ ಷಾ ಕ್ರಿ.ಶ. 1347ರಲ್ಲಿ ಗುಲ್ಬರ್ಗದಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದನು. ಇವನು ವಿಜಯನಗರದೊಂದಿಗೆ ಅನೇಕ ಯುದ್ಧಗಳನ್ನು ಮಾಡಿದ್ದಲ್ಲದೆ, ಇವರ ಈ ಬಗೆಯ ವೈರತ್ವವು ಅನೇಕ ತಲೆಮಾರುಗಳವರೆಗೂ ಮುಂದುವರೆಯಿತು. ಹರಿಹರನು ಹೊಯ್ಸಳರಿಗೆ ಸೇರಿದ ಅನೇಕ ಸಣ್ಣ ರಾಜ್ಯಗಳನ್ನು ತನ್ನ ರಾಜ್ಯವನ್ನು ವಿಸ್ತರಿಸಿದನು. ಹರಿಹರನು ದಕ್ಷ ಸೇನಾನಿಯೂ, ವೀರಯೋಧನೂ ಮಾತ್ರ ಆಗಿರದೆ ಉತ್ತಮ ಆಡಳಿತಗಾರನೂ ಆಗಿದ್ದನು.

**ಒಂದನೆಯ ಬುಕ್ಕ (1356-1377) :** ಒಂದನೆಯ ಹರಿಹರನ ನಂತರ ಅವನ ತಮ್ಮನಾದ ಒಂದನೆಯ ಬುಕ್ಕನು ಪಟ್ಟಕ್ಕೆ ಬಂದನು ಮತ್ತು ಅವನು 22 ವರ್ಷಗಳ ಕಾಲ (ಕ್ರಿ.ಶ. 1356-77)ರವರೆಗೆ ರಾಜ್ಯವಾಳಿದನು. ಇವನು ತನ್ನ ಅಣ್ಣನಾದ ಹರಿಹರನಿಗೆ ಬಲಗೈನಂತಿದ್ದು ವಿಜಯನಗರ ಸ್ಥಾಪನೆಯ ಕಾರ್ಯದಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದ್ದಾನೆ. ಹಾಗೆಯೇ ಸಾಮ್ರಾಜ್ಯವನ್ನು ವಿಸ್ತರಿಸುವುದರಲ್ಲಿಯೂ ಉತ್ತಮವಾದ ಪಾತ್ರವನ್ನು ವಹಿಸಿದ್ದಾನೆ. ಬುಕ್ಕನು ಕ್ರಿ.ಶ. 1362ರಲ್ಲಿ ರಾಜಗಂಭೀರ ರಾಜ್ಯದಲ್ಲಿ ಆಳುತ್ತಿದ್ದ ಸಾಂಬುವರಾಯನ ಮನೆತನದವನಾದ ರಾಜಗಂಭೀರ ರಾಜನಾರಾಯಣನನ್ನು ಸೋಲಿಸಿ ಆ ರಾಜ್ಯವನ್ನು ವಿಜಯನಗರಕ್ಕೆ ಸೇರಿಸಿಕೊಂಡನು. ಕ್ರಿ.ಶ. 1371ರಲ್ಲಿ ಇವನ ಸೋದರನಾದ ವೀರ ಕಂಪಣನು ಮಧುರೆಯ ಸುಲ್ತಾನನ ಮೇಲೆ ದಂಡೆತ್ತಿ ಹೋಗಿ, ಮಧುರೆಯ ಸುಲ್ತಾನನನ್ನು ಕೊಂದು ಮಧುರೆಯ ಸುಲ್ತಾನರ ಹೆಸರೇ ಇಲ್ಲದಂತೆ

ಮಾಡಿದನು. ಕಂಪಣನ ಈ ದಿಗ್ವಿಜಯವು ಅವನ ಪತ್ನಿಯಾದ ಗಂಗಾದೇವಿಯು ಬರೆದಿರುವ, ಮಧುರಾವಿಜಯಂ ಎಂಬ ಗ್ರಂಥದಲ್ಲಿ ಉಲ್ಲೇಖಗೊಂಡಿದೆ. ಈ ದಿಗ್ವಿಜಯದ ನಂತರ ಕಂಪಣ್ಣನನ್ನು ತಮಿಳುನಾಡಿಗೆ ವಿಜಯನಗರ ವೈಸರಾಯಿಯನ್ನಾಗಿ ನೇಮಿಸಲಾಯಿತು.

ಬುಕ್ಕನ ಆಳ್ವಿಕೆಯಿಂದ ಮೊದಲ್ಗೊಂಡು ವಿಜಯನಗರ ಮತ್ತು ಬಹಮನಿ ಸುಲ್ತಾನರ ನಡುವೆ ಚಾರಿತ್ರಿಕ ವೈರತ್ವ ಪ್ರಾರಂಭವಾಗಿ ಅದು ಮುಂದೆ ಸುಮಾರು 200 ವರ್ಷಗಳ ಕಾಲ ಮುಂದುವರೆಯಿತು. ಈ ಯುದ್ಧಗಳು ವಿಜಯನಗರದ ಇತಿಹಾಸದಲ್ಲಿ 'ದೋಆಬ್' ಯುದ್ಧಗಳೆಂದು ಹೆಸರಾಗಿವೆ. ಕೃಷ್ಣಾ ಮತ್ತು ತುಂಗಭದ್ರಾನದಿಗಳ ನಡುವಣ ನದಿ ಮುಖಜಭೂಮಿಯ ಮೇಲೆ ಎರಡೂ ರಾಜ್ಯಗಳು ತಮ್ಮ ಅಧಿಕಾರವನ್ನು ಸ್ಥಾಪಿಸಬೇಕೆಂಬುದೇ ಈ ಯುದ್ಧಗಳ ಮುಖ್ಯ ಕಾರಣವಾಗಿತ್ತು. ಬುಕ್ಕನು ತನ್ನ ಅಧಿಕಾರಾವಧಿಯಲ್ಲಿ ಬಹಮನಿ ಸುಲ್ತಾನರೊಡನೆ ಎರಡು ಸಲ ಯುದ್ಧವನ್ನು ಮಾಡಬೇಕಾಯಿತು. ಒಮ್ಮೆ ಒಂದನೆಯ ಮಹಮದ್ ಷಾನೊಡನೆಯೂ ಮತ್ತೊಮ್ಮೆ ಮುಜಾಹಿದ್ ಷಾನೊಡನೆಯೂ ಯುದ್ಧ ಮಾಡಿ ಅಂತ್ಯದಲ್ಲಿ ಬುಕ್ಕನೇ ವಿಜಯವನ್ನು ಗಳಿಸಿದನು. ಇಂತಹ ರಾಜಕೀಯ ಚಟುವಟಿಕೆಗಳು ಮತ್ತು ಯುದ್ಧಗಳ ನಡುವೆಯೂ ಬುಕ್ಕನು ಸಾಮ್ರಾಜ್ಯದ ಏಳಿಗೆಗಾಗಿ ಶ್ರಮವಹಿಸಿ ದುಡಿದನು. ಬುಕ್ಕನ ದಕ್ಷ ಅಧಿಪತ್ಯದಲ್ಲಿ ಸಾಮ್ರಾಜ್ಯವು ಸಾಕಷ್ಟು ವಿಸ್ತರಿಸಿದ್ದೇ ಅಲ್ಲದೆ ಬಲಗೊಂಡಿತು. ಸಿಲೋನ್ ಮತ್ತಿತರ ದೇಶಗಳ ರಾಜರು ಹಾಗೂ ಮಲಬಾರಿನ ಮುಖಂಡರೂ ಬುಕ್ಕನ ಆಸ್ಥಾನದಲ್ಲಿ ರಾಯಭಾರಿಗಳನ್ನು ಇಟ್ಟಿದ್ದೇ ಅಲ್ಲದೆ ಹೇರಳವಾದ ಬಹುಮಾನಗಳನ್ನು ಕೊಟ್ಟರು. ಚೀನಾದ ಮಿಂಗ್ ವಂಶದ ಇತಿಹಾಸದಲ್ಲಿ ಬುಕ್ಕನು ಕ್ರಿ.ಶ. 1374ರಲ್ಲಿ ಚೀನಾ ದೇಶಕ್ಕೆ ರಾಯಭಾರಿಯನ್ನು ಕಳುಹಿಸಿದ್ದನೆಂದು ದಾಖಲೆಯಾಗಿದೆ. ಸ್ವಾತಂತ್ರ್ಯ ಹೋರಾಟಗಾರನಾಗಿ, ಸಾಮ್ರಾಜ್ಯದ ನಿರ್ಮಾಪಕನಾಗಿ ಹಾಗೂ ಸ್ಥಾಪಕನಾಗಿ ಒಂದನೆಯ ಹರಿಹರನನ್ನು ಬಿಟ್ಟರೆ ಬುಕ್ಕನು ನಮ್ಮ ದೇಶದ ಪ್ರಮುಖ ರಾಜರುಗಳ ಪೈಕಿ ಉತ್ತಮವಾದ ಸ್ಥಾನವನ್ನು ಗಳಿಸಿದ್ದಾನೆ.

**ಎರಡನೆಯ ಹರಿಹರ (ಕ್ರಿ.ಶ. 1377-1404) :** ಒಂದನೇ ಬುಕ್ಕನ ತರುವಾಯ ಅವನ ಮಗನಾದ ಎರಡನೇ ಹರಿಹರನು ಸಿಂಹಾಸವನ್ನೇರಿ 27 ವರ್ಷಗಳ ಕಾಲ (ಕ್ರಿ.ಶ. 1377-1404) ರಾಜ್ಯವಾಳಿದನು. ಈತನ ಕಾಲದಲ್ಲಿ ಸಾಮ್ರಾಜ್ಯವು ಆಂತರಿಕ ಭದ್ರತೆ, ಶಾಂತಿ, ಸೌಹಾರ್ದತೆ ಮತ್ತು ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿಯನ್ನು ಕಂಡಿತು. ಅಲ್ಲಲ್ಲಿ ಕಂಡುಬಂದ ಸ್ಥಳೀಯ ದಂಗೆಗಳನ್ನು ಪ್ರಮುಖ ಪ್ರಾಂತ್ಯಗಳ ಅಧಿಕಾರಿಗಳಾಗಿದ್ದ ಅವನ ಮಕ್ಕಳಾದ ಇಮ್ಮಡಿ ಬುಕ್ಕ, ವಿರೂಪಾಕ್ಷ ಮತ್ತು ಒಂದನೆಯ ದೇವರಾಯ ಹತ್ತಿಕ್ಕಿದರು. ಬಹಮನಿ ಸುಲ್ತಾನರಾದ ಮಹಮದ್ ಷಾ ಮತ್ತು ಅವನ ಮಗ ಫಿರೋಜ್ ಷಾ ವಿಜಯನಗರದ ಮೇಲೆ ಯುದ್ಧವನ್ನು ಹೂಡಿದರೂ ಕೂಡ ಆ ಯುದ್ಧವು ಉಭಯ ಪಕ್ಷಗಳಿಗೂ ಹೆಚ್ಚಿನ ನಷ್ಟವನ್ನೇನು ಉಂಟುಮಾಡಲಿಲ್ಲ. ಮಹಾರಾಜಾಧಿರಾಜ ಮತ್ತು ರಾಜ ಪರಮೇಶ್ವರ ಎಂಬ ಬಿರುದುಗಳನ್ನು ಧರಿಸಿದ ವಿಜಯನಗರದ ರಾಜರುಗಳಲ್ಲಿ ಇಮ್ಮಡಿ ಹರಿಹರನು ಮೊದಲಿಗನು. ಇಮ್ಮಡಿ ಹರಿಹರನ ಕಾಲಾನಂತರ

ಸಿಂಹಾಸನಕ್ಕಾಗಿ ಅವನ ಮೂವರು ಮಕ್ಕಳಲ್ಲಿ ಜಗಳವುಂಟಾಯಿತು. ಈ ಜಗಳದಲ್ಲಿ ಮೊದಲನೆಯ ದೇವರಾಯನು ಜಯಶೀಲನಾಗಿ ಕ್ರಿ.ಶ. 1404ರಲ್ಲಿ ಪಟ್ಟಕ್ಕೆ ಬಂದನು.

**ಒಂದನೆಯ ದೇವರಾಯ (ಕ್ರಿ.ಶ. 1404-1422) :** ದೇವರಾಯನು ಸಿಂಹಾಸನಕ್ಕೆ ಬಂದ ನಂತರ ಬಹಮನಿ ಸುಲ್ತಾನಾದ ಫಿರೋಜ್ ಷಾನೊಡನೆ ಎರಡು ಬಾರಿ ಯುದ್ಧವನ್ನು ಮಾಡಬೇಕಾಯಿತು. ವಿಜಯನಗರದಲ್ಲಿ ನಡೆಯುತ್ತಿದ್ದ ಅಂತಃಕಲಹದ ಸಮಯದಲ್ಲಿ 1406ರಲ್ಲಿ ಫಿರೋಜ್ ಷಾ ವಿಜಯನಗರಕ್ಕೆ ಮುತ್ತಿಗೆ ಹಾಕಿದನು. ಈ ಯುದ್ಧದಲ್ಲಿ ದೇವರಾಯನು ಸೋತು ಮುದಗಲ್ ಕೋಟೆಯನ್ನು ಸುಲ್ತಾನನಿಗೆ ಬಿಟ್ಟುಕೊಟ್ಟನು. ಅಲ್ಲದೆ ಸುಲ್ತಾನನು ಬಂಕಾಪುರವೆಂಬ ಕೋಟೆಯನ್ನು ಕೂಡ ತನ್ನ ವಶಪಡಿಸಿಕೊಂಡನು. ಬಹಮನಿ ಸುಲ್ತಾನನೊಂದಿಗೆ ಮತ್ತೊಮ್ಮೆ ಆಂಧ್ರ ಪ್ರದೇಶದ ಒಡೆತನಕ್ಕಾಗಿ ದೇವರಾಯನು ಯುದ್ಧವನ್ನು ಮಾಡಬೇಕಾಯಿತು. ಈ ಯುದ್ಧವು ಸುಮಾರು ನಾಲ್ಕು ವರ್ಷಗಳ ಕಾಲ ನಡೆದು, ಕೊನೆಗೆ ವಿಜಯನಗರದ ಸೈನ್ಯವು ಜಯವನ್ನು ಪಡೆಯಿತು. ತತ್ಪರಿಣಾಮವಾಗಿ ಪಾನಗಲ್ ಎಂಬ ಬಲವಾದ ಕೋಟೆಯನ್ನು ವಿಜಯನಗರವು ವಶಪಡಿಸಿಕೊಂಡಿತಲ್ಲದೆ ಸುಲ್ತಾನನ ಸೈನ್ಯವನ್ನು ಹಿಂತಿರುಗಿಸಲಾಯಿತು. ಈ ಯುದ್ಧದ ಫಲಿತಾಂಶವನ್ನು ಮತ್ತೆ ವಿಜಯನಗರವು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಪ್ರದೇಶವನ್ನು ತನ್ನ ವಶಪಡಿಸಿಕೊಂಡಂತಾಯಿತು. ಒಂದನೆಯ ದೇವರಾಯನು ಕ್ರಿ.ಶ. 1422ರಲ್ಲಿ ಮರಣ ಹೊಂದಿದ ನಂತರ ಅವನ ಮಗನಾದ ವೀರ ವಿಜಯರಾಯನು ಎರಡು ವರ್ಷಗಳ ಕಾಲ ರಾಜ್ಯವಾಳಿದನು. ವೀರ ವಿಜಯರಾಯನ ನಂತರ ಅವನ ಮಗನಾದ ಇಮ್ಮಡಿ ದೇವರಾಯನು ಸಿಂಹಾಸನವನ್ನು ಆಕ್ರಮಿಸಿದನು.

**ಇಮ್ಮಡಿ ದೇವರಾಯ (ಕ್ರಿ.ಶ. 1424-1446) :** ಇಮ್ಮಡಿ ದೇವರಾಯನು ಇತಿಹಾಸದಲ್ಲಿ ಪ್ರೌಢದೇವರಾಯ, ಗಜಬೇಂಟೆಕಾರ ಮುಂತಾದ ಬಿರುದುಗಳಿಂದ ಪ್ರಖ್ಯಾತನಾಗಿದ್ದಾನೆ. ಈತನು ಪಟ್ಟಕ್ಕೆ ಬಂದ ತಕ್ಷಣದಲ್ಲೇ ಆರಗ ಪ್ರಾಂತ್ಯದ ಪಶ್ಚಿಮದಲ್ಲಿ ದಂಗೆಯೆದ್ದಿದ್ದ ಬೇಡರನ್ನು ಸದೆಬಡಿಯಬೇಕಾಯಿತು. ಫಿರೋಜ್‌ಷಹನ ನಂತರ ಬಹಮನಿ ಸುಲ್ತಾನರ ಸಿಂಹಾಸನಕ್ಕೆ ಬಂದ ಒಂದನೆಯ ಅಹಮದ್‌ಷಹನು ತನ್ನ ತಂದೆಗೆ ವಿಜಯನಗರದವರಿಂದ ಉಂಟಾದ ಸೋಲಿಗೆ ಮುಯ್ಯಿ ತೀರಿಸಲು ಸಮಯ ಕಾಯುತ್ತಿದ್ದು, ವಿಜಯನಗರದ ಮೇಲೆ ಧಾಳಿ ಮಾಡಿದನು. ಈ ಯುದ್ಧದಲ್ಲಿ ದೇವರಾಯನು ಬಹಮನಿ ಸುಲ್ತಾನರ ಸೈನ್ಯವನ್ನು ಹಿಂದಕ್ಕೆ ಓಡಿಸುವುದರಲ್ಲಿ ಯಶಸ್ವಿಯಾದನು. ಮತ್ತೊಮ್ಮೆ ಅಹಮದ್‌ಷಾನು ರಾಯಚೂರು ಮತ್ತು ಮುದಗಲ್ಲುಗಳನ್ನು ವಶಪಡಿಸಿಕೊಳ್ಳಲು ವಿಜಯನಗರದ ಪ್ರಾಂತ್ಯಗಳ ಮೇಲೆ ಧಾಳಿ ಮಾಡಿದನು. ದೇವರಾಯನು ಶತ್ರುಗಳ ಸೈನ್ಯವನ್ನು ಬಿಜಾಪುರದವರೆಗೂ ಅಟ್ಟಿಸಿಕೊಂಡು ಹೋಗಿ, ಅವರನ್ನು ಹಿಮ್ಮೆಟ್ಟಿಸಿ ಮುದಗಲ್ ರಾಯಚೂರು ಮತ್ತು ಬಂಕಾಪುರಗಳನ್ನು ತನ್ನ ಅಧೀನಗೊಳಿಸಿಕೊಂಡನು.

ಸಂಗಮ ವಂಶದ ದೊರೆಗಳು ರೆಡ್ಡಿ ಮುಖ್ಯರನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರೂ ಸಂಪೂರ್ಣವಾಗಿ ಅವರನ್ನು ಸದೆಬಡಿಯಲಾಗಿರಲಿಲ್ಲ. ಇಮ್ಮಡಿ ದೇವರಾಯನು ಇವರನ್ನು ಸಂಪೂರ್ಣವಾಗಿ

ಸೋಲಿಸಿ ತನ್ನ ರಾಜ್ಯದ ಈಶಾನ್ಯ ಗಡಿಯನ್ನು ಬಲಪಡಿಸಿಕೊಂಡನು. ದೇವರಾಯನು ತನ್ನ ಸಾಮ್ರಾಜ್ಯವನ್ನು ದಕ್ಷಿಣದಲ್ಲಿ ಸಿಲೋನಿನ ಗಡಿಯವರೆಗೂ ವಿಸ್ತರಿಸಿ, ಕೇರಳ ರಾಜ್ಯವನ್ನು ಗೆದ್ದು ಕ್ವಿಲಾನ್ ರಾಜನಿಂದಲೂ ಮತ್ತು ಕೇರಳದ ಮುಖ್ಯರಿಂದಲೂ ಕಪ್ಪಕಾಣಿಕೆಗಳನ್ನು ತೆಗೆದುಕೊಳ್ಳುತ್ತಿದ್ದನು. ಇವನು ದಕ್ಷಿಣ ಭಾರತದಲ್ಲಿ ಶ್ರೇಷ್ಠ ರಾಜನಾಗಿದ್ದು, ಇವನ ಸಾಮ್ರಾಜ್ಯವು ಸಿಂಹಳದಿಂದ ಗುಲ್ಬರ್ಗದವರೆಗೂ, ಒರಿಸ್ಸಾದಿಂದ ಮಲಬಾರಿನವರೆಗೂ ವ್ಯಾಪಿಸಿದ್ದಿತು.

ಇಮ್ಮಡಿ ದೇವರಾಯನ ನಂತರ ಅವನ ಅಸಮರ್ಥ ಮಕ್ಕಳಾದ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷ ಒಬ್ಬರಾದ ಮೇಲೊಬ್ಬರು ಸಿಂಹಾಸನವನ್ನೇರಿದರು. ಇವರ ಅಸಮರ್ಥತೆಯ ಅವಕಾಶಗಳನ್ನು ಉಪಯೋಗಿಸಿಕೊಂಡು ಗಜಪತಿ ರಾಜನಾದ ಕಪಿಲೇಶ್ವರನು ವಿಜಯನಗರದ ಮೇಲೆ ಆಕ್ರಮಣ ಮಾಡಿ, ಕೊಂಡವೀಡು ಮತ್ತು ಉದಯಗಿರಿ ಕೋಟೆಗಳನ್ನು ವಶಪಡಿಸಿಕೊಂಡನು. ಇದೇ ಸಮಯದಲ್ಲಿ ಬಹಮನಿ ಸುಲ್ತಾನನಾದ ಮಹಮದ್ ಷಾ ವಿಜಯನಗರಕ್ಕೆ ಸೇರಿದ ಚಾಲ್, ದಾಬೂಲ್ ಮತ್ತು ಗೋವಾಗಳನ್ನು ವಶಪಡಿಸಿಕೊಂಡನು. ಗೋವಾ ವಿಜಯನಗರ ಹಾಗೂ ಪಾಶ್ಚಿಮಾತ್ಯ ದೇಶಗಳ ಲಾಭದಾಯಕ ವ್ಯಾಪಾರದ ಸಂಪನ್ಮೂಲವಾಗಿದ್ದುದಲ್ಲದೆ, ವಿಜಯನಗರದ ಸೈನ್ಯಕ್ಕೆ ಬೇಕಾದ ಕುದುರೆಗಳನ್ನು ಒದಗಿಸುವ ಮುಖ್ಯ ತಾಣವಾಗಿತ್ತು. ಇಂತಹ ಪ್ರಮುಖ ವ್ಯಾಪಾರ ಕೇಂದ್ರವನ್ನು ಬಹಮನಿ ಸುಲ್ತಾನರು ವಶಪಡಿಸಿಕೊಂಡಿದ್ದರಿಂದ, ವಿಜಯನಗರದ ಸಾಮ್ರಾಜ್ಯದ ಅವನತಿಯ ಚಿಹ್ನೆಗಳು ಕಾಣತೊಡಗಿದವು. ಇಂತಹ ಸಂದಭದಲ್ಲಿ ಸಾಳುವ ನರಸಿಂಹನೆಂಬ ಒಬ್ಬ ನಾಯಕನಿಂದ ಹೇಗೊ ವಿಜಯನಗರ ಸಾಮ್ರಾಜ್ಯವು ಮತ್ತೆ ತಲೆ ಎತ್ತಿ ನಿಂತಿತು. ಸಾಳುವ ನರಸಿಂಹನು ಚಂದ್ರಗಿರಿಯ ರಾಜ್ಯವನ್ನು ಆಳುತ್ತಿದ್ದು, ವಿಜಯನಗರ ಸಾಮ್ರಾಜ್ಯದಲ್ಲಿ ಇಂತಹ ಗೊಂದಲವುಂಟಾಗಲು, ತಾನು ಸೈನ್ಯವನ್ನು ಹಾಗೂ ಅಧಿಕಾರವನ್ನು ಕ್ರೋಢೀಕರಿಸಿ ಕ್ರಿ.ಶ. 1485ರಲ್ಲಿ ವಿಜಯನಗರದ ಸಿಂಹಾಸನವನ್ನು ಆಕ್ರಮಿಸಿದನು. ಹೀಗೆ ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ಅದರ ಬೆಳವಣಿಗೆಗೆ ಪಣತೊಟ್ಟು ಶ್ರಮಿಸಿದ ಮಹತ್ವಪೂರ್ಣ ಸಂಗಮ ವಂಶದ ಆಳ್ವಿಕೆಯು ಇಲ್ಲಿಗೆ ಕೊನೆಗೊಂಡಿತು.

ಕ್ರಿ.ಶ. 1482ರಲ್ಲಿ ಮೂರನೆಯ ಮಹಮದ್ ಷಾ ಮರಣ ಹೊಂದಿದ ನಂತರ ಬಹಮನಿ ಸಾಮ್ರಾಜ್ಯವು ಶಿಥಿಲಗೊಳ್ಳುತ್ತಾ ಬಂದಿತು. ಮೂರನೆಯ ಮಹಮದ್ ಷಾ ನಂತರ ಪಟ್ಟಕ್ಕೆ ಬಂದ ಅಸಮರ್ಥ ಸುಲ್ತಾನರ ಆಳ್ವಿಕೆಯಲ್ಲಿ ಅಧೀನ ಸರದಾರರುಗಳಲ್ಲಿ ಒಬ್ಬರಾದ ಮೇಲೊಬ್ಬರು ದಂಗೆಯೆದ್ದು ಸ್ವತಂತ್ರರಾದರು. ಕೆಲವು ಕಾಲದ ನಂತರ ಈ ಸರದಾರರು ತಮ್ಮದೇ ಆದ ಸ್ವತಂತ್ರ್ಯ ರಾಜ್ಯಗಳನ್ನು ಕಟ್ಟಿಕೊಂಡರು. ತತ್ಪರಿಣಾಮವಾಗಿ ದಕ್ಷಿಣದಲ್ಲಿ ಬಿಜಾಪುರ, ಬೀದರ್, ಅಹಮದ್‌ನಗರ, ಗೋಲ್ಕೊಂಡ ಮತ್ತು ಬೀರಾರ್ ಎಂಬ ಐದು ಸ್ವತಂತ್ರ್ಯ ಸುಲ್ತಾನ ರಾಜ್ಯಗಳು ಹುಟ್ಟಿಕೊಂಡವು.

**ಆ. ಸಾಳುವ ವಂಶ :** ಹೀಗೆ ವಿಜಯನಗರದಲ್ಲಿ ಸಂಗಮ ವಂಶದ ಆಳ್ವಿಕೆ ಮುಗಿದು ಸಾಳುವ ವಂಶದ ಆಳ್ವಿಕೆಯು ಪ್ರಾರಂಭವಾಯಿತು. ಸಾಳುವ ನರಸಿಂಹನು ವಿಜಯನಗರದ ಸಿಂಹಾಸನವನ್ನು ಅಪಹರಿಸುವುದಕ್ಕೆ ಮೊದಲು ಚಂದ್ರಗಿರಿ ರಾಜ್ಯವನ್ನು ಆಳುತ್ತಿದ್ದನು. ಈತನು ವಿಜಯನಗರ ಸಾಮ್ರಾಜ್ಯದ ಅಧೀನ ರಾಜನಾಗಿ ಸುಮಾರು ಮೂರು ದಶಕಗಳಿಗಿಂತಲೂ ಹೆಚ್ಚಾಗಿ ಉನ್ನತ ಮಟ್ಟದಲ್ಲಿ ಸೇವೆ ಸಲ್ಲಿಸಿದ್ದನು. ಇವನು ಸಿಂಹಾಸನವನ್ನು ಆಕ್ರಮಿಸುವುದಕ್ಕೆ ಮೊದಲು ಸಾಮ್ರಾಜ್ಯದ ಸ್ಥಿತಿಯು ಬಹಳ ಕ್ಷೀಣ ಸ್ಥಿತಿಯಲ್ಲಿದ್ದಿತು. ಇಂತಹ ಅವಕಾಶಗಳನ್ನು ಉಪಯೋಗಿಸಿಕೊಂಡು ತನ್ನ ಸೈನಿಕ ದಕ್ಷತೆಯನ್ನು ಹಾಗೂ ರಾಜಕೀಯ ಪಟುತ್ವವನ್ನು ಈತನು ಸಕಾಲದಲ್ಲಿ ಪ್ರದರ್ಶಿಸಿದನು. ಸಾಳುವ ನರಸಿಂಹನು ವಿಜಯನಗರದ ಮೇಲೆ ದಂಡೆತ್ತಿ ಬಂದ ಬಹಮನಿ ಸುಲ್ತಾನರ ಸೇನೆಯನ್ನು ಹಾಗೂ ಒರಿಸ್ಸಾದ ಗಜಪತಿಯ ಸೇನೆಯನ್ನು ಹಿಂದಕ್ಕಟ್ಟಿ ಉದಯಗಿರಿ ಮತ್ತು ಕೊಂಡವೀಡು ಕೋಟೆಗಳನ್ನು ವಶಪಡಿಸಿಕೊಂಡನು. ಈತನು ವಿಜಯನಗರ ಸಾಮ್ರಾಜ್ಯಕ್ಕೆ ಅವಿಧೇಯರಾಗಿ ವರ್ತಿಸಿದ ನಾಯಕರನ್ನೂ ಹಾಗೂ ದಂಗೆಕೋರರಾದ ಸರದಾರರನ್ನು ಹತ್ತಿಕ್ಕಿ ಮತ್ತೆ ಅವರು ಸಾಮ್ರಾಜ್ಯಕ್ಕೆ ಅಧೀನರಾಗಿರುವಂತೆ ಮಾಡಿದನು. ಹೀಗೆ ನರಸಿಂಹನು ವಿಜಯನಗರಕ್ಕೆ ಬಂದೊದಗಿದ ವಿಪತ್ತನ್ನು ನಿವಾರಿಸಿ ಸಾಮ್ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿದನು. ಇವನ ಈ ಕೃತ್ಯಗಳಿಂದ ಇವನನ್ನು ಅಪಹರಣಕಾರ ಎಂದು ಹೇಳುವುದಕ್ಕಿಂತಲೂ ರಕ್ಷಕ ಎಂದು ಹೇಳಬಹುದು.

ನರಸಿಂಹನ ಮರಣೋತ್ತರ ಕಾಲದಲ್ಲಿ ಅವನ ಎರಡು ಮಕ್ಕಳು ಚಿಕ್ಕವರಾಗಿದ್ದುದರಿಂದ ತುಳುವ ವಂಶದವನಾದ ಅವನ ನಂಬಿಕೆಯ ಮಂತ್ರಿಯಾದ ನರಸನಾಯಕನನ್ನು ಪೋಷಕ ಹಾಗೂ ರಾಜಪ್ರತಿನಿಧಿಯಾಗಿ ನೇಮಕ ಮಾಡಲಾಯಿತು. ನರಸನಾಯಕನು ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡ ನಂತರ ತಾನೇ ನಿಜವಾದ ದೊರೆಯಂತೆ ರಾಜ್ಯವಾಳತೊಡಗಿದನು. ನರಸಿಂಹನ ಇಬ್ಬರು ಮಕ್ಕಳಲ್ಲಿ ಹಿರಿಯವನನ್ನು ಕೊಲೆಮಾಡಲಾಯಿತು ಮತ್ತು ಕಿರಿಯವನನ್ನು ಬಂಧನದಲ್ಲಿಡಲಾಯಿತು. ನರಸನಾಯಕನು ಉಮ್ಮತ್ತೂರಿನ ದಂಗೆಯನ್ನು ಯಶಸ್ವಿಯಾಗಿ ಹತ್ತಿಕ್ಕಿ ಗಜಪತಿರಾಜನಾದ ಪ್ರತಾಪರುದ್ರನನ್ನು ಸೋಲಿಸಿದನು. ತನ್ನ ಚತುರ ರಾಯಭಾರತನವನ್ನು ಉಪಯೋಗಿಸಿಕೊಂಡು ಬಹಮನಿ ಸುಲ್ತಾನರಿಂದ ಮುದಗಲ್ ಮತ್ತು ರಾಯಚೂರು ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ಕ್ರಿ.ಶ. 1503ರಲ್ಲಿ ನರಸನಾಯಕನು ಮರಣದ ನಂತರ ಅವನ ಮಗನಾದ ವೀರ ನರಸಿಂಹನನ್ನು ಆತನ ತಂದೆಯ ಸ್ಥಾನದಲ್ಲಿ ರಾಜಪ್ರತಿನಿಧಿಯಾಗಿ ನೇಮಿಸಲಾಯಿತು. ಕ್ರಿ.ಶ. 1505ರಲ್ಲಿ ಸಾಳುವ ನರಸಿಂಹನ ಕಿರಿಯ ಮಗನಾದ ಇಮ್ಮಡಿ ನರಸಿಂಹನು ಮರಣ ಹೊಂದಿದ ತರುವಾಯ ವೀರನರಸಿಂಹನು ತಾನೇ ವಿಜಯನಗರದ ಸಿಂಹಾಸನಕ್ಕೆ ನಿಜವಾದ ಹಕ್ಕುದಾರನೆಂದು ತಿಳಿದು ಸಿಂಹಾಸನವನ್ನೇರಿದನು. ಹೀಗೆ ತುಳುವ ವೀರನರಸಿಂಹನ ಸಿಂಹಾಸನಾರೋಹಣದೊಂದಿಗೆ ಸಾಳುವ ವಂಶವು ಅಲ್ಪಾವಧಿಯ ಆಳ್ವಿಕೆಯಲ್ಲೇ ಅಂತ್ಯವಾಯಿತು.

**ಇ. ತುಳುವ ವಂಶ**

**ಕೃಷ್ಣದೇವರಾಯ (ಕ್ರಿ.ಶ. 1509-1529) :** ಈ ವಂಶದ ಮೂಲ ಪುರುಷರ ಹೆಸರುಗಳಲ್ಲಿ ನಮಗೆ ತಿಳಿದು ಬಂದಿರುವುದು ನರಸನಾಯಕನ ತಂದೆ ಈಶ್ವರನಾಯಕನಿಂದ. ಕ್ರಿ.ಶ. 1505ರಿಂದ 1509ರವರೆಗೆ ರಾಜ್ಯವಾಳಿದ ವೀರನರಸಿಂಹನು ಸಾಮ್ರಾಜ್ಯದ ರಕ್ಷಕ, ಈ ವಂಶದ ಸ್ಥಾಪಕ ಮತ್ತು ಪ್ರಥಮ ದೊರೆಯಾದನು. ಇವನ ಮರಣಾನಂತರ ಈತನ ಮಲತಮ್ಮನಾದ ಕೃಷ್ಣದೇವರಾಯನು ಚಕ್ರವರ್ತಿಯಾದನು. ಕ್ರಿ.ಶ. 1509ರ ಶ್ರೀಕೃಷ್ಣ ಜನ್ಮಾಷ್ಟಮಿಯ ದಿನದಂದು ಈತನ ಪಟ್ಟಾಭಿಷೇಕವು ನೆರವೇರಿತು. ವೀರನರಸಿಂಹನು ಸಾಮ್ರಾಜ್ಯದಲ್ಲಿ ತಲೆದೋರಿದ್ದ ದಂಗೆಗಳನ್ನು ಅಡಗಿಸಿದ್ದರೂ ಕೂಡ ಕೃಷ್ಣದೇವರಾಯನು ಪಟ್ಟಾಭಿಷಿಕ್ತನಾಗುವಾಗ ಸಾಮ್ರಾಜ್ಯದಲ್ಲಿ ಸಂಪೂರ್ಣವಾಗಿ ಶಾಂತಿ ನೆಲೆಸಿರಲಿಲ್ಲ. ವೀರನರಸಿಂಹನು ದಂಗೆಗಳನ್ನಡಗಿಸಿದ್ದರೂ, ಕೆಲವು ಪಾಳೆಯಗಾರರು ಅವಿಧೇಯರಾಗಿ ವರ್ತಿಸುತ್ತಿದ್ದರು. ಕೇಂದ್ರ ಸರ್ಕಾರವು ಅವರನ್ನು ಹತೋಟಿಯಲ್ಲಿಡುವ ಸಾಮರ್ಥ್ಯವನ್ನು ಹೊಂದಿರಲಿಲ್ಲ. ಸಾಮ್ರಾಜ್ಯದ ಈಶಾನ್ಯ ಭಾಗದಲ್ಲಿ ಗಜಪತಿ ರಾಜನು ತನ್ನ ಅಧಿಕಾರವನ್ನು ಹೊಂದಿದ್ದನು. ಬಿಜಾಪುರದ ಆದಿಲ್‌ಷಾಹಿ ವಂಶದ ಸ್ಥಾಪಕನಾದ ಯೂಸುಫ್ ಆದಿಲ್‌ಖಾನನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲು ಹವಣಿಸುತ್ತಿದ್ದನು. ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರು ಪ್ರಾಬಲ್ಯಕ್ಕೆ ಬರುತ್ತಿದ್ದರು.

ಕೃಷ್ಣದೇವರಾಯನು ಸಿಂಹಾಸನಕ್ಕೆ ಬಂದ ಕೂಡಲೇ ತನ್ನ ಸಾಮ್ರಾಜ್ಯವನ್ನು ಉತ್ತರ ಮತ್ತು ಈಶಾನ್ಯಭಾಗಗಳಲ್ಲಿ ಅಧಿಕಾರರೂಢರಾಗಿದ್ದ ನೆರೆಹೊರೆಯವರೊಂದಿಗೆ ಯುದ್ಧದಲ್ಲಿ ಭಾಗವಹಿಸಿದನು. ಕ್ರಿ.ಶ. 1509ರ ಅಂತ್ಯದಲ್ಲಿ ಬಹಮನಿ ಸುಲ್ತಾನನು ತನ್ನ ಸರಾದರನ್ನೊಳಗೊಂಡು ವಿಜಯನಗರದವರೊಂದಿಗೆ ಧರ್ಮಯುದ್ಧವನನಾರಂಭಿಸಿದನು. ಮುಸ್ಲಿಮರ ಸೈನ್ಯವನ್ನು ವಿಜಯನಗರದ ಗಡಿಯಾದ ದೋನಿ ಎಂಬ ಸ್ಥಳದಲ್ಲಿ ವಿಜಯನಗರದ ಸೈನ್ಯವು ತಡೆಗಟ್ಟಿ ಅಲ್ಲಿಂದ ಹಿಮ್ಮೆಟ್ಟಿಸಿತು. ಈ ಯುದ್ಧದಲ್ಲಿ ಬಹಮನಿ ಸೈನ್ಯವು ಭಯಂಕರವಾದ ಸೋಲನ್ನು ಅನುಭವಿಸಿದ್ದಲ್ಲದೆ, ಸುಲ್ತಾನನಿಗೆ ಗಾಯಗಳುಂಟಾದವು. ಇಷ್ಟಕ್ಕೆ ಕೃಷ್ಣದೇವರಾಯನು ಹಿಮ್ಮೆಟ್ಟದೆ ಅವರನ್ನು ಬಹುದೂರ ಅಟ್ಟಿಸಿಕೊಂಡು ಹೋಗಿ ಕೋವಿಲಕೊಂಡದ ಹೊರವಲಯದಲ್ಲಿ ಮತ್ತೆ ಯುದ್ಧಕ್ಕೆ ಬರುವಂತೆ ಮಾಡಿದನು. ಈ ಯುದ್ಧವು ಬಹಮನಿ ಸುಲ್ತಾನರಿಗೆ ಹಿಂದೆ ದೋನಿಯ ಬಳಿ ನಡೆದ ಯುದ್ಧಕ್ಕಿಂತ ಮಾರಕವಾಯಿತು. ಯೂಸೂಫ್ ಆದಿಲ್‌ಖಾನನನ್ನು ಕೊಂದು ಕೃಷ್ಣದೇವರಾಯನು ಕೃಷ್ಣಾ ತುಂಗಭದ್ರಾನದಿಗಳ ದೊ ಅಬ್ ಪ್ರಾಂತ್ಯವನ್ನು ಮುತ್ತಿ, ಕ್ರಿ.ಶ. 1512ರಲ್ಲಿ ರಾಯಚೂರನ್ನು ವಶಪಡಿಸಿಕೊಂಡನು. ನಂತರ ಕೃಷ್ಣದೇವರಾಯನು ಹಾಗೆಯೇ ಮುಂದುವರಿದು ಗುಲ್ಬರ್ಗಾ ಕೋಟೆಯನ್ನು ವಶಪಡಿಸಿಕೊಂಡು ಬೀದರ್ ರಾಜ್ಯದ ಕಡೆ ಮುನ್ನುಗ್ಗಿದನು. ಬೀದರ್‌ನ ಸುಲ್ತಾನನಾದ ಬರೀದ್‌ಷಾನನ್ನು ಸೋಲಿಸಿ ಬೀದರ್ ಕೋಟೆಯನ್ನು ವಶಪಡಿಸಿಕೊಂಡನು. ಕೃಷ್ಣದೇವರಾಯನು ಮಹಮದ್‌ಷಾನನ್ನು ಸಿಂಹಾಸನದಲ್ಲಿ ಪುನರ್‌ಸ್ಥಾಪಿಸಿ "ಯವನ ಸ್ಥಾಪನಾಚಾರ್ಯ" ಎಂಬ ಬಿರುದನ್ನು

ಪಡೆದನು. ರಾಯನು ಶೂರಸೇನಾನಿ ಮಾತ್ರವಾಗಿರದೆ ದಕ್ಷ ರಾಜಕಾರಣಿಯಾಗಿದ್ದನು. ಅವನು ಸುಲ್ತಾನನನ್ನು ಮತ್ತೆ ಸಿಂಹಾಸನದಲ್ಲಿ ಕುಳ್ಳಿರಿಸಿ ಅಧಿಕಾರವನ್ನು ಕೊಟ್ಟದ್ದು ಏಕೆಂದರೆ ನೆರೆಹೊರೆಯ ಮುಸ್ಲಿಮರ ಶಕ್ತಿಯನ್ನು ಕುಗ್ಗಿಸಲು ಬಹಮನಿ ಸಾಮ್ರಾಜ್ಯವು ಇರುವವರೆಗೂ ದಕ್ಷಿಣದ ಮುಸಲ್ಮಾನರು ಶಾಂತಿಯಿಂದ ಇರಲು ಸಾಧ್ಯವಿಲ್ಲವೆಂದು ಅವನು ಮನಗಂಡಿದ್ದನು.

ಕೃಷ್ಣದೇವರಾಯನು ಕಾವೇರಿಯ ಮೇಲ್ದಂಡೆಯಲ್ಲಿ ಸ್ವತಂತ್ರನಾಗಿ ಆಳುತ್ತಿದ್ದ ಉಮ್ಮತ್ತೂರಿನ ಪಾಳೆಯಗಾರನ ಮೇಲೆ ದಂಡೆತ್ತಿ ಹೋದನು. ಉಮ್ಮತ್ತೂರು ಪಾಳೆಯಗಾರನ ಬಲವು ಅಭೇದ್ಯವಾದ ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರ ಕೋಟೆಗಳಲ್ಲಿದ್ದಿತು. ರಾಯನು ಶ್ರೀರಂಗಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡನು. ನಂತರ ಶಿವನಸಮುದ್ರ ಕೋಟೆಗೆ ಮುತ್ತಿಗೆ ಹಾಕಿದನು. ಶಿವನಸಮುದ್ರ ಕೋಟೆಯು ಬಲವಾಗಿದ್ದು ಸುಮಾರು ಒಂದು ವರ್ಷದವರೆಗೆ ಮುತ್ತಿಗೆ ಮುಂದುವರೆಯಿತು. ಆ ದೀರ್ಘಕಾಲದ ಮುತ್ತಿಗೆಯನ್ನು ಹಿಮ್ಮೆಟ್ಟಿಸುವ ಶಕ್ತಿ ಉಮ್ಮತ್ತೂರಿನ ಪಾಳೆಯಗಾರನಾದ ಗಂಗರಾಜನಿಗೆ ಇರಲಿಲ್ಲವಾದ್ದರಿಂದ ಅವನು ಕಾವೇರಿಯಲ್ಲಿ ತನ್ನ ಪ್ರಾಣತ್ಯಾಗ ಮಾಡಿಕೊಂಡನು. ಕೃಷ್ಣದೇವರಾಯನು ನಂತರ ಒರಿಸ್ಸಾದ ಗಜಪತಿರಾಜನಾದ ಪ್ರತಾಪರುದ್ರದೇವನ ಮೇಲೆ ದಂಡೆತ್ತಿ ಹೊರಟನು. ಗಜಪತಿಯು ವಿಜಯನಗರದ ಪ್ರಾಂತ್ಯಗಳಾದ ಕೊಂಡವೀಡು ಮತ್ತು ಉದಯಗಿರಿಗಳನ್ನು ವಶಪಡಿಸಿಕೊಂಡಿದ್ದನು. ವಿಜಯನಗರದ ಸೈನ್ಯವು ಕ್ರಿ.ಶ. 1513ರಲ್ಲಿ ಉದಯಗಿರಿಯನ್ನು ಮುತ್ತಿಗೆ ಹಾಕಿತು. ಈ ಸೈನ್ಯವನ್ನು ಹಿಮ್ಮೆಟ್ಟಿಸಲು ಗಜಪತಿಯು ಅಪಾರ ಸೈನ್ಯವನ್ನು ಕಳುಹಿಸಿದನು. ಆದರೆ ವಿಜಯನಗರದ ಸೇನೆಯು ಅವರನ್ನು ಯುದ್ಧದಲ್ಲಿ ಸೋಲಿಸಿ ಕೊಂಡವೀಡು ಕೋಟೆಗೆ ಮುತ್ತಿಗೆ ಹಾಕಿತು. ಮೂರು ತಿಂಗಳ ಪರಿಶ್ರಮದ ನಂತರ ಕೋಟೆಯ ಗೋಡೆಗಳನ್ನು ಒಡೆದು ರಾಜಧಾನಿಯಾದ ಕಟಕ್ ಪಟ್ಟಣವನ್ನು ವಶಪಡಿಸಿಕೊಳ್ಳಲಾಯಿತು. ಗಜಪತಿಯನ್ನು ಸೆರೆಹಿಡಿದು ವಿಜಯನಗರಕ್ಕೆ ಕಳುಹಿಸಲಾಯಿತು. ನಂತರ ವಿಜಯನಗರದ ಸೈನ್ಯವು ಕೃಷ್ಣಾನದಿಯ ಕಡೆ ಹೊರಟು ಬೆಜವಾಡ, ಕೊಂಡಪಲ್ಲಿ, ತೆಲಂಗಾಣ, ವೆಂಗಿ, ರಾಜಮಹೇಂದ್ರಿ ಮತ್ತು ಇತರ ಕೋಟೆಗಳನ್ನು ವಶಪಡಿಸಿಕೊಂಡಿತು.

ಇಂತಹ ಸನ್ನಿವೇಶವನ್ನು ಉಪಯೋಗಿಸಿಕೊಂಡು ಗೋಲ್ಕಂಡದ ಸುಲ್ತಾನನಾದ ಕುಲಿ ಕುತುಬ್ ಷಾ, ಕೊಂಡವೀಡು ಪ್ರಾಂತ್ಯದ ಕಡೆಗೆ ಮುಂದುವರಿದು ಕೋಟೆಗೆ ಮುತ್ತಿಗೆ ಹಾಕಿದನು. ಕೃಷ್ಣದೇವರಾಯನು ರಾಜಧಾನಿಗೆ ಹಿಂದಿರುಗಿದ ಕೂಡಲೇ ಶೂರನಾದ ಸಾಳುವ ತಿಮ್ಮನನ್ನು 20,000 ಸೈನ್ಯದೊಂದಿಗೆ ಆಕ್ರಮಣಕಾರರನ್ನು ಎದುರಿಸಲು ಕೊಂಡವೀಡು ಪ್ರಾಂತ್ಯಕ್ಕೆ ಕಳುಹಿಸಿದನು. ಸಾಳುವ ತಿಮ್ಮ ಕುತುಬ್‌ಷಾಹಿ ಸೈನ್ಯವನ್ನು ಸೋಲಿಸಿ ಸೈನ್ಯಾಧಿಕಾರಿ ಮತ್ತಿತರ ಅಧಿಕಾರಿಗಳನ್ನು ಸೆರೆಹಿಡಿದು ವಿಜಯನಗರಕ್ಕೆ ತಂದನು. ಇದೇ ಸಮಯದಲ್ಲಿ ಬಿಜಾಪುರದ ಇಸ್ಮಾಯಿಲ್ ಆದಿಲ್ ಷಹ ರಾಯಚೂರು ಪ್ರಾಂತ್ಯವನ್ನು ವಶಪಡಿಸಿಕೊಂಡನು. ರಾಯನು ಭಾರಿ ಸೈನ್ಯದೊಂದಿಗೆ ರಾಯಚೂರಿಗೆ ಹೋಗಿ ಅದನ್ನು ವಶಪಡಿಸಿಕೊಂಡನು. ಬಿಜಾಪುರ ಮತ್ತು ರಾಯಚೂರುಗಳನ್ನು ರಾಯನು ವಶಪಡಿಸಿಕೊಂಡು ಸೆರೆಮನೆಯಲ್ಲಿದ್ದ ಬಹಮನಿ ಸುಲ್ತಾನರ ವಂಶಕ್ಕೆ ಸೇರಿದ

ರಾಜಕುಮಾರನನ್ನು ಸುಲ್ತಾನನೆಂದು ಘೋಷಿಸಿದನು. ಈ ಯುದ್ಧದೊಂದಿಗೆ ಕೃಷ್ಣದೇವರಾಯನ ದಿಗ್ವಿಜಯಗಳು ಅಂತ್ಯವಾದವು. ಇವನು ಪೋರ್ಚುಗೀಸರೊಂದಿಗೆ ಸ್ನೇಹವನ್ನು ಬೆಳೆಸಿ ಇವರ ಮೂಲಕ ಅರೇಬಿಯಾ ಮತ್ತು ಪರ್ಶಿಯಾ ದೇಶಗಳಿಂದ ಕುದುರೆಗಳನ್ನು ತರಿಸುತ್ತಿದ್ದನು ಮತ್ತು ವ್ಯಾಪಾರವನ್ನು ವೃದ್ಧಿಗೊಳಿಸಿದನು.

ಕೃಷ್ಣದೇವರಾಯನು ತನ್ನ ಆರು ವರ್ಷದ ಮಗನಾದ ತಿರುಮಲನನ್ನು ಯುವರಾಜನನ್ನಾಗಿ ಮಾಡಿದನು. ಆದರೆ ಒಂದು ವರ್ಷದೊಳಗಾಗಿ ಯುವರಾಜನು ಮರಣವನ್ನು ಹೊಂದಿದನು. ಇದು ರಾಯನ ಜೀವನದಲ್ಲಿ ಒಂದು ದೊಡ್ಡ ಬಿರುಗಾಳಿಯೆಬ್ಬಿಸಿತು. ಸ್ವಲ್ಪ ದಿನಗಳ ನಂತರ ಅತಿಯಾದ ಖಾಯಿಲೆಯಿಂದ ರಾಯನು ನರಳಿ ತನ್ನ 42ನೇ ವಯಸ್ಸಿನಲ್ಲಿ ಅಂದರೆ 1529ರಲ್ಲಿ 18 ತಿಂಗಳಿನ ಮಗನೊಬ್ಬನನ್ನು ಬಿಟ್ಟು ಮರಣಹೊಂದಿದನು.

ಕೃಷ್ಣದೇವರಾಯನ 20 ವರ್ಷಗಳ ಆಳ್ವಿಕೆಯು ದಕ್ಷಿಣ ಭಾರತದ ಇತಿಹಾಸದಲ್ಲಿ ಎಂದೆಂದೂ ಮರೆಯದಂತಹ ಸ್ಮರಣಯೋಗ್ಯ ಕಾಲವಾಗಿದೆ. ಅವನು ಆದರ್ಶದೊರೆಯಾಗಿದ್ದು, ಪ್ರಜೆಗಳ ಹಿತಚಿಂತನೆಯೇ ರಾಜನ ಪ್ರಮುಖ ಕರ್ತವ್ಯವೆಂಬುದನ್ನು ತಿಳಿದು ಅದರಂತೆಯೇ ನಡೆಯುತ್ತಿದ್ದನು. ಅವನು ಸ್ವತಃ ಕವಿಯಾಗಿದ್ದುದಲ್ಲದೆ, ಕಲೆ ಮತ್ತು ಸಾಹಿತ್ಯಗಳಿಗೆ ಅಪಾರವಾದ ಪ್ರೋತ್ಸಾಹವನ್ನು ಕೊಟ್ಟಿದ್ದಾನೆ. ಹಾಗೆಯೇ ಅವನೊಬ್ಬ ದಕ್ಷ ಆಡಳಿತಗಾರನಾಗಿದ್ದನು. ಅವನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ತನ್ನ ಪರಾಕಾಷ್ಠತೆಯ ತುಟ್ಟತುದಿಯನ್ನು ತಲುಪಿದ್ದಿತು. ಪೇಸ್ ಹೇಳುವಂತೆ ಅಂತಹ ಆದರ್ಶ ದೊರೆಯನ್ನು ಕಾಣಬೇಕಾದರೆ ಬಹಳ ಕಷ್ಟ.

**ಅಚ್ಯುತರಾಯ (ಕ್ರಿ.ಶ. 1529-42) :** ಕ್ರಿ.ಶ. 1529ರಲ್ಲಿ ಕೃಷ್ಣದೇವರಾಯನ ಮರಣಾನಂತರ ಅವನ ಮಲತಮ್ಮನಾದ ಅಚ್ಯುತರಾಯನು ಸಿಂಹಾಸನವನ್ನೇರಿದನು. ಕೃಷ್ಣದೇವರಾಯನು ಪಟ್ಟಕ್ಕೆ ಬಂದ ನಂತರ ಅಚ್ಯುತರಾಯನನ್ನು ಸೆರೆಯಲ್ಲಿಟ್ಟಿದ್ದನು. ಆದರೆ ಕೃಷ್ಣದೇವರಾಯನು ತನ್ನ ಮರಣಕ್ಕೆ ಮುಂಚೆ ಅವನನ್ನು ಸೆರೆಯಿಂದ ಬಿಡುಗಡೆ ಮಾಡಿ ತನ್ನ ಉತ್ತರಾಧಿಕಾರಿಯಾಗಿ ನೇಮಕ ಮಾಡಿದನು. ಕೃಷ್ಣದೇವರಾಯನು ತನ್ನ ಚಿಕ್ಕ ಮಗ ಹಾಗೂ ಅಣ್ಣನ ಮಗ ವೀರನರಸಿಂಹನಿದ್ದಾಗ್ಯೂ ಅವರು ಸಿಂಹಾಸನಕ್ಕೆ ಯೋಗ್ಯರಲ್ಲವೆಂದು ತಿಳಿದಿದ್ದನು. ಅವನ ಇಬ್ಬರು ಮಲಸಹೋದರರಾದ ರಂಗ ಮತ್ತು ಅಚ್ಯುತರಲ್ಲಿ, ರಂಗನಿಗೆ ಸದಾಶಿವನೆಂಬ ಮಗನಿದ್ದನು. ಹಾಗಿದ್ದು ಕೂಡ ಕೃಷ್ಣದೇವರಾಯನು ಸದಾಶಿವನನ್ನು ಕಡೆಗಣಿಸಿ ಅಚ್ಯುತನನ್ನು ತನ್ನ ಉತ್ತರಾಧಿಕಾರಿಯಾಗಿ ಮಾಡಿದ್ದನು. ಅಚ್ಯುತರಾಯನು ಸಿಂಹಾಸನಾರೋಹಣ ಮಾಡಿದ ನಂತರ ಸಿಂಹಾಸನಕ್ಕಾಗಿ ಅಚ್ಚುತರಾಯ ಮತ್ತು ಅಳಿಯ ರಾಮರಾಯರಲ್ಲಿ ಜಗಳ ಪ್ರಾರಂಭವಾಯಿತು. ಈ ಜಗಳವು ಸುಮಾರು ಆರು ವರ್ಷಗಳ ಕಾಲ ಮುಂದುವರೆಯಿತು. ಆ ಕಾಲದಲ್ಲಿ ಬಿಜಾಪುರದ ಆದಿಲ್‌ಷಹನು ಎರಡು ಸಲ ರಾಜಧಾನಿಯ ಮೇಲೆ ದಾಳಿ ಮಾಡಿದನು. ಮೊದಲನೆಯ ದಾಳಿಯು ಅವನಿಗೆ ರಾಯಚೂರು ಮತ್ತು ಮುದಗಲ್ಲುಗಳನು ದೊರಕಿಸಿಕೊಟ್ಟಿತು. ಎರಡನೆಯ ದಾಳಿಯಲ್ಲಿ ಸುಲ್ತಾನನು ನಾಗಲಾಪುರದವರೆಗೂ ಧಾವಿಸಿ

ಅದನ್ನು ಕೆಡವಿದನು. ಅಚ್ಯುತರಾಯನು ವಿಜಯವಾಡದವರೆವಿಗೂ ಶತ್ರುಸೈನ್ಯದ ಬೆನ್ನಟ್ಟಿ ಹೋಗಿ ಅವರ ಆಕ್ರಮಣವನ್ನು ತಡೆದನು. ಇದಲ್ಲದೆ ಕಾಂಚಿ, ಕೇರಳ, ಉಮ್ಮತ್ತೂರು ಪ್ರದೇಶಗಳಲ್ಲಿ ದಂಗೆಯನ್ನು ಅಡಗಿಸುವುದರಲ್ಲಿ ಯಶಸ್ವಿಯಾದನು. ಇದೇ ಸಮಯದಲ್ಲಿ ಬಿಜಾಪುರದ ಸುಲ್ತಾನನಾದ ಇಸ್ಮಾಯಿಲ್ ಷಾ ಮರಣ ಹೊಂದಿದನು. ಬಿಜಾಪುರದ ಸಿಂಹಾಸನಕ್ಕಾಗಿ ಮಲ್ಲು ಮತ್ತು ಇಬ್ರಾಹಿಮ್‌ರ ನಡುವೆ ಅಂತರ್ಯುದ್ಧ ಪ್ರಾರಂಭವಾಯಿತು. ಇಂತಹ ಸನ್ನಿವೇಶವನ್ನು ಉಪಯೋಗಿಸಿಕೊಂಡು, ಅಚ್ಯುತರಾಯನು ರಾಯಚೂರನ್ನು ಮತ್ತೆ ತನ್ನ ವಶಪಡಿಸಿಕೊಂಡನು. ಅಚ್ಯುತರಾಯನ ಆಳ್ವಿಕೆಯ ಕಾಲದಲ್ಲಿ ಮಧುರೆ, ತಂಜಾವೂರು ಮತ್ತು ಇಕ್ಕೇರಿಗಳಲ್ಲಿ ಪಾಳೆಪಟ್ಟುಗಳು ಪ್ರವರ್ಧಮಾನಕ್ಕೆ ಬಂದವು. ಅಚ್ಯುತರಾಯನ ಆಳ್ವಿಕೆಯ ಪೂರ್ಣ ಕಾಲವು ಆಂತರಿಕ ದಂಗೆ, ಹೊರ ಆಕ್ರಮಣ ಮತ್ತು ರಾಮರಾಯನ ದುರಾಸೆಯನ್ನು ಅಡಗಿಸುವುದರಲ್ಲಿಯೇ ಕಳೆದು ಹೋಯಿತು.

ದುರದೃಷ್ಟವಶಾತ್ ಇಂತಹ ಸಂದರ್ಭದಲ್ಲಿ ಕೃಷ್ಣದೇವರಾಯನ ಎರಡನೇ ಮಗನು ಮರಣಹೊಂದಿದನು. ಅದೇ ಸಮಯದಲ್ಲಿ ಅಚ್ಯುತರಾಯನೂ ಮರಣ ಹೊಂದಿದನು. ಇವನ ಮರಣಾನಂತರ ಅಚ್ಯುತರಾಯನ ಮಗನಾದ ವೆಂಕಟನಿಗೂ ಅವನ ಸಹೋದರ ರಂಗನ ಮಗನಾದ ಸದಾಶಿವರಾಯನಿಗೂ ಸಿಂಹಾಸನಕ್ಕಾಗಿ ಕಲಹ ಪ್ರಾರಂಭವಾಯಿತು. ಅಚ್ಯುತರಾಯನು ಮರಣಹೊಂದಿದ ಕೂಡಲೇ ವೆಂಕಟನು ತನ್ನ ಸೋದರಮಾವನಾದ ಸಕಲ ತಿರುಮಲನ ಬಲದಿಂದ ಸಿಂಹಾಸನವನ್ನು ಆಕ್ರಮಿಸಿದನು ಮತ್ತು ಸಲಕ ತಿರುಮಲನು ಪೋಷಕನಾದನು. ಇಂತಹ ಸನ್ನಿವೇಶದಲ್ಲಿ ರಾಮರಾಯನು ರಂಗನ ಮಗನಾದ ಸದಾಶಿವರಾಯನ ಪರವಹಿಸಿ ಯುದ್ಧಕ್ಕೆ ತೊಡಗಿದನು. ಈ ಯುದ್ಧದಲ್ಲಿ ವೆಂಕಟ, ತಿರುಮಲ ಮತ್ತು ಅವನ ಬೆಂಬಲಿಗರು ಮರಣ ಹೊಂದಿದರು. ನಂತರ ರಾಮರಾಯನು ಸದಾಶಿವನನ್ನು ರಾಜನೆಂದು ಘೋಷಿಸಿದನು. ಆದರೆ ನಿಜವಾದ ಅಧಿಕಾರವು ರಾಮರಾಯನ ಕೈಯಲ್ಲಿ ಉಳಿಯಿತು. ಸುಮಾರು 8 ವರ್ಷಗಳ ಕಾಲ ರಾಮರಾಯನು ಸದಾಶಿವನ ಪೋಷಕನಾಗಿ ರಾಜ್ಯಭಾರ ಮಾಡಿದನು. ಸದಾಶಿವನು ಪ್ರಾಪ್ತ ವಯಸ್ಸಿಗೆ ಬಂದ ಕೂಡಲೇ ಅವನನ್ನು ಸೆರೆಮನೆಗೆ ಹಾಕಿ, ರಾಜನ ಅಧಿಕಾರವನ್ನು ಕಸಿದುಕೊಂಡು ತಾನೇ ರಾಜನಾಗಿ ಸುಮಾರು 15 ವರ್ಷಗಳ ಕಾಲ (1551-65) ಸಾಮ್ರಾಜ್ಯವನ್ನು ಆಳಿದನು.

**ರಾಮರಾಯ (1551-1565) :** ರಾಮರಾಯನು ತನ್ನ ಸಹೋದರನಾದ ತಿರುಮಲ ಮತ್ತು ವೆಂಕಟಾದ್ರಿಗಳನ್ನು ಮಂತ್ರಿಯನ್ನಾಗಿಯೂ ಮತ್ತು ಸೇನಾಧಿಪತಿಯನ್ನಾಗಿಯೂ ನೇಮಕ ಮಾಡಿದನು. ನಾಗರಿಕ ಮತ್ತು ಸೈನಿಕ ಹುದ್ದೆಗಳಿಗೆ ತನ್ನ ಬಂಧುಗಳನ್ನೂ ಹಾಗೂ ಆಪ್ತರನ್ನು ಅತ್ಯಂತ ಮುಖ್ಯವಾದ ಸ್ಥಾನಗಳಿಗೆ ನೇಮಕ ಮಾಡಿ ತನ್ನ ಅಧಿಕಾರವನ್ನು ಕೇಂದ್ರೀಕರಿಸಿಕೊಂಡನು. ಇವನು ತನ್ನ ಅಧಿಕಾರವನ್ನು ಬಲಪಡಿಸಿಕೊಳ್ಳಲು ವಂಶಪಾರಂಪರ್ಯವಾಗಿ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸುತ್ತಿದ್ದ ಅಧಿಕಾರಿಗಳನ್ನು ತೆಗೆದುಹಾಕಿ ಆ ಸ್ಥಾನಗಳಿಗೆ ತನ್ನ ಬೆಂಬಲಿಗರನ್ನು ನೇಮಕ ಮಾಡಿದನು. ಇಷ್ಟೇ ಅಲ್ಲದೆ ಇವರು ಸೈನ್ಯದಲ್ಲಿ ಮುಸ್ಲಿಂ ಸೈನಿಕರನ್ನು ಸೇರಿಸಿಕೊಂಡಿದ್ದೇ

ಅಲ್ಲದೆ ಅವರಿಗೆ ಉನ್ನತವಾದ ಮತ್ತು ಜವಾಬ್ದಾರಿಯುತವಾದ ಹುದ್ದೆಗಳನ್ನು ದಯಪಾಲಿಸಿದನು. ಇಂತಹ ಕಾರ್ಯಗಳಿಂದ ರಾಮರಾಯನು ಸಾಮ್ರಾಜ್ಯದಲ್ಲಿ ಅತೃಪ್ತಿಯುಂಟಾಗುವಂತೆ ಮಾಡಿದನು.

ಸಿಲೋನ್, ಕೇರಳ, ಚಂದ್ರಗಿರಿಯ ರಾಜರು ಮತ್ತು ಕನ್ಯಾಕುಮಾರಿಯ ಮುತ್ತಿನ ಸಂಪಿಗಳು ದಕ್ಷಿಣದಲ್ಲಿ ದಂಗೆಯೆದ್ದರು. ರಾಮರಾಯನ ಭ್ರಾತೃಗಳಾದ ಚಿನ್ನತಿಮ್ಮ ಮತ್ತು ವಿಠಲರು ಈ ದಂಗೆಯನ್ನು ಅಡಗಿಸಲು ದಕ್ಷಿಣದ ಕನ್ಯಾಕುಮಾರಿಯವರೆಗೆ ಹೋದರು. ರಾಮರಾಯನ ವಿದೇಶನೀತಿಯೆಂದರೆ ವಿಜಯನಗರವನ್ನು ಉನ್ನತ ಮಟ್ಟಕ್ಕೆ ತರುವುದೇ ಅವನ ಮುಖ್ಯ ಗುರಿಯಾಗಿತ್ತು. ವಿಜಯನಗರದ ಇತಿಹಾಸದಲ್ಲಿ ಮೊಟ್ಟಮೊದಲಿಗೆ ತನ್ನ ನೆರೆಯ ಮುಸ್ಲಿಂ ರಾಜ್ಯಗಳೊಂದಿಗೆ ವಿದೇಶ ನೀತಿಯಲ್ಲಿ ಬದಲಾವಣೆಯನ್ನು ಕಾಣಬಹುದು. ಇಲ್ಲಿಯವರೆವಿಗೂ ವಿಜಯನಗರವು ಬಹಮನಿ ರಾಜ್ಯದೊಡನೆ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ್ದಿತು. ಈ ವೇಳೆಗೆ ಬಹಮನಿ ಸಾಮ್ರಾಜ್ಯವು ಬಿಜಾಪುರ, ಅಹಮದ್‌ನಗರ, ಗೋಲ್ಕೊಂಡ, ಬೀದರ್ ಮತ್ತು ಬಿರಾರ್ ಎಂಬ ಐದು ಸ್ವತಂತ್ರ ರಾಜ್ಯಗಳಾಗಿ ಒಡೆದುಹೋಗಿತ್ತು. ಈ ರಾಜ್ಯಗಳು ತಮ್ಮವರೇ ಆದ ಮುಸ್ಲಿಂ ರಾಜರುಗಳನ್ನು ಸದೆಬಡಿಯಲು ವಿಜಯನಗರದೊಂದಿಗೆ ಸ್ನೇಹವನ್ನು ಬೆಳೆಸಲು ಮುಂದಾದರು. ಇಂತಹ ಅವಕಾಶವನ್ನು ಉಪಯೋಗಿಸಿಕೊಂಡು ರಾಮರಾಯನು ತನ್ನ ನೆರೆಯ ರಾಜ್ಯವಾದ ಮುಸ್ಲಿಂ ದೊರೆಗಳ ಆಂತರಿಕ ವ್ಯವಹಾರದಲ್ಲಿ ಕೈಹಾಕತೊಡಗಿದನು. ಮುಸ್ಲಿಂರೊಡನೆ ಇಂತಹ ಸಖ್ಯವನ್ನು ಬೆಳೆಸಿದ ವಿಜಯನಗರದ ಅರಸರಲ್ಲಿ ರಾಮರಾಯನೇ ಮೊದಲಿಗನು. ರಾಮರಾಯನು ತನ್ನ ಬುದ್ಧಿಚಾತುರ್ಯದಿಂದ ಮುಸ್ಲಿಂ ದೊರೆಗಳನ್ನು ಒಬ್ಬರ ಮೇಲೊಬ್ಬರನ್ನು ಎತ್ತಿಕಟ್ಟಿ ತಾನು ತನ್ನ ಬಲವನ್ನು ಹೆಚ್ಚಿಸಿಕೊಂಡನು. ಇದರಲ್ಲಿ ಕೃಷ್ಣಾ ತುಂಗಭದ್ರ ನದಿಗಳ ಪ್ರದೇಶವನ್ನು ವಶಪಡಿಸಿಕೊಳ್ಳುವುದು ಮತ್ತು ಮುಸ್ಲಿಂರನ್ನು ಕೃಷ್ಣಾ ನದಿಯ ಉತ್ತರದವರೆಗೂ ಓಡಿಸುವುದೇ ಇವನ ಆಸೆಯಾಗಿತ್ತು.

ಕ್ರಿ.ಶ. 1542ರಿಂದ 1564ರವರೆಗೆ ಹಲವಾರು ಯುದ್ಧಗಳು ವಿಜಯನಗರ ಮತ್ತು ಬಹಮನಿ ರಾಜ್ಯಗಳೊಡನೆ ನಡೆಯಿತು. ಈ ಯುದ್ಧಗಳಲ್ಲಿ ವಿಜಯನಗರ, ಅಹಮದ್‌ನಗರ ಮತ್ತು ಬಿಜಾಪುರಗಳು ಪ್ರಮುಖ ಪಾತ್ರವನ್ನು ವಹಿಸಿದ್ದವು. ಉಳಿದ ಎರಡು ರಾಜ್ಯಗಳು ಒಂದೊಂದು ಸಲ ಒಂದೊಂದು ಪಕ್ಷವನ್ನು ವಹಿಸುತ್ತಿದ್ದವು. ಈ ಯುದ್ಧದ ಉದ್ದೇಶ ರಾಯಚೂರು, ಮುದಗಲ್ಲು, ಕಲ್ಯಾಣ ಮತ್ತು ಶೋಲಾಪುರ ಮುಂತಾದ ಬಲವಾದ ಕೋಟೆಗಳನ್ನು ವಶಪಡಿಸಿಕೊಳ್ಳುವುದು ಹಾಗೂ ಮತ್ಸರ ಮತ್ತು ಸ್ವಪ್ರತಿಷ್ಠೆಗಳೇ ಅವರ ಘರ್ಷಣೆಗಳಿಗೆ ಮುಖ್ಯ ಕಾರಣಗಳಾಗಿದ್ದವು. ಕ್ರಿ.ಶ. 1544ರಲ್ಲಿ ರಾಮರಾಯನು ಬಿಜಾಪುರದ ಸುಲ್ತಾನರ ವಿರುದ್ಧವಾಗಿ ಅಹಮದ್‌ನಗರದ ಸುಲ್ತಾನನೊಂದಿಗೆ ಒಪ್ಪಂದವನ್ನು ಮಾಡಿಕೊಂಡನು. ಅನಂತರ ಅವನು ಅಹಮದ್‌ನಗರ, ಗೋಲ್ಕೊಂಡ ಮತ್ತು ಬೀದರ್ ಸುಲ್ತಾನರೊಂದಿಗೆ ಸೇರಿಕೊಂಡು ಬಿಜಾಪುರದ ಸುಲ್ತಾನನನ್ನು ದೂರವಿರಿಸಿದನು. ಕ್ರಿ.ಶ. 1557ರಲ್ಲಿ ಬಿಜಾಪುರದ ಸುಲ್ತಾನನಾದ ಇಬ್ರಾಹಿಂಷಾನ ಮರಣಾನಂತರ ಅವನ ಮಗನಾದ ಅಲಿ ಆದಿಲ್‌ಷಾ ಪಟ್ಟಕ್ಕೆ ಬಂದನು. ಆದಿಲ್ ಷಾ ರಾಮರಾಯ, ಅಹಮದ್‌ನಗರ ಮತ್ತು

ಗೋಲ್ಕೊಂಡದ ಸುಲ್ತಾನನೊಂದಿಗೆ ಸ್ನೇಹವನ್ನು ಸಂಪಾದಿಸಲು ಇಚ್ಛಿಸಿದನು. ಹಾಗೆಯೇ ಬಿಜಾಪುರದ ಸುಲ್ತಾನನು ಎರಡು ರಾಜ್ಯಗಳಿಗೂ ರಾಯಭಾರಿಗಳನ್ನು ಕಳುಹಿಸಿದನು. ರಾಮರಾಯನು ರಾಯಭಾರಿಯನ್ನು ಆದರದಿಂದ ಗೌರವಿಸಿದನು. ಆದರೆ ಉಳಿದ ಸುಲ್ತಾನರುಗಳು ರಾಯಭಾರಿಯನ್ನು ಗೌರವಿಸಲಿಲ್ಲ. ಇದರಿಂದ ರಾಮರಾಯನು ಬಿಜಾಪುರದ ಸ್ನೇಹವನ್ನು ಗಳಿಸಿಕೊಂಡು ಅಹಮದ್ ನಗರ ಮತ್ತು ಗೋಲ್ಕೊಂಡ ಸುಲ್ತಾನರ ಪ್ರಕೋಪಕ್ಕೆ ಬಲಿಯಾದನು. ಬಿಜಾಪುರದ ಸುಲ್ತಾನನು ಅಹಮದ್ ನಗರ ಮತ್ತು ಗೋಲ್ಕೊಂಡ ಸುಲ್ತಾನರುಗಳ ನಡವಳಿಕೆಗಳಿಂದ ಕೆರಳಿ, ಕಲ್ಯಾಣ ಮತ್ತು ಶೋಲಾಪುರ ಕೋಟೆಗಳನ್ನು ಪುನಃ ಸ್ವಾಧೀನಪಡಿಸುವಂತೆ ತಿಳಿಸಿದನು. ಆದಿಲ್ ಷಾ ರಾಮರಾಯನನ್ನು ಸಹಾಯ ಬೇಡಿದನು. ರಾಮರಾಯನು ಅಹಮದ್ ನಗರದ ವಿರುದ್ಧವಾಗಿ ದೊಡ್ಡ ಸೈನ್ಯವನ್ನು ಕಳುಹಿಸುವುದಾಗಿ ಒಪ್ಪಿಕೊಂಡನು. ಈ ಯುದ್ಧದಲ್ಲಿ ಅಹಮದ್‌ನಗರದ ಸುಲ್ತಾನನಾದ ಹುಸೇನ್ ನಿಜಾಮ್ ಷಾ ಸಂಪೂರ್ಣವಾಗಿ ಸೋತು ಹೋದನು. ಅಹಮದ್ ನಗರವನ್ನು ಶತ್ರು ಸೈನ್ಯವು ಕೊಳ್ಳೆಹೊಡೆಯಿತು. ಈ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಹುಸೇನ್ ನಿಜಾಮ್‌ಷಾ ಗೋಲ್ಕೊಂಡದ ಇಬ್ರಾಹಿಂ ಕುತುಬ್ ಷಾ ಮೈತ್ರಿಯನ್ನು ಗಳಿಸಿದನು. ಈ ಸೈನ್ಯಗಳು ಕಲ್ಯಾಣದ ಕೋಟೆಗೆ ಮುತ್ತಿಗೆ ಹಾಕಿದವು. ಬಿಜಾಪುರದ ಸುಲ್ತಾನನು ರಾಮರಾಯ ಮತ್ತು ಬೀದರ್ ಸುಲ್ತಾನನಿಂದ ಸಹಾಯ ಪಡೆದು ಕಲ್ಯಾಣದ ಕಡೆಗೆ ಹೊರಟನು. ಈಗಲೂ ಅಹಮದ್ ನಗರ ಮತ್ತು ಗೋಲ್ಕೊಂಡ ಸುಲ್ತಾನರು ಸೋತು ಒಪ್ಪಂದ ಮಾಡಿಕೊಂಡು ತಮಗೆ ಸೇರಿದ್ದ ಕೋವಿಲಕೊಂಡ, ಗಣಪುರ ಮತ್ತು ಪಾಂಗಳಗಳನ್ನು ಬಿಟ್ಟುಕೊಟ್ಟರು. ಕ್ರಿ.ಶ. 1564ರ ವೇಳೆಗೆ ರಾಮರಾಯನ ಸೈನ್ಯ ಹಾಗೂ ವ್ಯವಹಾರ ಚಾತುರ್ಯದ ಫಲವಾಗಿ ವಿಜಯನಗರವು ತನ್ನ ವೈಭವಾಧಿಕಾರದ ಪರಾಕಾಷ್ಟತೆಯನ್ನು ತಲುಪಿತು. ಕೃಷ್ಣದೇವರಾಯನ ಮರಣಾನಂತರ ಕಳೆದುಕೊಂಡಿದ್ದ ರಾಜ್ಯಗಳನ್ನು ಮತ್ತೆ ವಶಪಡಿಸಿಕೊಂಡರಲ್ಲದೆ ಸಾಮ್ರಾಜ್ಯವು ಕೃಷ್ಣಾನದಿಯವರೆವಿಗೂ ವಿಸ್ತರಿಸಿತು.

ಆದರೆ ಸುಲ್ತಾನರುಗಳಿಗೆ ರಾಮರಾಯನ ಈ ಕುಟಿಲ ನೀತಿಯನ್ನು ಗ್ರಹಿಸುವುದಕ್ಕೆ ಬಹಳ ಕಾಲ ಬೇಕಾಗಲಿಲ್ಲ. ತಮ್ಮಲ್ಲಿದ್ದ ದ್ವೇಷಾಸೂಯೆಗಳೇ ರಾಮರಾಯನ ಉತ್ಕರ್ಷಕ್ಕೆ ಕಾರಣವಾದುವೆಂದು ಬಹುಬೇಗ ತಿಳಿದರು. ನಾವೆಲ್ಲರೂ ಒಟ್ಟಿಗೆ ಸೇರಿದರೆ ರಾಮರಾಯನ ಪ್ರಗತಿಯನ್ನು ಮುರಿಯಬಹುದೆಂದು ನಿರ್ಣಯಿಸಿದರು. ಈ ಒಂದು ಗ್ರಹಿಕೆಯು ನಾಲ್ವರು ಸುಲ್ತಾನರುಗಳು ಒಟ್ಟಿಗೆ ಸೇರಿಸಿತು. ಹಿಂದಿನ ಭಿನ್ನಾಭಿಪ್ರಾಯಗಳು ಹಾಗೂ ದ್ವೇಷಾಸೂಯೆಗಳನ್ನು ಬದಿಗೊತ್ತಿ ತಮ್ಮತಮ್ಮಲ್ಲಿ ವಿವಾಹಸಂಬಂಧವನ್ನೇರ್ಪಡಿಸಿಕೊಂಡರು. ಇವರೆಲ್ಲರೂ ಒಟ್ಟಿಗೆ ಸೇರಿ ರಾಮರಾಯನನ್ನು ಧ್ವಂಸಮಾಡಬೇಕೆಂಬುದಾಗಿ ಗುರಿಯಿಟ್ಟರು. ಹಾಗೆಯೇ ಭಾರಿಪ್ರಮಾಣದಲ್ಲಿ ಯುದ್ಧಸಿದ್ಧತೆಗಳನ್ನು ಮಾಡಿಕೊಂಡು 1564ನೇ ಡಿಸೆಂಬರ್ 25ರಂದು ಸುಲ್ತಾನರ ಸೈನ್ಯ ಪಡೆಗಳು ವಿಜಯನಗರದ ಮೇಲೆ ಧಾಳಿಮಾಡಲು ಬಿಜಾಪುರದಿಂದ ಹೊರಟವು. ಕೃಷ್ಣಾ ನದಿಯು ಶತ್ರುರಾಜ್ಯದ ಉತ್ತರದ ಗಡಿಯಾಗಿದ್ದುದರಿಂದ ಆ ನದಿಯನ್ನು ದಾಟಿ ಶತ್ರುರಾಜ್ಯದಲ್ಲಿಯೇ ಯುದ್ಧವನ್ನು ನಡೆಸಬೇಕೆಂದು ಅವರು ತೀರ್ಮಾನಿಸಿದರು. ಅವರು 3 ಲಕ್ಷದ ಸೈನ್ಯದೊಂದಿಗೆ ನಡೆಯುತ್ತಾ ಕೃಷ್ಣಾನದಿಯ ಉತ್ತರಕ್ಕೆ 25 ಮೈಲಿ ದೂರವಿರುವ ತಾಳಿಕೋಟೆಯ ಬಳಿ ಬೀಡುಬಿಟ್ಟರು.

ಯುದ್ಧಕ್ಕೆ ರಾಮರಾಯನು ಧೃತಿಗೆಡಲಿಲ್ಲ. ಸಾಮ್ರಾಜ್ಯದ ನಾನಾ ಭಾಗಗಳಿಂದ ಸೈನಿಕರನ್ನು ಕರೆಸಿ ಯುದ್ಧಕ್ಕೆ ಸನ್ನದ್ಧನಾದನು. ರಾಮರಾಯನಿಗೆ ಸುಮಾರು 80 ವರ್ಷಗಳಾಗಿದ್ದರೂ ಅವನಲ್ಲಿ ಶೂರತ್ವಕ್ಕೇನೂ ಕೊರತೆಯಿರಲಿಲ್ಲ. ಅವನು ಅವನ ತಮ್ಮಂದಿರಾದ ತಿರುಮಲ ಮತ್ತು ವೆಂಕಟಾದ್ರಿಗಳೊಂದಿಗೆ ತಾಳೀಕೋಟೆಗೆ ಬಂದು ಶತ್ರುಸೈನ್ಯವನ್ನು ಎದುರಿಸಲು ನಿಂತನು. 1565ರ ಜನವರಿ 23ರಂದು ಯುದ್ಧವು ಆರಂಭವಾಯಿತು. ಮೈತ್ರಿ ಸೈನ್ಯವನ್ನು ಬಲಗಡೆ ಬಿಜಾಪುರದ ಸುಲ್ತಾನನೂ, ಎಡಗಡೆ ಬೀದರ್‌ನ ಸುಲ್ತಾನನೂ, ಮತ್ತು ಗೋಲ್ಕೊಂಡ ಮತ್ತು ಅಹಮದ್ ನಗರದ ಸುಲ್ತಾನರು ಮಧ್ಯದಲ್ಲಿಯೂ ನಡೆಸುತ್ತಿದ್ದರು. ರಾಮರಾಯನು ತನ್ನ ಬಲಗಡೆ ವೆಂಕಟಾದ್ರಿಯನ್ನು, ಎಡಗಡೆ ತಿರುಮಲನನ್ನು ಮತ್ತು ಮಧ್ಯದಲ್ಲಿ ತಾನು ನಿಂತು ಸೈನ್ಯವನ್ನು ನಡೆಸುತ್ತಿದ್ದನು. ಮೊದಲನೆಯ ಸುತ್ತಿನಲ್ಲಿ ಗೋಲ್ಕೊಂಡದ ಸೈನ್ಯವು ಸೋತುಹೋಯಿತು. ಮೊದಮೊದಲು ವಿಜಯಲಕ್ಷ್ಮಿಯು ವಿಜಯನಗರದವರಿಗೆ ಒಲಿದು ಬರುತ್ತಿದ್ದ ಹಾಗೆ ಕಾಣಿಸುತ್ತಿತ್ತು. ಅಷ್ಟರಲ್ಲಿ ಅಹಮದ್‌ನಗರದ ಸೈನ್ಯವು ಒಂದೇ ಸಮನೆ ಗುಂಡಿನ ಮಳೆಯನ್ನು ಸುರಿಸಲಾರಂಭಿಸಿತು. ವಿಜಯನಗರದ ಸೈನಿಕರು ಹೆಚ್ಚಿನ ಸಂಖ್ಯೆಯಲ್ಲಿ ಗುಂಡಿಗೆ ಬಲಿಯಾದರು. ಸೈನ್ಯದಲ್ಲಿ ಕೋಲಾಹಲವೆದ್ದಿತು. ರಾಮರಾಯನು ವೃದ್ಧನಾಗಿದ್ದುದರಿಂದ ಪಲ್ಲಕ್ಕಿಯಲ್ಲಿ ಕುಳಿತು ಧಾವಿಸಿ ಹೊರಟನು. ಈ ಕೋಲಾಹಲದಲ್ಲಿ ಒಂದು ಆನೆಯು ಎದುರು ದಿಕ್ಕಿನಿಂದ ರಾಮರಾಯನ ಕಡೆಗೆ ರಭಸದಿಂದ ಮುನ್ನುಗ್ಗಿತು, ಆನೆಯು ತಮ್ಮನ್ನು ತುಳಿದೀತೆಂಬ ಭಯದಿಂದ ಪಲ್ಲಕ್ಕಿಯನ್ನು ಹೊತ್ತಿದ್ದ ಬೋವಿಗಳು ಪಲ್ಲಕ್ಕಿಯನ್ನು ಅಲ್ಲೇ ಬಿಟ್ಟು ಓಡಿದರು. ಶತ್ರುಪಕ್ಷದ ಸೈನಿಕರು ರಾಮರಾಯನನ್ನು ಬಂಧಿಸಿ ಹುಸೇನ್ ನಿಜಾಮ್‌ಷಾನ ಬಳಿಗೆ ತಂದರು. ಅವನು ರಾಮರಾಯನ ತಲೆಯನ್ನು ಕಡಿದು ಆ ರುಂಡವನ್ನು ಒಂದು ಭರ್ಜಿಗೆ ಸಿಕ್ಕಿಸಿ ಮೇಲಕ್ಕೆತ್ತಿ ಹಿಡಿದನು. ಹೀಗೆ ಅತಿ ಕ್ರೂರವಾದ ರೀತಿಯಲ್ಲಿ ಯುದ್ಧವು ಕೊನೆಗೊಂಡಿತು. ಈ ಯುದ್ಧವು ವಿಜಯನಗರ ಸಾಮ್ರಾಜ್ಯಕ್ಕೆ ಎಂತಹ ಆಘಾತವನ್ನುಂಟು ಮಾಡಿತೆಂದರೆ ಮತ್ತೆ ಅದು ಎಂದಿಗೂ ತನ್ನ ವೈಭವದ ಕಾಲವನ್ನು ಕಾಣಲಿಲ್ಲ. ರಾಮರಾಯನ ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿಯು ರಾಜಧಾನಿಗೆ ಓಡಿಹೋಗಿ ಕೈಗೆ ಸಿಕ್ಕ ಸಂಪತ್ತನ್ನು ತೆಗೆದುಕೊಂಡು ಚಂದ್ರಗಿರಿಯಲ್ಲಿ ನೆಲೆಸಿದರು. ಜಯಶೀಲರಾದ ಮುಸ್ಲಿಂ ಸೈನಿಕರು ರಾಜಧಾನಿಗೆ ನುಗ್ಗಿ ಅಲ್ಲಿ ಸುಮಾರು 5 ತಿಂಗಳ ಕಾಲ ತಮ್ಮ ಕೊಳ್ಳೆಯನ್ನು ನಡೆಸಿದರು. ಅಲ್ಲಿನ ಜನರನ್ನು ಕರುಣೆಯಿಲ್ಲದೆ ಕೊಂದು, ದೇವಸ್ಥಾನಗಳನ್ನು ಮತ್ತು ಅರಮನೆಗಳನ್ನು ತಮ್ಮ ಭರ್ಜಿಗಳಿಂದ ನೆಲಸಮ ಮಾಡಿದರು. ಇಂತಹ ಕೊಳ್ಳೆಯು ಪ್ರಪಂಚದಲ್ಲಿ ಎಲ್ಲೂ ಕಂಡುಬರುವುದಿಲ್ಲ ಎಂದು ಹೇಳಬಹುದು. ಈ ಯುದ್ಧವು ದಕ್ಷಿಣ ಭಾರತದಲ್ಲಿ ಹಿಂದೂ ಸಾಮ್ರಾಜ್ಯವನ್ನು ಕೊನೆಗಾಣಿಸಿ ಮುಸ್ಲಿಮರ ಅಭ್ಯುದಯವನ್ನು ಸಾರಿತು.

**ಈ. ಅರವೀಡು ವಂಶ :** ತಾಳಿಕೋಟೆಯ ಯುದ್ಧಾನಂತರ ತಿರುಮಲನು ಯುದ್ಧರಂಗದಿಂದ ತಪ್ಪಿಸಿಕೊಂಡು ರಾಜಧಾನಿಗೆ ಬಂದು, ಚಕ್ರವರ್ತಿಯ ಖಜಾನೆಯನ್ನು ಮತ್ತು ಬಂಧಿತನಾಗಿದ್ದ ಸದಾಶಿವರಾಯನನ್ನು ಕರೆದುಕೊಂಡು ಚಂದ್ರಗಿರಿಗೆ ಹೋದನು. ತಿರುಮಲನು ಮತ್ತೆ ಸದಾಶಿವರಾಯನನ್ನು ಬಂಧನದಲ್ಲಿಟ್ಟು ಉಳಿದ ಸಾಮ್ರಾಜ್ಯಕ್ಕೆ ತಾನೇ ರಾಜನಾದನು. ತಿರುಮಲನು ವಿಜಯನಗರವನ್ನು ಮುತ್ತಿ

ಹಿಂದಿನ ವೈಭವಕ್ಕೆ ತರಬೇಕೆಂದು ಕನಸು ಕಂಡನು. ಆದರೆ ಬಹಳ ಶೀಘ್ರದಲ್ಲಿಯೇ ಅದು ಸಾಧ್ಯವಿಲ್ಲವೆಂದು ಅರಿತನು. ಕ್ರಿ.ಶ. 1567ರಲ್ಲಿ ಅವನು ತನ್ನ ರಾಜಧಾನಿಯನ್ನು ಪೆನುಗೊಂಡೆಗೆ ವರ್ಗಾಯಿಸಿದನು. ವಿಜಯನಗರ ಸಾಮ್ರಾಜ್ಯದ ಉತ್ತರ ಭಾಗವು ಸುಲ್ತಾನರ ಅಧೀನದಲ್ಲಿದ್ದುದರಿಂದ, ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿ ತನ್ನ ಅಧಿಕಾರವನ್ನು ಬಲಪಡಿಸಿಕೊಂಡನು. ಕ್ರಿ.ಶ. 1570ರಲ್ಲಿ ಬಂಧನದಲ್ಲಿದ್ದ ಸದಾಶಿವರಾಯನು ಮರಣಹೊಂದಿದ ನಂತರ ತಿರುಮಲನು ತಾನೇ ರಾಜನೆಂದು ಘೋಷಿಸಿಕೊಂಡನು. ಸದಾಶಿವರಾಯನ ಮರಣದೊಂದಿಗೆ ತುಳುವ ವಂಶವು ಅಂತ್ಯಗೊಂಡಿತು. ತಿರುಮಲ ಸಿಂಹಾಸನಾರೋಹಣದೊಂದಿಗೆ ನಾಲ್ಕನೆಯ ವಂಶವಾದ ಅರವೀಡು ವಂಶದ ಆಳ್ವಿಕೆಯು ಆರಂಭವಾಯಿತು. ತಿರುಮಲನು ಸಾಮ್ರಾಜ್ಯವನ್ನು ಭಾಷೆಗಳ ಆಧಾರದ ಮೇಲೆ ಮೂರು ಭಾಗಗಳನ್ನಾಗಿ ವಿಂಗಡಿಸಿ, ತನ್ನ ಮಕ್ಕಳನ್ನು ಅವುಗಳ ವೈಸರಾಯ್‌ಗಳಾಗಿ ನೇಮಿಸಿದನು. ಜೇಷ್ಠಪುತ್ರನಾದ ಶ್ರೀರಂಗನನ್ನು ಆಂಧ್ರಪ್ರದೇಶಕ್ಕೂ, ಎರಡನೆಯ ಮಗನಾದ ರಾಮರಾಯನನ್ನು ಕರ್ನಾಟಕ ಪ್ರದೇಶಕ್ಕೂ ಮೂರನೆಯ ಮಗನಾದ ವೆಂಕಟಪತಿಯನ್ನು ತಮಿಳುನಾಡಿಗೂ ವೈಸರಾಯಿಗಳನ್ನಾಗಿ ನೇಮಿಸಿದನು. ಕ್ರಿ.ಶ. 1572ರಲ್ಲಿ ತಿರುಮಲನ ಮಗನಾದ ಶ್ರೀರಂಗರಾಯನು ಪಟ್ಟಕ್ಕೆ ಬಂದನು.

ಶ್ರೀರಂಗರಾಯನು ಪಟ್ಟಕ್ಕೆ ಬಂದ ಕೂಡಲೇ ಬಿಜಾಪುರ ಮತ್ತು ಗೋಲ್ಕೊಂಡದ ಸುಲ್ತಾನರು ದಕ್ಷಿಣ ಭಾಗದ ಮೇಲೆ ದಂಡೆತ್ತಿ ಬಂದರು. ಶ್ರೀರಂಗನು ರಾಜಧಾನಿಯಾದ ಪೆನುಗೊಂಡೆಯನ್ನು ತನ್ನ ಅಧಿಕಾರಿಗಳ ಬೆಂಬಲದಿಂದ ಶತ್ರುಧಾಳಿಯಿಂದ ರಕ್ಷಿಸಿದನು. ಆದರೆ ಉತ್ತರದ ಆದವಾನಿ ಮುಂತಾದ ಪ್ರದೇಶಗಳು ಶತ್ರು ವಶವಾದವು. ಸಾಮ್ರಾಜ್ಯವು ದಿನ ದಿನಕ್ಕೆ ಕ್ಷೀಣಸ್ಥಿತಿಗೆ ಬರಲಾರಂಭಿಸಿತು. ಕ್ರಿ.ಶ. 1585ರಲ್ಲಿ ಶ್ರೀರಂಗರಾಯನು ಮರಣಹೊಂದಿದ ನಂತರ ಅವನ ತಮ್ಮನಾದ ವೆಂಕಟಪತಿಯು ಪಟ್ಟಕ್ಕೆ ಬಂದನು. ಇವನು ಪಟ್ಟಕ್ಕೆ ಬಂದ ನಂತರ ಮುಸ್ಲಿಂ ಸೈನ್ಯವು ಪೆನುಗೊಂಡಕ್ಕೆ ಮುತ್ತಿಗೆ ಹಾಕಿತು. ಆದರೆ ಜಗದೇವ ಮತ್ತು ತಂಜಾವೂರಿನ ರಘುನಾಥ ಇವರ ಬೆಂಬಲದಿಂದ ವೆಂಕಟಪತಿಯು ಮುಸ್ಲಿಮರನ್ನು ಎದುರಿಸಿ ಹಿಮ್ಮೆಟ್ಟಿಸಿದನು. ಬಿಜಾಪುರದ ಇಬ್ರಾಹಿಂ ಆದಿಲ್‌ಷಾ ಕ್ರಿ.ಶ. 1592ರಲ್ಲಿ ಮತ್ತೆ ಪೆನುಗೊಂಡೆಗೆ ಮುತ್ತಿಗೆ ಹಾಕಿದನು. ಆದರೆ ಸುಲ್ತಾನನು ಅತೀವ ನಷ್ಟದೊಂದಿಗೆ ತನ್ನ ಮುತ್ತಿಗೆ ಹಿಂತೆಗೆದುಕೊಳ್ಳಬೇಕಾಯಿತು. ಮೊಘಲ್ ಚಕ್ರವರ್ತಿಯಾದ ಅಕ್ಬರನು ವಿಜಯನಗರದೊಂದಿಗೆ ಸ್ನೇಹದಿಂದಿದ್ದುದಲ್ಲದೆ ಕ್ರಿ.ಶ. 1600 ಮತ್ತು 1604ರಲ್ಲಿ ಎರಡು ಬಾರಿ ವೆಂಕಟಪತಿಯ ಆಸ್ಥಾನಕ್ಕೆ ರಾಯಭಾರಿಗಳನ್ನು ಕಳುಹಿಸಿದ್ದನು. ವೆಂಕಟಪತಿಯು ಅರವೀಡು ರಾಜರಲ್ಲಿ ಮುಖ್ಯನಾದವನು. ಅವನು ಶತ್ರುಗಳನ್ನು ತನ್ನ ಸೀಮೆಯಿಂದ ಹಿಮ್ಮೆಟ್ಟಿಸಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಅವನು ಸಾಮ್ರಾಜ್ಯದ ವೈಭವವನ್ನು ಮತ್ತೆ ಚಿಗುರಿಸಲು ಶ್ರಮಪಟ್ಟನು. ಈ ಚಿಗುರು ದೀಪವು ನಂದಿಹೋಗುವಾಗ ಕಡೆಯಲ್ಲಿ ಉಂಟಾಗುವ ಒಂದು ಪ್ರಕಾಶಮಾನವಾದ ಬೆಳಕಿನಂತಿತ್ತು ಅಷ್ಟೆ. ಇವನ ಮರಣಾನಂತರ ಸಾಮ್ರಾಜ್ಯದಲ್ಲಿ ಅಂತರ್ಯುದ್ಧ ಪ್ರಾರಂಭವಾಯಿತು.

ವೆಂಕಟಪತಿಗೆ ಮಕ್ಕಳಿರಲಿಲ್ಲವಾದ್ದರಿಂದ ಅವನ ಅಣ್ಣ ರಾಮರಾಯನ ಮಗನಾದ ಶ್ರೀರಂಗನು ಪಟ್ಟಕ್ಕೆ ಬಂದನು. ಇವನು ಸಮರ್ಥನಾಗಿರಲಿಲ್ಲವಾದ್ದರಿಂದ, ಇಂತಹ ಸನ್ನಿವೇಶವನ್ನು ಉಪಯೋಗಿಸಿಕೊಂಡು

ವೆಂಕಟಪತಿಯ ಭಾವಮೈದುನನಾದ ಜಗರಾಯನು ರಾಣಿ ಬಾಯಮ್ಮನಲ್ಲಿ ಹುಟ್ಟಿದ ಮಗನಾದ ಚಿಕ್ಕರಾಯನ ಪರವಾಗಿ ಸಿಂಹಾಸನವನ್ನು ಆಕ್ರಮಿಸಿ ಚಿಕ್ಕರಾಯನನ್ನು ರಾಜನೆಂದು ಘೋಷಿಸಿದನು. ಶ್ರೀರಂಗ ಮತ್ತು ಅವನ ಸಂಸಾರವನ್ನು ಸೆರೆಹಿಡಿಯಲಾಯಿತು. ಶ್ರೀರಂಗನ ಪರವಹಿಸಿ ವಿಜಯನಗರ ಸಾಮ್ರಾಜ್ಯದ ನಂಬಿಕಸ್ಥ ಹಾಗೂ ಬೆಂಬಲಿಗನಾದ ಎಚ್ಚಮನಾಯಕನು ಯುದ್ಧಕ್ಕೆ ನಿಂತನು. ಜಗರಾಯನು ಶ್ರೀರಂಗರಾಯ ಮತ್ತು ಅವನ ಸಂಸಾರವನ್ನು ಕೊಲೆ ಮಾಡಿಸಿದನು. ರಾಮದೇವನೆಂಬ ಹನ್ನೆರಡು ವರ್ಷದ ಬಾಲಕನು ತಪ್ಪಿಸಿಕೊಂಡನು. ಕ್ರಿ.ಶ. 1616ರಲ್ಲಿ ಕಾವೇರಿ ನದಿಯ ದಡದಲ್ಲಿ ತೊಪೂರ್ ಎಂಬಲ್ಲಿ ಎಚ್ಚಮನಿಗೂ ಮತ್ತು ಜಗರಾಯನಿಗೂ ಭಯಂಕರವಾದ ಯುದ್ಧವು ನಡೆಯಿತು. ಯುದ್ಧದಲ್ಲಿ ಜಗರಾಯ ಮರಣ ಹೊಂದಿದನು ಮತ್ತು ಎಚ್ಚಮನು ಜಯವನ್ನು ಪಡೆದನು. ಎಚ್ಚಮ ಮತ್ತು ಇತರ ಬೆಂಬಲಿಗರು ರಾಮದೇವನನ್ನು ರಾಜನನ್ನಾಗಿ ಮಾಡಿ ಎಚ್ಚಮನು ಪೋಷಕನಾದನು. ನಂತರದಲ್ಲಿ ರಾಮರಾಯನ ಮೊಮ್ಮಗನಾದ ಎರಡನೆ ವೆಂಕಟಪತಿಯನ್ನು ಯುವರಾಜನನ್ನಾಗಿ ಮಾಡಲಾಯಿತು. ಆದರೆ ರಾಮದೇವನಾಗಲೀ ಅಥವಾ ವೆಂಕಟಪತಿಯಾಗಲೀ ಸಾಮ್ರಾಜ್ಯದ ಅವನತಿಯನ್ನು ತಪ್ಪಿಸಲು ಶ್ರಮಿಸಲಿಲ್ಲ. ಮೇಲ್ನೋಟಕ್ಕೆ ಶಾಂತಿ ನೆಲೆಸಿರುವಂತೆ ಕಂಡುಬಂದರೂ ಸಾಮ್ರಾಜ್ಯದಲ್ಲಿ ಸಾಮಂತಾಧಿಕಾರಿಗಳು ದಂಗೆಗಳನ್ನೆಬ್ಬಿಸುತ್ತಿದ್ದರು. ಇಷ್ಟೇ ಸಾಲದೆಂಬಂತೆ ಭಯಂಕರ ಕ್ಷಾಮವು ರಾಜ್ಯವನ್ನು ಅಲ್ಲೋಲ ಕಲ್ಲೋಲವಾಗಿಸಿತು. ಈ ವಂಶದ ಕೊನೆಯ ರಾಜನಾದ ಶ್ರೀರಂಗನ ನಿರ್ಗಮನದೊಂದಿಗೆ ವಿಜಯನಗರ ಸಾಮ್ರಾಜ್ಯವು ಕರ್ನಾಟಕದ ರಾಜಕೀಯ ರಂಗದಲ್ಲಿ ಶಾಶ್ವತವಾದ ಪರದೆಯನ್ನೆಳೆಯಿತು.

ಶ್ರೀರಂಗನು ಬಿಜಾಪುರ ಮತ್ತು ಗೋಲ್ಕೊಂಡ ರಾಜ್ಯಗಳೊಡನೆ ಸೋತು 1646ರಲ್ಲಿ ಬಿದನೂರಿಗೆ ಓಡಿಹೋದನು. ಅಲ್ಲಿಂದ ಮುಂದೆ ಮೈಸೂರಿಗೂ ಹೋಗಿ ಸುಮಾರು 3 ದಶಕಗಳ ಕಾಲ ಬದುಕಿದ್ದನು. ಅಲ್ಲಿ ಇಲ್ಲಿ ದೊರೆತ ಹಲವಾರು ಮಂದಿ ಬೆಂಬಲಿಗರ ಸಹಾಯದಿಂದ ಮತ್ತೆ ಸಾಮ್ರಾಜ್ಯವನ್ನು ಕೂಡಿಸಲು ಪ್ರಯತ್ನಪಟ್ಟರೂ ಸಾಧ್ಯವಾಗದೆ ಕ್ರಿ.ಶ. 1681ರಲ್ಲಿ ಮರಣ ಹೊಂದಿದನು. ವಿಜಯನಗರ ಸಾಮ್ರಾಜ್ಯದ ಅಂತ್ಯದ ವೇಳೆಯಲ್ಲಿ ಕೆಲವು ಅಧೀನ ರಾಜರುಗಳು ಮತ್ತು ಸ್ಥಳೀಯ ಮುಖ್ಯರು ತಮ್ಮ ಬಲವನ್ನು ಹೆಚ್ಚಿಸಿಕೊಂಡು ಕರ್ನಾಟಕ ಪ್ರದೇಶದಲ್ಲಿ ಪ್ರಾಬಲ್ಯಕ್ಕೆ ಬಂದರು. ಅವರಲ್ಲಿ ಮುಖ್ಯರಾದವರೆಂದರೆ ಕೆಳದಿ ನಾಯಕರು ಮತ್ತು ಮೈಸೂರಿನ ಒಡೆಯರು. ಇವರು ವಿಜಯನಗರದ ಕೊನೆಯ ರಾಜನವರೆಗೂ ಅವನಿಗೆ ನಿಷ್ಠೆಯಿಂದಿರುತ್ತಾ, ವಿಜಯನಗರದ ಸಾಮ್ರಾಜ್ಯದ ಭವ್ಯ ಪರಂಪರೆಯನ್ನು ಮುಂದುವರಿಸುವುದರಲ್ಲಿ ಯಶಸ್ವಿಯಾದರು.

ವಿಜಯನಗರ ಸಾಮ್ರಾಜ್ಯ ಸ್ಥಾಪಕರೆಂಬ ಐತಿಹಾಸಿಕ ಪ್ರಶಸ್ತಿ ಸಂಗಮವಂಶದ ಹರಿಹರ ಬುಕ್ಕರಿಗೆ ಸೇರಿದ್ದರೂ ಅವರ ಪ್ರಯತ್ನಕ್ಕೂ ಸಾಹಸಕ್ಕೂ ನಾಡಿನ ಮೂಲೆ ಮೂಲೆಗಳಿಂದ ವಿವಿಧ ವೃತ್ತಿಯ ನಾನಾ ಜಾತಿಯ ಸಾಮಾನ್ಯ ಜನ ತೋರಿದ ಹಾರ್ದಿಕ ಬೆಂಬಲ ವಿಜಯನಗರ ಸಾಮ್ರಾಜ್ಯದ ಅಭಿವೃದ್ಧಿಗೆ ಪುಷ್ಟಿಯನ್ನು ಕೊಟ್ಟಿತು. ಈ ಜನ ಜಾಗೃತಿ ಮತ್ತು ಒಮ್ಮತ ಭಾವನೆ ದಕ್ಷಿಣ ಭಾರತದಲ್ಲಿ ಮೂಡಿಬಂದದ್ದು ಇದೇ ಮೊದಲು ಎಂದರೆ ತಪ್ಪಾಗಲಾರದು. **(ಕರ್ನಾಟಕ ಚರಿತ್ರೆ ಸಂಪುಟ ವಿವಿಧ ಪುಟಗಳಿಂದ, 1997)**

# ಅಧ್ಯಾಯ 2

# ವಿಜಯನಗರ ಕಾಲದ ಸಾಮಾಜಿಕ ಸ್ಥಿತಿಗತಿಗಳು

ಸಾಮಾಜಿಕ ವ್ಯವಸ್ಥೆಯು ಗತಿಶೀಲವಾದುದು. ಅದು ಸಾಮಾಜಿಕ ಸಂಸ್ಥೆಗಳೆಂಬ ಚಕ್ರಗಳ ಮೇಲೆ ಚಲಿಸುವ ಒಂದು ಮಹಾರಥ. ಅತಿಯಾದ ಒಡನಾಟವೆಂಬುದೇ ಆ ಚಕ್ರಗಳ ತಿರುಗಣೆ, ಸಾಮಾಜಿಕ ಸಂಬಂಧಗಳೇ ಅವುಗಳ ಅರೆಗಳು. ಈ ಮಹಾರಥ ಸರಾಗವಾಗಿ ಸುಲಲಿತವಾಗಿ ಮುಂದುವರಿದು ಯಶಸ್ವಿಯಾಗಿ ಗಮ್ಯಸ್ಥಾನವನ್ನು ತಲುಪಬೇಕಾದರೆ ಅದನ್ನು ಆಧ್ಯಾತ್ಮಿಕತೆ ಎಂಬ ಹೆದ್ದಾರಿಯಲ್ಲಿ ಮುನ್ನಡೆಸಬೇಕು. ಅದರ ಚಕ್ರಗಳಿಗೆ ಸಾರ್ವಕಾಲಿಕವೂ ಜೀವನಾಧಾರಕವೂ ಹಾಗೂ ಜೀವನೋತ್ಕರ್ಷಕವೂ ಆದ ಪರಮ ಮೌಲ್ಯಗಳೆಂಬ ಎಣ್ಣೆಯನ್ನು ಹಾಕುತ್ತಿರಬೇಕು. ಅದರಲ್ಲಿರುವ ಅಮೂಲ್ಯ ನಿಧಿಯಾಗಿರುವ ಸಂಸ್ಕೃತಿಯನ್ನು ರಕ್ಷಿಸಿ, ಪೋಷಿಸಿ ಶ್ರೀಮಂತಗೊಳಿಸುತ್ತಿರಬೇಕು. ಕರ್ನಾಟಕವನ್ನು ಈ ಬಗೆಯ ಸುಸಂಗತ ಸಾಮಾಜಿಕ ಸುವ್ಯವಸ್ಥೆ ಮತ್ತು ಸಂಪತ್ಸಮೃದ್ಧ ಸಂಸ್ಕೃತಿಯ ತವರೂರನ್ನಾಗಿಸಿದ ಕೀರ್ತಿ ಇಲ್ಲಿ ಆಳಿದ ರಾಜಮನೆತನಗಳಿಗೆ ಸಲ್ಲಬೇಕು.

ವಿಜಯನಗರ ಸಾಮ್ರಾಜ್ಯ ಪರಂಪರೆಯಿಂದ ಅನುಷ್ಠಾನದಲ್ಲಿದ್ದ ವರ್ಣ ಅಥವಾ ಜಾತಿ ಪದ್ಧತಿಯ ಆಧಾರದ ಮೇಲೆ ನಿಂತಿದ್ದಿತು. ಧರ್ಮಶಾಸ್ತ್ರಗಳ ಪ್ರಕಾರ ವರ್ಣಗಳು ನಾಲ್ಕು. ಅವುಗಳ ಪೈಕಿ ಮೊದಲನೆಯ ಅಥವಾ ಉನ್ನತ ವರ್ಣ ಅಥವಾ ಜಾತಿಗೆ ಬ್ರಾಹ್ಮಣ ಅಥವಾ ಪುರೋಹಿತ ವರ್ಗಕ್ಕೆ ಸೇರಿದ್ದಿತು. ಕ್ಷತ್ರಿಯರೆಂದು ಕರೆಯುವ ಯೋಧ ವರ್ಣ ಶ್ರೇಣಿಯಲ್ಲಿ, ಎರಡನೆಯ ಸ್ಥಾನವನ್ನೂ, ವ್ಯಾಪಾರಸ್ಥ ಎಂದು ವೈಶ್ಯವರ್ಗಕ್ಕು ಮೂರನೆಯ ಮತ್ತು ಉಳಿದವರನ್ನು ಶೂದ್ರರೆಂದು ಪರಿಗಣಿಸಿ ನಾಲ್ಕನೆಯ ಸ್ಥಾನವನ್ನು ನಿರ್ದೇಶಿಸಲಾಗಿತ್ತು. ಶೂದ್ರವರ್ಗದಲ್ಲಿ ಕುಶಲಕರ್ಮಿಗಳು, ಕಾರ್ಮಿಕರೂ ಮತ್ತು ವ್ಯವಸಾಯ ವೃತ್ತಿಯಲ್ಲಿ ನಿರತರಾದವರೂ ಇದ್ದರು. ಈ ನಾಲ್ಕು ವಿಭಾಗಗಳಿಂದ ಮನ್ನಣೆ ಪಡೆಯದ ಅನೇಕ ಜಾತಿಗಳಿದ್ದವು. ಈ ಜಾತಿಗಳಿಗೆ ತಮ್ಮದೇ ಆದ ನಡೆನುಡಿ ಆಚಾರ ವಿಚಾರಗಳು ಇದ್ದವು. ಸಾಮಾನ್ಯವಾಗಿ ಜಾತಿ ಜಾತಿಗಳ ನಡುವೆ ವಿವಾಹ ಸಂಬಂಧ ಏರ್ಪಡುತ್ತಿರಲಿಲ್ಲ.

ಸಾಂಪ್ರದಾಯಿಕವಾಗಿ 101 ಜಾತಿಗಳು ಹಿಂದಿನಿಂದಲೂ ಇದ್ದವೆಂದು ತಿಳಿದುಬಂದರೂ ಸಹಾ ಅವುಗಳ ಸಂಖ್ಯೆ ಸುಮಾರು 864 ಎಂಬುದಾಗಿ ರೈಸ್ 19ನೇ ಶತಮಾನದ ದಾಖಲೆಗಳಿಂದ ಅಭಿಪ್ರಾಯಪಟ್ಟಿದ್ದಾರೆ.[1]

ಒಂದು ಜಾತಿಯಿಂದ ಉಪಜಾತಿ ಹೇಗೆ ಹುಟ್ಟುತ್ತಿತ್ತು ಎಂಬುದನ್ನು ರೈಸ್‌ರವರು ಹೀಗೆ ವಿವರಿಸುತ್ತಾರೆ. ಕೆಲವು ಕುಟುಂಬಗಳು ಅಥವಾ ವ್ಯಕ್ತಿಗಳು ಪ್ರಾಯಶಃ ಮುಖ್ಯ ಸಮೂಹದಿಂದ ಬೇರ್ಪಟ್ಟಾಗ ಮತ್ತು ದೇಶದ ಇನ್ನೊಂದು ಭಾಗಕ್ಕೆ ವಲಸೆ ಹೋದಾಗ ಅಥವಾ ಹೊಸ ಹೆಸರನ್ನು ಇಟ್ಟುಕೊಂಡಾಗ ಅಥವಾ ಅವರ ನೆರೆ ಹೊರೆಯವರು ಅವರ ಗುಂಪಿಗೆ ಹೊಸ ನಾಮಕರಣ ಮಾಡಿದಾಗ ನವೀನವಾದ ಉಪಜಾತಿ ಹುಟ್ಟುತ್ತಿತ್ತು.

ಆದುದರಿಂದ ಜಾತಿಗಳ ಸಂಖ್ಯೆ ಹೆಚ್ಚಾಗುತ್ತಿತ್ತು ಎಂಬುದಾಗಿ ಅವರು ಅಭಿಪ್ರಾಯಪಡುತ್ತಾರೆ. ಜಗಳಗಳು ಏರ್ಪಟ್ಟಾಗ ಮತ್ತು ಜಾತಿ ಎರಡು ಗುಂಪುಗಳಾಗಿ ವಿಭಜನೆಗೊಂಡಾಗ ಪ್ರತಿ ಗುಂಪಿಗೂ ಒಬ್ಬ ಪ್ರಭಾವಶಾಲಿ ವ್ಯಕ್ತಿ ಅಥವಾ ಕುಟುಂಬ ನಾಯಕತ್ವ ವಹಿಸಿಕೊಳ್ಳುತ್ತಿತ್ತು. ಅಂತಹ ಗುಂಪುಗಳು ತಮ್ಮೊಳಗೆ ವಿವಾಹ ಮೊದಲಾದ ಯಾವುದೇ ಸಂಪರ್ಕ ಇಟ್ಟುಕೊಳ್ಳುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಪ್ರತ್ಯೇಕವಾದ ಜಾತಿ ಅಥವಾ ಅದರ ಉಪವಿಭಾಗ ಶಾಶ್ವತವಾಗಿ ರಚಿಸಲ್ಪಡುತ್ತಿತ್ತು. ಇದಲ್ಲದೆ ಇಂತಹ ಉಪಜಾತಿ ಮೂಲಜಾತಿಗಿಂತ ಭಿನ್ನವಾದ ತನ್ನದೇ ಆದ ಲಕ್ಷಣಗಳನ್ನು ಪಡೆದುಕೊಳ್ಳುತ್ತಿತ್ತು.[2]

ವಿವಿಧ ಜಾತಿಗಳ ವೃತ್ತಿಗಳನ್ನು ಕುರಿತು ಸರ್ವಜ್ಞನ ಅಭಿಪ್ರಾಯಗಳಿವು -

೧. ಎಮ್ಮೆ ಹಯನವು ಲೇಸು / ಕಂಬಗುಂಬುವು ಲೇಸು
ಸುಮ್ಮನ ಒಡವೆ ಬರಲೇಸು - ಊರಿಗೊಬ್ಬ
ಕಮ್ಮಾರ ಲೇಸು ಸರ್ವಜ್ಞ ೧೨೪೦

೨. ತುಪ್ಪ ಬೋನವ ಲೇಸು / ಉಪ್ಪರದ ಗುಡಿ ಲೇಸು
ಅಪ್ಪ ಬಾರೆಂಬ ಮಗಲೇಸು - ಊರಿಗೊಬ್ಬ
ಕಮ್ಮಾರಲೇಸು ಸರ್ವಜ್ಞ ೧೨೪೦

೩. ಕಂಚಿಯ ಫಲಲೇಸು / ಮಿಂಚು ಮುಗಿಲಿಗೆ ಲೇಸು
ಕೆಂಚನ ಹೆಣ್ಣು ಇರಲೇಸು - ಊರಿಗೊಬ್ಬ
ಪಂಚಾಳ ಲೇಸು ಸರ್ವಜ್ಞ ೧೨೪೦

೪. ಹಡಗು ಗಾಳಿಗೆ ಲೇಸು / ಗುಡುಗು ಮುಗಿಲಿಗೆ ಲೇಸು
ಒಡಹುಟ್ಟಿದಣ್ಣ ಇರಲೇಸು - ಊರಿಗೊಬ್ಬ
ಬಡಗಿಯೇ ಲೇಸು ಸರ್ವಜ್ಞ

೫. ಹಂತು ತೋಟಕೆ ಲೇಸು / ತುಂಬು ಕೆರೆಗೆ ಲೇಸು
ಸಂಬಾರ ಲೇಸು ಅಡುಗೆಗೆ - ಊರಿಗೊಬ್ಬ
ಕುಂಬಾರ ಲೇಸು ಸರ್ವಜ್ಞ ೧೨೪೩

೬. ಅಗುಸೆ ಊರಿಗೆ ಲೇಸು / ಸೊಗಸು ವಿದ್ಯಕೆ ಲೇಸು
ಬಗಸೆ ಉಳ್ಳವನ ಗಳೆ ಲೇಸು - ಊರಿಗೊಬ್ಬ
ಅಗಸನೇ ಲೇಸು ಸರ್ವಜ್ಞ

ಸರ್ವಜ್ಞನ ಈ ವಚನಗಳು ಅಂದಿನ ವರ್ಗೀಕೃತ ವೃತ್ತಿ ವ್ಯವಸ್ಥೆಯನ್ನು ಅನಾವರಣಗೊಳಿಸುತ್ತದೆ. ವಿಜಯನಗರ ಕಾಲದಲ್ಲಿ ವೃತ್ತಿನಿರತ ಜಾತಿಗಳನ್ನು ಫಣಗಳೆಂದು ಕರೆಯುತ್ತಿದ್ದರು. ಅವುಗಳ ಸಂಖ್ಯೆ

18 ಇದ್ದಿತು. ಕೃಷಿ, ವ್ಯಾಪಾರ ಮತ್ತು ಕರಕುಶಲ ಕಲೆಗೆ ಸೇರಿದ ವೃತ್ತಿಪರ ಜಾತಿಗಳು ಈ ಹದಿನೆಂಟು ಫಣಗಳಲ್ಲಿ ಸೇರ್ಪಡೆಯಾಗಿದ್ದವು. ಈ ಫಣಗಳನ್ನೆ ಬಲಗೈ ಮತ್ತು ಎಡಗೈ ಎಂಬ ಎರಡು ಗುಂಪುಗಳಾಗಿ ವಿಭಾಗಿಸುತ್ತಿದ್ದರು. ಹೆಚ್ಚಿನ ಸಂಖ್ಯೆಯ ಜಾತಿಗಳು ಈ ಎರಡೂ ಗುಂಪಿನ ಯಾವುದಾದರೂ ಒಂದು ವರ್ಗಕ್ಕೆ ಸೇರಿದ್ದವು. ಎಲ್ಲಾ ಬ್ರಾಹ್ಮಣರು ಕ್ಷತ್ರಿಯರು ಮತ್ತು ಹೆಚ್ಚಿನ ಶೂದ್ರ ಜಾತಿಗಳು ಈ ಫಣಗಳ ವಿಭಜನೆಗೆ ಸೇರಿರಲಿಲ್ಲ. ಬಿ.ಎಲ್. ರೈಸ್‌ರವರ ಪ್ರಕಾರ ಬಲ ಮತ್ತು ಎಡ ಗುಂಪಿನ ಜಾತಿಗಳು ಹೀಗಿದ್ದವು.[3]

| ಬಲಗೈ ಗುಂಪು | ಎಡಗೈ ಗುಂಪು |
|---|---|
| 1. ಬಣಜಿಗ | 1. ಪಾಂಚಾಲರೂ |
| 2. ಒಕ್ಕಲಿಗ | a. ಕಂಚುಗಾರ |
| 3. ಗಾಣಿಗ | b. ಕಮ್ಮಾರ |
| 4. ರಂಗಾರ | c. ಕಲ್ಲುಕುಟಿಗ |
| 5. ಲಾಡ | d. ಬಡಗಿ |
| | e. ಅಕ್ಕಸಾಲೆ |
| 6. ಗುಜರಾತಿ | 2. ಭೇರಿ |
| 7. ಕಾಮಾಟಿ | 3. ದೇವಾಂಗ |
| 8. ಜೈನ | 4. ಹೆಗ್ಗಾಣಿಗ |
| 9. ಕುರುಬ | 5. ಗೊಲ್ಲ ಅಥವಾ ಧನಪಾಲ |
| 10. ಕುಂಬಾರ | 6. ಬೇಡ |
| 11. ಅಗಸ | 7. ಯಾಕುಲ |
| 12. ಬೆಸ್ತ | 8. ಪಲ್ಲಿ ಅಥವಾ ತಿಗಳ |
| 13. ಪದ್ಮಸಾಲೆ | 9. ಮಾದಿಗ |
| 14. ನಾಯಿಂದ | |
| 15. ಉಪ್ಪಾರ | |
| 16. ಚಿತ್ರಗಾರ | |
| 17. ಗೊಲ್ಲ | |
| 18. ಹೊಲೆಯ | |

ಕ್ರಿ.ಶ. 1800ರಲ್ಲಿ ಈ ಪ್ರದೇಶದಲ್ಲಿ ಪ್ರವಾಸ ಮಾಡಿದ ಬುಕ್ಯಾನನ್ನನು ತನ್ನ ಗ್ರಂಥದಲ್ಲಿ ಎಡ ಮತ್ತು ಬಲಗೈಜಾತಿಗಳ ಪಟ್ಟಿಯನ್ನು ನೀಡಿದ್ದಾನೆ. ಅದು ಇಂತಿದೆ.[4]

(ಅ) ಬಲಗೈ ಗುಂಪು (ಬ) ಎಡಗೈ ಗುಂಪು

1. ಬಣಜಿಗರು

   a. ಪಂಚಮ ಬಣಜಿಗರು

   (ವ್ಯಾಪಾರವರ್ಗ, ಲಿಂಗಧರಿಸುವವರು)

   b. ತೆಲುಗು ಬಣಜಿಗರು

   (ವಿಷ್ಣು ಆರಾಧಕರು)

2. ಒಕ್ಕಲಿಗರು
3. ಜೋತಿ ಫಣ (ಎಣ್ಣೆ ತಯಾರಕರು)
4. ರಂಗಾರು
5. ಲಾಡರು
6. ಗುಜರಾತಿಗಳು
7. ಕೋಮಟಿಗರು
8. ಜೈನರು
9. ಕುರುಬರು
10. ಕುಂಬಾರರು
11. ಅಗಸರು
12. ಬೆಸ್ತರು
13. ಪದ್ಮಸಾಲಿಯರು
14. ನಾಯಿಂದಿರು
15. ಉಪ್ಪಾರರು
16. ಚಿತ್ರಗಾರು
17. ಗೊಲ್ಲರು
18. ಹೊಲೆಯರು

1. ಪಾಂಚಾಲರು

   a. ಕಮ್ಮಾರರು

   b. ಬಡಗಿ

   c. ಕುಂಸುಗಾರು

   d. ಕಲ್ಲು ಬಡಿಗರು

   e. ಅಕ್ಕಸಾಲಿ

2. ಭೇರಿ ಶೆಟ್ಟಿ
3. ದೇವಾಂಗ
4. ಹೆಗ್ಗಾಣಿಗರು
5. ಗೊಲ್ಲರು
6. ಫಲಿವನ್ನು
7. ಪಲವನ್ನು
8. ಬೇಡರು
9. ಮಾದಿಗರು

ಈ ಎರಡೂ ಪಟ್ಟಿಗಳ ನಡುವೆ ವ್ಯತ್ಯಾಸಗಳು ಇವೆ. ಆದರೆ ರೈಸ್‌ರೇ ಹೇಳುವಂತೆ ಅನೇಕ ವೇಳೆ 18ಕ್ಕೂ ಹೆಚ್ಚಿನ ವೃತ್ತಿಪರ ಜಾತಿಗಳು 18 ಪಣದ ಒಂದು ವಿಭಾಗಕ್ಕೆ ತಮ್ಮನ್ನು ಸೇರಿಸಿಕೊಳ್ಳುವ ಸಂಪ್ರದಾಯವಿತ್ತೆಂದು ಹೇಳಿರುವುದನ್ನು ಗಮನಿಸಬೇಕು.

ಬಣಜಿಗರು ಮತ್ತು ಲಿಂಗ ಬಣಜಿಗರು ಬಲಗೈ ಗುಂಪಿನ ಮುಖಂಡರಾಗಿದ್ದರು. ಮೇಲೆ ತಿಳಿಸಿರುವ ಹದಿನೆಂಟು ಪಣಗಳು ಬಲಗುಂಪಿನದ್ದೆಂದೂ ಒಂಬತ್ತು ಪಣಗಳು ಎಡಗೈ ಗುಂಪಿನದ್ದೆಂದೂ, ಅವರು ಭಾವಿಸಿದ್ದರು. ಪಾಂಚಾಲರು ಮತ್ತು ನಗರ್ತಕರು ಎಡಗೈ ಗುಂಪಿನ ಮುಖಂಡರಾಗಿದ್ದರು. ಅವರು, ಹದಿನೆಂಟು ಪಣಗಳು ಎರಡು ಗುಂಪಿಗೆ ಸೇರಿದವೆಂದೂ ವಾದ ಮಾಡುತ್ತಿದ್ದರು. ಒಟ್ಟಿನಲ್ಲಿ ಇದು ಕುಶಲ ಕರ್ಮಿಗಳ ಮತ್ತು ವ್ಯಾಪಾರಸ್ಥರ ನಡುವಿನ ಸಾಮಾಜಿಕ ಹೋರಾಟದ ಒಂದು ಉದಾಹರಣೆಯಾಗಿದೆ. ಒಂದೊಂದು ಗುಂಪಿನಲ್ಲಿ ಸೇರುವ ಜಾತಿಗಳು ಇಷ್ಟೆ ಎಂದು ಸಂಪೂರ್ಣವಾದ ಏಕರೀತಿಯ ಪೂರ್ಣಸತ್ಯದ ಪಟ್ಟಿಯನ್ನು ನೀಡುವುದು ಅಸಾಧ್ಯದ ಕೆಲಸವೇ ಎನ್ನುವ ಅಭಿಪ್ರಾಯ ಸರಿಯೆಂದು ಕಾಣಿಸುತ್ತದೆ.[5] ಇಂತಹ ವಿಂಗಡಣೆಗೆ ಪ್ರಮಾಣ ಬದ್ಧ ಗ್ರಂಥಗಳು ಎರಡು (1) ಸಹ್ಯಾದ್ರಿ ಕಾಂಡ (2) ಎಲ್ಲೇಶವಿಜಯ. ಈ ಎರಡೂ ಗ್ರಂಥಗಳು 14ನೇ ಶತಮಾನದ್ದೆಂದು ಅಭಿಪ್ರಾಯಪಡಲಾಗಿದೆ.[6] ಈ ಎರಡೂ ಗುಂಪುಗಳ ನಡುವೆ ಆಗಾಗ್ಗೆ ಹಕ್ಕು ಭಾದ್ಯತೆಗಳಿಗಾಗಿ, ಪ್ರತಿಷ್ಠೆ ಗೌರವಗಳ ಸಲುವಾಗಿ, ಮೇಲು ಕೀಳೆಂಬ ಕಾರಣಗಳಿಗಾಗಿ ಘರ್ಷಣೆಗಳಾಗುತ್ತಿದ್ದವೆಂದು ತಿಳಿದು ಬರುತ್ತದೆ[7]. ಉದಾಹರಣೆಗೆ ಬಲಗೈಗುಂಪಿನವರು ಹನ್ನೆರಡು ಕಂಬದ ಮಂಟಪದಲ್ಲಿ ವಿವಾಹ ಮಾಡುವ ಹಕ್ಕನ್ನು ಪಡೆದುಕೊಂಡಿದ್ದರೆ, ಎಡಗೈ ಗುಂಪಿನವರು ಹನ್ನೊಂದು ಕಂಬದ ಮಂಟಪದಲ್ಲಿ ವಿವಾಹ ನಡೆಸಬೇಕಾಗಿತ್ತು. ಒಟ್ಟಿನಲ್ಲಿ ಈ ಪ್ರದೇಶದಲ್ಲಿ ಸಾಂಪ್ರದಾಯಿಕ ರೀತಿಯ ಜಾತಿವಿಂಗಡಣೆಯ ಜೊತೆಗೆ ಬಲಗೈ ಮತ್ತು ಎಡಗೈ ಜಾತಿ[8]. ಎಂಬಂತಹ ಜಾತಿ ವಿಭಜನೆ ಇತ್ತೆಂಬುದು ಅಂದಿನ ಸಮಾಜ ವ್ಯವಸ್ಥೆಯ ಪ್ರಮುಖ ಅಂಶವಾಗಿ ತೋರುತ್ತದೆ.

## 2.1. ಜಾತಿ ಪದ್ಧತಿಯ ಹಿನ್ನೆಲೆ

ಆರ್ಯರು ಭಾರತಕ್ಕೆ ಬರುವ ಮುನ್ನವೇ ಸಿಂಧೂ ನದಿಯ ತೀರದಲ್ಲಿ ವಾಸ ಮಾಡುತ್ತಿದ್ದ ಜನರಲ್ಲಿ ಬಗೆಬಗೆಯ ಕಸಬುಗಳ ಆಧಾರದ ಮೇಲೆ ಕುಲಗಳ ಅಥವಾ ಶ್ರೇಣಿಗಳ ವಿಭಾಗಗಳಿದ್ದುವೆಂಬುದು ಹರಪ್ಪ, ಮೊಹೆಂಜೋದಾರೋ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ಈ ಪ್ರದೇಶಗಳ ಸಂಶೋಧಕರ ಪ್ರಕಾರ ಪಂಡಿತರು, ಯೋಧರು, ವ್ಯಾಪಾರಗಾರರು, ಕುಶಲ ಕಲೆಗಾರರು ಅಂದರೆ ಗಾರೆಯವರು ಚಮ್ಮಾರರು, ಮೇದರು, ರೈತರು, ಬೆಸ್ತರು ಮೊದಲಾದ ಪಂಗಡಕ್ಕೆ ಸೇರಿದವರೂ ಇದ್ದರು.

ಸಿಂಧೂ ಆರ್ಯ ಸಂಸ್ಕೃತಿಯ ನಿರ್ಮಾಣವಾದ ಮೇಲೆ ಈ ಕುಲಭೇದಗಳು ಮುಂದುವರಿದುವು. ಹೊಸ ಬೇಡಿಕೆಗಳನ್ನು ಈಡೇರಿಸಲು ಅನೇಕ ಹೊಸ ಕಸಬುಗಳು ಏರ್ಪಟ್ಟವು. ಆರ್ಯರು ಪ್ರಾಕೃತಿಕ ಶಕ್ತಿಗಳನ್ನು ದೈವವೆಂದು ತಿಳಿದು ಆರಾಧಿಸುತ್ತಿದ್ದರು. ಋಗ್ವೇದದ ಪ್ರಾರ್ಥನಾ ಮಂತ್ರಗಳಿಂದ (ಋಕ್ಕು) ಈ ಅಂಶ ವ್ಯಕ್ತವಾಗುತ್ತದೆ. ದೇವತೆಗಳ ಉಪಶಮನಕ್ಕಾಗಿ, ಅವರ ಅನುಗ್ರಹ ಪಡೆಯುವುದಕ್ಕಾಗಿ ನಾನಾ ಬಗೆಯ ಯಜ್ಞಯಾಗಾದಿಗಳು ರೂಪುಗೊಂಡವು. ಯಜ್ಞಯಾಗಾದಿಗಳ ಆಚರಣೆಯಲ್ಲಿ ಪುರೋಹಿತರ ಪ್ರಾಧಾನ್ಯ

ಹೆಚ್ಚಾಯಿತು. ಪುರೋಹಿತರ ಸಹಾಯದಿಂದಲೂ, ಯಜ್ಞಯಾಗಾದಿ ತಂತ್ರಗಳನ್ನು ಆಚರಿಸುವ ಮೂಲಕವೂ ದೇವತೆಗಳ ಅನುಗ್ರಹವನ್ನು ಆಚರಿಸುವ ಕ್ರಮ ಹೆಚ್ಚು ಹೆಚ್ಚು ಸಂಕೀರ್ಣವಾಯಿತು. ಇವುಗಳನ್ನು ಆಚರಿಸುವುದು ರಾಜರುಗಳಿಗೆ ಮಾತ್ರ ಸಾಧ್ಯವಾಗುತ್ತಿತ್ತು. ಇತರ ವರ್ಗಗಳಲ್ಲಿ ಬೇರೆ ಬೇರೆ ರೀತಿಯ ಕಂದಾಚಾರಗಳು ಬೆಳೆದುಬಂದುವು. ಈ ರೀತಿ ಸಿಂಧೂ ಆರ್ಯ ಸಂಸ್ಕೃತಿಯ ಧರ್ಮ ಆಚಾರ ಪ್ರಧಾನವಾಯಿತು. ಯಾವುದೇ ಧರ್ಮ ಆಚಾರ ಪ್ರಧಾನವಾದಾಗ ಆ ಧರ್ಮವನ್ನು ಅನುಸರಿಸುವ ಸಮಾಜದಲ್ಲಿ ಪುರೋಹಿತ ವರ್ಗಕ್ಕೆ ಪ್ರಾಧಾನ್ಯ ಉಂಟಾಗುವುದು ಸಹಜ. ಸಮಾಜದಲ್ಲಿನ ತಮ್ಮ ಔನ್ನತ್ಯವನ್ನು ಉಳಿಸಿಕೊಳ್ಳಲು ಈ ವರ್ಗ ತಮ್ಮನ್ನು ಬ್ರಾಹ್ಮಣ ವರ್ಗದವರೆಂದೂ, ಉತ್ಪಾದನೆ ಮಾಡುವವರನ್ನು ವೈಶ್ಯರೆಂದೂ, ಸೇವಾವೃತ್ತಿ ಹಾಗೂ ವ್ಯವಸಾಯಕ್ಕೆ ಸಂಬಂಧಪಟ್ಟ ಉಪಕಸಬುಗಳನ್ನು ಮಾಡುವವರನ್ನು ಶೂದ್ರರೆಂದೂ ಕರೆದರು. ಯಾರು ಸಿಂಧೂ ಆರ್ಯ ಸಂಸ್ಕೃತಿಗೆ ವಿರುದ್ಧವಾಗಿ ಆಚಾರ ವ್ಯವಹಾರಗಳನ್ನು ಇಟ್ಟುಕೊಂಡಿದ್ದರೋ ಅವರನ್ನೆಲ್ಲ ಕೀಳೆಂದು ಭಾವಿಸಿದರು. ಅವರು ದ್ವಿಜರಲ್ಲವೆಂದರು. ಶೂದ್ರರು ಸೇವೆ ಮಾಡಲು ಮಾತ್ರ ಯೋಗ್ಯ ಎಂಬ ಭಾವನೆ ಬಂದಿತು.

ಬ್ರಾಹ್ಮಣರಲ್ಲಿ ವೇದಪಾರಾಯಣತೆ, ಆಚಾರಶೀಲತೆ, ಧರ್ಮಶ್ರದ್ಧೆ ಇವುಗಳಿರದಿದ್ದರೆ ಸಮಾಜಕಲ್ಯಾಣವಾಗದು. ಕ್ಷತ್ರಿಯರಿರದಿದ್ದರೆ ಜಗತ್ತು ಅಧರೋತ್ತರವಾಗಿ ಹೋಗುವುದು, ಎಂದರೆ ಕೆಳಗಿನವರು ಮೇಲೆ ಬರುವರು. ಧರ್ಮಶಾಸನ ನಷ್ಟವಾಗುವುದು. ವರ್ಣಾಶ್ರಮಗಳು ಮಲಿನವಾಗುವುವು. ಸತ್ವಶೀಲ ಕ್ಷತ್ರಿಯರಿಂದ ರಕ್ಷಿಸಲ್ಪಟ್ಟ ಜಗತ್ತಿನಲ್ಲಿ ಶಾಶ್ವತಸ್ವಾಸ್ಥ್ಯವು ನೆಲೆಗೊಳ್ಳುವುದು. ವ್ಯಾಪಾರದಲ್ಲಿ ಬುದ್ಧಿವಂತರಾದ, ದಾನಧರ್ಮಶೀಲವುಳ್ಳ ವೈಶ್ಯರಿರದಿದ್ದರೆ ರಾಷ್ಟ್ರದ ಜೀವನಯಾತ್ರೆ ಕಷ್ಟಕರವಾಗಿ ಪರಿಣಮಿಸುವುದು. ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಜೀವನವು ಸುಖವಾಗಿ ಸಾಗಬೇಕಾದರೆ ಸಂಪತ್ತು ಬೇಕು. ಕೃಷಿ, ಗೋರಕ್ಷಣ, ವಾಣಿಜ್ಯದಲ್ಲಿ ತೊಡಗುವುದು ವೈಶ್ಯರ ಧರ್ಮವಾಗಿರುವುದರಿಂದ, ಅವರ ಸಂಪತ್ತಿನ ಸಹಾಯವು ರಾಷ್ಟ್ರಕ್ಕೆ ಆಗಬೇಕಾಗಿರುವುದರಿಂದಲೂ, ರಾಷ್ಟ್ರದ ಸುಖಜೀವನಕ್ಕೆ ಇವರು ಸಹಾಯಕರಾಗುವರು.

ಶೂದ್ರರಿರದಿದ್ದರೆ ಬೇಸಾಯ ಮಾಡುವವರೇ ಇಲ್ಲದಂತಾಗುವುದು. ಈ ವರ್ಗವು ಶ್ರಮಜೀವಿಯಾಗಿರುವುದು. ಈ ನಾಲ್ಕೂ ವರ್ಣಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಆ ದೇಶ ಕ್ಷೇಮವಾಗಿರಲಾರದು.

ಚತುರ್ವರ್ಣಗಳು ತಮ್ಮ ತಮ್ಮ ಕರ್ಮಗಳನ್ನು ಮಾಡದಿದ್ದರೆ ಏನು ಅನಾಹುತವಾಗುತ್ತದೆ ಎಂಬುದನ್ನು ಭಗವದ್ಗೀತೆಯಲ್ಲಿ ವಿವರವಾಗಿ ಹೇಳಿದೆ. ಅರ್ಜುನನು ಶ್ರೀಕೃಷ್ಣನನ್ನು ಕುರಿತು ಈ ರೀತಿ ಹೇಳುತ್ತಾನೆ: "ನಾನು ಯುದ್ಧ ಮಾಡುವುದರಿಂದ ಕುಲಕ್ಷಯವಾಗುತ್ತದೆ. ಕುಲಕ್ಷಯನಾದರೆ ಅನೂಚಾನವಾಗಿ ನಡೆದು ಬರುತ್ತಿರುವ ಕುಲಧರ್ಮಗಳು ನಾಶವಾಗುವುವು. ಧರ್ಮವು ನಷ್ಟವಾದರೆ ಅಧರ್ಮವು ಕುಲವನ್ನು ಸಮೂಲವಾಗಿ ಹಾಳು ಮಾಡುತ್ತದೆ. ಅಧರ್ಮದಿಂದ ಕುಲವು ಹಾಳಾದರೆ ಕುಲಸ್ತ್ರೀಯರು ಕೆಟ್ಟುಹೋಗುವರು. ಆದ್ದರಿಂದ ಬ್ರಾಹ್ಮಣಾದಿ

ವರ್ಣಗಳ ಜಾತಿ ಸಂಕರವಾಗುವುದು. ವರ್ಣಸಂಕರ ಮಾಡಿದ್ದರಿಂದ ಕುಲವನ್ನು ಕೆಡಿಸಿದವರಿಗೂ, ಕೆಟ್ಟುಹೋದ ಕುಲದವರಿಗೂ ನರಕ ಪ್ರಾಪ್ತಿಯಾಗುವುದಲ್ಲದೆ ಇವರ ಪಿತೃಗಳು ಇವರಿಂದ ಬರಬೇಕಾದ ಪಿಂಡೋದಕಗಳಿಲ್ಲದೆ ಸ್ವರ್ಗಲೋಕದಿಂದ ಕೆಳಗೆ ಬೀಳುವರು. ಜಾತಿಸಂಕರಣಕ್ಕೆ ಕಾರಣವಾದ ಇಂತಹ ದೋಷಗಳಿಂದ ಶಾಶ್ವತವಾದ ವರ್ಣಧರ್ಮ, ಕುಲಧರ್ಮಗಳು ದೂರವಾಗುವುವು. ಆದ್ದರಿಂದ ನಾನು ಯುದ್ಧ ಮಾಡುವುದಿಲ್ಲ."

ಆಗ ಅರ್ಜುನನ್ನು ಕುರಿತು ಶ್ರೀಕೃಷ್ಣ ಈ ರೀತಿ ಹೇಳುತ್ತಾನೆ: "ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ"

"ಲೋಕ ಸಂಗ್ರಹವೆಂದು ಲೋಕದ ಕ್ಷೇಮ ಹಿತಗಳಿಗಾಗಿ ಕರ್ಮ ಮಾಡಬೇಕು. ಪ್ರಸಿದ್ಧರಾದ ದೊಡ್ಡವರು ಮಾಡುವುದನ್ನು ನೋಡಿ ಉಳಿದವರು ಅವರಂತೆ ನಡೆಯುವರು. ಎಲ್ಲರೂ ತಮ್ಮ ತಮ್ಮ ಧರ್ಮಗಳನ್ನು ತಪ್ಪದೇ ಆಚರಿಸುವಂತೆ ಮಾಡುವುದಕ್ಕಾಗಿಯಾದರೂ ನೀನು ನಿನ್ನ ಧರ್ಮವನ್ನು ಮಾಡಬೇಕು."[9] ಎಂದು ಶ್ರೀಕೃಷ್ಣ ಸಮಾಜ ನಿರ್ಮಾಣದಲ್ಲಿ ಧರ್ಮಶ್ರದ್ಧೆ ಇರಬೇಕು ಎಂದು ತಿಳಿಸಿದ್ದಾನೆ.

## 2.2. ಸಾಮಾಜಿಕ ರಚನೆ

ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸಂರಕ್ಷಣೆ ಮತ್ತು ಪಾಲನೆ ಸತ್ಯವಾಗಿತ್ತು. ಆದರೆ, ಸಮಾಜದ ರಚನೆ ಮತ್ತು ಸಾಹಿತ್ಯಕ ಪ್ರಗತಿಯ ದೃಷ್ಟಿಯಿಂದ ಅದು ಸತ್ಯವಾಗಿರಲಿಲ್ಲ. ಚಲನಶೀಲವೂ ಪ್ರಗತಿಯುತವೂ ಆದ ಶಕ್ತಿಗಳು ಸಾಂಪ್ರದಾಯಿಕ ಸಾಮಾಜಿಕ ಸ್ತಿರೀಕರಣವನ್ನು ಬದಲಾಯಿಸುತ್ತಿದ್ದುವು. ವಿಜಯನಗರದ ಅರಸರು ವರ್ಣಧರ್ಮ-ಆಶ್ರಮ ಧರ್ಮಗಳನ್ನು ರಕ್ಷಿಸಲು ಪ್ರಯತ್ನಿಸುತ್ತಿದ್ದರು. ಟಿ.ವಿ. ಮಹಾಲಿಂಗಂ ಹೀಗೆ ಅಭಿಪ್ರಾಯಪಡುತ್ತಾರೆ: "ಹಿಂದೂಗಳ ಸಾಮಾಜಿಕ ಐಕ್ಯತೆಯನ್ನು ಪರಿಪಾಲಿಸಲು ಅರಸರಿಗಿದ್ದ ಕಾಳಜಿ ಅವರು ಧರಿಸಿದ ಬಿರುದುಗಳಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ: ನಾಲ್ಕು ಜಾತಿಗಳು ಮತ್ತು ವರ್ಣಗಳ ಪೋಷಕ, ವರ್ಣಾಶ್ರಮ ಧರ್ಮದ ರಕ್ಷಕ, ಎಲ್ಲಾ ಜಾತಿಗಳ ಕರ್ತವ್ಯಗಳನ್ನು ಎತ್ತಿ ಹಿಡಿಯುವವನು, ಸಾಮ್ರಾಜ್ಯದ ಸಕಲ ಜಾತಿಗಳ ರಕ್ಷಕ ಇತ್ಯಾದಿ."[11]

ತತ್ವತಃ ವರ್ಣಾಶ್ರಮಧರ್ಮವೇ ಸಮಾಜದ ಮೂಲ ಆಧಾರವಾಗಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಆಚರಣೆಯಲ್ಲಿ ಮಾತ್ರ ಅವುಗಳನ್ನು ಉಲ್ಲಂಘಿಸುವುದು ಸಾಮಾನ್ಯವಾಗಿತ್ತು. ಸಮಾಜ ಜೀವನದಲ್ಲಿ ಜಾತಿಯು ತನ್ನ ಸಾಂಗತ್ಯವನ್ನು ಕಳೆದುಕೊಂಡಿದ್ದಿತು. ಕೆಲವು ಜಾತಿಗಳು ಸಾಮಾಜಿಕ ಸ್ಥಾನಮಾನದಲ್ಲಿ ಮೇಲಕ್ಕೆ ಏರಲು ಪ್ರಯತ್ನ ಪಡುತ್ತಿದ್ದರು. ಹಿಂದಿನ ಅವಧಿಯಂತಲ್ಲದೆ, ವಿಜಯನಗರ ಕಾಲದಲ್ಲಿ ಈ ಪ್ರವೃತ್ತಿಯು ಹೆಚ್ಚಾಗಿ ವ್ಯಕ್ತವಾಯಿತು. ಅದಕ್ಕೆ ಕಾರಣ ದಕ್ಷಿಣ ಭಾರತದಲ್ಲಿ ಇಸ್ಲಾಂ ನೆಲೆಗೊಳ್ಳತೊಡಗಿದುದು; ಸಾಮಾಜಿಕ ಸಮಾನತೆ ಮತ್ತು ಹೊಂದಾಣಿಕೆಗಳಿಗೆ ಒತ್ತು ಕೊಟ್ಟು ಆಚರಣೆಯಲ್ಲಿ ತೋರಿಸತೊಡಗಿದುದು. ಇದರಿಂದ ಸಾಂಪ್ರದಾಯಿಕ ಜಾತಿ ಪದ್ಧತಿಯು ಮುಂಚಿನಷ್ಟು ಬಿಗಿಯಾಗಿ ಉಳಿಯಲಿಲ್ಲ. ಅರಸರ ನೀತಿಯೇನೋ ಇದ್ದ

ವ್ಯವಸ್ಥೆಯನ್ನು ದುರ್ಬಲಗೊಳಿಸದೆ ರಕ್ಷಿಸುವುದೇ ಆಗಿದ್ದರೂ ಕೂಡ ಪ್ರತಿಯೊಂದು ಜಾತಿಯ ಹಕ್ಕು ಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕಟ್ಟುನಿಟ್ಟಾಗಿ ಅನುಸರಿಸುತ್ತಿರಲಿಲ್ಲ. ಆಗ ಕಂಡುಬಂದ ಇನ್ನೊಂದು ಬೆಳವಣಿಗೆಯೆಂದರೆ, ಬೇಕಾದಷ್ಟು ಉಪಜಾತಿಗಳು ಮತ್ತು ಅವುಗಳಲ್ಲಿ ಎಡಗೈ ಮತ್ತು ಬಲಗೈ ಎಂಬ ಭೇದಗಳು ಕಾಣಿಸಿಕೊಂಡದ್ದು.

ಆ ಕಾಲದ ಸಾಮಾಜಿಕ ರಚನೆಯಲ್ಲಿ ಬ್ರಾಹ್ಮಣರು ಹಿಂದೂ ಸಮಾಜದ ಅತ್ಯಂತ ಎತ್ತರದ, ಪ್ರಧಾನವಾದ ಸ್ಥಾನದಲ್ಲಿದ್ದರು. ಬ್ರಾಹ್ಮಣರ ಪೈಕಿ ಎರಡು ಮುಖ್ಯವಾದ ವಿಭಾಗಗಳಿದ್ದುವು:

೧. ಉತ್ತರದ ಪಂಚಗೌಡ

೨. ದಕ್ಷಿಣದ ಪಂಚದ್ರಾವಿಡ

ಈ ಕಾಲದ ಕರ್ನಾಟಕದ ಬ್ರಾಹ್ಮಣರು ಪಂಚದ್ರಾವಿಡ ವರ್ಗಕ್ಕೆ ಸೇರಿದವರು. ಅವರಲ್ಲಿ ಕೊನೆಯ ಪಕ್ಷ ಆರು ಭಾಷಾ ವರ್ಗಗಳಿದ್ದುವು. ಕನ್ನಡ, ತಮಿಳು, ಮರಾಠಿ, ಕೊಂಕಣಿ ಮತ್ತು ತುಳುಭಾಷೆಗಳನ್ನು ಅವರು ಆಡುತ್ತಿದ್ದರು. ಕೊಂಕಣಿ ಬ್ರಾಹ್ಮಣರು ಪೋರ್ಚುಗೀಸ್ ಗೋವಾದಿಂದ ವಲಸೆ ಬಂದವರು, ತುಳು ಬ್ರಾಹ್ಮಣರು ಬಹಳ ಹಿಂದೆಯೇ ಕರಾವಳಿ ಪ್ರದೇಶಕ್ಕೆ ಹೋಗಿ ನೆಲೆಸಿದವರು. ವಿಜಯನಗರದ ಅರಸರು ಸ್ಥಾಪಿಸಿದ ಅಗ್ರಹಾರಗಳಿಂದಾಗಿ ನದಿತೀರದ ತೀರ್ಥಕ್ಷೇತ್ರಗಳಾದ ನಂಜನಗೂಡು, ಸೋಸಲೆ, ಟಿ.ನರಸೀಪುರ, ಮಿರ್ಲೆ, ಸಾಲಿಗ್ರಾಮಗಳಲ್ಲಿ, ಕೆರೆ - ಕಾಲುವೆ ಮೊದಲಾದವುಗಳ ನೀರಾವರಿಯಿರುವ ಸ್ಥಳಗಳಲ್ಲಿ ಹಾಗೂ ಮೇಲುಕೋಟೆ - ತೊಣ್ಣೂರುಗಳಂತಹ ಪ್ರಾಚೀನ ಸ್ಥಳಗಳಲ್ಲಿ ಬ್ರಾಹ್ಮಣರು ನೆಲೆಸುವುದಕ್ಕೆ ಅವಕಾಶವಾಯಿತು. ಆ ಕಾಲದ ಬ್ರಾಹ್ಮಣರೆಲ್ಲರೂ ತ್ರಿಮತಗಳಲ್ಲೊಂದಕ್ಕೆ, ಅಂದರೆ ಸ್ಮಾರ್ತ, ಮಾಧ್ವ ಅಥವಾ ಶ್ರೀವೈಷ್ಣವ ಮತಕ್ಕೆ ಸೇರಿದವರು. ಇವರು ಕ್ರಮವಾಗಿ ಶಂಕರಾಚಾರ್ಯ, ಮಧ್ವಾಚಾರ್ಯ ಮತ್ತು ರಾಮಾನುಜಾಚಾರ್ಯರ ಅನುಯಾಯಿಗಳಾಗಿದ್ದವರು. ಈ ವರ್ಗಗಳಲ್ಲಿ, ಧಾರ್ಮಿಕ ಅಧ್ಯಯನಾದಿಗಳನ್ನು ನಡೆಸುತ್ತಿದ್ದ ವೈದಿಕರು, ವೃತ್ತಿಜೀವಿಗಳು, ಅಧಿಕಾರಿಗಳು, ನೌಕರರು, ಜಮೀನುದಾರರು, ವರ್ತಕರು, ವಿವಿಧ ಕಸಬುಗಳನ್ನು ನಡೆಸುತ್ತಿದ್ದವರು ಸೇರಿದ ಲೌಕಿಕರೂ ಇರುತ್ತಿದ್ದರು. ಇವುಗಳಲ್ಲಿ ಹಲವಾರು ಉಪಪಂಗಡಗಳಿರುತ್ತಿದ್ದವು.

ಸ್ಮಾರ್ತರು ಅದ್ವೈತ ಸಿದ್ಧಾಂತವನ್ನು ಒಪ್ಪಿಕೊಂಡವರು. ಅವರಲ್ಲಿ ಸೀರುನಾಡು, ಬಡಗನಾಡು, ಮುಲುಕುನಾಡು, ಬಬ್ಬೂರು ಕಮ್ಮೆ, ಉಲುಚುಕಮ್ಮೆ, ಕರ್ಹಾಡಿ, ಚಿತ್ಪಾವನ, ಹವೀ, ಹೊಯ್ಸಳ ಕರ್ನಾಟಕ, ಮೂಗೂರು ಅಥವಾ ಹಳೆ ಕರ್ನಾಟಕ, ತೈಯರ್ ಇತ್ಯಾದಿ ವಿಭಾಗಗಳಿದ್ದುವು. ಸಾಮ್ರಾಜ್ಯದ ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ವಿಶೇಷವಾಗಿ ಈಗಿನ ಮೈಸೂರು ಜಿಲ್ಲೆಯ ಭಾಗದಲ್ಲಿ ಮೂಗುರು ಕರ್ನಾಟಕರು ಪ್ರಮುಖರಾಗಿದ್ದರು. ಮಾಧ್ವರು ಮಧ್ವಾಚಾರ್ಯರ ದ್ವೈತ ದರ್ಶನದ ಅನುಯಾಯಿಗಳು. ಇವರಲ್ಲಿ ಬಡಗನಾಡು, ಅರವೇಲು, ಅರವತ್ತು ವಕ್ಕಲು, ದೇಶಸ್ಥ ಇತ್ಯಾದಿ ಉಪಪಂಗಡಗಳಿದ್ದುವು. ಅವರ ಮುಖ್ಯ ಕೇಂದ್ರವಾದ ಉಡುಪಿಯಲ್ಲಿ ಎಂಟು ಮಠಗಳಿದ್ದುವು. ಅವುಗಳ ಶಾಖೆಗಳು ನಂಜನಗೂಡು, ಸೋಸಲೆ ಮತ್ತು ದಕ್ಷಿಣ ಕರ್ನಾಟಕದ ಇತರ ಕೆಲವು ಭಾಗಗಳಲ್ಲಿ ಇದ್ದುವು. ಶ್ರೀವೈಷ್ಣವರು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ

ದರ್ಶನದ ಅನುಯಾಯಿಗಳು. ವಿಜಯನಗರ ಕಾಲದಲ್ಲಿ ಇವರಲ್ಲಿ ಎರಡು ಮುಖ್ಯವಾದ ವರ್ಗಗಳಿದ್ದುವು: ತೆಂಗಲೈ (ದಕ್ಷಿಣದವರು) ಮತ್ತು ವಡಗಲೈ (ಉತ್ತರದವರು). ವಿದ್ಯಾರಣ್ಯರ ಸಮಕಾಲೀನರಾದ ವೇದಾಂತ ದೇಶಿಕರು ಎರಡೂ ಪಂಗಡಗಳನ್ನು ಒಂದುಗೂಡಿಸಲು ಪ್ರಯತ್ನಿಸಿದರು. ಆದರೂ ಆ ಕಾಲದಲ್ಲಿ ಎರಡೂ ಪಂಗಡಗಳ ನಡುವೆ ವಿವಾಹ ಮತ್ತು ಸಹಪಂಕ್ತಿ ಭೋಜನ ಮೊದಲಾದ ಸಾಮಾಜಿಕ ಸಂಪರ್ಕವು ತುಂಬಾ ಕಡಿಮೆಯಾಗಿತ್ತು. ಕರ್ನಾಟಕ ಶ್ರೀವೈಷ್ಣವರಲ್ಲಿ ಹಲವರು ತಮಿಳನ್ನೂ ಕೆಲವರು ತೆಲುಗನ್ನೂ ಮನೆಮಾತಾಗಿ ಆಡುತ್ತಿದ್ದರು. ಕಂಚಿ ಮತ್ತು ಶ್ರೀರಂಗಂಗಳು ಅವರ ಪವಿತ್ರ ಕ್ಷೇತ್ರಗಳಾಗಿದ್ದುವು. ಹೆಬ್ಬಾರ್, ಮಂಡ್ಯತ್ತಾರ್, ಹೆಮ್ಮಿಗೆಯಾರ್, ತಿರುಮಲೆಯಾರ್, ಕೀಳ್ನಾತ್ತರ್, ಮತ್ತು ಸ್ವಯಮಾಚಾರ್ಯರ್ ಇವು ಶ್ರೀವೈಷ್ಣವರಲ್ಲಿದ್ದ ಉಪಪಂಗಡಗಳು. ಆಗ ಅಹೋಬಲ ಮಠ ಮತ್ತು ಪರಕಾಲ ಮಠಗಳು ಅವರ ಮುಖ್ಯ ಮಠಗಳಾಗಿದ್ದುವು.

ಎಲ್ಲ ಬ್ರಾಹ್ಮಣರ ಗೋತ್ರ ಮತ್ತು ಪ್ರವರಗಳಿಗನುಗುಣವಾಗಿ ಬೇರೆ ಬೇರೆ ಗುಂಪುಗಳಾಗುತ್ತಿದ್ದರು. ಬ್ರಾಹ್ಮಣರಿಗೆ ೧೬ ನಿತ್ಯ ಸಂಸ್ಕಾರಗಳಾಗಿರಬೇಕಾಗಿತ್ತು. ಅವುಗಳಲ್ಲಿ ಮುಖ್ಯವಾದದ್ದು ಉಪನಯನ. ಅದು ಬಾಲಕನಿಗೆ ವೇದಾಧ್ಯಯನಕ್ಕೆ ದೀಕ್ಷೆಯನ್ನು ಕೊಡುತ್ತಿದ್ದಿತು. ಇದಲ್ಲದೆ ೨೪ ನೈಮಿತ್ತಿಕ ಸಂಸ್ಕಾರಗಳೂ ಇರುತ್ತಿದ್ದುವು. ವಿಧವೆಯರ ತಲೆಯನ್ನು ಬೋಳಿಸಲಾಗುತ್ತಿತ್ತು. ಆಹಾರ ಪದ್ಧತಿಗಳು, ಅಷ್ಟೇಕೆ ತರಕಾರಿಗಳ ಬಳಕೆಯಲ್ಲೂ ಎಷ್ಟೆಷ್ಟೋ ನಿಷೇಧಗಳಿರುತ್ತಿದ್ದುವು. ಅವರದು ಸಾಂಪ್ರದಾಯಿಕ ಶೈಲಿಯ ವಿವಾಹ. ಹಲವಾರು ಆಚರಣೆಗಳಿಂದ ಹಲವು ದಿನಗಳ ಕಾಲ ನಡೆಯುತ್ತಿದ್ದ ವಿಸ್ತಾರವಾದ ಮದುವೆಯ ಸಮಾರಂಭವಾಗಿರುತ್ತಿತ್ತು. ವಿವಾಹ ವಿಚ್ಛೇದನಕ್ಕಾಗಲಿ, ವಿಧವಾ ಪುನರ್ವಿವಾಹಕ್ಕಾಗಲಿ ಅವಕಾಶವಿರಲಿಲ್ಲ. ಅವು ನಿಷಿದ್ಧವಾಗಿದ್ದುವು. ಬ್ರಾಹ್ಮಣರು ಸತ್ತವರನ್ನು ಸುಡುತ್ತಿದ್ದರು. ಹತ್ತು ದಿನಗಳ ಮೈಲಿಗೆಯನ್ನು ಆಚರಿಸುತ್ತಿದ್ದರು. ಅಂತ್ಯಕ್ರಿಯೆಗಳು ಮತ್ತು ಸಂಬಂಧಿತ ಅಪರಕರ್ಮಗಳು ಹದಿನಾಲ್ಕು ದಿನಗಳ ಕಾಲ ನಡೆಯುತ್ತಿದ್ದುವು. ಸಾಂಪ್ರದಾಯಿಕವಾಗಿ ಅವರ ವೃತ್ತಿ ವೇದ, ಶಾಸ್ತ್ರ, ಪುರಾಣಗಳ ಅಧ್ಯಯನ, ಯಜ್ಞಯಾಗಾದಿಗಳ ಆಚರಣೆ, ದೇವಾಲಯಗಳಲ್ಲಿ ಪೂಜೆ ಮಾಡುವುದು ಮತ್ತು ಅಗ್ರಹಾರಗಳಲ್ಲಿ ಬೋಧಿಸುವುದು. ಬ್ರಾಹ್ಮಣರ ಸಾಮಾಜಿಕ ಜೀವನದ ಮಾದರಿಯನ್ನು ವೀರಶೈವರು ಹೊರತಾಗಿ ಇತರ ಅನೇಕ ಕೆಳಜಾತಿಗಳವರು ಹೆಚ್ಚು ಕಡಮೆ ಅನುಸರಿಸುತ್ತಿದ್ದರು.

ಬ್ರಾಹ್ಮಣರು ಪ್ರಾಚೀನ ಶಾಸ್ತ್ರಗಳು ವಿಧಿಸಿರುವಂತೆ ಕಟ್ಟುನಿಟ್ಟಾಗಿ ತಮ್ಮ ಕರ್ತವ್ಯಗಳನ್ನು ಪಾಲಿಸುತ್ತಿರಲಿಲ್ಲ. ಪೇಸ್‌ನ ಪ್ರಕಾರ ಬ್ರಾಹ್ಮಣರಲ್ಲಿ ನಾಲ್ಕು ವರ್ಗಗಳಿದ್ದುವು - ಪುರೋಹಿತರು, ಅಧಿಕಾರಿಗಳು, ವ್ಯವಹಾರಸ್ಥರು ಮತ್ತು ಅನುವಂಶಿಕ ಜಮೀನುದಾರರು.

ನ್ಯೂನಿಜನೂ ಬ್ರಾಹ್ಮಣರನ್ನು ನಾಲ್ಕು ವರ್ಗಗಳಾಗಿ ವಿಭಾಗಿಸಿದ್ದನು, ಆದರೆ ಅವನ ವರ್ಗೀಕರಣ ತುಸು ಬೇರೆ ರೀತಿಯದು. ರಾಜಪುರೋಹಿತರು ಸಾವಿರಾರು ಸಂಖ್ಯೆಯಲ್ಲಿದ್ದರು, "ದಾನವಾಗಿ ಬೇಕಾದಷ್ಟು ಹಣವನ್ನು ಪಡೆಯುತ್ತಿದ್ದರು; ಅವರ ಬಳಿ ಯಾವಾಗಲು ತುಂಬಾ ಹಣವಿರುತ್ತೆ. ಅವರು ಎಷ್ಟು ಉದ್ಧತರಾಗಿರುತ್ತಾರೆಂದರೆ, ಬಾಗಿಲು ಕಾಯುವವರು ಪೆಟ್ಟು ಕೊಟ್ಟರೂ ಅವರನ್ನು ತಡೆಯಲು ಸಾಧ್ಯವಾಗುವುದಿಲ್ಲ."[12]

ನ್ಯೂನಿಜನ ಪ್ರಕಾರ ಎರಡನೆಯ ಗುಂಪಿನ ಬ್ರಾಹ್ಮಣರು "ಪ್ರಾಮಾಣಿಕರಾದ ಜನ, ವ್ಯಾಪಾರವನ್ನು ನಡೆಸುವವರು, ಸೂಕ್ಷ್ಮಮತಿಗಳು, ಬುದ್ಧಿವಂತರು, ಲೆಕ್ಕಾಚಾರದಲ್ಲಿ ನಿಪುಣರು... ಇವುಗಳಿಂದಾಗಿ ಮತ್ತು ತಮ್ಮ ಕರ್ತವ್ಯ ಪಾಲನೆಯಿಂದಾಗಿ ರಾಜ್ಯದ ಆಡಳಿತವು ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ. ಇನ್ನೊಂದು ವರ್ಗದವರಿದ್ದಾರೆ, ಇವರು ಕನರೀಸ್ ಜನರು. ಇವರ ಬಳಿ ಪಗೋಡಗಳಿರುತ್ತವೆ. ಅವುಗಳ ಮೇಲೆ ಕೋತಿಗಳ ಮತ್ತು ಹಸುಗಳ ಚಿತ್ರವನ್ನು ಕೆತ್ತಿರುತ್ತದೆ."[13]

ಹೀಗೆ ಬ್ರಾಹ್ಮಣರು ದೇವಾಲಯದ ಪುರೋಹಿತರು, ಅಧಿಕಾರಿಗಳು, ವ್ಯಾಪಾರಸ್ಥರು ಮತ್ತು ಅಗ್ರಹಾರವನ್ನು ಪಡೆದವರು ಎಂದು ನಾಲ್ಕು ಪಂಗಡವಾಗಿದ್ದರು. ಅರಮನೆಯ ಪುರೋಹಿತರು ಅರಮನೆಗೇ ಸೀಮಿತವಾದ ಕರ್ತವ್ಯಗಳನ್ನು ಹೊಂದಿದ್ದರು. ಜೊತೆಗೆ ಎಲ್ಲರಿಗೂ ನ್ಯಾಯವಿತರಣೆಯ ಅಧಿಕಾರವೂ ಇದ್ದಿತು. ಬ್ರಾಹ್ಮಣರಲ್ಲಿ ತುಂಬಾ ಪ್ರಭಾವಶಾಲಿಗಳಾಗಿದ್ದವರು ವಿದ್ವಾಂಸರು, ಜ್ಯೋತಿಷ್ಯರು, ಸಾಹಿತಿಗಳು, ವೈದ್ಯರು, ನ್ಯಾಯವನ್ನು ವ್ಯಾಖ್ಯಾನಿಸಬಲ್ಲವರು, ನ್ಯಾಯತೀರ್ಮಾನ ಮಾಡುವರು ಆಗಿರುತ್ತಿದ್ದರು. ಅವರು ಪೂರ್ಣ ಸಸ್ಯಾಹಾರಿಗಳು. ಕೌಟುಂಬಿಕ ಜೀವನದಲ್ಲಿ ಏಕಪತ್ನೀವ್ರತಸ್ಥರು. ಇತರರು ವಿಶೇಷವಾಗಿ ರಾಜಪುರೋಹಿತರು ಮತ್ತು ಸರಕಾರಿ ಅಧಿಕಾರಿಗಳು ಜನರ ಕಣ್ಣಿನಲ್ಲಿ ಕೆಳಮಟ್ಟದವರಾಗಿದ್ದರು. ನ್ಯೂನಿಜ್ ಮೊದಲಿನ ವರ್ಗದವರನ್ನು ಅಧಮರೆಂದು ಕರೆದಿದ್ದಾನೆ. ಇತರ ಅನೇಕರೂ ಅದೇ ಬಗೆಯಾಗಿದ್ದರು. ಅವರನ್ನು ಚೆನ್ನಾಗಿ ಬಲ್ಲವನಾಗಿದ್ದ ಕೃಷ್ಣದೇವರಾಯನು ತನ್ನ ಕೃತಿಯಲ್ಲಿ ಅವರ ರೀತಿನೀತಿಗಳನ್ನು ವರ್ಣಿಸಿದ್ದಾನೆ.

ರಾಜಗುರುಗಳಲ್ಲಿ ಕೆಲವರು ದೊಡ್ಡ ವಿದ್ವಾಂಸರಾಗಿದ್ದರೂ, ಅನೈತಿಕ ವರ್ತನೆಗಳಿಂದ ಮುಕ್ತರಾಗಿರಲಿಲ್ಲ. ಜೆಸೂಯಿಟ್ ಪಾದ್ರಿಗಳಲ್ಲಿ ಒಬ್ಬನಾದ ಫಾದರ್ ಬಿ. ಕುಟಿನ್ಹೋಗೆ "ಸೆ ತಾತುಚರೆ" ಎಂಬ ಪ್ರಸಿದ್ಧ ರಾಜಗುರುವಿನ ನಿಕಟ ಪರಿಚಯವಿದ್ದಿತು. ಆತನು ಒಂದು ಪತ್ರದಲ್ಲಿ ಹೀಗೆ ಬರೆದನು: "ಆತನು ತನ್ನ ಕೆಟ್ಟ ಗುಣಗಳಿಂದಾಗಿ ಆ ಹುದ್ದೆಗೆ ಅನರ್ಹನಾಗಿದ್ದಾನೆ... ಅವನಿಗೆ ಮನೆಯಲ್ಲಿ ಅನೇಕ ಪತ್ನಿಯರಿದ್ದಾರೆ. ಅವರಲ್ಲಿ ಒಬ್ಬಳು ಒಂಟೆಗಳನ್ನು ನುಂಗಿ ಸೊಳ್ಳೆಗಳಿಗೆ ನಾಚಿಕೊಳ್ಳುವವಳು... ಅನೇಕ ಕೆಲಸಕ್ಕೆ ಬಾರದ ಶಾಸ್ತ್ರ ಆಧಾರವೇ ಇಲ್ಲದ ಆಚರಣೆಗಳಿಂದ ಜನರನ್ನು ವಂಚಿಸಿ ಪ್ರಕೃತಿ ನಿಯಮದ ಮೂಲಾಗತ್ಯಗಳನ್ನು ಮರೆಯುವವಳು..."[14]

ಪೇಸ್ ಮತ್ತು ನ್ಯೂನಿಜ್ ಇಬ್ಬರೂ ವ್ಯಾಪಾರವನ್ನು ನಿರ್ವಹಿಸುತ್ತಿದ್ದ ಬ್ರಾಹ್ಮಣರನ್ನು ಕುರಿತು ಬರೆದಿದ್ದಾರೆ. ದಕ್ಷಿಣ ಭಾರತದಲ್ಲಿ ಪೋರ್ಚುಗೀಸ್ ಕಾಲೋನಿಗಳು ಸ್ಥಾಪನೆಗೊಂಡ ಮೇಲೆ ವ್ಯಾಪಾರವು ಲಾಭದಾಯಕ ವೃತ್ತಿಯಾಗಿದೆ ಎಂಬುದನ್ನು ಮನಗಂಡ ಕೆಲವು ಬ್ರಾಹ್ಮಣರು ಅದಕ್ಕೆ ಸಂಕೋಚಪಡದೆ ಕೈ ಹಾಕಿದರು. ತನ್ನ ಆರ್ಥಿಕ ಸಂಕಷ್ಟಗಳನ್ನು ನಿವಾರಿಸಿಕೊಳ್ಳುವ ಸಲುವಾಗಿ ಬ್ರಾಹ್ಮಣನು ಯಾವ ವೃತ್ತಿಯನ್ನು ಬೇಕಾದರೂ ಹಿಡಿಯಬಹುದಾಗಿತ್ತು. ಅದಕ್ಕೆ ಶಾಸ್ತ್ರಗಳ ವಿರೋಧವೇನಿರಲಿಲ್ಲ.

ವಿಪ್ರವಿನೋದಿಗಳು ಬ್ರಾಹ್ಮಣ ಐಂದ್ರಜಾಲಿಕರಾಗಿದ್ದರು. ಬ್ರಾಹ್ಮಣ ಜಾತಿಗಳಲ್ಲೇ ಅವರದೊಂದು ಉಪಜಾತಿಯಾಯಿತು. ತಮ್ಮ ಕೈಚಳಕವನ್ನು ಪ್ರದರ್ಶಿಸುತ್ತಾ ಅವರು ಸಂಚರಿಸಿ, ಬ್ರಾಹ್ಮಣರಿಂದ ವಾರ್ಷಿಕವಾಗಿ ಸಂಭಾವನೆ ಪಡೆದು ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಅವರಿಗೂ ದೊಮ್ಮರರಿಗೂ ವ್ಯತ್ಯಾಸವಿದ್ದದ್ದು ಒಂದೇ

ವಿಷಯದಲ್ಲಿ. ಅವರು ಮನೆಯೊಳಗೆ ತಮ್ಮ ಕೈಚಳಕವನ್ನು ಪ್ರದರ್ಶಿಸತ್ತಿದ್ದರು. ಸರಕಾರೀ ನೌಕರಿಗಳನ್ನು ಪಡೆದಿದ್ದವರನ್ನು ನಿಯೋಗಿಗಳೆಂಬ ಉಪಪಂಗಡವಾಗಿ ಪರಿಗಣಿಸಲಾಗುತ್ತಿತ್ತು. ಇವರು ರಾಜ್ಯಾಡಳಿತದಲ್ಲಿ ಬಹುಮುಖ್ಯರಾಗಿದ್ದರು. ವೆಂಕಟರಮಣಯ್ಯ ಹೇಳುತ್ತಾರೆ: "ವಿದ್ಯಾವಂತ ಬ್ರಾಹ್ಮಣರಲ್ಲಿ ಬಹುತೇಕ ಜನರು ಸರಕಾರೀ ಸೇವೆಯನ್ನು ಕೈಗೊಳ್ಳಲು ಬಯಸುತ್ತಿದ್ದರು. ಅವರಿಗೆ ಅದರಲ್ಲಿ ಉಜ್ವಲವಾದ ಭವಿಷ್ಯವಿತ್ತು. ಉತ್ತಮ ಲೆಕ್ಕಪತ್ರತಜ್ಞರೂ ಆಡಳಿತ ನಿಪುಣರೂ ಆಗುವಂತೆ ಅವರಿಗೆ ತರಬೇತಿ ನೀಡಲಾಗುತ್ತಿತ್ತು. ಕೇಂದ್ರ ಆಡಳಿತದ ಸಚಿವಾಲಯದಲ್ಲಿ ಈ ವರ್ಗದ ಜನರೇ ತುಂಬಿರುತ್ತಿದ್ದರು. ಈ ವರ್ಗದ ಬ್ರಾಹ್ಮಣರು ಧಾರ್ಮಿಕ ಆಚರಣೆಗಳಲ್ಲಿ ಅಷ್ಟಾಗಿ ಸಂಪ್ರದಾಯಬದ್ಧವಾಗಿರಲಿಲ್ಲ ಎಂದು ನಂಬಲು ಕಾರಣಗಳಿವೆ. ಅವರು ಸಚಿವರಾಗುತ್ತಿದ್ದರು. ಸೇನಾ ದಂಡನಾಯಕರಾಗುತ್ತಿದ್ದರು ಮತ್ತು ಪ್ರಾಂತಗಳ ರಾಜ್ಯಪಾಲರಾಗುತ್ತಿದ್ದರು"[15] ವಿವಿಧ ಆಡಳಿತ ವಿಭಾಗಗಳಿಗೆ ಕಂದಾಯ ಸಂಬಂಧವಾದ ಹುದ್ದೆಗಳನ್ನು ಈ ವರ್ಗದ ಸದಸ್ಯರು ನಿರ್ವಹಿಸುತ್ತಿದ್ದರು. ಹಾಗಾಗಿ ರಾಜ್ಯದ ಅಧಿಕಾರಶಾಹಿಯು ಕ್ಷತ್ರಿಯರ ಏಕಸ್ವಾಮ್ಯವಾಗಿ ಉಳಿದಿರಲಿಲ್ಲ. ಬ್ರಾಹ್ಮಣರು ಅದರಲ್ಲಿ ಒಂದು ಪಾಲನ್ನು ಪಡೆಯತೊಡಗಿದ್ದರು.

ಮಿಲಿಟರಿ ಮತ್ತು ಪೌರನೌಕರಿಗಳಲ್ಲಿ ಬಹುಮುಖ್ಯವಾದುವನ್ನು ಹಿಡಿದಿದ್ದ ಬ್ರಾಹ್ಮಣರಿಗೆ ವಿರೋಧವೇ ಇರಲಿಲ್ಲ. ಆ ಹುದ್ದೆಗಳಿಗೆ ಬ್ರಾಹ್ಮಣರನ್ನೇ ಆಯ್ಕೆಮಾಡಿಕೊಳ್ಳುತ್ತಿದ್ದರು. ಅದಕ್ಕೆ ಕಾರಣ ಸಮಾಜದಲ್ಲಿ ಅವರಿಗೆ ಅತ್ಯುನ್ನತ ಸ್ಥಾನವಿದ್ದಿತೆಂಬುದಲ್ಲ, ಅವರ ವಿಶ್ವಾಸಾರ್ಹತೆಯೇ ಅದಕ್ಕೆ ಕಾರಣ. ವಾಸ್ತವವಾಗಿ ಕೃಷ್ಣದೇವರಾಯನ ಕಾಲದಲ್ಲಿ ಇಂತಹ ನೇಮಕಾತಿಗಳು ಅಧಿಕವಾಗಿದ್ದುವು. ಸರಕಾರದ ಅತಿಮುಖ್ಯವಾದ ಹುದ್ದೆಗಳಿಗೆ ಬ್ರಾಹ್ಮಣರನ್ನು ನೇಮಿಸುವುದಕ್ಕೆ ಕೃಷ್ಣದೇವರಾಯನು ಕೊಟ್ಟ ಕಾರಣಗಳು ಇವು: "ಏಕೆಂದರೆ ಒಬ್ಬ ಬ್ರಾಹ್ಮಣನು ಎಂತಹ ಆಪತ್ತಿನ ಸಮಯದಲ್ಲೂ ಕರ್ತವ್ಯಬದ್ದನಾಗಿರುತ್ತಾನೆ. ಕ್ಷತ್ರಿಯ ಅಥವಾ ಶೂದ್ರನೊಬ್ಬನ ಅಧೀನನಾಗಿ ಕೆಲಸ ಮಾಡಬೇಕಾಗಿ ಬಂದರೂ ಅವನು ಸೇವೆಯಲ್ಲಿ ಮುಂದುವರಿಯುತ್ತಾನೆ. ಆದ್ದರಿಂದ ತನಗೆ ನಿಷ್ಠೆಯಿಂದಿರುವ ಹಾಗೂ ಅನೇಕ ಕಲೆ ಮತ್ತು ವಿಜ್ಞಾನಗಳಲ್ಲಿ ಪರಿಣತರಾಗಿರುವ, ಧರ್ಮದಿಂದ ನಡೆಯುವ, ಪರಾಕ್ರಮಿಗಳಾದ ಬ್ರಾಹ್ಮಣರನ್ನು ತನ್ನ ಕೋಟೆಗೆ ರಕ್ಷಣೆಗೆ ನೇಮಿಸುವ ರಾಜನು ಎದೆಯ ಮೇಲೆ ಕೈಯಿರಿಸಿಕೊಂಡು ನಿರಾಳವಾಗಿ ನಿದ್ದೆ ಮಾಡಬಹುದು. ಅವರು ತಮ್ಮ ಕಾಲಕ್ಕಿಂತಲೂ ಹಿಂದಿನಿಂದಲೂ ಸೇವೆಯಲ್ಲಿದ್ದು ಕೋಟೆಗಳಲ್ಲಿ ಹುಲಿಯ ಗಿಣ್ಣನ್ನೂ (ಪಾಲಿಜುನ್ನ) ಇತರ ಅಪೂರ್ವ ವಸ್ತುಗಳನ್ನು ಅನೇಕ ಪೀಳಿಗೆಗಳವರೆಗೆ ಸಂಗ್ರಹಿಸಿಟ್ಟಿರುತ್ತಾರೆ... ವರಮಾನವನ್ನು ಅಧಿಕಗೊಳಿಸಿ ಅವನ ಕೋಶವನ್ನು ದ್ವಿಗುಣಗೊಳಿಸುತ್ತಾರೆ, ವೆಚ್ಚವನ್ನು ಕಡಮೆ ಮಾಡುತ್ತಾರೆ, ಜನರು ಯಾವುದೇ ಕಷ್ಟಗಳಿಲ್ಲದೆ ಸುಖವಾಗಿರುವಂತೆ ನೋಡಿಕೊಳ್ಳುತ್ತಾರೆ. ರಾಜನಾಗಲಿ, ಪ್ರಜೆಗಳಾಗಲಿ ತೊಂದರೆ ಪಡದೆ ಕೇವಲ ಶತ್ರುಗಳನ್ನು ಕಾಡುವ ಹಾಗೆ ನೋಡಿಕೊಳ್ಳುತ್ತಾರೆ."[16]

ವಿಜಯನಗರ ಇತಿಹಾಸದಲ್ಲಿ ಕ್ಷತ್ರಿಯನು ಕಾಣಿಸಿಕೊಳ್ಳುವುದಿಲ್ಲ. ಸೇನಾಪತಿಗಳನ್ನು ಅವರ ಸಾಧನೆಗಳಿಂದ ಪ್ರಶಂಸಿಸಲಾಗುತ್ತಿತ್ತೇ ಹೊರತು, ಅವರ ಕ್ಷತ್ರಿಯ ವಂಶದಿಂದಲ್ಲ. ಅವರ ಕ್ಷತ್ರಿಯ ಹಕ್ಕುಗಳನ್ನು ಅಲಕ್ಷಿಸಿ ಅವರನ್ನು ಮಹಾಮಂಡಲೇಶ್ವರ ಮೊದಲಾದ ಬಿರುದುಗಳಿಂದ ಕರೆಯುವುದು ಪದ್ಧತಿಯಾಗಿತ್ತು. ಧಾರ್ಮಿಕ ಆಚರಣೆಗಳಿಂದ, ಬ್ರಾಹ್ಮಣರಿಗೆ ಮಾಡಿದ ದಾನಧರ್ಮಗಳಿಂದ ಅವರು ರಾಜರಾದರು. ಇದಕ್ಕಿಂತ ಆಚೆಗೆ ನಮಗೆ ಏನೂ ತಿಳಿಯುವುದಿಲ್ಲ. ವರ್ಣ ಕಟ್ಟುಪಾಡುಗಳಲ್ಲಿ ಶಿಥಿಲತೆಯಿತ್ತು ಎಂದು ಮಾತ್ರ ಸೂಚಿತವಾಗಬಹುದು.

ವಿಜಯನಗರವನ್ನು ಕ್ಷತ್ರಿಯರು ಸ್ಥಾಪಿಸಲಿಲ್ಲ; ಭಾರತೀಯ ಇತಿಹಾಸದ ಪ್ರಾಚೀನ ಕ್ಷತ್ರಿಯೇತರ ರಾಜವಂಶಸ್ಥಾಪಕರ ಹಾಗೆಯೇ ವಿಜಯನಗರದ ಅರಸರೂ ಕೂಡ ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಪ್ರಯತ್ನಿಸಿದರು. ತಮ್ಮ ಮೂಲವನ್ನು ಸೂರ್ಯನಿಗೋ ಚಂದ್ರನಿಗೋ ಗುರುತಿಸಿಕೊಂಡರು. ಅವರ ಇತಿಹಾಸದಲ್ಲಿ ಒಂದು ನಿರ್ದಿಷ್ಟ ಜಾತಿಯಾಗಿ ನಿರ್ದಿಷ್ಟ ಉಲ್ಲೇಖ ಬರುವುದಿಲ್ಲ. ಬಿ.ಎ. ಸಾಲೆತೊರೆಯವರು ಸೂಚಿಸಿರುವ ಹಾಗೆ, ಗಣ್ಯ ಜನರನ್ನು, ಉನ್ನತ ವ್ಯಕ್ತಿಗಳನ್ನು ಅವರು ಹುಟ್ಟಿನಿಂದ ಕ್ಷತ್ರಿಯರಾಗಿಲ್ಲವಾದರೂ, ಅವರ ಪರಾಕ್ರಮ ಮತ್ತು ದಕ್ಷತೆಗಳಿಂದಾಗಿ ಕ್ಷತ್ರಿಯವರ್ಗಕ್ಕೆ ಸೇರಿಸಲಾಗುತ್ತಿತ್ತು. ವಾಣಿಜ್ಯ ಮತ್ತು ಕೃಷಿಕವರ್ಗದ ಚಟುವಟಿಕೆಗಳಿಂದ ಸತ್ವವು ತುಂಬಿಕೊಳ್ಳುತ್ತಿತ್ತು. ವಿಜಯನಗರದ ಭವ್ಯತೆಗೆ, ವೈಭವಕ್ಕೆ ಮಧ್ಯಜಾತಿಗಳು ಮುಖ್ಯವಾಗಿ ಕಾರಣವಾಗಿದ್ದುವು.

ವೈಶ್ಯ ಅಥವಾ ಕುಮಟೆ ಜಾತಿಯವರು ವ್ಯಾಪಾರ ನಡೆಸುತ್ತಿದ್ದರು. ಅದೊಂದೇ ಅವರಿಗೆ ಲಭ್ಯವಿದ್ದ ವೃತ್ತಿ. ಬ್ರಾಹ್ಮಣರಲ್ಲೂ ಲಿಂಗಾಯತರು ಮತ್ತು ಬಂಜಾರರಲ್ಲೂ ಕೆಲವರು, ಜೊತೆಗೆ ಮಹಮದೀಯರು ಈ ವಿಷಯದಲ್ಲಿ ಅವರಿಗೆ ಸ್ಪರ್ಧಿಗಳಾಗಿದ್ದರು. ವೈಶ್ಯರು ಸಮರ್ಥವಾದ ಸಂಘಗಳನನ್ನು ಸ್ಥಾಪಿಸಿಕೊಂಡು ರಾಜ್ಯದ ಆಡಳಿತದಲ್ಲೂ ಸಮಾಜದಲ್ಲೂ ಅಪಾರವಾದ ಪ್ರಭಾವವನ್ನು ಹೊಂದಿರುತ್ತಿದ್ದರು. ಅವರಿಗೆ ಕಂದಾಯ ಹಾಗೂ ನ್ಯಾಯ ವಿತರಣ ಅಧಿಕಾರಗಳೂ ಇರುತ್ತಿದ್ದವು. ಅಪೂರ್ವ ಕೌಶಲದಿಂದ ಅವುಗಳನ್ನು ಅವರು ನಿರ್ವಹಿಸುತ್ತಿದ್ದರು. ದೇವಾಲಯಗಳಿಗೋ, ಧರ್ಮಸಂಸ್ಥೆಗಳಿಗೋ ದಾನಮಾಡಬೇಕಾದರೆ ಉನ್ನತಾಧಿಕಾರಿಗಳು ಕೂಡ ಅವರ ಅನುಮತಿಯನ್ನು ಕೇಳಬೇಕಾಗಿತ್ತು. ಬಾರ್ಬೋಸಾನ ಪ್ರಕಾರ, ಅಮೂಲ್ಯವಾದ ಹರಳುಗಳು, ಮುತ್ತುಗಳು, ಚಿನ್ನ ಬೆಳ್ಳಿ ಹವಳ ಮೊದಲಾದ ಬೆಲೆಬಾಳುವ ವಸ್ತುಗಳ ವ್ಯಾಪಾರ ಮಾಡುತ್ತಾ ಅವರು ತುಂಬಾ ಶ್ರೀಮಂತರಾಗಿದ್ದರು. "ಇದೇ ಅವರ ಮುಖ್ಯ ವೃತ್ತಿ. ತಮಗೆ ಅನುಕೂಲವಾಗುವಂತೆ ವಸ್ತುಗಳ ಬೆಲೆಯನ್ನು ಅವರು ಅನೇಕಪಟ್ಟು ಏರಿಸುತ್ತಾರೆ ಅಥವಾ ಇಳಿಸುತ್ತಾರೆ"[17] ಅವರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳುತ್ತಾರೆ. "ಅವರ ಅಪರಾಧಗಳನ್ನೂ ರಾಜರು ವಿಚಾರಣೆ ಮಾಡಬೇಕಾಗಿಲ್ಲ. ರಾಜನಿಗೆ ತೃಪ್ತಿಯಾಗುವ ರೀತಿಯಲ್ಲಿ ಅವರೇ ಅದನ್ನು ನ್ಯಾಯವಿಚಾರಣೆ ಮಾಡಿಕೊಳ್ಳುತ್ತಾರೆ."[18] ರಾಜಾಶ್ರಯವಿದ್ದರೂ ವರ್ತಕರು ಬೆಲೆಬಾಳುವ ಉಡುಗೊರೆಗಳನ್ನು ಕೊಟ್ಟು ರಾಜನನ್ನು ಮೆಚ್ಚಿಸಬೇಕಾಗಿತ್ತು. ತಮ್ಮ ವ್ಯವಹಾರವು ಸರಾಗವಾಗಿ ನಡೆಯಬೇಕಾದರೆ ಅವನ ಅಧಿಕಾರಿಗಳಿಗೆ ಲಂಚ ಕೊಟ್ಟು ತೃಪ್ತಿಪಡಿಸಬೇಕಾಗಿತ್ತು.

ಶೂದ್ರರದು ಶ್ರೇಣಿಯಲ್ಲಿ ಕೊನೆಯದಾದ ಒಂದು ಸಂಕೀರ್ಣ ಜಾತಿ. ಅವರಲ್ಲಿ ಹಲವು ಉಪಜಾತಿಗಳಿದ್ದುವು. ಒಂದೊಂದರಲ್ಲೂ ಕಡ್ಡಾಯವಾಗಿ ಪಾಲಿಸುತ್ತಿದ್ದ ನಿಯಮಗಳಿದ್ದುವು. ಅವರಿಗೆ ವಿದ್ಯಾಭ್ಯಾಸಕ್ಕೆ ಅರ್ಹತೆಯಿರಲಿಲ್ಲ; ಸಂಸ್ಕೃತಿಯಿಂದ ಅವರನ್ನು ವಂಚಿಸಲಾಗಿತ್ತು. ಪ್ರತಿಯೊಂದು ಉಪಜಾತಿಯಲ್ಲೂ ಸದಸ್ಯರು ತಮ್ಮದೇ ಸೀಮಿತ ಪಂಗಡದೊಳಗೆ ಮದುವೆಮಾಡಿಕೊಳ್ಳುತ್ತಿದ್ದರು. ಬೇಕಾದಷ್ಟು ಮಿತಿಗಳೊಂದಿಗೆ ಅವರ ನಡುವೆ ಸಹಪಂಕ್ತಿ ಭೋಜನಕ್ಕೆ ಅವಕಾಶವಿತ್ತು. ಬಹುಸಂಖ್ಯೆಯ ಶೂದ್ರರು ಗೇಣಿದಾರರು ಅಥವಾ ಕೃಷಿ ಕಾರ್ಮಿಕರು "ಅವರು ರಾಷ್ಟ್ರದ ಬೆನ್ನುಮೂಳೆಯಾಗಿದ್ದರು; ದೇಶದ ಅಭ್ಯುದಯವು ಅವರ ಮೇಲೆ ಬಹುಮಟ್ಟಿಗೆ ಅವಲಂಬಿಸಿತ್ತು."[19] ರೆಡ್ಡಿಗಳು ಮತ್ತು ಗೌಡರು ಮುಖ್ಯವಾಗಿ ಈ ವರ್ಗಕ್ಕೆ ಸೇರಿದವರು. ನಾಯಕರು ಯೋಧರು ಅವರ ಮುಖ್ಯ ವೃತ್ತಿ ಯುದ್ಧ ಮಾಡುವುದು. ಅವರಿಗೂ ಜಮೀನು ಇರುತ್ತಿದ್ದಿತು. ಅದನ್ನು ಅವರು ಇತರರಿಂದ ಬೇಸಾಯ ಮಾಡಿಸುತ್ತಿದ್ದರು. ಕೆಲವು ಬಲಿಜ ತಂಡಗಳು, ಅವರ ವೃತ್ತಿ ವ್ಯಾಪಾರವಾದರೂ ಅವರ ಮಾದರಿಯನ್ನೇ ಅನುಸರಿಸುತ್ತಿದ್ದರು. ಈ ಉಪಜಾತಿಗಳ ಗಣ್ಯರನ್ನೇ ಮುಖ್ಯವಾಗಿ ಅಮರನಾಯಕರನ್ನಾಗಿ, ಗೇಣಿ ರೈತರಾಗಿ ಕಾವಲುಗಾರರಾಗಿ ನೇಮಕ ಮಾಡಲಾಗುತ್ತಿತ್ತು. ಕುರುಬರು ಮತ್ತು ಗೊಲ್ಲರು ಕುರಿ ಕಾಯುತ್ತಿದ್ದರು. ನೇಯುತ್ತಿದ್ದವರು ಮುಖ್ಯವಾಗಿ ಪದ್ಮಸಾಲಿಗಳು. ಮಡಕೆ ಮಾಡುವವರು ಕುಂಬಾರರು, ಭೂಮಿ ಅಗೆಯುವವರು ವಡ್ಡರು, ಉಪ್ಪು ತಯಾರಿಸುವವರು ಉಪ್ಪಲಿಗರು, ಕ್ಷೌರ ಮಾಡುವವರನ್ನು ನಾಯಿಂದರೆಂದು ಕರೆಯುತ್ತಿದ್ದರು. ಪ್ರತಿಯೊಂದು ಉಪಜಾತಿಯ ಮುಖ್ಯಸ್ಥನು ಹಿರಿಯರ ಒಂದು ಮಂಡಲಿಯ ಮೂಲಕ ಕಾರ್ಯನಿರ್ವಹಿಸುತ್ತಿದ್ದನು.

ಲಿಂಗಾಯತರು ಅಥವಾ ವೀರಶೈವರು ವಿಜಯನಗರ ಸಾಮ್ರಾಜ್ಯದಲ್ಲಿ ಇನ್ನೊಂದು ಬಹುಮುಖ್ಯ ಪಂಗಡವಾಗಿದ್ದರು. ೧೨ನೆಯ ಶತಮಾನದ ಕ್ರಾಂತಿಯ ನಂತರ ಈ ಪಂಗಡವು ಬಹಳ ಪ್ರಾಧಾನ್ಯ ಪಡೆಯಿತು. ಸಾಮ್ರಾಜ್ಯದಾದ್ಯಂತ ವೀರಶೈವ ಮಠಗಳು ತಲೆಯೆತ್ತಿದವು. ಅನೇಕ ವೀರಶೈವರು ರಾಜ್ಯದ ಗಣ್ಯ ಅಧಿಕಾರಿಗಳಾದರು. ಉದಾಹರಣೆಗೆ ಲಕ್ಕಣ್ಣ ದಂಡೇಶನು ೨ನೇ ದೇವರಾಯನ ಕಾಲದಲ್ಲಿ ಖ್ಯಾತಿ ಪಡೆದ ದಂಡನಾಯಕನಾಗಿದ್ದನು. ವೀರಶೈವ ದರ್ಶನವನ್ನು ಕುರಿತು ಅವನು ಕೃತಿರಚನೆಯನ್ನೂ ಮಾಡಿದನು. ಹಾಗೆಯೇ ಕೆಳದಿಯ ನಾಯಕರು ವೀರಶೈವರಾಗಿದ್ದರು. ಆ ಕಾಲದ ಅನೇಕ ಪಾಳೆಯಗಾರರು ಮತ್ತು ಅಮರನಾಯಕರು ವೀರಶೈವ ಧರ್ಮದ ಅನುಯಾಯಿಗಳಾಗಿದ್ದರು. ಒಂದು ರೀತಿಯಲ್ಲಿ ದೇಶಾದ್ಯಂತ ಎಲ್ಲ ಕಡೆಯೂ ಅಂಗೀಕೃತವಾಗಿದ್ದ ಮತ್ತು ಹೇರಲ್ಪಟ್ಟಿದ್ದ ವೈದಿಕ ಬ್ರಾಹ್ಮಣ ಸಂಸ್ಕೃತಿಗೆ ಬದಲಿ ಸಾಮಾಜಿಕ ಮಾದರಿಯನ್ನು ಅದು ಒದಗಿಸಿತು.

ತತ್ವತಃ ಅವರು ಜಾತಿಪದ್ಧತಿಗೆ ವಿರುದ್ಧವಾಗಿದ್ದರು. ಅವರಿಗೆ ಒಬ್ಬ ದೇವರಲ್ಲಿ ನಂಬಿಕೆಯಿತ್ತು. ಯಜ್ಞ ಯಾಗಾದಿಗಳನ್ನಾಗಲಿ, ಉಪವಾಸ ವ್ರತಗಳನ್ನಾಗಲಿ ಮಾಡುವ ಅಗತ್ಯವಿಲ್ಲ. ದೇವಾಲಯಗಳಿಗೆ ಹೋಗುವುದಾಗಲಿ, ದೇವಾಲಯಗಳನ್ನು ಕಟ್ಟಿಸುವುದಾಗಲಿ ಅಗತ್ಯವಿಲ್ಲ. ಶಿವಲಿಂಗವನ್ನು ಅವರು ಧರಿಸುತ್ತಿದ್ದರು. ಅದು ಸದಾಕಾಲವೂ ತಮ್ಮನ್ನು ಪರಿಶುದ್ಧವಾಗಿಡುವುದರಿಂದ ಜನನ-ಮರಣಗಳ ಮೈಲಿಗೆ

ಅಂಟುವುದಿಲ್ಲ ಎಂದು ಭಾವಿಸುತ್ತಿದ್ದರು. ವಿವಾಹ ಮತ್ತು ಇತರ ಸಂಸ್ಕಾರಗಳಲ್ಲಿ ವೈದಿಕ ವಿಧಾನಕ್ಕಿಂತ ತುಂಬಾ ಬೇರೆಯಾದ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರ ಪುರೋಹಿತರು ಜಂಗಮರು ಮತ್ತು ಗುರುಗಳಿಗೆ ರಾಜ್ಯದಾದ್ಯಂತ ಮಠಗಳಿರುತ್ತಿದ್ದುವು. ಅವರು ಸಸ್ಯಾಹಾರಿಗಳು ವಿಧವಾ ವಿವಾಹವನ್ನಾಗಲಿ, ವಿಚ್ಛೇದವನ್ನಾಗಲಿ ಅವರು ನಿಷೇಧಿಸಲಿಲ್ಲ. ಆ ಕಾಲದ ಕನ್ನಡ ವೀರಶೈವ ಸಾಹಿತ್ಯವು ಈ ಅಂಶಗಳನ್ನು ಸ್ಪಷ್ಟವಾಗಿ ಚಿತ್ರಿಸಿದೆ. ಅವರು ಸಂಸ್ಕೃತದಲ್ಲೂ ಬರೆಯತೊಡಗಿದರು. ಈ ಕಾಲದ ವೀರಶೈವ ಅರಸರು ಸಹಿಷ್ಣುತೆ ಮತ್ತು ಬಹುಳತೆಯ ಸಂರಕ್ಷಣೆಯ ಸಾಮಾಜಿಕ ನೀತಿಯನ್ನು ಅನುಸರಿಸಿದರು. ವಾಸ್ತವವಾಗಿ ಪೋರ್ಚುಗೀಸ್ ಕ್ರಿಶ್ಚಿಯನ್ನರ ಹಿಂಸೆಯನ್ನು ತಾಳಲಾರದೆ ಕೊಂಕಣಿ ಕ್ರಿಶ್ಚಿಯನ್ನರು ಗೋವಾದಿಂದ ವಲಸೆ ಬಂದಾಗ ಅವರಿಗೆ ಆಶ್ರಯಕೊಟ್ಟವರು ಕೆಳದಿಯ ನಾಯಕರು. ಅವರು ಮೃತದೇಹಗಳನ್ನು ಹೂಳುತ್ತಿದ್ದರು, ಬ್ರಾಹ್ಮಣರಂತೆ ವಾರ್ಷಿಕ ಶ್ರಾದ್ಧಕಾರ್ಯವನ್ನು ಮಾಡುತ್ತಿರಲಿಲ್ಲ. ಅವರಲ್ಲಿ ಅನೇಕ ಒಳಪಂಗಡಗಳಿದ್ದುವು; ಜಂಗಮರು, ಬಂಜಾರರು (ಶೆಟ್ಟಿ), ಆರಾಧ್ಯರು, ಸರ್ದಾರ, ನೊಣಬ ಇತ್ಯಾದಿ. ಅವರು ಕೃಷಿ, ವ್ಯಾಪಾರ, ಕೈಗಾರಿಕೆ, ಸಾರ್ವಜನಿಕ ಆಡಳಿತ, ಇತರ ಸೇವೆಗಳು ಮತ್ತು ವಿದ್ಯಾಸಂಬಂಧವಾದ ವೃತ್ತಿಗಳಲ್ಲಿ ನಿರತರಾಗಿದ್ದರು.

ಅಸ್ಪೃಶ್ಯರನ್ನು ಐದನೆಯ ವರ್ಗಕ್ಕೆ ನೂಕಲಾಗಿತ್ತು. ಅವರನ್ನು ಅಂತ್ಯಜರು ಅಥವಾ ಹೊಲೆಯರು ಎಂದು ಕರೆಯುತ್ತಿದ್ದರು. ಅವರು ನಾಗರಿಕ ಸಮಾಜದ ಚೌಕಟ್ಟಿನಿಂದ ಹೊರಗಿದ್ದರು. ಹಳ್ಳಿಯ ಹೊರವಲಯದಲ್ಲಿಯೇ ಅವರು ವಾಸಮಾಡಬೇಕಾಗಿತ್ತು. ಮೇಲುಜಾತಿಗಳ ಜನರು ಅವರನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು, ಅಪಮಾನಿಸುತ್ತಿದ್ದರು. ಅವರು ಕಡ್ಡಾಯವಾಗಿ ದುಡಿಯಬೇಕಾಗಿತ್ತು. ಮಿಕ್ಕ ಎಲ್ಲರನ್ನೂ ಕುರಿತು ಪರಮ ವಿಧೇಯತೆಯಿಂದ ನಡೆದುಕೊಳ್ಳಬೇಕಾಗಿತ್ತು, ಅವರ ಆದೇಶಗಳನ್ನು ಪಾಲಿಸಬೇಕಾಗಿತ್ತು. ಅತಿಸಣ್ಣ ಅಪರಾಧಗಳಿಗೂ ಅವರಿಗೆ ಅತ್ಯಂತ ಕ್ರೂರವಾದ ದಂಡನೆ ಕೊಡಲಾಗುತ್ತಿತ್ತು. ಇತರರ ಬಾವಿಗಳಿಂದ ಅವರು ನೀರು ಸೇದಿಕೊಳ್ಳುವ ಹಾಗಿರಲಿಲ್ಲ. ಇತರರ ಮನೆಗಳಿಗೆ ಹೋಗುವಂತಿರಲಿಲ್ಲ. ಇತರರ ದೇವಾಲಯಗಳಿಗೆ ಪ್ರವೇಶಿಸಿ ವಿಗ್ರಹವನ್ನು ಪೂಜಿಸುವಂತಿರಲಿಲ್ಲ. ಅವರಲ್ಲೂ ಎರಡು ಉಪಪಂಗಡಗಳಿದ್ದುವು: ಮಾಲರು ಮತ್ತು ಮಾದಿಗರು. ಈ ಎರಡು ಪಂಗಡಗಳ ನಡುವೆ ವಿವಾಹ ಸಂಪರ್ಕ ಇರಲಿಲ್ಲ. ಎರಡಕ್ಕೂ ಬೇರೆ ಬೇರೆ ಮುಖ್ಯಸ್ಥನಿದ್ದನು, ಆಡಳಿತ ಮಂಡಳಿಯಿತ್ತು, ನಿಯಮ ನಿಬಂಧನೆಗಳಿದ್ದುವು. ಕೃಷಿ ಕಾರ್ಮಿಕರಲ್ಲಿ ಬಹಳ ಜನ ಮಾಲವರ್ಗಕ್ಕೆ ಸೇರಿದವರು; ಉಪಕಸುಬಾಗಿ ಅವರು ನೇಯ್ಗೆ ಮಾಡುತ್ತಿದ್ದರು. ಯಾವುದೇ ನಾಗರಿಕ ಅಥವಾ ಸೈನ್ಯ ಹುದ್ದೆಗಳಿಗೆ ಅವರನ್ನು ಸೇರಿಸುತ್ತಿರಲಿಲ್ಲವಾದ್ದರಿಂದ ಅವರಲ್ಲಿ ಅನೇಕರು ಹೆದ್ದಾರಿ ದರೋಡೆಕೋರರಾಗಿದ್ದರು. ದಟ್ಟವಾದ ಅರಣ್ಯಗಳಲ್ಲಿ ಸಾಗುತ್ತಿರುವ ಯಾತ್ರಿಗಳ ತಂಡ ಅಥವಾ ವರ್ತಕರ ಕಾರವಾನ್‌ಗಳ ಮೇಲೆ ಆಕ್ರಮಣ ಮಾಡಿ ದೋಚಿಕೊಂಡು ಓಡಿಬಿಡುತ್ತಿದ್ದರು. ಮಾದಿಗರು ಮುಖ್ಯವಾಗಿ ಕುಶಲಕರ್ಮಿಗಳು. ಪಾದರಕ್ಷೆಗಳನ್ನೂ, ಬಾವಿಯಿಂದ ನೀರೆತ್ತಲು ತೊಗಲಿನ ಹಗ್ಗವನ್ನೂ, ಬಕೆಟ್ಟುಗಳನ್ನೂ ಅವರು ತಯಾರಿಸುತ್ತಿದ್ದರು.

ಇದರಿಂದ ನಮಗೆ ಸ್ಪಷ್ಟವಾಗುವುದೇನೆಂದರೆ ಮೇಲಿನ ಮೂರು ಜಾತಿಗಳಲ್ಲಿ ನಿಯಮಗಳನ್ನು ಅಷ್ಟೊಂದು ಕಟ್ಟುನಿಟ್ಟಾಗಿ ಅನುಸರಿಸುತ್ತಿರಲಿಲ್ಲ; ಮತ್ತು ಅವರು ಸರಕಾರದೊಂದಿಗೆ ನಿಕಟವಾದ ಸಹಯೋಗವನ್ನು ಹೊಂದಿದ್ದರು. ಅಧಿಕ ಉತ್ಪಾದನೆ, ಅಧಿಕ ವ್ಯಾಪಾರ-ವಾಣಿಜ್ಯ ಮತ್ತು ಹೊಸಹೊಸದಾಗಿ ರಾಜ್ಯವನ್ನು ಗೆದ್ದು ವಿಸ್ತರಿಸುವುದು ಇವು ಮುಖ್ಯವಾದ ಆಸಕ್ತಿಗಳಾಗಿದ್ದವು. ಇವರಲ್ಲಿ ಭಿನ್ನಾಭಿಪ್ರಾಯಗಳು ಕಂಡುಬಂದರೂ ಒಬ್ಬರನ್ನೊಬ್ಬರು ಅವಲಂಬಿಸಿದ್ದರು. ಪ್ರತಿಯಾದ ಶಕ್ತಿಯಾಗಿ ಸಮತೋಲನ ಸಾಧಿಸುತ್ತಿದ್ದರು, ಒಬ್ಬರ ಮೇಲೊಬ್ಬರು ಸ್ಪರ್ಧಿಸುತ್ತಿದ್ದರು. ಮುಖ್ಯವಾಗಿ ಆಗಾಗ ಭಿನ್ನಮತ ಕಾಣಿಸಿಕೊಂಡರೂ ಅವರ ಹಿತಗಳು ಪರಸ್ಪರ ವಿರುದ್ಧವಾಗಿರಲಿಲ್ಲ.

ವಿಪ್ರವಿನೋದಿಗಳೆಂಬ ನೂತನ ಸಮುದಾಯವೊಂದು ತಲೆಯೆತ್ತಿದ್ದು, ನಾಯಿಂದ ಸಮುದಾಯವು ಪಡೆದಿದ್ದ ವಿಶೇಷ ಸವಲತ್ತುಗಳು, ಕೈಕ್ಕೋಲರು ಮತ್ತು ರೆಡ್ಡಿಗಳೇ ಮೊದಲಾದ ಪಂಗಡಗಳು ಬೀರುತ್ತಿದ್ದ ಪ್ರಭಾವ, ಹರಿಹರ ಮತ್ತು ಬುಕ್ಕರು ಕುರುಬರೊಂದಿಗೆ ನಡೆಸಿದ ವೈವಾಹಿಕ ಸಂಬಂಧಗಳು[20] ಇವೆಲ್ಲವೂ ವಿವಿಧ ಮತಗಳ ನಡುವೆ ಸಾಮಾಜಿಕ ಐಕ್ಯತೆಯನ್ನು ಬಲಪಡಿಸುವ ಸಲುವಾಗಿ ನೂತನ ಸಮಾಜವೊಂದರ ಪುನರ್ನಿರ್ಮಾಣವಾದುದನ್ನು ತೋರಿಸುತ್ತದೆ. ಬಲಗೈ (ವಲಂಗೈ) ಮತ್ತು ಎಡಗೈ (ಇಡಂಗೈ)ಗಳ ನಡುವೆ ನಡೆಯುತ್ತಿದ್ದ ಸಂಘರ್ಷಗಳು ಸಮಾಜದ ಉದಾರ ಪ್ರವೃತ್ತಿಗಳನ್ನು ಹಾಳುಮಾಡುವಷ್ಟು ಕ್ರೂರವಾಗಿರಲಿಲ್ಲ.

ಜಾತಿಪದ್ಧತಿಯು ಮಾನವನ ಮನಸ್ಸಿನ ಮೇಲೆ ಬೀರಿದ ದುಷ್ಪರಿಣಾಮ, ಅದರ ಬೆಂಬಲಿಗರು ತೋರ್ಪಡಿಸುತ್ತಿದ್ದ ಕಪಟ-ವಂಚನೆ, ಇವು ಸಮಾಜದಲ್ಲಿ ಅಸಮಾಧಾನವನ್ನು ಕೆರಳಿಸಿದುವು. ಕನಕದಾಸ, ಪುರಂದರದಾಸರಂತಹ ಸಂತಶ್ರೇಷ್ಠರು, ಹದಿನೇಳನೆಯ ಶತಮಾನದ ಸರ್ವಜ್ಞ ಕವಿ ಇವರೆಲ್ಲ ಸರಳವಾದ ಹಾಡು ಮತ್ತು ವಚನಗಳ ರೂಪದಲ್ಲಿ ಭಕ್ತಿಯನ್ನು ಪ್ರಸಾರ ಮಾಡಿದರು.

ಅವರು ಎಲ್ಲಾ ಜಾತಿಗಳ, ಐದನೆಯ ಜಾತಿಯಾದ ಅಸ್ಪೃಶ್ಯರೂ ಸೇರಿದಂತೆ, ಸಮಾನತೆಯನ್ನು ಸಾರಿದರು. ಸಾಮಾಜಿಕ ಸಂಬಂಧಗಳಲ್ಲಿ ಇಬ್ಬಂದಿ ನೀತಿಯನ್ನು ಅನುಸರಿಸುತ್ತಿದ್ದುದಕ್ಕಾಗಿ ಅವರು ಬ್ರಾಹ್ಮಣರನ್ನು ಖಂಡಿಸಿದರು. ಶೂದ್ರರಿಗೆ ಸಮಾಜದ ಚೌಕಟ್ಟಿನಲ್ಲಿ ಎತ್ತರದ ಸ್ಥಾನವನ್ನು ಕೊಟ್ಟರು. ಎಲ್ಲಾ ಧರ್ಮಗಳ ಸಮಾನತೆಯನ್ನು ಸಾರಿ, ಧರ್ಮಕಾರಣವಾದ ಕಲಹಗಳನ್ನು ಖಂಡಿಸಿ, ಭಗವಂತನು ಒಬ್ಬನೇ ಎಂದು ಸಾರಿದರು.

ಅವರು ಸಾಮಾಜಿಕ ಐಕ್ಯತೆ ಮತ್ತು ಸಾಮರಸ್ಯಗಳಿಗೆ ಕರೆಕೊಟ್ಟರು. ಹರಿದಾಸರಲ್ಲಿ ವ್ಯಾಸಕೂಟ ಮತ್ತು ದಾಸಕೂಟ ಎಂಬ ಎರಡು ವಿಭಾಗಗಳಿದ್ದುವೆ ಅಥವಾ ಅವೆರಡೂ ಒಂದೆಯೇ ಎಂಬ ಚರ್ಚೆಯನ್ನು ಒತ್ತೆಟ್ಟಿಗಿಟ್ಟರೆ, ಹರಿದಾಸ ಆಂದೋಲನದ ಹಿಂದಿನ ಮುಖ್ಯ ಪ್ರೇರಕಶಕ್ತಿ ಪುರಂದರದಾಸರು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಈ ಆಂದೋಲನದ ಬೆಳಕಿನಂತಿದ್ದ ಇಬ್ಬರು ಮಹನೀಯರೂ ಬ್ರಾಹ್ಮಣರಲ್ಲ. ನೂತನ ಸಾಮಾಜಿಕ ಜಾಗೃತಿಯು ವಿಜಯನಗರ ಸಮಾಜದ ಕುರುಹಾಗಿತ್ತು. ಸಮಾಜದಲ್ಲಿ ತೀರಾ ಕೆಳಗಿನ ಸ್ತರದಲ್ಲಿದ್ದವರೂ ಕೂಡ ಜಾತಿ-ವರ್ಗಭೇದವಿಲ್ಲದ ಉದಾರ ಸಮಾಜ ನಿರ್ಮಾಣಕ್ಕಾಗಿ ಶ್ರಮಿಸುತ್ತಿದ್ದರು ಎಂಬುದು ಗೊತ್ತಾಗುತ್ತದೆ.

ಕನಕದಾಸರು (೧೫೪೯-೧೬೦೭) ವಿಜಯನಗರ ಕಾಲದ ಒಬ್ಬ ಸಂತ, ಸಮಾಜ ಸುಧಾರಕ ಮತ್ತು ಕವಿ. ಅವರು ಕರ್ನಾಟಕದಲ್ಲೆಲ್ಲಾ ವ್ಯಾಪಕವಾಗಿ ಸಂಚಾರ ಮಾಡಿದರು. ಬೇಲೂರು, ಸೋಸಲೆ, ಹಾಳೂರು, ಶ್ರೀರಂಗಪಟ್ಟಣ, ತಿರುಪತಿ ಮತ್ತು ಉಡುಪಿಗಳಿಗೆ ಹೋಗಿದ್ದರು. ಧಾರವಾಡ ಜಿಲ್ಲೆಯಲ್ಲಿದ್ದ ಅವರ ಇಷ್ಟದೈವ ಕಾಗಿನೆಲೆ ಆದಿಕೇಶವ (ಕಾಗಿನೆಲೆ ಧಾರವಾಡ ಜಿಲ್ಲೆಯ ಒಂದು ಹಳ್ಳಿ) ಈ ಅಂಕಿತದಲ್ಲಿ ಅವರು ಕನ್ನಡದಲ್ಲಿ ನೂರಾರು ಭಕ್ತಿಗೀತೆಗಳನ್ನು ರಚಿಸಿದರು. ಈ ಹಾಡುಗಳಲ್ಲದೆ 'ರಾಮಧಾನ್ಯ ಚರಿತೆ' ಎಂಬ ಕಾವ್ಯವನ್ನೂ ಅವರು ರಚಿಸಿದರು.[21] ಸಾಮಾಜಿಕ ವಸ್ತುವಿನಿಂದಲೂ ತನ್ನ ಕಾಲದ ಸಾಮಾಜಿಕ ಸ್ಥಿತಿಯನ್ನು ನಿರೂಪಿಸಲು ಬಳಸಿದ ತಂತ್ರದಿಂದಲೂ ಈ ಕೃತಿ ಮಹತ್ವದ್ದಾಗಿದೆ. ನಿಕೊಲೋ ಕಾಂಟಿ, ಅಬ್ದುಲ್‌ರಜಾಕ್, ಬಾರ್ಬೋಸಾ, ಪೇಸ್, ನ್ಯೂನಿಜ್ ಮೊದಲಾದ ಅನೇಕ ವಿದೇಶೀ ಪ್ರವಾಸಿಗರು ಕೊಟ್ಟಿರುವ ಕಣ್ಣು ಕೋರೈಸುವ ಚಿತ್ರದ ಅಡಿಯಲ್ಲಿಯೇ ಸಾಮಾಜಿಕ ಅನ್ಯಾಯ, ವಂಚನೆ, ಅಸಮಾನತೆ, ದಬ್ಬಾಳಿಕೆ, ಶೋಷಣೆಗಳೂ ಇದ್ದುವು. ಗುಲಾಮಗಿರಿ, ಅಸ್ಪೃಶ್ಯತೆ, ಬಹುಪತ್ನಿತ್ವ, ಸೂಳೆಗಾರಿಕೆ, ದೇವದಾಸಿ ಮತ್ತು ಸತಿಪದ್ಧತಿಗಳು ದೇಶೀಯ-ವಿದೇಶೀಯ ಮೂಲಗಳು ದಾಖಲಿಸುವ ಕೆಲವು ಸಾಮಾಜಿಕ ಪಿಡುಗುಗಳು. ಈ ವಾಸ್ತವ ಸಮಸ್ಯೆಗಳ ವಿರುದ್ಧವಾಗಿ ಕನಕದಾಸರು ಬಂಡೆದ್ದರು. ತಮ್ಮದೇ ಸಾಮಾಜಿಕ ದರ್ಶನವೊಂದು ಮಂಡಿಸಿ ಅವುಗಳನ್ನು ಸುಧಾರಿಸಲು ಪ್ರಯತ್ನಿಸಿದರು. ಅವರ ಮೋಹನ ತರಂಗಿಣಿಯ ಆ ಕಾಲದ ಭೋಗಜೀವನದ ಮಟ್ಟವನ್ನು ಪರೋಕ್ಷವಾಗಿ ಸೂಚಿಸುತ್ತಿದ್ದರೆ ರಾಮಧಾನ್ಯಚರಿತೆ ಮತ್ತು ಹಾಡುಗಳು ವಿಜಯನಗರ ಸಮಾಜದಲ್ಲಿ ಪ್ರಚಲಿತವಾಗಿದ್ದ ಅಸಮತೆ-ಅನ್ಯಾಯಗಳನ್ನು ನಿರೂಪಿಸುತ್ತವೆ. ಆದ್ದರಿಂದ ರಾಮಧಾನ್ಯಚರಿತೆಯ ಮುಖ್ಯ ಅಂಶಗಳನ್ನು, ಕೆಲವು ಹಾಡುಗಳ ಸಾರಾಂಶವನ್ನೂ ಅವು ಒಳಗೊಂಡಿರುವ ಸಮಕಾಲಿಕ ಸಮಾಜದ ವಿಮರ್ಶೆಯ ದೃಷ್ಟಿಯಿಂದ ಇಲ್ಲಿ ತೋರಿಸಿಕೊಡಲು ಪ್ರಯತ್ನಿಸಲಾಗಿದೆ.

ಚಿಕ್ಕದಾದರೂ ಗುಣದಲ್ಲಿ ಉತ್ತಮವಾದ ರಾಮಧಾನ್ಯಚರಿತೆಯು ಕನ್ನಡಸಾಹಿತ್ಯದಲ್ಲೇ ವಿಶಿಷ್ಟವಾದೊಂದು ಕೃತಿ. ೧೫೬ ಭಾಮಿನೀ ಷಟ್ಪದಿಗಳಿಂದ ಅದು ರಚಿತವಾಗಿದೆ. ಅಕ್ಕಿ ಮತ್ತು ರಾಗಿ ಇವುಗಳ ನಡುವೆ ಯಾವುದು ಮೇಲು ಎಂದು ಘರ್ಷಣೆಯುಂಟಾದದ್ದೇ ಅದರ ವಸ್ತು. ಪುರಾಣ ಘಟನೆಗಳ ಹಿನ್ನೆಲೆಯಲ್ಲಿ ಕನಕದಾಸರು ಈ ಮೇಲಾಟವನ್ನು ಚಿತ್ರಿಸಿದ್ದಾರೆ. ಕೃಷಿಯ ಸಾರಾಂಶ ಹೀಗಿದೆ:[22] ರಾಮಾಯಣದ ನಾಯಕನಾದ ರಾಮನು ರಾವಣನನ್ನು ಸಂಹರಿಸಿ ಅಯೋಧ್ಯೆಗೆ ಹಿಂದಿರುಗುತ್ತಿರುವಾಗ ಗೌತಮ ಋಷಿಯ ಆಶ್ರಮದಲ್ಲಿ ಅವನಿಗೆ ಒಂದು ಔತಣವನ್ನು ನೀಡಲಾಯಿತು. ಅಂದಿನ ಅಡುಗೆಯನ್ನು ನವಧಾನ್ಯಗಳಿಂದ ಮಾಡಲಾಗಿತ್ತು. ಆ ಒಂಬತ್ತು ಧಾನ್ಯಗಳು ನರದೆಲಗ (ರಾಗಿ), ನೆಲ್ಲು (ಅಕ್ಕಿ), ಹಾರಕ, ಬರಗು, ಜೋಳ, ಕಂಬ, ಸಾಮೆ, ನವಣೆ ಮತ್ತು ಗೋಧಿ, ಅವುಗಳಲ್ಲಿ ಯಾವ ಧಾನ್ಯವು ಅತ್ಯುತ್ತಮವಾದದ್ದು ಎಂದು ರಾಮನು ಕೇಳಲು ಅಲ್ಲಿ ನೆರೆದಿದ್ದವರೊಬ್ಬರೂ ಒಂದೊಂದು ಧಾನ್ಯವನ್ನು ಹೆಸರಿಸಿದರು. ಆ ಸಮಯದಲ್ಲಿ ಅಕ್ಕಿ ಮತ್ತು ರಾಗಿಗಳ ನಡುವೆ ಬಿಸಿಬಿಸಿ ವಾಗ್ವಾದವು ನಡೆಯಿತು.

ಅಕ್ಕಿ ಹೇಳಿತು: "ಈ ಭೂಮಿಯ ಮೇಲೆ ನನ್ನನ್ನು ಬ್ರಾಹ್ಮಣರು ವಿವಿಧ ಧಾರ್ಮಿಕ ಸಮಾರಂಭಗಳಲ್ಲಿ ಉಪಯೋಗಿಸುತ್ತಾರೆ. ಉಪನಯನದಂತಹ ಪವಿತ್ರ ಮಂಗಳ ಕಾರ್ಯದಲ್ಲೂ ನನ್ನನ್ನು ಬಳಸುತ್ತಾರೆ. ಔತಣದಡಿಗೆ ಮಾಡುವಾಗ, ಶುಭಕಾರ್ಯಗಳಲ್ಲಿ ಮಂತ್ರಾಕ್ಷತೆ ಮಾಡುವಾಗ ನಾನು ಬೇಕು. ಹಾಗಾಗಿ ನಾನು ಎಲ್ಲ ಕಡೆಯೂ ಶೋಭಿಸುತ್ತೇನೆ. ನಾನು ದೇವತೆಗಳಿಗೂ ಪ್ರಿಯನಾಗಿದ್ದೇನೆ. ಜನರಿಗೆ, ಮಕ್ಕಳಿಗೆ, ಬ್ರಾಹ್ಮಣರ ಭೋಜನ ಕೂಟಗಳಿಗೆ, ಮಕ್ಕಳಿಗೆ ವಿದ್ಯಾಭ್ಯಾಸದ ದೀಕ್ಷೆ ಕೊಡುವಾಗ, ಎಲ್ಲಾ ಮನೆಗಳಲ್ಲೂ ಹಬ್ಬ ಹರಿದಿನಗಳಲ್ಲಿ ನಾನು ಉಪಯುಕ್ತನಾಗುತ್ತೇನೆ. ನೀನೊಬ್ಬ ಅಸಮರ್ಥ ಭ್ರಷ್ಟ. ನನ್ನ ಕಣ್ಣಿಗೆ ಬೀಳದಂತೆ ತೊಲಗಿಹೋಗು. ಈ ಭೂಮಂಡಲದಲ್ಲಿ ಯಾರೂ ನನಗೆ ಸಮರಲ್ಲ. ಪ್ರತಿಯೊಬ್ಬರೂ, ಪ್ರತಿಯೊಂದು ಸಂದರ್ಭದಲ್ಲೂ ನನ್ನ ಅಸ್ತಿತ್ವವನ್ನು ಅಪೇಕ್ಷಿಸುತ್ತಾರೆ. ಗೃಹ ಪ್ರವೇಶವಿರಬಹುದು, ಮದುವೆಯಿರಬಹುದು ಅಥವಾ ಆಯುಧಪೂಜೆಯಿರಬಹುದು. ಬ್ರಾಹ್ಮಣರ ಹಣೆಯ ಮೇಲೆ ಗಂಧಾಕ್ಷತೆಯಾಗಿ ನಾನು ಶೋಭಿಸುತ್ತೇನೆ."

ರಾಗಿ ವಾದಿಸಿತು: "ಎಲೋ ಅಕ್ಕಿಯೇ, ಮೂಢನಂಬಿಕೆಗಳಿಂದ ಕೂಡಿದ ನೀನು ಉದ್ಧಟನೂ ಸ್ವಾರ್ಥಿಯೂ ಆಗಿದ್ದೀಯೆ. ಸಮಾಜದಲ್ಲಿ ನೀನು ಶ್ರೀಮಂತಿಕೆಯ ಮೂರ್ತರೂಪ. ಬಡವರನ್ನು ಮತ್ತು ಶೋಷಿತರನ್ನು ನೀನು ಎಂದೂ ಕಾಳಜಿಯಿಂದ ನೋಡಿಲ್ಲ. ಯಾವಾಗಲೂ ಸಮಾಜದಲ್ಲಿ ಹಣವುಳ್ಳವರನ್ನು ಮಾತ್ರವೇ ನೀನು ಬೆಂಬಲಿಸುತ್ತೀಯೆ. ನೀನು ಮಕ್ಕಳಿಗೆ ಜನ್ಮಕೊಟ್ಟ ತಾಯಂದಿರಿಗೆ, ರೋಗಿಗಳಿಗೆ ಹಾಗೂ ಮೃತದೇಹದ ಬಾಯಿಗೆ ಸುರಿಯುವುದಕ್ಕೆ ಮಾತ್ರವೇ ಉಪಯುಕ್ತನಾಗಿದ್ದೀಯೆ, ನಿನ್ನ ಜೀವನವೇ ವ್ಯರ್ಥ. ಮಳೆ ವಿಫಲವಾದಾಗ ಬೆಳೆಗಳು ಬರದೆ ಹೋದಾಗ, ಕ್ಷಾಮವು ಕಾಲಿಟ್ಟಾಗ, ಜನರು ಮತ್ತು ಪ್ರಾಣಿಗಳು ಆಹಾರವಿಲ್ಲದೆ ಬಳಲುತ್ತಿರುವಾಗ ನಾನು ಅವರನ್ನು ಕಾಪಾಡುತ್ತೇನೆ. ನೀನು, ನಿನ್ನ ಅನುಯಾಯಿಗಳು ಅಂತಹ ಆಪತ್ತಿನ ಸಮಯದಲ್ಲಿ ಎಲ್ಲಿಗೆ ಹೋಗಿದ್ದಿರಿ ? ನವಧಾನ್ಯಗಳಲ್ಲಿ ಯಾವುದೂ ನನಗೆ ಸಮನಲ್ಲ. ಹಿರಿಯರ ಶ್ರಾದ್ಧಗಳಲ್ಲಿ ಹಾಗೂ ಮಕ್ಕಳಿಗೆ ತಿನ್ನಿಸಲು ಮಾತ್ರ ನಿನ್ನನ್ನು ಬಳಸುತ್ತಾರೆ ಅಷ್ಟೆ.

ಚರ್ಚೆ ಇತ್ಯರ್ಥವಾಗದೆ ಬಿಕ್ಕಟ್ಟಿಗೆ ಸಿಕ್ಕಿಕೊಂಡಿತು. ಆಗ ರಾಮನು ಈ ಎರಡೂ ಧಾನ್ಯಗಳ ಶಕ್ತಿಯನ್ನು ಪರೀಕ್ಷಿಸಲೆಂದು ಗೌತಮ ಋಷಿಗಳಿಗೆ ಹೇಳಿ ಎರಡನ್ನೂ ಕೆಲಕಾಲ ಸೆರೆಗೆ ಹಾಕಿಸಿದನು. ಆಮೇಲೆ ಅವನು ಅಯೋಧ್ಯೆಗೆ ಬಂದನು. ಪಟ್ಟಾಭಿಷೇಕವು ನಡೆಯಿತು. ಬಂಧನದಲ್ಲಿಟ್ಟಿದ್ದ ಎರಡೂ ಧಾನ್ಯಗಳನ್ನು ಬಂಧಮುಕ್ತಗೊಳಿಸುವಂತೆ ರಾಮನು ಆಜ್ಞೆಮಾಡಿದನು. ದೀರ್ಘಕಾಲದ ಸೆರೆವಾಸದಿಂದಾಗಿ ಅಕ್ಕಿಯು ಕೊಳೆತುಹೋಗಿತ್ತು. ರಾಗಿ ಮಾತ್ರ ಎಂದಿನಂತೆಯೇ ಶುದ್ಧವಾಗಿ ಉಳಿದಿತ್ತು. ರಾಮನ ಆಸ್ಥಾನದಲ್ಲಿ ನೆರೆದಿದ್ದ ಎಲ್ಲಾ ಗಣ್ಯರೂ ರಾಗಿಯ ಶಕ್ತಿಯನ್ನು ಕೊಂಡಾಡಿದರು. ಗೌತಮ ಋಷಿಯು ಅದರ ಅತ್ಯುತ್ಕೃಷ್ಟತೆಯನ್ನು ಘೋಷಿಸಿದನು. ದೇವೇಂದ್ರನು ನವಧಾನ್ಯಗಳಲ್ಲಿ ರಾಗಿಗೆ ಗೌರವದ ಸ್ಥಾನವನ್ನು ನೀಡಿದನು. ಸ್ವರ್ಗದ ದೇವತೆಗಳೆಲ್ಲರೂ ರಾಗಿಯೇ ತಮ್ಮ ಶಕ್ತಿಯ ಮೂಲವೆಂದು ಒಪ್ಪಿಕೊಂಡರು. ತನಗೆ ರಾಗಿಯ ಮೇಲುಂಟಾದ ಪ್ರೀತಿ ವಾತ್ಸಲ್ಯಗಳ ಕುರುಹಾಗಿ ರಾಮನು ಅದಕ್ಕೆ ರಾಮಧಾನ್ಯ, ರಾಘವಧಾನ್ಯ ಎಂದು ಹೆಸರಿಟ್ಟನು. ಇಷ್ಟಾದರೂ

ರಾಗಿ ಮಾತ್ರ ಗರ್ವ ಪಡಲಿಲ್ಲ. ಅದಕ್ಕೆ ಬದಲು ತನ್ನ ಪಕ್ಕದಲ್ಲಿ ನಿಂತಿದ್ದ ಅಕ್ಕಿಯನ್ನು ಅದು ಸಮಾಧಾನಪಡಿಸಿತು. ನಾಚಿಕೆಯಿಂದ ತಲೆ ತಗ್ಗಿಸಿ ನಿಂತಿದ್ದ ಅದಕ್ಕೆ, ಇಬ್ಬರೂ ಸಮಾಜದ ಸೇವೆ ಮಾಡುವುದರಲ್ಲಿ ಸಮಾನರು ಮತ್ತು ಪರಸ್ಪರ ಪೂರಕರಾದವರು ಎಂದು ಹೇಳಿತು. ಎರಡೂ ಗೆಳೆಯರಾದುವು.

ರಾಮಧಾನ್ಯ ಚರಿತೆಯು ಸಮಕಾಲೀನ ವಿಜಯನಗರ ಸಮಾಜವನ್ನು ಕುರಿತು ಬರೆದ ಪರೋಕ್ಷ ವ್ಯಾಖ್ಯಾನ. ಶ್ರೀಮಂತರಿಗೂ ಬಡವರಿಗೂ ನಡುವೆ, ಮೇಲಿನವರಿಗೂ ಕೆಳಗಿನವರಿಗೂ ನಡುವೆ ಇದ್ದ ಅಗಲವಾದ ಕಂದಕವನ್ನು ಅದು ತೋರಿಸಿತು. ಕನಕದಾಸರು ಶೂದ್ರವರ್ಣದ ಕುರುಬ ಜಾತಿಯಲ್ಲಿ ಹುಟ್ಟಿದವರು. ಬಡತನ, ಅಪಮಾನ, ದುಃಖಗಳನ್ನು ಅನುಭವಿಸಿದವರು. ಸಮಾಧಾನಪಡಿಸಲು ಅವರಿಗೆ ಪತ್ನಿಯಾಗಲಿ ಬೇರಾವುದೇ ಒಂದು ಜೀವವಾಗಲಿ ಇರಲಿಲ್ಲ. ದುರದೃಷ್ಟ ಅವರನ್ನು ಒಂದೇ ಸಮನೆ ಕಾಡಿತು. ಉದಾಹರಣೆಗೆ ಒಂದು ಕಥೆ ಜನಪ್ರಿಯವಾಗಿದೆ. ಕೆಳಜಾತಿಗೆ ಸೇರಿದ್ದರಿಂದ ಅವರನ್ನು ಉಡುಪಿಯಲ್ಲಿ ಶ್ರೀಕೃಷ್ಣ ದೇವಾಲಯವನ್ನು ಪ್ರವೇಶಿಸಲು ಬಿಡಲಿಲ್ಲ. ಪ್ರಕಾರಾದ ಸುತ್ತಲೂ ನಡೆದು ದೀನರಾಗಿ ದರ್ಶನ ಕೊಡುವಂತೆ ಹಲುಬಿದಾಗ, ದೇವರ ವಿಗ್ರಹವು ಹಿಂದು ಮುಂದಾಗಿ ತಿರುಗಿಕೊಂಡಿತು. ಗೋಡೆಯಲ್ಲಿ ಕಿಂಡಿಯುಂಟಾಯಿತು. ಅವರಿಗೆ ಕುಳಿತ ಕಡೆಯಲ್ಲೇ ಭಗವಂತನ ದರ್ಶನವಾಯಿತು. ಕುರುಬರಾಗಿದ್ದರೂ ಅವರು ನಾಯಕಸ್ಥಾನ ಪಡೆದಿದ್ದರು. ಒಳ್ಳೆಯ ಸಾಹಿತ್ಯಕ ಅಭಿರುಚಿಯೂ ಧಾರ್ಮಿಕ ನಿಷ್ಠೆಯೂ ಅವರಲ್ಲಿದ್ದುವು. ಅಂತಹ ಸುಸಂಸ್ಕೃತ ವ್ಯಕ್ತಿತ್ವವಿದ್ದರೂ ಅವರ ಗುರುಗಳಾದ ವ್ಯಾಸರಾಯ ಹಾಗೂ ತಾತಾಚಾರ್ಯರ ಶಿಷ್ಯರು ಅವರನ್ನು ಪದೇ ಪದೇ ತಿರಸ್ಕರಿಸುತ್ತಿದ್ದರು. ಅವರ ನೋವುಗಳೂ ಕೆಳಜಾತಿಯ ವ್ಯಕ್ತಿಗಳು ಮೋಕ್ಷ ಪಡೆಯಲು ಅರ್ಹರಲ್ಲವೆ ಎಂಬ ಪ್ರಶ್ನೆಯೂ ರಾಮಧಾನ್ಯ ಚರಿತೆಯಲ್ಲಿ ಕಾವ್ಯಮಯವಾಗಿ ನಿರೂಪಿತವಾಗಿದೆ. ಈ ಕೃತಿಯಲ್ಲಿ ರಾಗಿಯು ಬಡವರನ್ನು ಕೆಳಜಾತಿಯ ಜನರನ್ನೂ, ಅಕ್ಕಿಯ ಸಮಾಜದ ಶ್ರೀಮಂತರನ್ನೂ ಮೇಲುಜಾತಿಯ ಜನರನ್ನು ಪ್ರತಿನಿಧಿಸುತ್ತವೆ.

ಈ ವಿಶಿಷ್ಟ ಪರಿಕಲ್ಪನೆಯು ಭಗವಂತನ ಅವತಾರವಾಗುವುದು. ಬಡವರೂ ತುಳಿಯಲ್ಪಟ್ಟವರೂ ಆದ ಜನರನ್ನು ಉದ್ಧಾರಮಾಡುವ ಸಲುವಾಗಿಯೇ ಎಂಬ ಕನಕದಾಸರ ವಿಚಾರವನ್ನು ತೋರಿಸುತ್ತದೆ. ಭಗವಂತನ ಎದುರಿಗೆ ಮೇಲು-ಕೀಳು ಎಂಬ ಭೇದವಿಲ್ಲ. ನರಳುತ್ತಿರುವ ಮಾನವ ಜನಾಂಗಕ್ಕೆ ಅವನು ವಾಸ್ತವವಾಗಿ ತಾರಕಶಕ್ತಿ ಭಗವಂತನಲ್ಲಿ ಭಕ್ತಿ ಮತ್ತು ಕರ್ತವ್ಯನಿಷ್ಠೆ ಇವೆರಡೇ ವ್ಯಕ್ತಿಯನ್ನು ಉನ್ನತ ಎಲೆಗಲಿಗೆ ಕೊಂಡೊಯ್ಯಬಲ್ಲುವು. ಪೊಳ್ಳು ಮೌಲ್ಯಗಳನ್ನು ಅಕ್ಕಿಯ ಪಾತ್ರದ ಮೂಲಕವಾಗಿಯೂ, ಸರ್ವೇಜನಾಃ ಸುಖಿನೋಭವಂತು ಎಂಬ ಸಮಾನತಾ ಪರಿಕಲ್ಪನೆಯನ್ನು ರಾಗಿಯ ಪಾತ್ರದ ಮೂಲಕವಾಗಿಯೂ ಕನಕದಾಸರು ಚಿತ್ರಿಸಿದರು.

ಕನಕದಾಸರು ಮಾಡಿದ ಸಮಾಜವಿಮರ್ಶೆಯ ದೃಷ್ಟಿಯಿಂದ ನರದೆಲಗ ಅಥವಾ ರಾಗಿಯು ವಿಜಯನಗರ ಸಮಾಜದ ದಲಿತ, ದಮಿತ ವರ್ಗಗಳನ್ನು ಪ್ರತಿನಿಧಿಸುತ್ತದೆ. ತನ್ನ ಕಾಲದ ಸಾಮಾಜಿಕ ಅನ್ಯಾಯವನ್ನು ಪ್ರತಿಭಟಿಸುವ ಸಾಧನವಾಗಿ ಕನಕದಾಸರು ಈ ಧಾನ್ಯವನ್ನು ಉಪಯೋಗಿಸಿದರು. ನರದೆಲಗದ ಪಾತ್ರವು

ಕನಕದಾಸರಿಗಿದ್ದ ಸಾಮಾಜಿಕ ಅರಿವನ್ನೂ ತೋರಿಸುತ್ತದೆ. ಬಹುಸಾಮಾನ್ಯವಾದ ಉಪಮೆಗಳನ್ನು ಬಳಸಿ, ಕಾವ್ಯ ಮಾಧ್ಯಮದ ಮೂಲಕ, ಸರಳಭಾಷೆ ಮತ್ತು ನಿರೂಪಣೆಗಳಿಂದ ತಮ್ಮ ಸಮಾಜ ದರ್ಶನವನ್ನು ಜನತೆಗೆ ಮುಟ್ಟಿಸಬಹುದು, ಸಮಕಾಲೀನ ಸಮಾಜದ ಜಾತಿ ಸಮಸ್ಯೆಯನ್ನು ಬಯಲಿಗೆಳೆಯಬಹುದು ಎಂದು ಕನಕದಾಸರು ದೃಢವಾಗಿ ನಂಬಿದ್ದರು. ಸಂದೇಶವನ್ನು ಜನಸಾಮಾನ್ಯರಿಗೆ ಮುಟ್ಟಿಸಲು ಅದೇ ಸರಿಯಾದ ದಾರಿಯೆಂದು ಅವರು ಯೋಚಿಸಿದರು. (ಕರ್ಣಾಟಕ ಚರಿತ್ರೆ, ಪುಟ 251-51)

ಅಕ್ಕಿ ಮತ್ತು ರಾಗಿಗಳ ನಡುವೆ ನಡೆಯುವ ಬಿರುಸಿನ ವಾಗ್ವಾದ ತುಂಬಾ ಸ್ವಾರಸ್ಯವಾಗಿದೆ. ಒಂದು ಹಂತದಲ್ಲಿ ಅಕ್ಕಿಯು ರಾಗಿಯ ಕೆಳಮಟ್ಟವನ್ನು ಟೀಕಿಸುತ್ತಾ ಮೇಲುವರ್ಗಗಳು ಅದನ್ನು ತಿರಸ್ಕರಿಸಿದುದರಿಂದ ಅದು ಶೂದ್ರಾನ್ನವಾಯಿತು ಎಂದು ಹೇಳುತ್ತದೆ. ಈ ಅಂಶವು ಏಕೆ ಸ್ವಾರಸ್ಯವೆಂದರೆ, ೧೬ನೆಯ ಶತಮಾನದಲ್ಲೂ ಕೂಡ ರಾಗಿಯ ಉತ್ಪಾದಕ ವರ್ಗದಲ್ಲಿ ಬಹುಭಾಗವಾಗಿದ್ದ ಶೂದ್ರರ ಮುಖ್ಯ ಆಹಾರವಾಗಿತ್ತು. ಕೃಷಿ ಗೇಣಿದಾರರು, ಕೂಲಿಗೆ ನೇಮಿಸಿಕೊಂಡವರು, ಬಾಡಿಗೆದಾರರು ಇವರೆಲ್ಲರೂ ಅಕ್ಕಿಗಿಂತ ಅಗ್ಗವಾಗಿದ್ದ ರಾಗಿಯನ್ನೆ ಮುಖ್ಯವಾಗಿ ಅವಲಂಬಿಸಿದ್ದರು. ಕರ್ನಾಟಕದ ಗ್ರಾಮೀಣ ಜನತೆಯ ಶ್ರಮಿಕವರ್ಗವನ್ನು ಅದು ಪೋಷಿಸುತ್ತಿದ್ದಿತು. ಅವರ ಮೇಲೆ ಮೂರು ಮೇಲುವರ್ಣಗಳ ಅಭ್ಯುದಯವು ನಿಂತಿದ್ದಿತು. ಅಕ್ಕಿಯ ಬಾಯಲ್ಲಿ ಶೂದ್ರಾನ್ನ ಎಂಬ ಪದವನ್ನು ಹಾಕಿ ಮಧ್ಯಕಾಲೀನ ಕರ್ನಾಟಕದ ಆಹಾರ ವಿನ್ಯಾಸದ ಅತಿಮುಖ್ಯ ಅಂಶವೊಂದನ್ನು ಕನಕದಾಸರು ಸೂಚಿಸಿದರು. ಎರಡೂ ಧಾನ್ಯಗಳ ನಡುವಣ ಚರ್ಚೆಯು, ಇಂದಿನಂತೆಯೇ ೧೬ನೆಯ ಶತಮಾನದಲ್ಲೂ ಕೂಡ, ಅಕ್ಕಿಯು ಶ್ರೀಮಂತರು ಮತ್ತು ಸುಸಂಸ್ಕೃತರಿಗೆ ಮೀಸಲಾದದ್ದು, ರಾಗಿಯು ಮುಖ್ಯವಾಗಿ ಬಡವರಿಗೆ ಮತ್ತು ಗ್ರಾಮೀಣ ಜನತೆಗೆ ಮೀಸಲಾದದ್ದು ಎಂಬ ಪರಿಕಲ್ಪನೆಯು ವ್ಯಾಪಕವಾಗಿದ್ದುದನ್ನು ಸೂಚಿಸುತ್ತದೆ. ಅಕ್ಕಿ ತಿನ್ನುವವರು ಹಕ್ಕಿಯಂತಾಗುತ್ತಾರೆ, ರಾಗಿ ತಿನ್ನುವವರು ರೋಗ ಮುಕ್ತರಾಗುತ್ತಾರೆ ಎಂಬ ಗಾತೆ ಮಾತು ಈ ಕಲ್ಪನಯೆನ್ನು ಪೋಷಿಸಿತು.

ಕನಕದಾಸರು ಆಶಾವಾದಿಯಾಗಿದ್ದು, ಗೊಡ್ಡು ಆಚಾರವಂತಿಕೆಯನ್ನು ವ್ಯಂಗ್ಯ ತುಂಬಿದ ದನಿಯಲ್ಲಿ ಖಂಡಿಸಿದರು. ಅವರ ಕೀರ್ತನೆಗಳ ತುಂಬ ನಿರ್ಮಲವಾದ ಭಕ್ತಿ, ಜೀವನದರ್ಶನ, ಸಮಾಜವಿಮರ್ಶೆ, ಲೋಕಾನುಭವಗಳು ತುಂಬಿಕೊಂಡಿವೆ. ಧಾರ್ಮಿಕ ವಿಚಾರಗಳಲ್ಲಿ ಕನಕದಾಸರು ಅತಿರೇಕವನ್ನು ನಿವಾರಿಸಿ ಮಧ್ಯ ಮಾರ್ಗವನ್ನು ಹಿಡಿದರು. ಸಂಸಾರದಲ್ಲಿ ಅಥವಾ ಲೌಕಿಕ ಜಗತ್ತಿನಲ್ಲಿ ಇದ್ದುಕೊಂಡೇ, ಭಕ್ತಿಯಿಂದ ಭಗವಂತನ ನಾಮಸ್ಮರಣೆ ಮಾಡುವುದರ ಮೂಲಕ ಮೋಕ್ಷವನ್ನು ಗಳಿಸಬಹುದು ಎಂದು ಅವರು ಘೋಷಿಸಿದರು. ವೈರಾಗ್ಯವಾಗಲಿ, ವಿವಿಧ ಆಚರಣೆಗಳನ್ನು ನಡೆಸುವುದಾಗಲಿ, ಶಾಸ್ತ್ರಾಧ್ಯಯನವಾಗಲಿ, ತೀರ್ಥಯಾತ್ರೆಯಾಗಲಿ ವ್ಯಕ್ತಿಗೆ ಮೋಕ್ಷಸಾಧಕವಾಗುವುದಿಲ್ಲ.

ಮಾನವನ ಸಮಸ್ತ ಚಟುವಟಿಕೆಗಳ ಏಕೈಕವಾದ ಗುರಿ ಲೌಕಿಕ ಪ್ರಯೋಜನಗಳನ್ನು ಪಡೆಯುವುದಾಗಿದೆ. ವಿಶೇಷವಾಗಿ ಹೊಟ್ಟೆ ತುಂಬಿಸಿಕೊಳ್ಳಲು, ಒಂದು ತುಂಡು ಬಟ್ಟೆ ಪಡೆಯಲು ಹೋರಾಟ ನಡೆಯುತ್ತದೆ. ಈ

ಭಾವವನ್ನು ಬಹು ಸುಂದರವಾಗಿ ಕನಕದಾಸರು, "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎಂಬ ಸುಪ್ರಸಿದ್ಧವಾದ ಹಾಡಿನಲ್ಲಿ ನಿರೂಪಿಸಿದ್ದಾರೆ. ಪಂಡಿತರು, ಜ್ಯೋತಿಷಿಗಳು, ಯೋಧರು, ವರ್ತಕರು, ರೈತರು, ವಂಚಕರು, ವಿವಿಧ ಪಂಗಡಗಳ ಬೈರಾಗಿಗಳು, ಕಳ್ಳರು, ರಾಜರು-ಹೀಗೆ ಅಸಂಖ್ಯ ವೇಷಗಳು ಸೋಗುಗಳು. ಆದರೆ ಎಲ್ಲವುಗಳ ಮೂಲ ಉದ್ದೇಶ ಒಂದೇ. ಒಂದು ತುಂಡು ಬಟ್ಟೆ, ಒಂದು ತುತ್ತು ಅನ್ನ, ಆದರೆ ನಿಜವಾದ ಭಕ್ತನಾದರೆ, ಆನಂದ ಮತ್ತು ಮೋಕ್ಷಗಳನ್ನು ಪಡೆಯುವ ಏಕೈಕ ಉದ್ದೇಶದಿಂದ ಭಗವಂತನನ್ನು ಪೂಜಿಸುತ್ತಾನೆ.

ಸುವ್ಯವಸ್ಥೆ ಮತ್ತು ಸ್ಥಿರತೆಯು ನಿಲ್ಲುವುದು ಪ್ರಚಲಿತ ಸಾಮಾಜಿಕ ರಚನೆಯನ್ನು ಪಾಲಿಸುವುದರ ಮೇಲೆ. ಅದನ್ನು ಮೇಲುವರ್ಣಗಳ ವ್ಯಕ್ತಿಗಳು ಸೂಕ್ಷ್ಮವಾಗಿ ನಿಯಂತ್ರಿಸುತ್ತಾರೆ ಎಂಬ ಪ್ರಚಲಿತ ನಂಬಿಕೆಯನ್ನು ಕನಕದಾಸರು ಒಪ್ಪಲಿಲ್ಲ. ಒಬ್ಬ ವ್ಯಕ್ತಿಯ ಸತ್ಯವಂತಿಕೆ ಮತ್ತು ಸಚ್ಚಾರಿತ್ರವು ಮುಖ್ಯವೇ ಹೊರತು ಅವನ ಜಾತಿಯಲ್ಲ ಎಂದು ಅವರು ಬೋಧಿಸಿದರು. "ಕುಲಕುಲವೆನ್ನುತಿಹರು" ಎಂಬ ಪ್ರಸಿದ್ಧವಾದ ಹಾಡಿನಲ್ಲಿ ಜಾತಿಪದ್ಧತಿಯನ್ನು ಅವರು ಖಂಡಿಸಿದರು. ಈ ಹಾಡಿನಲ್ಲಿ ಎರಡು ಮೂಲಭೂತ ಪ್ರಶ್ನೆಗಳನ್ನು ಅವರು ಎತ್ತುತ್ತಾರೆ. ದೇವರು ಯಾವುದಾದರೂ ಮಾನವ ನಿರ್ಮಿತ ಜಾತಿಗೆ ಸೇರಿದ್ದಾನೆಯೆ ? ಆತ್ಮ ಅಥವಾ ಜೀವದ, ಇಂದ್ರಿಯಗಳ ಜಾತಿ ಯಾವುದು ? ಸಮಕಾಲೀನ ಸಮಾಜದ ರಚನೆ ಮತ್ತು ಪ್ರವೃತ್ತಿಯು ಮುಖ್ಯವಾಗಿ ಆಚಾರವಂತಿಕೆ ಮತ್ತು ಶ್ರೇಣೀಕರಣಗಳ ಕಡೆಗೆ ಒಲವು ಹೊಂದಿತ್ತು. ಅದನ್ನು ಕನಕದಾಸರು ಉಗ್ರವಾಗಿ ಖಂಡಿಸಿದರು.

ಸದ್ಗತಿಗೆ ಒಬ್ಬ ಪುತ್ರನು ಹುಟ್ಟುವುದು ಆವಶ್ಯಕ ಎಂಬ ಯುಗಯುಗಾಂತರದಿಂದ ಬಂದ ನಂಬಿಕೆಯನ್ನು "ಮಗನಿಂದ ಗತಿ ಉಂಟೆ" ಎಂಬ ಹಾಡಿನಲ್ಲಿ ಅಪಹಾಸ್ಯ ಮಾಡಿದ್ದಾರೆ. ಮಗನು ದುಷ್ಟನಾದರೆ, ಸ್ವಾಶ್ರಮವನ್ನು ತೊರೆದು ಹಿರಿಯರು, ಗುರುಗಳನ್ನು ನಿಂದಿಸಿ, ಕೀಳು ಹೆಂಗಸರ ಸಂಪರ್ಕ ಮಾಡಿದರೆ ಅಂತಹ ಮಗನು ಸ್ವರ್ಗಕ್ಕೆ ಬದಲು ನರಕಕ್ಕೆ ದಾರಿಯನ್ನು ನಿರ್ಮಿಸುತ್ತಾನೆ. ಇಂತಹ ಮಗನಿಲ್ಲದೆ ಹೋದರೆ ಅದು ಖಂಡಿತವಾಗಿಯೂ ನಷ್ಟವಲ್ಲ. ಅದಕ್ಕೆ ಬದಲು ಸತ್ಯ, ಶಾಂತಿ, ಆತ್ಮ ಸಂಯಮ ಮತ್ತು ಸ್ಥಿರಚಿತ್ತಗಳೆಂಬ ನಾಲ್ವರು ಪುತ್ರರನ್ನು ಹೊಂದಿದ್ದರೆ ಅದುಸಾಕು.

ಹೀಗೆ ಕನಕದಾಸರ ಸಾಮಾಜಿಕ ದರ್ಶನವು ಅವರ ಕೃತಿಗಳಲ್ಲಿ ಸುವ್ಯಕ್ತವಾಗಿದ್ದು, ಅದರ ಮುಖ್ಯ ಲಕ್ಷಣ ವರ್ಗವ್ಯವಸ್ಥೆ, ಜಾತಿಪದ್ಧತಿ, ಮೇಲು-ಕೀಳು, ಅಸ್ಪೃಶ್ಯತೆ, ಅರ್ಥಶೂನ್ಯ ಆಚರಣೆಗಳು, ವಂಚನೆ, ಇವುಗಳನ್ನು ಅವರು ಉಗ್ರವಾಗಿ ಖಂಡಿಸಿದ್ದು, ಭಗವಂತನಲ್ಲಿ ನಿರ್ಮಲವಾದ ಭಕ್ತಿ ಮತ್ತು ಶ್ರದ್ಧೆ (ಯಾವುದೇ ಮಧ್ಯವರ್ತಿಗಳಿಲ್ಲದೆ) ಇಹ (ಈ ಲೋಕ) ಮತ್ತು ಪರ (ಮುಂದಿನ ಲೋಕ)ಗಳ ಸಮತೋಲನ ಹಾಗೂ ವಿಜಯನಗರ ಸಮಾಜದ ಸದಸ್ಯರೇ ಆಗಿ ತಮ್ಮ ಸ್ವಂತದ ಅನುಭವಗಳನ್ನು ಚಿತ್ರಿಸಿರುವ ಪರಿ ತುಂಬಾ ಸ್ವಾರಸ್ಯವಾಗಿದೆ. (ಕರ್ನಾಟಕ ಚರಿತ್ರೆ ಪು. 252-253)

ಹಿಂದೂಮತದಲ್ಲಿ ಧರ್ಮವು ಸಮಾಜಕ್ಕೆ ನಿಕಟವಾಗಿ ಸಂಬಂಧಿಸಿದುದಾಗಿದೆ. ಅರಸ ಮತ್ತು ಪ್ರಜೆಗಳು ಜೀವನದ ಈ ಸಾಮಾಜಿಕ-ಧಾರ್ಮಿಕ ಅಂಶದ ಅರಿವುಳ್ಳವರಾಗಿದ್ದರು. ಪ್ರಾಚೀನ ಸಮಾಜವು ಗುಣಕರ್ಮಗಳನ್ನಾಧರಿಸಿ ನಾಲ್ಕು ವರ್ಗ ಅಥವಾ 'ವರ್ಣ'ಗಳಿಂದ ಕೂಡಿದುದಾಗಿತ್ತು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಸಮಾಜದ ನಾಲ್ಕು ವರ್ಗಗಳಿಗೆ ಅವು ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಸಮುದಾಯದಲ್ಲಿ ಆಯಾ ಸ್ಥಾನಮಾನಗಳು ಇದ್ದವು. ವಿಜಯನಗರದ ಅರಸರು ಹಿಂದಿನವರು ಹಾಕಿಕೊಟ್ಟ ಪೂರ್ವನಿದರ್ಶನಗಳಿಗೆ ಅನುಗುಣವಾಗಿ ಪ್ರಾಚೀನ ಆಚಾರವಿಚಾರಗಳನ್ನು ಆಧರಿಸಿ ವಿವಿಧ ಜಾತಿಗಳ ಕರ್ತವ್ಯಗಳನ್ನು ರಕ್ಷಿಸಿದರು. ಅವರು ವರ್ಣಾಶ್ರಮಧರ್ಮವನ್ನು ರಕ್ಷಿಸುತ್ತ ಸಾಮ್ರಾಜ್ಯವನ್ನು ಆಳಿದರೆಂದು ಹೇಳಲಾಗಿದೆ. ಶಿವಮೊಗ್ಗ ಜಿಲ್ಲೆಯ ಕ್ರಿ.ಶ. 1423ರ ಶಾಸನವೊಂದರಲ್ಲಿ "ಸಕಲ ವರ್ಣಾಶ್ರಮಧರ್ಮಂಗಳನ್ನು ಪಾಲಿಸುತ್ತ ಧರ್ಮಮಾರ್ಗದ ಸಕಲ ಸಾಮ್ರಾಜ್ಯವನ್ನಾಳುವ" ಎಂಬ ಮಾತನ್ನು ಬಳಸಲಾಗಿದೆ.

ಭಾರತೀಯ ಸಮಾಜವು ತನ್ನ ಸಾಂಪ್ರದಾಯಿಕ ಮತ್ತು ಪೂರ್ವಾಚಾರಪ್ರಿಯ ಮನೋಭಾವದೊಂದಿಗೆ ಅತಿ ನಿಷ್ಠೆಯ ಆಚಾರ ವಿಚಾರ ಮತ್ತು ರೂಢಿಗಳನ್ನು ಆಧಾರವಾಗಿಟ್ಟುಕೊಂಡು ವಿಜಯನಗರ ಕಾಲದಲ್ಲಿಯು ಮುಂದುವರೆಯಿತು.

ವಿಜಯನಗರ ನಾಲ್ಕು ವಂಶಗಳ ಆಳ್ವಿಕೆಯ ಕಾಲದಲ್ಲಿ ಪ್ರಚಲಿತವಿದ್ದ ಜಾತಿ ವ್ಯವಸ್ಥೆಯು ನಾಲ್ಕು ಶತಮಾನಗಳಲ್ಲಿ ಮತ್ತು ಸಾಮ್ರಾಜ್ಯದ ಪತನಾನಂತರವೂ ಅನೇಕ ಉಪಜಾತಿಗಳ ಸೇರ್ಪಡೆಯೊಡನೆ ಮುಂದುವರೆದಿದೆ. ವಿಜಯನಗರವು ಧರ್ಮ ರಕ್ಷಣೆಗಾಗಿಯೆ ಸ್ಥಾಪಿತವಾದ ಸಾಮ್ರಾಜ್ಯ. ಇದಕ್ಕೆ ಪೂರಕವಾಗಿ ದಕ್ಷಿಣ ಭಾರತದ ಸಮಾಜದಲ್ಲಿ ಅಂದು ರೂಢಿಯಲ್ಲಿದ್ದ ನಾಲ್ಕು ವರ್ಗಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಹಾಗೂ ಸಮಾಜ ನಿರ್ಮಾಣದಲ್ಲಿ ಶರಣರು, ದಾಸರು ಹಾಗೂ ಸೂಫಿಗಳು ವಹಿಸಿದ ಪಾತ್ರವನ್ನು ಕುರಿತು ವಿವರವಾಗಿ ಅವಲೋಕಿಸಬಹುದು.

**ಬ್ರಾಹ್ಮಣ ವರ್ಗ :** ಬ್ರಾಹ್ಮಣರಲ್ಲಿ ಮೂರು ವರ್ಗಗಳು ಪ್ರಮುಖವಾಗಿದ್ದವು. 1. ಸ್ಮಾರ್ಥರು 2. ಮಾಧ್ವರು 3. ಶ್ರೀ ವೈಷ್ಣವರು. ಇವರನ್ನು ತ್ರಿಮತಸ್ಥರೆಂದು ಕರೆಯಲಾಗುತ್ತಿದ್ದಿತು. ಸ್ಮಾರ್ಥರು ಶಂಕರಾಚಾರ್ಯರ ಅದ್ವೈತ ಸಿದ್ಧಾಂತದ ಅನುಯಾಯಿಗಳಾಗಿದ್ದರು. ಮಧ್ವ ಮತಸ್ಥರು ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಪಾಲಿಸುತ್ತಿದ್ದರು. ಅವರಲ್ಲಿ ತುಳು ಮತ್ತು ಕೊಂಕಣಿ ಬ್ರಾಹ್ಮಣರೇ ಅಧಿಕವಾಗಿದ್ದು ಕರಾವಳಿ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಶ್ರೀ ವೈಷ್ಣವರು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತ ಪಾಲಿಸುವವರಾಗಿದ್ದರು. ಸ್ಮಾರ್ಥರು ಪ್ರಧಾನವಾಗಿ ಶೈವರಾಗಿದ್ದು ಹಣೆಯ ಮೇಲೆ ಭಸ್ಮವನ್ನು ಧರಿಸುತ್ತಿದ್ದರು. ಬಸ್ಮ ತ್ರಿಕರಣಶುದ್ಧಿಗೆ (ಕಾಯಾ, ವಾಚಾ, ಮನಸ) ಸಂಕೇತವಾಗಿದ್ದಿತು. ಮಾಧ್ವರು ಶಂಕ ಮತ್ತು ಚಕ್ರದ ಮುದ್ರೆಗಳನ್ನು ಶ್ರೀಗಂಧದಲ್ಲಿ ಹಣೆಯ ಪಕ್ಕದ ಇಕ್ಕೆಲಗಳಲ್ಲಿ ಧರಿಸುತ್ತಿದ್ದರು. ದಾಸವರ್ಗದ ಮಾಧ್ವರು ಹಣೆಮೇಲೆ ಕಪ್ಪುಗೆರೆ ಅಥವಾ ಚುಕ್ಕೆಯನ್ನು ಧರಿಸುತ್ತಿದ್ದರು. ಇದು ದೇವರಿಗೆ ದಾಸನೆಂಬ ಸಂಕೇತವಾಗಿದ್ದಿತು.

ಶ್ರೀ ವೈಷ್ಣವರು ಶ್ರೀಪಾದ (ವಿಷ್ಣುಪಾದ) ಮುದ್ರೆಯನ್ನು 2 ಬಿಳಿ ನಾಮಗಳ ಆಕಾರದಲ್ಲಿ ತಮಗಿಷ್ಟವಾದ ಗಾತ್ರದಲ್ಲಿ ಧರಿಸುತ್ತಿದ್ದರು. ಮಧ್ಯದಲ್ಲಿ ಕೆಂಪು ಗೆರೆಯನ್ನು ಲಕ್ಷ್ಮಿಯ ಸಂಕೇತವಾಗಿ ಧರಿಸಲಾಗುತ್ತಿದ್ದಿತು. ಶ್ರೀ ವೈಷ್ಣವರಲ್ಲಿ ಹೆಬ್ಬಾರ್, ಹೆಮ್ಮಗೆಯಾರ್, ತಿರುಮಲೈಯಾರ್ ಮೊದಲಾದ ಉಪ ಪಂಗಡಗಳಿದ್ದವು.

ಬ್ರಾಹ್ಮಣರಲ್ಲಿ ವಿಪ್ರವಿನೋದಗಳೆಂಬ ಒಂದು ಹೊಸ ಉಪಜಾತಿ ರೂಪುಗೊಂಡಿತು. ಈ ವರ್ಗದ ಬ್ರಾಹ್ಮಣರು ಇಂದ್ರಜಾಲ ಪ್ರಯೋಗಗಳನ್ನು ಮಾಡಿ ಮನರಂಜನೆ ಕಾರ್ಯಕ್ರಮಗಳನ್ನು ನೀಡುತ್ತ ಹಳ್ಳಿಯಿಂದ ಹಳ್ಳಿಗೆ ಸಂಚರಿಸುತ್ತಿದ್ದರು. ಮತ್ತೆ ಕೆಲವರು ನಾಟಕ, ನೃತ್ಯ ಪ್ರದರ್ಶನಗಳನ್ನು ನೀಡಿ ಜೀವನ ಸಾಗಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಈ ಬ್ರಾಹ್ಮಣ ಜಾತಿಯ ಕಲಾವಿದರು ಆಂಧ್ರದ ಗುಂಟೂರು ಬಳಿಯ ಕುಚೇಲ ಎಂಬಲ್ಲಿ ಕೂಚಿಪುಡಿ ಎಂಬ ಹೊಸ ನೃತ್ಯ ಶೈಲಿಯನ್ನು ಜನಪ್ರಿಯಗೊಳಿಸಿದರು. ಇದು ಭರತನಾಟ್ಯದ ಒಂದು ಹೊಸ ಶೈಲಿಯಾಗಿ ರೂಪುಗೊಂಡಿತು.

**ಕ್ಷತ್ರಿಯ ವರ್ಗ :** ಉತ್ತರ ಭಾರತದಲ್ಲಿದ್ದಂತೆ ಕ್ಷತ್ರಿಯ ವರ್ಗ ದಕ್ಷಿಣ ಭಾರತದಲ್ಲಿ ಅಸ್ತಿತ್ವ ಉಳಿಸಿಕೊಳ್ಳಲಿಲ್ಲ. ವಿಜಯನಗರ ಕಾಲದ ಸಂಗಮರು, ಸಾಳ್ವರು, ತುಳುವ, ಅರವೀಡು ಮೊದಲಾದ ಸತ್‌ಶೂದ್ರ ಅಥವಾ ಉನ್ನತ ವರ್ಗಕ್ಕೆ ಸೇರಿದವರಾಗಿದ್ದರು. ಇವರು ಸ್ಥಳೀಯ ಕುರುಬ, ನಾಯಕ, ಗೌಡ, ಕಮ್ಮಾಸ್, ನಾಯಿಡು, ನಾಯರ್ ಮೊದಲಾದ ವರ್ಗಗಳಿಗೆ ಸೇರಿದವರಾಗಿದ್ದರು. ಇವರು ಗರಡಿ ಮನೆಗಳಲ್ಲಿ ಕ್ಷಾತ್ರ ವಿದ್ಯೆಗಳನ್ನು ಕಲಿಯುತ್ತಿದ್ದರು. ಇವರುಗಳಿಗೂ ಸತ್‌ಶೂದ್ರದಲ್ಲಿದ್ದ ಸಂಸ್ಕಾರಗಳಿದ್ದವು. ಹೆಸರಿಗೆ ಮಾತ್ರ ಸೂರ್ಯವಂಶ, ಚಂದ್ರವಂಶ, ಅಗ್ನಿವಂಶ ಮೊದಲಾದ ಪರಂಪರೆಗಳನ್ನು ಹೇಳಿಕೊಳ್ಳುತ್ತಿದ್ದರು. ಕೆಳದಿ, ಚಿತ್ರದುರ್ಗ, ಹಾಗಲವಾಡಿ ಮೊದಲಾದವರು ವೀರಶೈವರಾಗಿದ್ದರು.

**ವೈಶ್ಯ ವರ್ಗ :** ವೈಶ್ಯರನ್ನು ಶೆಟ್ಟಿ, ಕೋಮಟಿಗಳೆಂದು ಕರೆಯಲಾಗುತ್ತಿದ್ದಿತು. ಅವರು ಸವರ್ಣೀಯರಾಗಿದ್ದ ಕಾರಣ ಅವರನ್ನು ಆರ್ಯ ವೈಶ್ಯರೆಂದು ಗುರುತಿಸಲಾಗಿದ್ದಿತು. ಶ್ರೀಮಂತ ವೈಶ್ಯರು ರಾಜಸಂಬಂಧಿಗಳಾಗಿದ್ದು, ಗುಪ್ತಚಾರ ಸೇವೆಯಲ್ಲಿದ್ದುದರಿಂದ ವೈಶ್ಯರಲ್ಲಿ ಗುಪ್ತರು ಎಂಬ ಉಪನಾಮ ಬಳಕೆಯಲ್ಲಿದ್ದಿತು.

ವೈಶ್ಯ ಎಂಬ ಪದ ವಿಷಯ ಅಥವಾ ನಗರ ಪ್ರದೇಶದವರು ಎಂಬ ಅರ್ಥವನ್ನು ಕೊಡುತ್ತದೆ. ಶ್ರೀಮಂತ ವೈಶ್ಯರು ಪಟ್ಟಣ ಶ್ರೇಷ್ಠಿ, ನಗರ ಶ್ರೇಷ್ಠಿಗಳಾಗಿ ಅಧಿಕಾರ ನಡೆಸಿದ್ದರಿಂದ ಶ್ರೇಷ್ಠಿ ಅಥವಾ ಶೆಟ್ಟಿ ಎಂಬ ಪದವು ಜನಪ್ರಿಯವಾಗಿದ್ದಿತು. ಕೋಮಟಿ ಎಂಬ ಪದ ಕಿಮತ ಎಂಬ ಪದದಿಂದ ಬಂದಿದೆ. ಅನೇಕ ವೈಶ್ಯರು ಭೂ ಒಡೆಯರಾಗಿದ್ದ ಎರಡು ಎತ್ತಿನ ಕಿಮತ, ನಾಲ್ಕು ಎತ್ತುಗಳ ಕಿಮತ, ಎಂಟು ಎತ್ತುಗಳ ಕಿಮತ ಅಂದರೆ ಅಷ್ಟು ಎತ್ತುಗಳ ಬೇಸಾಯ ಮಾಡಿಸುತ್ತಿದ್ದರು. ಅಂಥವರನ್ನು ಕಿಮತರು ಅಥವಾ ಕೋಮಟಿಗಳು ಎಂದು ಕರೆಯಲಾಗುತ್ತಿದ್ದಿತು. ಬೇಸಾಯಕ್ಕಾಗಿ ರೈತರು ಮತ್ತು ಇತರ ಗ್ರಾಮಸ್ಥರಿಗೆ ಸಾಲ ಸೌಲಭ್ಯ ಕೊಡುವ ಕೋಮಟಿಗಳು ಇವರಾಗಿದ್ದರು. ಈಗಲೂ ಗ್ರಾಮಾಂತರ ಪ್ರದೇಶದಲ್ಲಿ ಇವರನ್ನು ಕೋಮಟಿಗ ಶೆಟ್ಟಿ ಎಂದು

ಕರೆಯುವುದು ರೂಢಿಯಲ್ಲಿದೆ. ಇವರು ವಿಜಯನಗರ ಕಾಲದಲ್ಲಿ ನೇಕಾರರು, ಕುಶಲ ಕರ್ಮಿಗಳಾದ ಅಕ್ಕಸಾಲಿಗ, ಕಮ್ಮಾರ, ಚಮ್ಮಾರ, ಬಡಗಿ ಮೊದಲಾದವರಿಗೆ ಸಾಲ ಸೌಲಭ್ಯಗಳನ್ನು ಒದಗಿಸಿ ಅವರ ಉತ್ಪಾದನೆಗಳನ್ನು ಅಗ್ಗದ ಬೆಲೆಗೆ ಕೊಂಡು ಅಧಿಕ ಲಾಭಕ್ಕೆ ಮಾರುತ್ತಿದ್ದರು. ಎತ್ತು, ಕುದುರೆ, ಆನೆಗಳ ಮೇಲೆ ಸರಕು ಸರಂಜಾಮುಗಳನ್ನು ವಿವಿಧ ನಗರಗಳಿಗೆ ಕೊಂಡೊಯ್ದು ಮಾರಾಟ ಮಾಡಿ ಲಾಭಗಳಿಸುತ್ತಿದ್ದರು. ಕರಾವಳಿಯ ಬಂದರುಗಳಲ್ಲಿ ಶ್ರೀಮಂತ ವೈಶ್ಯರು ಹಡಗುಗಳನ್ನು ನಿರ್ಮಾಣ ಮಾಡಿಸಿ, ಸಿಂಹಳ, ಮಲಯಾ, ಬಲಿದ್ವೀಪಗಳೊಂದಿಗೆ ವ್ಯಾಪಾರ ಸಂಪರ್ಕ ವಿಸ್ತರಿಸಿಕೊಂಡಿದ್ದರು. ರಾಜ ಮಹಾರಾಜರಿಗೆ ಕಾಣಿಕೆಗಳನ್ನು ಅರ್ಪಿಸಿ ವ್ಯಾಪಾರ ಪರವಾನಗಿ ಹಾಗೂ ರಕ್ಷಣೆ ಪಡೆಯುತ್ತಿದ್ದರು. ವೈಶ್ಯರಿಂದ ಭೂಕಂದಾಯ, ಮನೆ ಕಂದಾಯ, ರಹದಾರಿ ಸುಂಕ, ಮಾರಾಟ ತೆರಿಗೆ ಮೊದಲಾದ ಬಾಬ್ತುಗಳಿಂದ ಸರಕಾರಕ್ಕೆ ವರಮಾನ ಬರುತ್ತಿದ್ದಿತು. ಅನೇಕ ಶ್ರೇಷ್ಠಿಗಳು ವಿಜಯನಗರ ಅರಸರಿಂದ ದ್ವಾರ ಸುಂಕ ವಸೂಲಿ ಹಕ್ಕನ್ನು ಹರಾಜು ಮೂಲಕ ಪಡೆದಿರುತ್ತಿದ್ದರು. ಒಟ್ಟಾರೆ ಎಲ್ಲ ಆರ್ಥಿಕ ವ್ಯವಹಾರಗಳಲ್ಲಿ ಚತುರರಾಗಿದ್ದು ವೈಶ್ಯ ವರ್ಗ ಸಮಾಜದಲ್ಲಿ ಪ್ರತಿಷ್ಠೆಗಳಿದ್ದಿತು. ವೈಶ್ಯರು ಬ್ರಾಹ್ಮಣರಂತೆ ಸಾತ್ವಿಕ ಹಾಗೂ ಸಸ್ಯಾಹಾರ ಸಂಪ್ರದಾಯಪಾಲಿಕರಾಗಿದ್ದು ಯಾವುದೇ ಅನ್ಯಾಯದ ಕೊಲೆ, ಸುಲಿಗೆ ವಿರುದ್ಧ ಹೋರಾಟ ಮಾಡದೆ ತಮ್ಮ ಸಮಸ್ಯೆಗೆ ಪರಿಹಾರ ಕಾಣುತ್ತಿದ್ದರು. ತಾಳಿದವರು ಬಾಳಿಯಾನು ಎಂಬುದು ಇವರ ಆದರ್ಶವಾಗಿದ್ದಿತು.

**ಶೂದ್ರವರ್ಗ :** ಶೂದ್ರರನ್ನು ಅವರ್ಣೀಯರೆಂದು ಕರೆಯಲಾಗುತ್ತಿದ್ದಿತು. ಸವರ್ಣೀಯರಾದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ಉನ್ನತ ವರ್ಗಕ್ಕೆ ಸೇರಿದವರಾಗಿದ್ದರು. ಮನುಧರ್ಮ ಶಾಸ್ತ್ರದ ಪ್ರಕಾರ ಶೂದ್ರವರ್ಗದವರು ಉನ್ನತ ವರ್ಗದವರಾದ ಸವರ್ಣೀಯರ ಸೇವೆ ಮಾಡಿಕೊಂಡು ಬರುವುದೇ ಅವರ ಧರ್ಮವೆಂದು ಪರಿಗಣಿಸಲಾಗಿದ್ದಿತು. ಶೂದ್ರವರ್ಗಕ್ಕೆ ಎಲ್ಲ ಬಗೆಯ ಕೆಲಸಗಾರರು ಅಂದರೆ ಕಾರ್ಮಿಕರು, ಪರಿಚಾರಕರು, ಕುಶಲ ಕರ್ಮಿಗಳು (ಬಡಗಿ, ಕಮ್ಮಾರ, ಚಮ್ಮಾರ, ಅರಸ, ನೇಕಾರ, ಅಕ್ಕಸಾಲಿಗ, ಗಾಣಿಗ ಇತ್ಯಾದಿ) ರೈತರು, ಸೇವಕರನ್ನು ಸೇರಿಸಲಾಗಿದ್ದಿತು. ಅಂದರೆ ಎಲ್ಲಾ ಕೆಲಸಗಾರರು ಅಥವಾ ಶ್ರಮ ಜೀವಿಗಳು ಈ ವರ್ಗದವರಾಗಿದ್ದರು (Proletariat). ಶೂದ್ರವರ್ಗದವರು ತಮ್ಮ ತಮ್ಮ ಕುಲಕಸುಬುಗಳನ್ನು ಮಾಡಿಕೊಂಡು ಹೋಗಬೇಕಿದ್ದಿತು. ಇವರಿಗೆ ಓದು ಬರಹ, ವೇದಾಧ್ಯಯನಗಳಿಗೆ ಅವಕಾಶವಿರಲಿಲ್ಲ. ಇವರು ಶೇಕಡ 99.9 ಭಾಗ ಅನಕ್ಷರಸ್ತರಾಗಿದ್ದರು. ಶೂದ್ರರ ಮಕ್ಕಳು ತಮ್ಮ ಕುಲ ಕಸುಬುಗಳನ್ನು ತಂದೆಯಿಂದ ಕಲಿಯುತ್ತಿದ್ದರು. ನೀತಿ ಪಾಠಗಳನ್ನು - ಪುರಾಣ ಪ್ರವಚನಗಳನ್ನು ಕೇಳುವ ಮೂಲಕ ಅರಿಯುತ್ತಿದ್ದರು.

ಮಿಶ್ರಜಾತಿಯ ಮತ್ತು ಕೀಳು ಕಸುಬಿನ ಶೂದ್ರರನ್ನು ಅತಿಶೂದ್ರರೆಂದು ಪರಿಗಣಿಸಲಾಗಿದ್ದಿತು. ಇವರನ್ನು ಚಾಂಡಾಲರು, ಪಾಂಚಾಲರು, ಆದಿದ್ರಾವಿಡ, ಆದಿ ಕರ್ನಾಟಕ, ಪೊಲೆಯ ಮೊದಲಾದ ಹೆಸರುಗಳಿಂದ ಕರೆಯಲಾಗುತ್ತಿದ್ದಿತು. ಗ್ರಾಮ ಮತ್ತು ನಗರಗಳನ್ನು ಸ್ವಚ್ಛಗೊಳಿಸುವುದು, ಸತ್ತ ಪ್ರಾಣಿಗಳ ವಿಲೇವಾರಿ, ಮೊದಲಾದ ಕೊಳಕು ಕೆಲಸಗಳ ನಿರ್ವಹಣೆ ಇವರ ದೈನಂದಿನ ಕರ್ತವ್ಯವಾಗಿದ್ದಿತು. ಅಂತಹ ಕೊಳಕಿನ

ಕಾರ್ಯನಿರ್ವಹಿಸುತ್ತಿದ್ದರಿಂದ ಅವರನ್ನು ಅಸ್ಪೃಶ್ಯರೆಂದು (ಆರೋಗ್ಯ ಮತ್ತು ನೈರ್ಮಲ್ಯದಿಂದ) ದೂರವಿಡಲಾಯಿತು. ಕ್ರಮೇಣ ಇದು ಸಾಮಾಜಿಕ ಕಳಂಕವಾಗಿ ರೂಪುಗೊಂಡಿತು.

ವಿಜಯನಗರ ಕಾಲದಲ್ಲಿ ಸತ್‌ಶೂದ್ರರು ತಮ್ಮ ಸಂಪತ್ತು ಮತ್ತು ಕಲೆಗಳಿಂದಾಗಿ ವೈಶ್ಯರಿಗೆ ಸರಿಸಮಾನವಾದ ಮೂರನೇ ವರ್ಗಕ್ಕೆ ಸೇರ್ಪಡೆಯಾಗಲಾಗಿ ನಾಲ್ಕನೇ ವರ್ಗವೇ ಇಲ್ಲದಂತಾಯಿತು. ನಂತರ ಅವರು ತಮ್ಮ ವೃತ್ತಿಗಳಾದ ಬಡಗಿ, ಕಮ್ಮಾರ, ಗಾಣಿಗ, ಕುಂಬಾರ, ಅಗಸ, ಬಣಜಿಗ ಮೊದಲಾದ ಹೆಸರುಗಳಿಂದ ಸಂಬೋಧಿಸುವುದು ರೂಢಿಗೆ ಬಂದಿತು. ಅವರನ್ನು ಶೂದ್ರರೆಂದು ಕರೆಯುವ ಪದ್ಧತಿ ಕೊನೆಗೊಂಡಿತು. ಅತಿಶೂದ್ರರು ಮಾತ್ರ ಶೂದ್ರ ವರ್ಗದಲ್ಲಿ ಉಳಿದುಕೊಂಡರು. ಹೀಗಾಗಿ ಪಂಚಮರು ಶೂದ್ರರೆಂದು ಪರಿಗಣಿಸಲ್ಪಟ್ಟರು.

ವಿಜಯನಗರ ಸಾಮ್ರಾಜ್ಯ ಸಂಪತ್ತಿನಿಂದ ಕೂಡಿತ್ತು. ಅದರ ವೈಭವ, ಕೀರ್ತಿ ವಿಶ್ವವ್ಯಾಪಿಯಾಗಿತ್ತೆಂಬುದಾಗಿ ಪ್ರವಾಸಿಗರು ಮುಕ್ತಕಂಠದಿಂದ ಹೊಗಳಿದ್ದಾರೆ. ಆದರೆ ಇದು ಉಚ್ಚವರ್ಗದ ಜೀವನವನ್ನು ಕುರಿತುದಾಗಿತ್ತೇ ಹೊರತು ಶ್ರೀಸಾಮಾನ್ಯರ ಜೀವನದ ಕಡೆ ಅವರ ಗಮನ ಹರಿದಿರಲಿಲ್ಲ. ಹಾಗಾಗಿ ಬಡವನ ಜೀವನದ ವಿಷಯವಾಗಿ ಹೆಚ್ಚು ವಿವರ ತಿಳಿಯುವುದಿಲ್ಲ. ಅಂದು ಭಿಕ್ಷಾಟನೆ ಇದ್ದುದಕ್ಕೆ ದಾಸರ ಸಾಹಿತ್ಯದಲ್ಲಿ ಸ್ಪಷ್ಟ ವಿವರಗಳಿವೆ. ಬಡವರ ಮನೆಯ ಹೆಂಗಸರು ಧನಿಕರ ಗೃಹಗಳಲ್ಲಿ ಹೊಟ್ಟೆಪಾಡಿಗಾಗಿ ಕೊಟ್ಟಣ ಮಾಡುವುದು (ಭತ್ತ ಮೊದಲಾದುವನ್ನು ಕುಟ್ಟುವುದು), ನೀರು ತಂದುಕೊಡುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಕನಕದಾಸರ ಕೀರ್ತನೆಯಲ್ಲೂ ಇದು ವ್ಯಕ್ತಗೊಂಡಿದೆ. ಇವರಲ್ಲದೆ ಅಂದು ಅಲೆಮಾರಿಗಳೂ ಇದ್ದುದನ್ನು ಕಂಡೇ ದಾಸರು "ಅಡವಿಯಲಿ ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ ಅಟ್ಟ ಮಡಕೆಯ ನೆತ್ತಿಯ ಮೇಲೆ ಹೊತ್ತು ತಿರುಗುವವನೆಂದು" ಪ್ರಾಸಂಗಿಕವಾಗಿ ನುಡಿದಿರುವುದು.

ಸ್ಥೂಲವಾಗಿ ಹಿಂದೂ ಸಮಾಜ ಮೇಲೆ ಕಾಣಿಸಿದಂತೆ ನಾಲ್ಕು ವರ್ಗಗಳಿಂದ ಕೂಡಿದ್ದಿತು. ವರ್ಗಾ ತಾರತಮ್ಯ ಇದ್ದರೂ ಸಾಮಾಜಿಕವಾಗಿ ಸೌಹಾರ್ದತೆಗೆ ಭಂಗ ಬಂದಿರಲಿಲ್ಲ. ಆಯಾ ಜಾತಿಯವರು ತಮ್ಮ ಜಾತಿಯ ಸಂಪ್ರದಾಯ ಹಕ್ಕುಬಾಧ್ಯಗಳನ್ನು ಸ್ವಪ್ರತಿಷ್ಠೆಯಿಂದ ಉಳಿಸಿಕೊಂಡು ಬಂದರು. ಜಾತಿಕಟ್ಟಳೆ ಮೀರಿ ನಡೆದವರನ್ನು ಬಹಿಷ್ಕಾರಕ್ಕೊಳಪಡಿಸಿ ಶಿಕ್ಷಿಸುತ್ತಿದ್ದರು. ತಪ್ಪು ದಂಡ ವಿಧಿಸಿ ಅವರನ್ನು ಪುನಃ ತಮ್ಮ ಜಾತಿಯಲ್ಲಿ ಸೇರಿಸಿಕೊಳ್ಳುತ್ತಿದ್ದರು. ಇಂತಹ ವ್ಯವಸ್ಥೆ ಭಾರತದಲ್ಲಿ ಅನಾದಿ ಕಾಲದಿಂದಲೂ ಸುಭದ್ರವಾಗಿ ಉಳಿದುಕೊಂಡು ಬಂದಿತು. ಅಂದಿನ ಸಮಾಜದ ವಿವಿಧ ವರ್ಗಗಳ ಅಂಕಿ ಅಂಶಗಳು ಹೀಗಿವೆ.

| ಸಾಮಾಜಿಕ ವರ್ಗ | ಶೇಕಡ |
|---|---|
| 1. ಬ್ರಾಹ್ಮಣ | ಸು. 3% |
| 2. ಕ್ಷತ್ರಿಯ (ಸತ್ ಶೂದ್ರ ವರ್ಗ) | ಸು. 30% |
| 3. ವೈಶ್ಯ (ಸತ್ ಶೂದ್ರ ವರ್ಗ) | ಸು. 30% |

4. ಶೂದ್ರ (ರೈತ, ಕುಶಲಕರ್ಮಿ) ಸು. 30%

5. ಪಂಚಮ (ಅಸ್ಪೃಶ್ಯ-ಅತಿಶೂದ್ರ) ಸು. 7%

## 2.3. ವಿಜಯನಗರ ಕಾಲದ ಸಮಾಜ

ವಿಜಯನಗರ ಕಾಲದ ಜಾತಿವ್ಯವಸ್ಥೆಯು ಹಿಂದೂ ಸಮಾಜದ ವಿಶಿಷ್ಟ ಲಕ್ಷಣವಾಗಿತ್ತು. ವಿವಿಧ ಆಕರಗಳಲ್ಲಿ ಸೂಚಿಸಿರುವಂತೆ ಕರ್ನಾಟಕದಲ್ಲಿ ಹಲವು ಪ್ರಾದೇಶಿಕ ಜಾತಿಗಳೂ ಉಪಜಾತಿಗಳೂ ಇದ್ದುವು. ರಿಸ್ಲಿಯ ಪ್ರಕಾರ ಜಾತಿ ಎನ್ನುವುದು ಮಾನವನೋ, ದೇವನೋ, ಪೌರಾಣಿಕ ವ್ಯಕ್ತಿಯೋ ಆದ ಒಬ್ಬ ಮೂಲ ಪುರುಷನಿಂದ ಬಂದ ಕುಟುಂಬಗಳ ಒಂದು ಗುಂಪು ಅಥವಾ ವರ್ಗ. ಅನುವಂಶಿಕವಾಗಿ ಬಂದ ವೃತ್ತಿಯನ್ನೇ ಅವರು ಅನುಸರಿಸುತ್ತಿದ್ದರು. ಅದೊಂದು ಸಮಾನ ಲಕ್ಷಣವುಳ್ಳ ಕುಟುಂಬಗಳ ಸಮುದಾಯ, ಧಾರ್ಮಿಕ ಆಚರಣೆಗಳು, ಸಾಮಾಜಿಕ ಸ್ಥಾನಮಾನ, ಪರಿಶುದ್ಧತೆ - ಮಲಿನತೆಗಳ ಮಟ್ಟ ಇವುಗಳ ಆಧಾರದಿಂದ ಸಮಾಜದಲ್ಲಿ ವರ್ಗಗಳನ್ನು ಅನುಕ್ರಮಿತ ಶ್ರೇಣಿಯಲ್ಲಿರಿಸಲಾಗುತ್ತಿತ್ತು. ಆಚರಣೆಗಳು, ನಂಬಿಕೆಗಳು, ಅಭ್ಯಾಸಗಳು, ರೂಢಿಗಳು, ವೃತ್ತಿಗಳು ಎಲ್ಲಕ್ಕಿಂತ ಮಿಗಿಲಾಗಿ ಸಂಪ್ರದಾಯಗಳ ವಿಶಿಷ್ಟ ಲಕ್ಷಣಗಳನ್ನು ಕೂಡ ಅದು ಒಳಗೊಳ್ಳುತ್ತಿತ್ತು.

ಉಡುಗೆ-ತೊಡುಗೆ ಮತ್ತು ಮದುವೆಗಳಿಗೆ ಹಾಗೂ ಅಂತ್ಯಸಂಸ್ಕಾರಗಳಿಗೆ ಸಂಬಂಧಿಸಿದ ವಿಧಿಗಳು ಜಾತಿಯಿಂದ ಜಾತಿಗೆ ಬೇರೆಯಾಗುತ್ತಿದ್ದುವು. ಪ್ರತಿಯೊಂದು ಜಾತಿಯಲ್ಲೂ ಧರ್ಮ, ಪ್ರದೇಶ ಭಾಷೆ ಮತ್ತು ಬಳಕೆಗಳನ್ನು ಆಧರಿಸಿ ಹಲವು ಉಪಜಾತಿಗಳಿರುತ್ತಿದ್ದವು. ಉದಾಹರಣೆಗೆ ಚಿನ್ನದ ಕೆಲಸ ಮಾಡುವ ಕುಶಲಕಾರ್ಮಿಕರು ಕಬ್ಬಿಣದ ಕೆಲಸ ಮಾಡುವವರಿಗಿಂತ ತಾವು ಬೇರೆ ಜಾತಿ ಎಂದು ಭಾವಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ವಿವಿಧ ಧರ್ಮ, ಜಾತಿ, ಪಂಗಡ ಆಧಾರಿತ ಜಾತಿ ವರ್ಗಗಳಿದ್ದುವು. ಕನ್ನಡವಲ್ಲದೆ ಬೇರೆ ಭಾಷೆಗಳನ್ನೂ ಆಡುತ್ತಿದ್ದ ಸ್ಥಳೀಯ ಬ್ರಾಹ್ಮಣರಿದ್ದರು. ಉತ್ತರ ಕನ್ನಡದ ನವಾಯತ ಮುಸ್ಲಿಮರು ಕೊಂಕಣಿ ಮಾತನಾಡುತ್ತಿದ್ದರು. ವಿಜಯನಗರ ಕಾಲದಲ್ಲಿ ಮತ್ತು ಅನಂತರ ಅನೇಕ ಕಾರಣಗಳಿಂದ ಪೋರ್ಚುಗೀಸ್ ಗೋವಾದಿಂದ ಬಂದು ನೆಲೆಸಿದ ಕೊಂಕಣಿ ಮಾತಾಡುವ ಕ್ರಿಶ್ಚಿನ್ನರಿದ್ದರು. ಕರ್ನಾಟಕದ ಕರಾವಳಿ ಪ್ರದೇಶ ಹಾಗೂ ಮೈಸೂರು ಮತ್ತು ಹಾಸನ ಜಿಲ್ಲೆಗಳ ಭಾಗಗಳಲ್ಲಿ ಮುಖ್ಯವಾಗಿ ವಾಸವಾಗಿದ್ದ ಜೈನರಿದ್ದರು. ಕುಡಿಯರು ಮತ್ತು ಸೋಲಿಗರಂತಹ ವಿವಿಧ ಆದಿವಾಸಿ ಜನರು ಹಾಗೂ ಕೊಡವ ಮತ್ತು ಹಾಲಕ್ಕಿ ಒಕ್ಕಲುಗಳಂತಹ ಜನರು, ವಿಶೇಷವಾಗಿ ವರ್ಣರಂಜಿತವಾದ ಮಹಿಳೆಯರ ಉಡುಗೆ ತೊಡುಗೆಗಳಿಂದಾಗಿ ಸಮಕಾಲಿಕ ಜೀವನಕ್ಕೆ ವರ್ಣವೈವಿಧ್ಯವನ್ನೂ ಬೆಡಗನ್ನೂ ತಂದಿತ್ತಿದ್ದುವು. ಮೂಲತಃ ಆಫ್ರಿಕಾದಿಂದ ಬಂದ ಸಿದ್ದಿಗಳು, ವಿಜಯನಗರ ಸಾಮ್ರಾಜ್ಯದ ಉತ್ತರ ಕನ್ನಡ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದರು. ಸಾಮ್ರಾಜ್ಯವು ಮಾನವಕುಲ ವೈವಿಧ್ಯವನ್ನು ಬಿತ್ತರಿಸುವ ಚಿತ್ರಶಾಲೆಯಂತೆ ತೋರುತ್ತಿದ್ದಿತು. ಈ ಸಾಮಾಜಿಕ ವರ್ಗಗಳು ಅನುಕ್ರಮವಾದ ಒಂದು ಶ್ರೇಣಿಯಲ್ಲಿ ಜೋಡಣೆಗೊಂಡಿದ್ದುವು.

## ವಿಜಯನಗರ ಕಾಲದ ಆಯಗಾರರು

ತಾವು ಮಾಡುತ್ತಿದ್ದ ಸೇವೆಗೆ ಪ್ರತಿಯಾಗಿ ಪಡೆಯುತ್ತಿದ್ದ ಸಂಭಾವನೆಗೆ ಅಥವಾ ಸಂಭಾವನೆ ಸ್ವೀಕೃತ ಸಮುದಾಯಗಳಿಗೆ 'ಆಯಗಾರರೆಂದು ಹೆಸರು. ಆಯಗಾರರನ್ನು ಪ್ರಮುಖವಾಗಿ ಭರತ ಖಂಡದಾದ್ಯಂತ ವಿವಿಧ ಹೆಸರುಗಳಿಂದ ಉಲ್ಲೇಖಿಸಲ್ಪಡುತ್ತಿತ್ತೆಂಬುದಕ್ಕೆ ಮೊಘಲರ ಕಾಲದ 'ಬಾರಾಬಲವಟ್ಟಿ' ಅಥವಾ ಬಾರಬಲೂತಿ' ಎಂಬ ಪದವೇ ಇದನ್ನು ಸಾಕ್ಷಿಕರಿಸುತ್ತದೆ.[23] ಅಲ್ಲದೆ ಪ್ರಮುಖವಾಗಿ ದಕ್ಷಿಣ ಭಾರತ ಮೊದಲ ಹಿಂದೂ ಸಾಮ್ರಾಜ್ಯದ "ರಾಮರಾಯನ ಬಖೈರೆ' ಎಂಬ ಕೃತಿಯಲ್ಲಿ ಆಯಗಾರರ ಪ್ರಸ್ತಾಪ ಬರುತ್ತದೆ. ಇವರು ಭಾರತಾದ್ಯಂತ ತಮ್ಮ ವೃತ್ತಿಯಾಧಾರಿತ ಕಸುಬಿನಿಂದ ಮನೆ ಮಾತಾಗಿದ್ದರೆಂದು ಮತ್ತು ಇವರೇ ಒಂದು ಗ್ರಾಮದ ಸುಭಿಕ್ಷಕ್ಕೂ, ಉನ್ನತಿಗೂ ಕಾರಣವೆಂದು ತಿಳಿಯುತ್ತದೆ. ಏಕೆಂದರೆ ಇದರಿಂದಲೇ ಪ್ರಮುಖ ಕಾರ್ಯ ಪ್ರವೃತ್ತಿಗಳು ಮುನ್ನಡೆಯುತ್ತಿದ್ದದ್ದು. ರಾಮರಾಯನ ಬಖೈರೆ ಕೃತಿಯಲ್ಲಿ ಆಯಗಾರರ ಗುಂಪಿಗೆ ಸೇರಲ್ಪಡುವ 12 ಸಮುದಾಯಗಳನ್ನು ಪ್ರಸ್ತಾಪಿಸಿದ್ದಾರೆ. ಅವುಗಳೆಂದರೆ 1) ಗೌಡ 2) ಬಡಗಿ 3) ಜೋಲುಷ 4) ಕಮ್ಮಾರ 5) ತಲವಾರ 6) ಕುಲಕಣಿ 7) ಅಕ್ಕಸಾಲಿಗರು 8) ಬಡಿಗ 9) ಮಠಪತಿ 10) ಅಗಸ 11) ನಾಯಿದ್ರವ 12) ಬರಿಕಾರರೆಂಬ ಸಮುದಾಯಗಳು. ಒಂದು ಗ್ರಾಮದಲ್ಲಿನ ಪ್ರತಿಯೊಂದು ಕೆಲಸಕ್ಕೆ ಸೇರಿದಂತೆ ತಮ್ಮನ್ನು ತೊಡಗಿಸಿಕೊಂಡಿದ್ದರು. ಇವರು ತಮ್ಮ ಸೇವೆಗೆ ಆ ಹಳ್ಳಿಯ ರೈತರು ತಮ್ಮ ಒಕ್ಕಲುತನದ ಕೆಲವು ಭಾಗವನ್ನು ಈ ಆಯಗಾರರ ಸೇವೆಗೆ ನೀಡುತ್ತಿದ್ದರು. ಉದಾ: ಗ್ರಾಮದ ಗೌಡನು ಗೌಡಿಕೆ ವಹಿಸಿಕೊಂಡಿದ್ದು ಇವರ ಕಾರ್ಯಕ್ಕೆ ಸರ್ಕಾರವು ವಿಜಯಗರದ ಕಾಲದಲ್ಲಿ ಸಂಬಳದ ರೂಪದಲ್ಲಿ ರೈತರಿಂದ ಸಂಗ್ರಹಿತ ವಸ್ತುವಿನಲ್ಲಿ ಪಾಲು ನೀಡಲಾಗುತ್ತಿತ್ತು. ಇಷ್ಟೇ ಅಲ್ಲದೆ ಇವರಿಗೆ ಕುದುರೆ, ಛತ್ರಿ ಮತ್ತು ಸುಂಕರಹಿತ ಖುಷ್ಕಿ ಭೂಮಿ ಸಹ ಇವರ ಸೇವೆಯ ಮಾನದಂಡವಾಗಿ ತಲುಪುತ್ತಿತ್ತು.[24]

ಆಯಗಾರರೆಂದರೆ ಕೃಷಿಕರಿಗೆ ಒಕ್ಕಲುತನ ವೃತ್ತಿಯಲ್ಲಿ ನೆರವಾಗುವ ಕಂಬಾರ, ಕುಂಬಾರ, ಬಡಿಗ, ಅಗಸ, ನಾವಿಂದ ಮುಂತಾದವರ ಸೇವೆ. ಇವರು ಜಾತ್ರೆ, ಉತ್ಸವಗಳಲ್ಲಿ ತಮ್ಮ ಸೇವೆಯನ್ನು ನಿರಂತರವಾಗಿ ಮಾಡಿಕೊಂಡು ಬಂದಿದ್ದವರು. ಬಿತ್ತನೆ ರಾಶಿಯ ಸಂದರ್ಭದಲ್ಲಿ ಇವರಿಗೆ ಚಾಜಗಳುಂಟು. ಗ್ರಾಮೀಣ ಆಯಗಾರರೆಂದರೆ ಒಕ್ಕಲಿಗ ವರುಷಕ್ಕೊಮ್ಮೆ ಬೆಳೆಯುವ ಬೆಳೆಯಲ್ಲಿ ಕಾಳು ಕಡ್ಡಿಯನ್ನು ದಾನರೂಪವಾಗಿ ಪಡೆದು ಭೂಮಿಯ ಆದಾಯ (Land economy)ದ ಮೇಲೆ ಜೀವನ ಸಾಗಿಸುವ ಜನ. ಇವರು ಪಡೆಯುವ 'ಆಯ' ಒಂದು ಕರಾರು ಅಥವಾ ಕೂಲಿ ಅಲ್ಲ. ಅದೊಂದು ಗ್ರಾಮೀಣ ಪರಂಪರೆಯಾಗಿ ಬಂದ ಆರ್ಥಿಕ ನೀತಿ. ಪರಸ್ಪರರಲ್ಲಿ ಬೆಳೆದು ಬಂದ ಒಂದು ಬಗೆಯ ಧಾರ್ಮಿಕ ಮನೋಭಾವ.

ಒಕ್ಕಲಿಗನು ಮೇಟಿಯ ಕಂಬವೆಂದಾದರೆ ಆಯಗಾರರು ಮೇಟಿಯ ಸುತ್ತ ತಿರುಗುವ ಹಂತಿಯ ಎತ್ತುಗಳಂತೆ. ಮೇಟಿ ಇವೆಲ್ಲಕ್ಕೂ ಆಧಾರ. ಒಕ್ಕಲಿಗನಿಂದ ಆಯ ಪಡೆಯುವ ಜನ ಹಾಗೂ ಆಯದ ಉದ್ದೇಶಗಳ ಪಟ್ಟಿ ಈ ಕೆಳಗಿನಂತಿದೆ.

| ಆಯಗಾರರು | 'ಆಯ'ದ ಉದ್ದೇಶ |
|---|---|
| 1. ಮಠದಯ್ಯನವರು | ಬಿತ್ತುವ ಮೂರ್ತಾದಿಗಳನ್ನು ಹೇಳುವುದು |
| 2. ಆಚಾರಿಗಳು | ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪೌರೋಹಿತ್ಯರಾಗಿರುವುದು |
| 3. ದೇವರ ಪೂಜಾರಿಗಳು | |
| 4. ಬಡಿಗ | ದಿಂಡು ಕೂರಿಗೆಗಳನ್ನು ಕೆತ್ತುವುದು |
| 5. ಕಂಬಾರ | ಕೊಡಲಿ, ಕುರುಪಿ, ಹಾರೆ, ಗುದ್ದಲಿಗಳನ್ನು ನಿರ್ಮಿಸುವುದು |
| 6. ಕುಂಬಾರ | ಗಡಿಗೆ, ಮಡಿಕೆಗಳನ್ನು ಒದಗಿಸುವುದು |
| 7. ಹೂಗಾರ | ವಿವಾಹ ಮುಹೂರ್ತಾದಿಗಳಲ್ಲಿ ಹೂ ದಂಡಿ, ಬಾಸಿಂಗಗಳನ್ನು ಕೊಡುವುದು |
| 8. ಅಗಸ | ಮಡಿ ಬಟ್ಟೆಗಳನ್ನೊದಗಿಸುವುದು, ಪಂಜು ಹಿಡಿಯುವುದು |
| 9. ಕ್ಷೌರಿಕ | ಕ್ಷೌರಕಾರ್ಯ |
| 10. ಮೇದಾರ | ಒಕ್ಕಲುತನಕ್ಕೆ ಬೇಕಾಗುವ ಬುಟ್ಟಿ ಮೊದಲಾದವನ್ನು ಪೂರೈಸುವುದು |
| 11. ಡೋಹರ | ಮಿಣಿ ಹಾಗೂ ತೊಗಲಿನ ಬಾರುಗಳನ್ನು ಪೂರೈಸುವುದು |
| 12. ಮಾದಿಗ | ಮೆಟ್ಟು ಹೊಲಿದುಕೊಡುವುದು |
| 13. ಕೊರವ | ವಿವಾಹಾದಿಗಳಲ್ಲಿ ಬಾಜಾ ಬಜಂತ್ರಿ ಮಾಡುವುದು |
| 14. ಹೊಲೆಯ | ಕಣ ಬಳಿಯುವದು, ಮನೆ ಸಾರಿಸುವುದು, ಕಟ್ಟಿಗೆ ಒಡೆಯುವುದು ಇತ್ಯಾದಿ ಹೊಲಗಳಲ್ಲಿ ದುಡಿಯುವುದು |

ಆಯಗಾರರಿಗೆ ರೈತರಿಂದ ದೊರೆಯುವ ಆಯದ ಹೊತ್ತು-ಗೊತ್ತುಗಳನ್ನು ಒಂದು ವರ್ಷದ ಅವಧಿಯಲ್ಲಿ ಹೀಗೆ ವಿಭಾಗಿಸಬಹುದು. 1) ಸುಗ್ಗಿಯ ಕಾಲದಲ್ಲಿ ದೊರಕುವ ಆಯ ಇದರಲ್ಲಿ ಮುಂಗಾರು ಸುಗ್ಗಿ ಹಾಗೂ ಹಿಂಗಾರು ಸುಗ್ಗಿಗಳು ಮುಖ್ಯ 2) ಜಾತ್ರೆ, ಉತ್ಸವಾದಿಗಳಲ್ಲಿ ಆಯಗಳು 3) ಹಬ್ಬ ಹುಣ್ಣಿಮೆಗಳಲ್ಲಿನ ಆಯಗಳು 4) ಮದುವೆ - ಮುಂಜಿ ಮೊದಲಾದ ಶುಭ ಕಾರ್ಯಗಳಲ್ಲಿ ದೊರಕುವ ಆಯಗಳು 5) ಜನನ ಮರಣ ಕಾಲದ ವಿವಿಧ ಸಂಸ್ಕಾರಗಳಲ್ಲಿ ಸಿಕ್ಕುವ ಆಯಗಳು. ಈ ದೃಷ್ಟಿಯಲ್ಲಿ ಕೃಷಿಕರು ತಮ್ಮ ವೃತ್ತಿಯಲ್ಲಿ ಮಾತ್ರವಲ್ಲದೆ ನಿತ್ಯ ನೇಮ ದೈನಂದಿನ ಜೀವನ ಹಾಗೂ ಹಬ್ಬ, ಹುಣ್ಣಿಮೆ ಮೊದಲಾದ ವಿವಿಧ ಸಾಂಸ್ಕೃತಿಕ ಜೀವನ ಸಂದರ್ಭಗಳಲ್ಲೂ ಸಹ ಆಯಗಾರರ ನಿಕಟ ಸಂಬಂಧವನ್ನು ಹೊಂದಿರುವುದು ವಿಶಿಷ್ಟವಾಗಿದೆ.

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಆಯಗಾರರನ್ನು ಕುರಿತ ಶಾಸನಗಳು ನಮಗೆ ದೊರೆಯುತ್ತವೆ. ಹಳ್ಳಿಗಳಲ್ಲಿ ಆಯಗಾರರ ಒಂದು ಸಂಸ್ಥೆಯೇ ಇತ್ತೆನ್ನಬಹುದು. ಶಿರ EC. Vol. XII, 1720, EC, Vol XII, si 41, 1544. ಅದೇ ಪು. 2, 1602 ಮುಂತಾದ ಶಾಸನಗಳಲ್ಲಿ ಆಯಗಾರರನ್ನು ಕುರಿತ ಒಂದು ಪಟ್ಟಿಯು ಸಿಗುತ್ತದೆ. ಅದರಲ್ಲಿ ಹನ್ನೆರಡು ರೀತಿಯ ಆಯಗಾರರನ್ನು ಕುರಿತ ವಿಧಾನಗಳಿವೆ.

1. ಬಡಗಿ - ಹರಡಿ ಹೊಸಮಲಯ್ಯ
2. ಕೆಲಸಿ - ಮುದಲ್ಲಿ ಗಿರಿಯಣ್ಣ
3. ಅಸಗರ - (ಅಗಸ) - ಕೆಂಪರ್ರೈಯ್ಯ
4. ತಳವಾರ - ಬುಡಳಿ ನಾಗಯ್ಯ
5. ಬೇಗಾರ - ಅಕಯ್ಯ ಬಡದಾಸ
6. ಶಾನಭಾಗ - ಬ್ರಹ್ಮಯ್ಯ
7. ಜೋಯಿಷ್ಯ - ಹರಿಯಣ್ಣ ಭಟ್ಟ
8. ಕಮ್ಮಾರ - ಮುದ್ದಣ್ಣ ತಿಮ್ಮಯ್ಯ
9. ಅಕ್ಕಸಾಲಿ - ತಿರುಮಲ ರಂಗಪ್ಪನಾಯಕ
10. ಕುಂಬಾರ - ತಿರುಪತಯ್ಯ
11. ಕಂಡಿಕಾರ - ಹೊನ್ನಯ್ಯ
12. ಸಾಮಿನಿ - ತಿಮ್ಮಾಲಯ

ವಿಜಯನಗರ ಕಾಲದಲ್ಲಿ ಆಯಗಾರ ಅವರನ್ನು ಸ್ಥಾನಮಾನಕ್ಕೆ ಅನುಗುಣವಾಗಿ ಮೂರು ರೀತಿಯಲ್ಲಿ ವಿಭಾಗಿಸಲಾಗಿತ್ತು.

ಅ. ಅಧಿಕಾರಿಗಳು - ಮುಖ್ಯಸ್ಥ ಲೆಕ್ಕಿಗ (ಕರಿಣಿಕ)

ಆ. ಕುಶಲ ಕರ್ಮಿಗಳು - ಕಮ್ಮಾರ, ಬಡಿಗ, ಕುಂಬಾರ, ಚಮ್ಮಾರ ಮತ್ತು ಅಕ್ಕಸಾಲಿಗ

ಇ. ನೀರುಗಟ್ಟಿ, ಕಾವಲುಗಾರ (ಬೇಗಾರ), ಕ್ಷೌರಿಕ, ಅಗಸ ಮತ್ತು ಪುರೋಹಿತ. ಈ ಮೇಲಿನ ಎಲ್ಲರೂ ಗ್ರಾಮ ಒಂದರ ಸೇವೆ ಮಾಡುವವರೆ ಆಗಿದರು. ಅವರ ಸೇವೆಗಳಲ್ಲಿ ವ್ಯತ್ಯಾಸವಿತ್ತೆಂಬುದನ್ನು ಮರೆಯುವಂತಿಲ್ಲ.

ಹಳ್ಳಿಗಳಲ್ಲಿ ಗ್ರಾಮಾಧಿಕಾರಿಯನ್ನು 'ಗೌಡಿಕೆ' ಎಂಬ ಅರ್ಥದಲ್ಲಿ ಕರೆಯಲಾಗಿದ್ದು ಊರಿನ ಕೃಷಿಕರಿಂದ ತೆರಿಗೆಯನ್ನು ವಸೂಲಿ ಮಾಡುವ ಕಾರ್ಯ ಗ್ರಾಮಾಧಿಕಾರಿಯ 'ಗೌಡಿಕೆ' ಕೆಲಸವಾಗಿತ್ತು. ಇಂತಹ ಗೌಡನಿಗೆ ಸರ್ಕಾರ ಗೌಡ ಮಾನ್ಯ ಅಥವಾ ಗೌಡ ಉಂಬಳಿ ನೀಡುತ್ತಿತ್ತು.

**ಅ. ಕುಂಬಾರ :** ಮಾನವ ಜೀವನದ ಅತ್ಯಂತ ಪ್ರಾಚೀನ ಸಾಧನಗಳಲ್ಲಿ ಕುಂಬಾರಿಕೆಯೂ ಒಂದು ಅಗತ್ಯವಾದ ವೃತ್ತಿ ಪ್ರಪಂಚದ ಅನೇಕ ಪ್ರಾಚೀನ ನಾಗರೀಕತೆಗಳಿಗೆ ತಮ್ಮದೇ ಆದ ವಿಶಿಷ್ಟ ಬಗೆಯ ಗಡಿಗೆ, ಬಿಂದಿಗೆ, ಮಡಕೆಗಳನ್ನು ತಯಾರಿಸುವ ವೃತ್ತಿ ಕೌಶಲ ಸಿದ್ಧಿಸಿತ್ತು. ಪುರಾತತ್ತ್ವ ಸಂಶೋಧಕರು ಆಯಾ ಜನಾಂಗದ ಬದುಕಿನ ವಿವಿಧ ಹಂತಗಳ ವಿಕಾಸದ ಪಳೆಯುಳಿಕೆಗಳೆಂದು ಸ್ವೀಕರಿಸಿ ಅವುಗಳ ಸಾಂಸ್ಕೃತಿಕ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.

ಅಂಬು ಬಿಲ್ಲಿಗೆ ಲೇಸು, ಇಂಬು ಕೋಣೆಗೆ ಲೇಸು<br>
ಸಂಬಾರ ಲೇಸು ಸಾರಿಗೆ ಊರಿಗೆ<br>
ಕುಂಬಾರ ಲೇಸು ಸರ್ವಜ್ಞ

ಬಿಲ್ಲಿಗೆ ಅಂಬು, ಕೋಣೆಗೆ ಇಂಬು, ಸಾರಿಗೆ ಸಂಬಾರ ಮುಖ್ಯವಾದಂತೆ ಊರಿಗೆ ಕುಂಬಾರ ಎನ್ನುವುದು ಸತ್ಯ. ಶಿಲಾಪೂರ್ವಯುಗ, ಶಿಲಾಯುಗ, ನವಶಿಲಾಯುಗಗಳ ನಿಕ್ಷೇಪ, ಪಳೆಯುಳಿಕೆಗಳನ್ನು ಪರಿವೀಕ್ಷಿಸುವ ಸಂಶೋಧಕರು ಕ್ರಿ.ಪೂ. 200 ಅಷ್ಟುಕಾಲಕ್ಕೆ ಕುಂಬಾರಿಕೆ ರೂಪುಗೊಂಡಿತೆಂದು ಹೇಳುತ್ತಾರೆ.

**ಆ. ಕಂಬಾರ :** ಕಂಬಾರರು ವ್ಯವಸಾಯಕ್ಕೆ, ಯುದ್ಧಕ್ಕೆ ನಿತ್ಯಜೀವನಕ್ಕೆ ಅನಿವಾರ್ಯವಾದ ಕಬ್ಬಿಣದ ಉಪಕರಣಗಳನ್ನು ತಯಾರಿಸಿಕೊಡುವ ಕಸಬುದಾರರು. ಹಳ್ಳಿಯ ಹನ್ನೆರಡು ಆಯಗಾರರಲ್ಲಿ ಒಬ್ಬರು. ಕರ್ನಾಟಕದಲ್ಲಿ ಕಂಬಾರರು ಅತ್ಯಂತ ಪ್ರಾಚೀನ ಕಾಲದಿಂದಲೂ ಜನಾಂಗದ ಮನ್ನಣೆಯನ್ನು ಪಡೆದಿದ್ದಾರೆ. ಹಲವಾರು ಶಾಸನಗಳಲ್ಲಿ ಕಮ್ಮಾ ಹೆಸರಿನ ವ್ಯಕ್ತಿ, ಹಳ್ಳಿ, ಸ್ಥಳಗಳ ಉಲ್ಲೇಖ, ವೃತ್ತಿ ಹಾಗೂ ಅವರ ಸಾಮಾಜಿಕ ಜೀವನವನ್ನು ಕುರಿತ ಉಲ್ಲೇಖಗಳು ದೊರೆಯುತ್ತವೆ. ಕ್ರಿ.ಶ. ೧೬೫೬ರ ಒಂದು ಶಾಸನ ಪಾಂಚಾಳರು ಕಾಳಕಾಡಮ್ಮ ಟೇಶ್ವರ ದುರ್ಗಾ ಮಹಾಕಾಳಿಯ ದೀಪಾರಾಧನೆಗಾಗಿ ಕೊಡುತ್ತಿದ್ದ ತೆರಿಗೆಯನ್ನು ಸೂಚಿಸುತ್ತದೆ. ಕ್ರಿ.ಶ. ೧೧೨೪ರ ಶಾಸನದ 'ಕೊಡತಿವಣ' ಎಂಬ ತೆರಿಗೆಯನ್ನು ಸೂಚಿಸುತ್ತದೆ[25]

**ಇ. ಕ್ಷೌರಿಕ :** ವಿಜಯನಗರ ಕಾಲದಲ್ಲಿ ಅದರಲ್ಲೂ ವಿಶೇಷವಾಗಿ ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಇವರ ಸಾಮಾಜಿಕ ಸ್ಥಿತಿ-ಗತಿ ಸುಧಾರಿಸಲು ಸದಾಶಿವರಾಯನು ಅನೇಕ ರೀತಿಯ ತೆರಿಗೆಗಳನ್ನು ನೀಡಿದುದಲ್ಲದೆ ದಾನ ದತ್ತಿಗಳನ್ನು ನೀಡಿದನು. ಅಲ್ಲದೆ ಕ್ಷೌರಿಕ ಸಮುದಾಯದ ಖಂಡೋಜಿ ಎಂಬಾತನಿಗೆ ರಾಮರಾಯನು ಕೆಲವೊಂದು ತೆರಿಗೆಯಿಂದ ವಿನಾಯಿತಿ ನೀಡಿದ್ದು ತೆಲುಗು ಕವಿ ರುದ್ರಯ್ಯನ ಕೃತಿಯಾದ "ನಿರನ್‌ಕುಸೋಪಕ್ಯನಂ" ಎಂಬ ಕೃತಿಯಲ್ಲಿ ಕಾಣಬಹುದಾಗಿದೆ.

**ಈ. ಅಕ್ಕಸಾಲಿಗ :** ಅಕ್ಕಸಾಲಿಗರ ವೃತ್ತಿಯು ಗ್ರಾಮದಲ್ಲಿ ಪ್ರಧಾನವಾಗಿದ್ದು ಗ್ರಾಮದ ಕೃಷಿ ಉಪಯೋಗಿ ಸಲಕರಣೆ ನಿರ್ಮಾಣ ಮತ್ತು ರಾಜ್ಯದ ಯುದ್ಧೋಪಯೋಗಿ ಸಲಕರಣೆಗಳ ನಿರ್ಮಾಣದ ಜವಾಬ್ದಾರಿ ಇವರದಾಗಿತ್ತು. ಬಾರ್ಬೋಸ ಅಕ್ಕಸಾಲಿಗರು ಭಟ್ಕಳದ ಮೂಲಕ ವ್ಯಾಪಾರದ ಚಟುವಟಿಕೆಗಳನ್ನು ನಡೆಸುತ್ತಿದ್ದುದನ್ನು ಪ್ರಸ್ತಾಪಿಸಿದ್ದಾನೆ. ಮತ್ತೊಬ್ಬ ಪ್ರವಾಸಿಗ ಡೊಮಿಂಗೊ ಫೇಸ್ ಅಕ್ಕಸಾಲಿಗರು ರಾಜನ ಅನೇಕ ಶಸ್ತ್ರಾಸ್ತ್ರಗಳಲ್ಲಿ ವಜ್ರ ವೈಢೂರ್ಯಗಳನನು ಸೇರಿಸಿ ನಿರ್ಮಾಣ ಮಾಡುತ್ತಿದ್ದ ಕಲಾ - ಕೌಶಲ್ಯತೆಯನ್ನು ಪ್ರಶಂಸಿಸಿದ್ದಾನೆ. ಅಲ್ಲದೆ ಇದಕ್ಕೆ ಪ್ರತಿಯಾಗಿ ಇವರಿಗೆ ರಾಜನು ಭೂಮಿಯನ್ನು ನೀಡುತ್ತಿದ್ದುದು ಈತನ ಬರವಣಿಗೆಯಲ್ಲಿ ದಾಖಲಿಸಿದೆ. ಅಕ್ಕಸಾಲಿಗರು ತಮ್ಮ ಕುಶಲ ಕರ್ಮಕ್ಕೆ ಬಳಸುವ ಉಪಕರಣಗಳೆಂದರೆ ಕಪ್ಪರಿಗೆ (ಅಗ್ಗಿಷ್ಟಿಕೆ) ಊದುಗೊಳವೆ. ತಿದಿ, ಮೂಸೆ, ಅಡಿಗಲ್ಲು, ಸುತ್ತಿಗೆ, ಉಳಿ, ಚಿಮ್ಮಟ್ಟಿಗೆ, ಇಕ್ಕಳ, ಕತ್ತರಿ, ತ್ರಿಜ್ಯಮಾಪಕ, ಅರ, ಕುಂಚ ಮತ್ತು ಹಲವಾರು ರೀತಿಯ ಅಚ್ಚುದಳ ಇತ್ಯಾದಿ. ಅಕ್ಕಸಾಲಿಗರು ಕ್ರಿ.ಪೂ 2500 ವರ್ಷಗಳಿಂದೆಯೇ ಇದ್ದರೆಂಬುದಕ್ಕೆ ಸಿಂಧೂ ಬಯಲಿನ ನಾಗರೀಕತೆಯಲ್ಲಿ ಕೆಲವು ಕುರುಹುಗಳು ಸಿಕ್ಕಿವೆ.

**ಉ. ಶಾನುಭೋಗ (ಕರಣಿಕ) :** ಶಾನುಭೋಗರನ್ನು ಗ್ರಾಮದ ಲೆಕ್ಕಾಧಿಕಾರಿಯೆಂತಲೂ ಕರೆಯುತ್ತಿದ್ದರು. ಶಾನುಭೋಗರು ಗ್ರಾಮದ ಸಮಸ್ಥ ಭೂದಾಖಲೆಗಳನ್ನು ದಾಖಲಿಸುತ್ತಿದ್ದರು. ಇದನ್ನು 'ಕಡತ' ಎಂದು

ಕರೆಯುತ್ತಾರೆ. ಈ ಭೂಕಡತ ನಿರ್ವಹಣೆ ಕಾರ್ಯಕ್ಕೆ ರೈತರು ಇವರಿಗೆ 'ಕಡತದ ಕಾಣಿಕೆ'ಯನ್ನು ನೀಡುತ್ತಿದ್ದರು. ಮತ್ತು ಇವರ ಸೇವೆಗೆ ಮಾನ್ಯಭೂಮಿ ಪಡೆಯುತ್ತಿದ್ದರು. ಇವರ ಕಛೇರಿ ನಿರ್ಮಾಣಕ್ಕೆ ಗ್ರಾಮದ ಶಾನೆಭವನ ಕೊಡುಗೆ, ಶಾನುಭೋಗರ ಉಂಬಳಿ ಮತ್ತು 'ಕರಣಿಕೆ' ಮಾನ್ಯ ಎಂಬ ಭೂದಾನವನ್ನು ಪಡೆಯುತ್ತಿದ್ದರು.

## 2.4. ಸಮಾಜ ನಿರ್ಮಾಣದಲ್ಲಿ ಶರಣರ ಪಾತ್ರ

ಮಧ್ಯಯುಗದ ಸಾಮಾಜಿಕ ಸಂದರ್ಭದಲ್ಲಿ ವೀರಶೈವ ಶರಣರು ಅಂದರೆ ಧಾರ್ಮಿಕ ಸಂತರು, ಮಠಾಧಿಪತಿಗಳು ಹಾಗೂ ಸುಧಾರಕರು ಪ್ರಮುಖರಾಗಿ ಕಾಣುತ್ತಾರೆ. 12ನೇ ಶತಮಾನದಲ್ಲಿ ವೀರಶೈವ ಶರಣರು ಹಿಂದೂ ಸಮಾಜದಲ್ಲಿ ಪರಿವರ್ತನೆಯ ಪ್ರವರ್ತಕರಾದರು. ಬಸವೇಶ್ವರ, ಅಲ್ಲಮ ಪ್ರಭು, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದವರು ವೈದಿಕ ಜಾತಿಪದ್ಧತಿಯನ್ನು ತೀವ್ರವಾಗಿ ಖಂಡಿಸಿದರು. ಅಂತರ್ಜಾತಿ ವಿವಾಹದ ಮೂಲಕ ಜಾತೀಯತೆಯನ್ನು ಹೋಗಲಾಡಿಸಲು ಪ್ರಯತ್ನಿಸಲಾಯಿತು. ದುರಾದೃಷ್ಟವಶಾತ್ ಅದು ಕ್ರಾಂತಿಯಲ್ಲಿ ಮುಕ್ತಾಯಗೊಂಡಿತು. ಅದೇ ಕಾಲದ ಚನ್ನಬಸವ, ಅಕ್ಕಮಹಾದೇವಿ, ಮೊದಲಾದವರು ಕೂಡ ಜಾತಿ ನಿರ್ಮೂಲನೆಯಲ್ಲಿ ಒಲವು ತೋರಲಿಲ್ಲ. ಅದಕ್ಕೆ ಅವರ ವಚನಗಳೇ ಸಾಕ್ಷಿ. ಉದಾ: ಚನ್ನಬಸವಣ್ಣನ ವಚನಗಳಲ್ಲಿ ಲಿಂಗದೀಕ್ಷೆ ಕೊಡಬೇಕಾದಲ್ಲಿ ಬ್ರಾಹ್ಮಣರಿಗೆ - 3 ವರ್ಷ, ಕ್ಷತ್ರಿಯರಿಗೆ - 6 ವರ್ಷ, ವೈಶ್ಯರಿಗೆ - 9 ವರ್ಷ ಮತ್ತು ಶೂದ್ರ ಹಾಗೂ ದಲಿತರಿಗೆ - 12 ವರ್ಷ ಸಂಸ್ಕಾರ ನೀಡಬೇಕೆಂದು ಹೇಳಿದ್ದಾರೆ. ಹೀಗಾಗಿ ಸಮಾಜದಲ್ಲಿ ಜಾತಿ ನಿರ್ಮೂಲನಾ ಪ್ರಯತ್ನ ಭರದಿಂದ ಸಾಗಲಿಲ್ಲ. ಆದರೂ ಶರಣರು ಶೂದ್ರರಿಂದ ಸೇವೆಗಳನ್ನು ಮಾಡಿಸಿಕೊಳ್ಳಲು ಅವರಿಗೆ ಲಿಂಗದೀಕ್ಷೆ ನೀಡಿದರು. ವೀರಶೈವ ಧಣನದ ಪಂಚಪೀಠಗಳ ಮಠಾಧೀಶರು ಮತ್ತು ಶಾಖಾ ಮಠಾಧೀಶರು ಇಡೀ ದಕ್ಷಿಣ ಭಾರತದಲ್ಲಿ ವೈದಿಕ ಪರಂಪರೆಯಲ್ಲಿ ವೀರಶೈವ ಧರ್ಮ ಬೆಳೆಸಿಕೊಂಡು ಬಂದರು. ಈ ವೀರಶೈವ ಶರಣರು, ಜಮೀನ್ದಾರರು, ವರ್ತಕರು, ಶ್ರೀಮಂತರು ಮೊದಲಾದವರು ತಮ್ಮ ಸೇವೆಗಾಗಿ ಅಗಸರಿಗೆ, ಕ್ಷೌರಿಕರಿಗೆ, ನೇಕಾರರಿಗೆ, ರೈತರಿಗೆ, ನೀರು ತರುವವರು ಇತರ ಸೇವಕ ಸೇವಕಿಯರಿಗೆ ಲಿಂಗದೀಕ್ಷೆ ನೀಡಿದರು. ಆದರೂ ಅವರನ್ನು ತಮ್ಮೊಂದಿಗೆ ಸಮಾನರಂತೆ ಕಾಣಲಿಲ್ಲ. ಸಹಪಂಕ್ತಿ ಭೋಜನ, ವಿವಾಹ ಇತ್ಯಾದಿ. ಲಿಂಗವಿಲ್ಲದವರನ್ನು ತಮ್ಮ ಸೇವೆಗೆ ನೇಮಕ ಮಾಡಿಕೊಳ್ಳುತ್ತಿರಲಿಲ್ಲ. ಈ ಬಗೆಯ ಮಡಿವಂತಿಕೆ ಬ್ರಾಹ್ಮಣರನ್ನೂ ಮೀರಿಸುವಂತಿದ್ದಿತು. ವೀರಶೈವರಾದರೂ ಕೂಡ ಒಳಪಂಗಡಗಳಲ್ಲೇ ವಿವಾಹ ಸಂಬಂಧಗಳೂ ಜರುಗುತ್ತಿದ್ದವು.

ಕರ್ನಾಟಕದಲ್ಲಿ ಶೂದ್ರರಿಗೆ ಲಿಂಗದೀಕ್ಷೆಯನ್ನು 12ನೇ ಶತಮಾನದಲ್ಲಿ ಕೊಡಲು ಆರಂಭಿಸಲಾಯಿತು. ಆಂಧ್ರದಲ್ಲಿ 14ನೇ ಶತಮಾನದವರೆವಿಗೂ ಶೂದ್ರರಿಗೆ ಲಿಂಗದೀಕ್ಷೆಯನ್ನು ಕೊಡುತ್ತಿರಲಿಲ್ಲ. ಏಕೆಂದರೆ ಆಂಧ್ರದ ಶ್ರೀಕಂಠಾಚಾರ್ಯನೆಂಬ ವೀರಶೈವ ಗುರು ಶೂದ್ರರಿಗೆ ಲಿಂಗಧಾರಣೆಯ ಅಧಿಕಾರವಿರಲಿಲ್ಲವೆಂದೂ, ಅವರಿಗೆ ಗುಡಿಯಲ್ಲಿರುವ ಲಿಂಗ (ಸ್ಥಾವರ ಲಿಂಗ)ವೇ ಮುಕ್ತಿ ಸಾಧನವೆಂದು ಕ್ರಿ.ಶ. 5ನೇ ಶತಮಾನದಲ್ಲಿಯೇ

ಪ್ರತಿಪಾದಿಸಿದ್ದನು. ಆದರೆ ಕರ್ನಾಟಕದಲ್ಲಿ ಬಸವೇಶ್ವರರ ಸುಧಾರಣೆಗಳಿಂದ ಪ್ರಭಾವಿತನಾಗಿ ಶೂದ್ರರಿಗೆ ದೀಕ್ಷೆ ಕೊಡುವ ಧೈರ್ಯ ಮಾಡಿದರು. ಬಸವೇಶ್ವರರ ಸುಧಾರಣೆಗಳಿಂದ ಪ್ರಭಾವಿತವಾಗಿ ಶೂದ್ರರಿಗೆ ದೀಕ್ಷೆ ಕೊಡುವ ಧೈರ್ಯ ಮಾಡಿದರು. ಹೀಗಾಗಿ ಆಂಧ್ರದಲ್ಲಿ 14ನೇ ಶತಮಾನದವರೆಗೆ ಲಿಂಗದೀಕ್ಷೆ ವಿಶೇಷವಾಗಿ ಬ್ರಾಹ್ಮಣರಿಗೆ, ಅನಂತರ ಕ್ಷತ್ರಿಯ ಮತ್ತು ವೈಶ್ಯ ಸಮಾಜಕ್ಕೆ ಸೀಮಿತವಾಯಿತು. ಕ್ರಮೇಣ ತಮಿಳುನಾಡು ಮತ್ತು ಕೇರಳದಲ್ಲಿ ಶೂದ್ರ ಸಮಾಜಕ್ಕೆ ಲಿಂಗದೀಕ್ಷೆ ಕೊಡತೊಡಗಿದರು. ಹೀಗೆ ವಿಜಯನಗರ ಕಾಲದಲ್ಲಿ ಶರಣರು ಶೂದ್ರ ಸಮಾಜಕ್ಕೆ ಲಿಂಗದೀಕ್ಷೆ ಕೊಡಲಾಗಿ ಇಡೀ ದಕ್ಷಿಣ ಭಾರತದಲ್ಲಿ ಅದು ಪ್ರಚುರಗೊಂಡಿತು. ತಮಿಳುನಾಡು ಮತ್ತು ಕೇರಳಗಳಲ್ಲಿ ಲಿಂಗದೀಕ್ಷೆ ಪಡೆದಿದ್ದರೂ ಮಾಂಸಾಹಾರವನ್ನು ಮುಂದುವರೆಸಿಕೊಂಡು ಬಂದರು. ಇವರಲ್ಲಿ ಪೂಜಾರಿ ಮನೆತನದ ಪಂಡಾರರು ಮಾತ್ರ ಸಸ್ಯಾಹಾರಿಗಳಾಗಿದ್ದಾರೆ.

ಪೂಜಾರಿಗಳು ಮಾಂಸಹಾರಿ ಭಕ್ತರ ಮನೆಗಳಲ್ಲಿ ಪೂಜೆ, ಪ್ರಸಾದ ಸ್ವೀಕರಿಸುವುದಿಲ್ಲ. ಈ ಕಾರಣದಿಂದಾಗಿ ಅಲ್ಲಿ ಕ್ಷತ್ರಿಯ ವೀರಶೈವರು, ವೈಶ್ಯವೀರಶೈವರು, ಶೂದ್ರ ವೀರಶೈವರು, ದಲಿತ ವೀರಶೈವರು ಪ್ರತ್ಯೇಕತೆಯನ್ನು ಉಳಿಸಿಕೊಂಡರು. ಅವರಲ್ಲಿ ಪರಸ್ಪರ ಭೋಜನ ಮತ್ತು ವಿವಾಹ ಸಂಬಂಧಗಳು ಏರ್ಪಡಲಿಲ್ಲ. ಹೀಗೆ ವಿಜಯನಗರ ಕಾಲದ ವೀರಶೈವ ಸಮಾಜದಲ್ಲಿ ವೈದಿಕ ಜಾತಿ ಪದ್ಧತಿಗಳು ಪೂರ್ಣ ನಶಿಸಲೇ ಇಲ್ಲ. ಪರಿಣಾಮವಾಗಿ ಶರಣರು ಜಾತಿಪದ್ಧತಿಯನ್ನು ನಿರ್ಮೂಲ ಮಾಡಲಾಗಲಿಲ್ಲ ಎಂಬುದು ಅಪ್ರಿಯ ಸತ್ಯವಾಗಿದೆ.

ವೀರಶೈವ ಸಮಾಜ ಶರಣರ ಪ್ರವಚನಗಳಿಂದ ಪ್ರಭಾವಗೊಂಡು ದೈನಂದಿನ ಜೀವನದಲ್ಲಿ ನೀತಿ ನಿಯಮಗಳನ್ನು ಪಾಲಿಸಿಕೊಂಡು ಬಂದಿತು. ಧರ್ಮದೀಕ್ಷೆ ಪಡೆದವರು ಅತ್ಯುತ್ಸಾಹದಿಂದ ಶರಣರ ತತ್ವಗಳನ್ನು ಪರಿಪಾಲಿಸಿಕೊಂಡು ಬಂದರು. ನರಬಲಿ, ಪ್ರಾಣಿಬಲಿಗಳು ಈ ಸಮಾಜದಲ್ಲಿ ನಿರ್ಮೂಲಗೊಂಡವು. ಲಿಂಗದೀಕ್ಷೆ ಪಡೆದವರು ಅಸ್ಪೃಶ್ಯತೆಯಿಂದ ಮುಕ್ತರಾದರು. ಹಾಗಾಗಿ ಹಿಂದೂ ಸಮಾಜದಲ್ಲಿದ್ದ ದೊಡ್ಡ ಕಳಂಕವನ್ನು ಕಿತ್ತೊಗೆದ ಕೀರ್ತಿ ಶರಣರಿಗೆ ಸಲ್ಲುತ್ತದೆ. ಶರಣರು ಪ್ರತಿಪಾದಿಸಿದ ತತ್ವಗಳಲ್ಲಿ "ಪರ ಧನ, ಪರ ಸತಿ, ಪರ ದೈವ ಬೇಡ" ಎಂಬ ಸಿದ್ಧಾಂತವನ್ನು ವೀರಶೈವ ಸಮಾಜದಲ್ಲಿ ಪರಿಪಾಲಿಸಿಕೊಂಡು ಬರಲಾಯಿತು. ಇದರಿಂದಾಗಿ ಹಿಂದೂ ಸಮಾಜದಲ್ಲಿ ರಾಜ್ಯಾಧಿಕಾರದಲ್ಲಿ ವಿಶೇಷ ಸ್ಥಾನಮಾನಗಳು ದೊರೆತವು.

ಶಿವಶರಣರು ಬೋಧಿಸಿದ 'ದಾಸೋಹ' ಸಿದ್ಧಾಂತ ಮಠಗಳು ಮತ್ತು ವಿದ್ಯಾ ಕೇಂದ್ರಗಳ ಸ್ಥಾಪನೆಗೆ ದಾರಿಮಾಡಿತು. ಮತಾಂತರಗೊಂಡ ವಿವಿಧ ಜಾತಿಯವರು ಈ ಕೇಂದ್ರಗಳಲ್ಲಿ ಊಟ, ವಸತಿ, ವಿದ್ಯೆ ಪಡೆದು ಸಾಮಾಜಿಕವಾಗಿ ಮುಂದೆ ಬರಲು ಸಾಧ್ಯವಾಯಿತು. ಸಮಾಜಕ್ಕೆ ಶರಣರ ಮತ್ತೊಂದು ಮಹತ್ತರ ಕೊಡುಗೆ ಎಂದರೆ 'ಕಾಯಕ' ಸಿದ್ಧಾಂತ. ಈ ತತ್ವ ಅನುಸರಣೆ ಮಾಡಿದವರು ಕಾಲಹರಣ ಮಾಡದೆ ವಿವಿಧ ಉದ್ಯೋಗಗಳಲ್ಲಿ ತೊಡಗಿ (ಕೃಷಿ, ನೇಯ್ಗೆ, ಎಣ್ಣೆ ತೆಗೆಯುವುದು, ಸೇವೆ ಇತ್ಯಾದಿ) ಜೀವನವನ್ನು ಸಮೃದ್ಧಗೊಳಿಸಿಕೊಂಡರು. ಗಳಿಸಿದ ಸಂಪತ್ತಿನ ಸ್ವಲ್ಪ ಭಾಗವನ್ನು ತಮ್ಮ ಹಾಗೂ ಸಮಾಜದ ಇತರರ ಸೇವೆಗೂ ಬಳಸಿದರು. ಇಷ್ಟಲಿಂಗ ಆರಾಧನೆಯಲ್ಲಿ ನಂಬಿಕೆಯಿಟ್ಟಿದ್ದ ಇವರು ದೇವಾಲಯಗಳ ನಿರ್ಮಾಣಕ್ಕೆ

(ಸ್ಥಾವರ ಲಿಂಗವಿರುವ ದೇವಾಲಯ) ಹೆಚ್ಚಿನ ಹಣ ಅಪವ್ಯಯ ಮಾಡಲಿಲ್ಲ. ಬದಲಾಗಿ ಸಂಪತ್ತನ್ನು ದಾಸೋಹ ಹಾಗೂ ಶಿಕ್ಷಣ ಕೇಂದ್ರಗಳಾದ ಮಠಗಳಿಗೆ ವಿನಿಯೋಗಿಸುತ್ತಾ ಬಂದರು. ಈ ಕಾರಣದಿಂದಾಗಿಯೇ ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ (1550) ಪ್ರಮುಖ ದೇವಾಲಯವೆಂದರೆ ಲೇಪಾಕ್ಷಿಯ ವೀರಭದ್ರ ದೇವಾಲಯ. (ಈ ಕಾಲದ ದೇವಾಲಯಗಳಲ್ಲಿ ವೈಷ್ಣವ ದೇವಾಲಯಗಳೇ ಹೆಚ್ಚು).

ವಿಜಯನಗರ ಕಾಲದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರ, ಗುಲ್ಬರ್ಗಾದ ಶರಣ ಬಸವೇಶ್ವರ, ಮಲೆಯ ಮಹದೇಶ್ವರ, ಗುಮ್ಮಳಾಪುರದ ಕರಿಬಸವೇಶ್ವರ ಮತ್ತು ಮಾಣಿಕ್ಯ ಪ್ರಭು, ತಿಂತಿಣಿ ಮೋನಪ್ಪ, ಹುಬ್ಬಳ್ಳಿ ಕಾಡಸಿದ್ಧೇಶ್ವರ, ಕೊಡೆಕಲ್ ಬಸವಣ್ಣ, ಸಾವಳಗಿ ಶಿವಲಿಂಗೇಶ್ವರ, ಗುರು ಮಡಿವಾಳಪ್ಪ ಮೊದಲಾದ ಪವಾಡಪುರುಷರು, ಸರ್ವಜ್ಞ, ಗುಬ್ಬಿ ಮಲ್ಲಣ್ಣಾರ್ಯ, ಚಾಮರಸ, ಲಕ್ಕಣ್ಣ ದಂಡೇಶ ಮೊದಲಾದ ವೀರಶೈವ ಕವಿಗಳು, ಸಾಮಾಜಿಕ ಸುಧಾರಣೆ ಅಂದರೆ, ಜಾತಿ ನಿರ್ಮೂಲನೆಯಲ್ಲಿ ಹೆಚ್ಚಿನ ಕಾಳಜಿ ತೋರಲಿಲ್ಲ. ಸರ್ವಜ್ಞ ಜಾತಿಪದ್ಧತಿ, ಅಸ್ಪೃಶ್ಯತೆ, ಅಸಮಾನತೆ, ಅನಾಚಾರಗಳನ್ನು ಕುರಿತು ಹೇಳುತ್ತಾ

ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ

ಜಾತಿ ವಿಜಾತಿ ಎನಬೇಡ

ಶಿವನೊಲಿದಾತನೆ ಜಾತ ಸರ್ವಜ್ಞ - ಎಂದಿದ್ದಾನೆ.

ಬಸವಣ್ಣನವರು ಗತಿಸಿದ 300 ವರ್ಷಗಳ ನಂತರದಲ್ಲಿ ಕೂಡ ಜಾತಿ ಪದ್ಧತಿ ಇದ್ದಿತು ಎಂಬುದಕ್ಕೆ ಈ ವಚನ ನಿದರ್ಶನವಾಗಿದೆ. ಆದರೂ ವೀರಶೈವರಲ್ಲಿ ಸಾಮಾಜಿಕ ಸೌಹಾರ್ದತೆ ಸಾಕಷ್ಟು ಬೆಳೆದು ಬಂದಿತೆನ್ನಬಹುದು. ಜಾತ್ರೆ, ಹಬ್ಬ, ಉತ್ಸವ ಮೊದಲಾದ ಕಾರ್ಯಕ್ರಮಗಳಲ್ಲಿ ಎಲ್ಲ ವರ್ಗದ ವೀರಶೈವರೇ ಅಲ್ಲದೆ ಇತರರೂ ಒಟ್ಟಾಗಿ ಪಾಲ್ಗೊಳ್ಳುತ್ತಿದ್ದರು. ಈ ವಿಚಾರದಲ್ಲಿ ಬ್ರಾಹ್ಮಣರು ಮತ್ತು ಕ್ಷತ್ರಿಯರಿಗಿಂತಲೂ ಹೆಚ್ಚಿನ ಸಾಮಾಜಿಕ ಸೌಹಾರ್ದತೆ ಈ ವರ್ಗದಲ್ಲಿ ಕಂಡುಬಂದಿತು.

ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿದ್ದ ವೇಶ್ಯಾ ಪದ್ಧತಿಯನ್ನು ಯಡೆಯೂರು (ತೋಂಟದ) ಸಿದ್ಧಲಿಂಗೇಶ್ವರ ಮೊದಲಾದ ಶರಣರು ತಮ್ಮ ವಚನಗಳಲ್ಲಿ ಈ ರೀತಿ ಖಂಡಿಸಿ ಸಮಾಜವನ್ನು ತಿದ್ದಲು ಯತ್ನಿಸಿದ್ದಾರೆ.

"ತಂದೆ ಮಕ್ಕಳಿಬ್ಬರು ಪರಾಂಗನೆಯ ನೆರೆದು

ಪರಾಪರ ವಸ್ತುವಾದುದನ್ ಏನೆಂಬೆನಯ್ಯ"

ದೇಜಗೌ ಹೇಳುವಂತೆ : ವಿಜಯನಗರ ಕಾಲದಲ್ಲಿ ಸಮಾಜದ ಮೇಲೆ ಅಗಾಧ ಪ್ರಭಾವ ಬೀರಿದ ಶಿವಶರಣರಲ್ಲಿ ಸಿದ್ಧಲಿಂಗೇಶ್ವರರು ಅಗ್ರಗಣ್ಯರು. ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಮೇಲಾಗಲೀ, ಸಮಾಜದ ಮೇಲಾಗಲಿ ಅವರು ಬೀರಿದ ಪ್ರಭಾವ ಅಸದೃಶವಾದುದು. ಇವರ ಶಿಷ್ಯರಲ್ಲಿ ಪ್ರಮುಖರಾದವರು ಗೂಳೂರು ಸಿದ್ಧವೀರಣಾರ್ಯ, ಗುಮ್ಮಳಾಪುರದ ಸಿದ್ಧಲಿಂಗೇಶ ಮೊದಲಾದವರು ವೀರಶೈವ ಸಮಾಜದಲ್ಲಿ ಉನ್ನತ ಪರಂಪರೆಗಳನ್ನು ಬೆಳೆಸಿಕೊಂಡು ಬಂದರು.

ಶಿವಶರಣರು ಸಮಾಜದಲ್ಲಿ ವೈದಿಕ ಆಡಂಬರ ಹಾಗೂ ಗೊಡ್ಡು ಸಂಪ್ರದಾಯಗಳನ್ನು ಖಂಡಿಸಿ ಸರಳತೆಯನ್ನು ಬೋಧಿಸಿದರು. ಇವರ ಪ್ರಭಾವದಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಅನಾಚಾರ, ದುಂದು ವೆಚ್ಚಗಳು ಕ್ರಮೇಣ ಸಾಕಷ್ಟು ಕಡಿಮೆಯಾದುವು. ದಕ್ಷಿಣ ಭಾರತದ ಅಂದರೆ ಉತ್ತರ ಕರ್ನಾಟಕ, ಆಂಧ್ರ, ತಮಿಳುನಾಡು, ಕೇರಳಗಳಲ್ಲಿ ಸೂಫಿ ಸಂತರ ಜೊತೆ ವೀರಶೈವ ಮಠಾಧೀಶರು ಸೌಹಾರ್ದತೆಯನ್ನು ಬೆಳೆಸಿಕೊಂಡಿದ್ದರು. ಮುಸ್ಲಿಮರ ಹಬ್ಬಗಳಾದ ಮೊಹರಂ ಮತ್ತು ಸೂಫಿ ಸಂತರ ಉರುಸ್ (ಜಾತ್ರೆ)ಗಳಲ್ಲಿ ಹಿಂದುಗಳು (ಬ್ರಾಹ್ಮಣರ ಹೊರತಾಗಿ) ಈ ಮೇಲೆ ಕಾಣಿಸಿದ ಗುಲ್ಬರ್ಗಾ ಶರಣ ಬಸವೇಶ್ವರ ಸಿದ್ದಪ್ಪಯ್ಯ ಮೊದಲಾದ ಪವಾಡ ಪುರುಷರ ಪ್ರಭಾವದಲ್ಲಿ ಹಿಂದೂ-ಮುಸ್ಲಿಮರ ನಡುವೆ ಸಾಮಾಜಿಕ ಸೌಹಾರ್ದತೆ ಮೂಡಿಬಂದಿತು. ಷಿಯಾ ಮುಸ್ಲಿಮ್ ಸಂತರು ವೀರಶೈವ ಮಠಗಳಿಗೂ, ವೀರಶೈವ ಸಂತರು ಮತ್ತು ಗುರುಗಳು ಷಿಯಾ ಸಂತರ ದರ್ಗಾಗಳಿಗೂ ಭೇಟಿ ಕೊಡುತ್ತಿದ್ದರು. ಬಾಬಾ ಬುಡನ್ ಗಿರಿಯ ಸಂತ ಬುಡನ್ ಖಲಂದರ್ ಸ್ಥಳೀಯ ವೀರಶೈವ ಗುರುಗಳು ಹಾಗೂ ಅವರ ಭಕ್ತರೊಂದಿಗೆ ನಿಕಟವರ್ತಿಗಳಾಗಿದ್ದರು.

ಶಿರಹಟ್ಟಿಯ (ಧಾರವಾಡ ಜಿಲ್ಲೆ) ಚನ್ನವೀರಸ್ವಾಮಿ ಸೂಫಿ ಸಂತರ ಪ್ರಭಾವದಲ್ಲಿ ಫಕೀರೇಶ್ವರ ಸ್ವಾಮಿ ಎಂದು ಪ್ರಸಿದ್ಧರಾದರು. ಇವರು ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹಿಂದು ಮುಸ್ಲಿಮರಲ್ಲಿ ಭ್ರಾತೃತ್ವ ವನ್ನು ಬೆಳೆಸಿದರು. ವೀರಶೈವರು ಮತ್ತು ಇತರ ಶೂದ್ರ ವರ್ಗದವರು ಬಿಜಾಪುರದ ಅನ್ವರ್‌ಉದ್ದೀನ್ ಎಂಬ ಸಂತರ ದರ್ಗಾದ ಉರುಸ್‌ನಲ್ಲಿ ಪೂರ್ಣ ಸೌಹಾರ್ದತೆಯಿಂದ ಪಾಲ್ಗೊಳ್ಳುತ್ತಿದ್ದರು. ಕ್ರಮೇಣ ರಚಿತವಾದ ವಚನಗಳಲ್ಲಿ ಸಾಮಾಜಿಕ ಕಳಕಳಿಗಿಂತಲೂ ಆಧ್ಯಾತ್ಮಿಕಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ಹಾಗಾಗಿ ಆರಂಭ ಕಾಲದಲ್ಲಿ ಕಾಣಬಂದ ಸಾಮಾಜಿಕ ಕ್ರಾಂತಿಯ ಹುರುಪು ಸ್ಥಗಿತಗೊಂಡಿತು. ವೈದಿಕ ಆಚಾರ ವಿಚಾರ ನಶಿಸಲೇ ಇಲ್ಲ. ಸಾಮಾಜಿಕ ಕ್ರಾಂತಿಯ ಹುರುಪು ಸ್ಥಗಿತಗೊಂಡಿತು. ವೈದಿಕ ಆಚಾರ ವಿಚಾರ ನಶಿಸಲೇ ಇಲ್ಲ. ಸಾಮಾಜಿಕ ಕ್ರಾಂತಿಯ ಹುರುಪು ಸ್ಥಗಿತಗೊಂಡಿತು. ವೈದಿಕ ಆಚಾರ ವಿಚಾರ ನಶಿಸಲೇ ಇಲ್ಲ. ಸಾಮಾಜಿಕ ತಾರತಮ್ಯ, ಉಚ್ಛ-ನೀಚ ಮೊದಲಾದ ಅನಿಷ್ಟಗಳು ತಮ್ಮ ಕ್ರೂರ ಬಾಹುಗಳನ್ನು ವಿಸ್ತರಿಸಿಕೊಂಡವು. ಸೂಫಿ ಸಂತರ ಪ್ರಭಾವದಲ್ಲಿ ಬಿಜಾಪುರದ ಸುಲ್ತಾನರು ಅನೇಕ ದೇವಾಲಯಗಳಿಗೆ ಭೂದತ್ತಿಗಳನ್ನು ನೀಡಿದ್ದರು. ಇದರಿಂದ ಮತ್ತಷ್ಟು ಸೌಹಾರ್ದತೆ ಹೆಚ್ಚಿತು.

ಶರಣರ ಪ್ರಭಾವದಲ್ಲಿ ಮಹಿಳೆಯರ ಸ್ಥಾನಮಾನಗಳು ಹೆಚ್ಚಿದುವು. ವೀರಶೈವ ಸಮಾಜದಲ್ಲಿ ಮಹಿಳೆ ಕೂಡ ಪುರುಷನಿಗಿರುವ ಎಲ್ಲ ಸಾಮಾಜಿಕ ಸಮಾನತೆಯನ್ನು ಪಡೆದಳು. ದೀಕ್ಷೆ ಪಡೆಯುವ ಮೂಲಕ ಮಹಿಳೆ ಧಾರ್ಮಿಕ ಸಮಾನತೆಗೂ ಅರ್ಹಳಾದಳು. ಈ ಸಮಾನತೆ ಬ್ರಾಹ್ಮಣ ಸ್ತ್ರೀಗೆ ಇನ್ನೂ ದೊರಕಿಲ್ಲವಾಗಿದೆ. ತೀರ್ಥಯಾತ್ರೆ, ನದಿಗಳಲ್ಲಿ ಮಾಡುವ ಪುಣ್ಯಸ್ನಾನ, ಹೋಮ, ಯಜ್ಞ-ಯಾಗ ಯಜ್ಞಗಳನ್ನು ವೀರಶೈವ ಸಮಾಜ ಪುರಸ್ಕರಿಸಲಿಲ್ಲ. ಆ ಮೂಲಕ ಸಮಾಜದಲ್ಲಿ ಕೆಲವು ಮೌಢ್ಯಗಳು ಕಡಿಮೆಯಾಗತೊಡಗಿದವು.

ಶರಣರ ಪ್ರಭಾವದಲ್ಲಿ ಜನ್ಮ ತಾಳಿದ ವೀರಶೈವ ಮಠಗಳು ಸಾಮಾಜಿಕ, ನೈತಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಕಾರಣವಾದುವು. ಇವು ದೀನದಲಿತರ ಆಶ್ರಯತಾಣಗಳೂ ಆಗಿದ್ದವು. ವಿಜಯನಗರ ಕಾಲದಲ್ಲಿ

ವೀರಶೈವರು ಕೃಷಿ, ವಾಣಿಜ್ಯ ಹಾಗೂ ಸೇವಾ ವೃತ್ತಿಯಲ್ಲಿ ಗಣನೀಯ ಪಾತ್ರವಹಿಸಿ ಕಾಯಕದ ಮೂಲಕ ಬಂದ ಸಂಪತ್ತಿನಿಂದ ದಾಸೋಹ ಮಾಡಿ ಪ್ರಾಮುಖ್ಯ ಗಳಿಸಿದರು. ಧನಿಕರು ನೆಲೆ ಅಗೆದು ನಿಧಿ ಬಚ್ಚಿಡದೆ ಭಕ್ತರ ಮತ್ತು ಸಮಾಜದ ಒಳಿತಿಗಾಗಿ ಬಳಸಬೇಕೆಂದು ಶರಣರು ಕರೆಕೊಟ್ಟರು. ಒಡವೆ ವಸ್ತುಗಳನ್ನು ಸದ್ಭಕ್ತರಿಗಲ್ಲದೆ (ರೈತರು ಇತರರು) ಬಡ್ಡಿಗೆ ಕೊಡಲಾಗದು ಎಂದು ಕೂಡ ಸಾರಿದರು. ಹೀಗೆ ಶರಣರು ಸಮಾಜದಲ್ಲಿ ಬಡ್ಡಿಯ ಪಿಡುಗಿನಿಂದ ಬಡಬಗ್ಗರನ್ನು ರಕ್ಷಿಸಿದರು.

ಕದನಗಳಲ್ಲಿ ಜಯ ಸಾಧಿಸಿದ ಪ್ರದೇಶಗಳಲ್ಲಿ ವಿಶೇಷವಾಗಿ ಬಳ್ಳಾರಿ, ರಾಯಚೂರು, ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಗ್ರಾಮಾಧಿಕಾರಿಗಳಾಗಿ (ಗೌಡ ಅಥವಾ ಪಟೇಲ) ನೇಮಕಗೊಂಡರು. ಹಾಗಾಗಿ ಅವರಿಗೆ ಸಾಮಾಜಿಕ ಸ್ಥಾನಮಾನಗಳ ಲಭ್ಯವಾದುವು. ಏಕೆಂದರೆ ಅವರು ವಿದ್ಯಾವಂತರು, ಸ್ಥಿತಿವಂತರು, ಬಲಾಢ್ಯರೂ ಆಗಿದ್ದರು. ಸಂಗಮ ವಂಶದ 1ನೇ ದೇವರಾಯ, 2ನೇ ದೇವರಾಯ, ಮಲ್ಲಿಕಾರ್ಜುನ ಮೊದಲಾದವರು ವೀರಶೈವ ಚಕ್ರವರ್ತಿಗಳಾಗಿದ್ದರು. ಆವರೆಗೂ ಬ್ರಾಹ್ಮಣರಿಗೆ ಮೀಸಲಾಗಿದ್ದ ಉನ್ನತ ಸ್ಥಾನಮಾನಗಳು ವೀರಶೈವ ಸಮಾಜಕ್ಕೆ ಸೇರಿದ ವಿರುಪಣ್ಣ, ಲಕ್ಕಣ್ಣ ದಂಡೇಶ ಮೊದಲಾದವರಿಗೆ ಉನ್ನತ ಅಧಿಕಾರಗಳು ದೊರೆತುವು.

ಒಟ್ಟಾರೆ ಶರಣರು ಜಾತಿ ಪದ್ಧತಿ, ಮೌಢ್ಯ, ಅಸಮಾನತೆ, ಶೋಷಣೆ ರಹಿತ ಸಮಾಜ ರಚನಾಕಾರ್ಯ ಆರಂಭಿಸಿದರೆನ್ನಬಹುದು.

**ಸಮಾಜ ನಿರ್ಮಾಣದಲ್ಲಿ ಸೂಫಿಗಳ ಪಾತ್ರ :** ಮಧ್ಯಯುಗೀನ ಸಮಾಜ ಇಸ್ಲಾಂನ ಆಕ್ರಮಣಕಾರರ ಪ್ರವೃತ್ತಿಯಿಂದ ಹಲವು ಅನಪೇಕ್ಷಣೀಯ ಸಂಘರ್ಷಗಳಿಗೆ ದಾರಿಯಾಗಿದ್ದಿತು. ಹಾಗಾಗಿ ಸಾಮಾಜಿಕ ಅಭದ್ರತೆ ಕೂಡ ತಲೆಹಾಕಲಾರಂಭಿಸಿತು. ಅಂತಹ ವೇಳೆಯಲ್ಲಿ ಮುಸ್ಲಿಮ್ ಸಮಾಜದಲ್ಲಿ ಕಾಣಿಸಿಕೊಂಡ ಸೂಫಿ ಸಂತರು ಕೋಮು ಸೌಹಾರ್ದತೆಯ ಸಂಕೇತವಾಗಿ ಪರಿಣಮಿಸಿದರು.

ಸೂಫಿ ಎಂಬ ಪರ್ಶಿಯನ್ ಪದಕ್ಕೆ ಎರಡು ಅರ್ಥಗಳಿವೆ. ಸೂಫಿ ಎಂದರೆ ಉಣ್ಣೆಯ ಬಟ್ಟೆಯ ನಿಲುವಂಗಿ ಧರಿಸುತ್ತಿದ್ದ ಮುಸ್ಲಿಮ್ ಸಾಧುಸಂತರು. ಸಾಫ್ ಎಂದರೆ ಪರಿಶುದ್ಧ ನಡೆನುಡಿಯುಳ್ಳವರು ಎಂದರ್ಥ. ಸೂಫಿಜಮ್ ಎಂದರೆ ಇಸ್ಲಾಂಧರ್ಮದಲ್ಲಿನ ಆಧ್ಯಾತ್ಮಿಕ ತತ್ತ್ವೋಪದೇಶಕ್ಕೆ ಇರುವ ಮತ್ತೊಂದು ಹೆಸರು. ಸೂಫಿ ತತ್ವದ ಮುಖ್ಯ ಸಿದ್ಧಾಂತ, ದೇವತ್ವದಲ್ಲಿ ಐಕ್ಯತೆ. ಈ ಸಂಪ್ರದಾಯ ಅರೇಬಿಯಾದಲ್ಲಿ ಹುಟ್ಟಿ ಭಾರತದಲ್ಲೂ ಹರಡಿತು. ಹಿಂದೂಧರ್ಮದಲ್ಲಿನ ಭಕ್ತಿಪಂಥದ ಸ್ಥಾನವನ್ನು ಇಸ್ಲಾಮಿನಲ್ಲಿ ಸೂಫಿ ಸಂಪ್ರದಾಯ ಪಡೆದಿದೆ.

ಪರಮಾತ್ಮನ ಅನಂತಗುಣಗಳುಳ್ಳವನು, ಸೌಂದರ್ಯ ಮತ್ತು ತೇಜಸ್ಸಿನಲ್ಲಿ ಅಪ್ರತಿಮನೂ, ಅನಂತ ಶಕ್ತಿಯುಳ್ಳವನೂ ಆಗಿರುವುದರಿಂದ ಅಲೌಕಿಕ ಪ್ರೇಮದ ಆನಂದದಲ್ಲಿ ಮಗ್ನನಾಗಿ ಸೌಂದರ್ಯ ಹಾಗೂ ಆನಂದ ಮದಿರೆಯನ್ನು ಪಾನಮಾಡಿ ಆತನತ್ತ ತೆರಳುವುದೇ ಸೂಫಿ ಸಿದ್ಧಾಂತ. ಇದು ಭಾರತೀಯ ಅದ್ವೈತ ದರ್ಶನದೊಂದಿಗೆ

ಅನೇಕ ವಿಚಾರಗಳಲ್ಲಿ ಬಹಳ ಹತ್ತರದ್ದೂ ಹಾಗೂ ಸಾಮ್ಯವುಳ್ಳದ್ದೂ ಆಗಿದೆ. ದೇವರ ಬಗ್ಗೆ ಗಾಢವಾದ ಭಕ್ತಿಯಿರಬೇಕೆಂಬುದು ಸೂಫಿಗಳ ಸಂಪ್ರದಾಯ. ನಿಜವಾದ ಸೂಫಿಗೆ ಮೋಹದ ದಮನ ಮಾಡಬೇಕೆಂಬುದು ಮೊದಲ ಷರತ್ತು. ನಮಾಜಿ, (ಪ್ರಾರ್ಥನೆ)ನಿಂದ ಅಂತಃಶುದ್ಧಿ ಪಡೆದು ಮನಸ್ಸನ್ನು ದೇವರಲ್ಲಿ ಕೇಂದ್ರೀಕೃತಗೊಳಿಸುವುದು ಇವರ ಉದ್ದೇಶವಾಗಿದ್ದಿತು. ಇಸ್ಲಾಮಿ ಆಧ್ಯಾತ್ಮಿಕ ಅನುಭವಕ್ಕೆ ಹೆಚ್ಚು ಮಾನ್ಯತೆಯನ್ನು ನೀಡಲಾಗಿತ್ತು. ಪವಿತ್ರ ಕುರಾನ್ ಮತ್ತು ಶರೀಯತ್ ಎಂಬ ಇಸ್ಲಾಮಿ ಕಾಯಿದೆಯನ್ನು ಮೀರಿದ ಉದಾತ್ತ ಧಾರ್ಮಿಕ ಭ್ರಾತೃತ್ವ ಮತ್ತು ಸಹಿಷ್ಣುತೆಯನ್ನು ಇವರು ಆಚರಿಸಿ ಪ್ರಚಾರ ಮಾಡಿದರು. ಶರಿಯ್ (ಸಂಪ್ರದಾಯತೆ) ಮತ್ತು ತರಿಯತ್ (ವೈಚಾರಿಕತೆ)ಗಳಲ್ಲಿ ಸಮನ್ವಯ ಉಂಟುಮಾಡುವ ಪ್ರಯತ್ನ ಅದಾಗಿದ್ದಿತು.

ಸೂಫಿಗಳು ದೇವರನ್ನು ಐಕ್ಯಕನೆಂದು ಒಪ್ಪಿಕೊಂಡರೂ ಮಹಮದ್ ಪೈಗಂಬರರನ್ನು ಏಕೈಕ (ಹಾಗೂ ಕಟ್ಟ ಕಡೆಯ) ಪ್ರವಾದಿ ಎಂದು ಪರಿಗಣಿಸುವುದಿಲ್ಲ. ವಿಶ್ವದ ಎಲ್ಲ ಧರ್ಮಗಳ ಪ್ರವಾದಿಗಳನ್ನು ಗೌರವಿಸುತ್ತಾರೆ. ಅದ್ವೈತ ಪಂಥದ ಈ ಸೂಫಿಗಳು ದೇವನೊಬ್ಬನೇ, ಅವನನ್ನು ಬಿಟ್ಟರೆ ಬೇರೆ ದೇವರಿಲ್ಲ (ಲಾ ಇಲಾಹ ಇಲ್ಲಲ್ಲ) ಎಂದು ಮಾತ್ರ ಹೇಳುತ್ತಿದ್ದು, ಉಳಿದ ಭಾಗವಾದ ಮಹಮದ್ ದೇವರ ಪ್ರವಾದಿ (ಮಹಮದ್ ಉರ್'ರ ಸೂಲುಲ್ಲ) ಎಂಬ ವಚನವನ್ನು ಹೇಳುತ್ತಿರಲಿಲ್ಲ. ಮೇಲಾಗಿ ಇವರು ಮಸೀದಿಗೆ ಹೋಗಲು ನಿರಾಕರಿಸುತ್ತಿದ್ದರು. ಖನ್‌ಖಾಗಳಲ್ಲಿ ಅಂದರೆ ಮಠಗಳಲ್ಲಿ (Monastry) ಸದಾ ದೇವರ ಸಂಕೀರ್ತನೆ, ಧ್ಯಾನದಲ್ಲಿ ನಿರತರಾಗಿರುತ್ತಿದ್ದರು.

ಕೆಲವು ಸೂಫಿಗಳು ಇದ್ದ ಸಂಪತ್ತನ್ನು ಧಾರೆಯೆರೆದು ಭಿಕ್ಷೆ ಮಾಡಿ ಜೀವನ ಸಾಗಿಸುತ್ತಿದ್ದರು. ಮತ್ತೆ ಕೆಲವರು ಜಾಗೀರು, ಜಮೀನುಗಳ ಜೊತೆಗೆ ಸಂಸಾರಿಗಳೂ ಆಗಿದ್ದು ಮದ್ರಸಾಗಳೆಂಬ ಧಾರ್ಮಿಕ ಪಾಠಶಾಲೆಗಳನ್ನು ನಡೆಸುತ್ತಿದ್ದರು. ಮತ್ತೆ ಕೆಲವರು ಉದ್ದಾಮ ಪಂಡಿತರಾಗಿದ್ದು ಮಹಾನ್ ಲೇಖಕರಾಗಿದ್ದರು (ವ್ಯಾಖ್ಯಾನ, ಕವನ, ವಿಮರ್ಶೆ, ಸಂಕೀರ್ತನೆ ಇತ್ಯಾದಿ) ಇವರು ರಾಜರು, ಸಾಮಂತರು, ಶ್ರೀಮಂತರಿಗೆ ಗುರುಗಳಾಗಿದ್ದು, ಬಡವರಿಗೂ ಹತ್ತಿರವಾಗಿದ್ದರು. ಅಂತಹವರಲ್ಲಿ ಬಂದೇ ನವಾಜ್ ಪ್ರಮುಖನಾಗಿದ್ದನು. ಮತ್ತೆ ಕೆಲವು ಸೂಫಿಗಳು ರಾಜಕೀಯ ಸಂಪರ್ಕದಿಂದ ದೂರವೇ ಇದ್ದು ರಾಜರ ಅವಕೃಪೆಗೆ ತುತ್ತಾಗಿ ದೇಶಭ್ರಷ್ಟರಾಗುವುದು, ಪ್ರಾಣ ಕಳೆದುಕೊಳ್ಳುವುದು ಮೊದಲಾದ ಕಿರುಕುಳಗಳಿಗೆ ಒಳಗಾಗುತ್ತಿದ್ದರು. ಅಂತಹವರಲ್ಲಿ ಬಿಜಾಪುರದ ಅಮೀನುದ್ದೀನ್ ಪ್ರಸಿದ್ಧನಾಗಿದ್ದಾನೆ.

ದೆಹಲಿಯಿಂದ ಗುಲ್ಬರ್ಗಾ ಮತ್ತು ಬಿಜಾಪುರಕ್ಕೆ ಬಂದ ಸೂಫಿಗಳಲ್ಲಿ ಪ್ರಮುಖರಾದವರು - ಸೈಯದ್ ಹುಸ್ಸೇನ್, ಷೇಕ್‌ಷಿಹಾದ್ದೀನ್, ಹಸ್ಸನ್ ನೈಜಿ, ಷೇಕ್ ಅಜೀಜ್ ಉದ್ದೀನ್, ಷೇಕ್ ಕಮಾಲುದ್ದೀನ್, ಬಂದೇನವಾಜ್ ಇತರರು.

**ಸಾಮಾಜಿಕ ಸೌಹಾರ್ದತೆ ಬೆಳೆಸಿದ ಸೂಫಿಗಳು :** ಕೆಲವು ಸೂಫಿ ಸಂತರು ಸಸ್ಯಹಾರಿಗಳೂ, ಸಂಸಾರಿಗಳೂ, ವಿರಕ್ತರೂ ಆಗಿದ್ದು ಹಿಂದೂ-ಮುಸ್ಲಿಂ ಸಾಮಾಜಿಕ ಭ್ರಾತೃತ್ವವನ್ನು ಪ್ರತಿಪಾದಿಸಿದರು. ಅವರಲ್ಲಿ ಕೆಲವರು ಇವರು :

* ಗುಲ್ಬರ್ಗಾದ ಬಂದೇ ನವಾಜ್
* ಜೇವರ್ಗಿಯ ಅಮೀನುದ್ದೀನ್, ಚಂದಾಹುಸ್ಸೇನಿ
* ಕೊಡೆಕಲ್ಲಿನ ಮಹಮದ್ ಸರ್ವರ್
* ಬಿಜಾಪುರದ ಅನ್ವರ್ ಉದ್ದೀನ್, ಹಾಷಿಮ್ ಪೀರ್‌ಷೇಕ್ ಅಮಿನುದ್ದೀನ್
* ಜಮಖಂಡಿಯ ಪೀರ್ ಆಗಾಖಾನ್
* ರಾಯಚೂರ್‌ನ ಕೌತಾಳಂನ ಖಾದರ್‌ಲಿಂಗ (ಅಲ್ಲಾ ಉದ್ದೀನ್‌ಖಾದರ್), ಜಿಂದಾಷಾವಲಿ
* ಬೀದರ್‌ನ ಅಬ್ದುಲ್‌ಖಾದರ್, ಅಹಮದ್ ಷಾವಲಿ, ಖರೀಮುಲ್ಲಾ ಷಾ ಖಾದ್ರಿ
* ಬಳ್ಳಾರಿಯ ಲಂಗರ್‌ಷಾವಲಿ, ಸರ್ವರ್ ಹುಸೇನ್
* ಚಿತ್ರದುರ್ಗ ಜಿಲ್ಲೆಯ ಸೈಯ್ಯದ್ ಷಾ ಖಾದ್ರಿ
* ಚಳ್ಳಕೆರೆಯ ನೂರುಲ್ಲಾ ಚಿಸ್ತಿ
* ತುಮಕೂರು ಜಿಲ್ಲೆಯ ಚೋಳೂರಿನ ಕರೀಮುಲ್ಲಾಷಾ, ಕೆಸರು ಮಡುವಿನ ಮೊಮಿನ್‌ಷಾ ಖಾದ್ರಿ
* ಚಿಕ್ಕನಾಯಕನಹಳ್ಳಿಯ ಮೊಹಿಯುದ್ದೀನ್ ಷಾ ಖಾದ್ರಿ (ತಾತಯ್ಯ)
* ದಕ್ಷಿಣ ಕನ್ನಡದ ಪುತ್ತೂರಿನ ವಲಿಉಲ್ಲಾಷಾ
* ಕೋಲಾರದ ಔಲಾಲಿಪಾರ್
* ಕೊಡಗಿನ ಸೋಮವಾರ ಪೇಟೆಯ ಮಲಂಗ್‌ಷಾವಲಿ
* ಧಾರವಾಡದ ಮದನ್ ಷಾವಲಿ, ಸವಣೂರಿನ ಗುಲಾಂಷಾ ಖಾದ್ರಿ, ಸವಣೂರಿನ ಜಲಾಲ್‌ಷಾ ವಲಿ, ಶಿರಹಟ್ಟಿಯ ಸಿದಿಖ್ ಅಂಬರ್ ಷಾ ವಲಿ
* ಬೆಳಗಾಂನ ಚಿಕ್ಕೋಡಿಯ ಚಾಂದಪೀರ್
* ದಾವಣಗೆರೆಯ ಚಾಂದ್ ಭಾಷಾ, ಹರಿಹರದ ನೂರುಲ್ಲಾಷಾ ಖಾದ್ರಿ
* ಚಿಕ್ಕಮಗಳೂರಿನ ಖಾಜಾ ಅಸ್ಸಹಾಬ್ ಉನ್ನಬಿ
* ಶಿವಮೊಗ್ಗಾದ ಜಲಾಲ್ ಉದ್ದೀನ್, ಚನ್ನಗಿರಿಯ ಮಹಮದ್ ಷಾ ಮಸ್ತಾನ್
* ಮೈಸೂರು ಜಿಲ್ಲೆಯ ಕೆ.ಆರ್. ನಗರದ ಹುಸ್ಸೇನ್ ಚಿಸ್ತೀ
* ಬೆಂಗಳೂರಿನ ತವಕಲ್ ಮಸ್ತಾನ್, ಶಿಫ್ದರ್ ಅಲಿಷಾ, ನೆಲಮಂಗಲದ ಷೇಖ್ ಖರೀಮ್ (ಸಿದ್ಧರ ಬೆಟ್ಟ)

ಈ ಸೂಫಿಗಳು ಹಿಂದೂ-ಮುಸ್ಲಿಮರಲ್ಲಿ ಸಾಮಾಜಿಕ ಸೌಹಾರ್ದತೆ ಮೂಡಿಸುವಲ್ಲಿ ಶ್ರಮಿಸಿದರು. ಕೆಲವು ಲಿಂಗಾಯಿತ ಹಾಗೂ ಬ್ರಾಹ್ಮಣ ಗುರುಗಳು ಸೂಫಿ ಸಂತರಿಗೆ ನಿಕಟವರ್ತಿಗಳಾಗಿದ್ದರು. ಆದರೆ ಸೂಫಿಗಳೊಡನೆ ಹೆಚ್ಚು ನಿಕಟವರ್ತಿಗಳಾಗಿದ್ದವರೆಂದರೆ ಉತ್ತರ ಕರ್ನಾಟಕದ ವೀರಶೈವರು ಮತ್ತು ದಲಿತರು.

ಮಳೆ ಬರಿಸುವಿಕೆ ಕಾಯಿಲೆಗಳಿಗೆ ತಾಯಿತ, ದೆವ್ವಗಳ ಉಚ್ಚಾಟನೆ, ಬಂಜೆತನ ನಿವಾರಣೆ, ಹುಚ್ಚು ಬಿಡಿಸುವುದು, ಕಳೆದು ಹೋದ ದನಕರುಗಳ ಬಗ್ಗೆ ಪತ್ತೆತ ಹಾಗೂ ಅವುಗಳ ಕಾಯಿಲೆಗಳಿಗೆ ಯಂತ್ರಮಂತ್ರ ಚಿಕಿತ್ಸೆ ಮೊದಲಾದ ಪವಾಡಗಳ ಮೂಲಕ ದೀನ ದಲಿತರ ಉದ್ಧಾರಕರಾಗಿ ಸೂಫಿಗಳು ಪ್ರಚುರಗೊಂಡಿದ್ದರು. ಉದಾ: ಗುಲ್ಬರ್ಗಾದ ಶರಣ ಬಸವೇಶ್ವರ ಮಠದ ಉತ್ಸವಗಳು ಸೂಫಿ ಸಂತರ ಮೂಲಕ ಉದ್ಘಾಟಿತವಾಗುತ್ತಿದ್ದವು. ಅದೇ ರೀತಿ ಬಂದೇನವಾಜ್ ದರ್ಗಾದ ಉರುಸ್ ಎಂಬ ಉತ್ಸವಗಳು ವೀರಶೈವರ ಅಂದರೆ ಶರಣ ಬಸವೇಶ್ವರ ಸ್ವಾಮಿಗಳಿಂದ ಉದ್ಘಾಟಿಸುವ ಪರಂಪರೆ ಬೆಳೆದು ಬಂದಿದೆ. ಸಾವಳಗಿಯ ವೀರಶೈವ ಮಠದ (ಗುಲ್ಬರ್ಗಾ) ದೈನಂದಿನ ಭಜನೆ, ಉತ್ಸವ ಮೊದಲಾದ ಚಟುವಟಿಕೆಗಳಲ್ಲಿ ಸೂಫಿಗಳು ಹಾಗೂ ಸೂಫಿ ಪಂಥದ ಭಕ್ತರು ಪಾಲ್ಗೊಳ್ಳುತ್ತಾರೆ. ಅದೇ ರೀತಿ ಸೂಫಿ ದರ್ಗಾಗಳು ಉತ್ಸವಗಳಲ್ಲಿ ಹಿಂದುಗಳು ಭಾಗವಹಿಸುತ್ತಾರೆ. ಇವರ ಸೌಹಾರ್ದತೆ ಗುಲ್ಬರ್ಗಾದ ಬಂದೇನವಾಜ್ ಮತ್ತು ಸಾವಳಗಿ ಮಠದ ಶಿವಲಿಂಗ ಸ್ವಾಮಿಗಳಿಂದ ಆರಂಭಗೊಂಡಿತು.

ಧಾರವಾಡ ಜಿಲ್ಲೆಯ ಶಿರಹಟ್ಟಿಯ ಚನ್ನವೀರಸ್ವಾಮಿಗಳು ಚಿಸ್ತೀ ಸಂಪ್ರದಾಯದ ಸೂಫಿ ಪ್ರಭಾವಕ್ಕೊಳಗಾದರು. ಅವರಿಂದ ಪರಕೀರೇಶ್ವರ ಸ್ವಾಮಿ ಎಂಬ ಹೆಸರನನು ಪಡೆದರು. ಗುಲ್ಬರ್ಗದ ಕೊಡೈಕಲ್ ಬಸವೇಶ್ವರ ಮಠದಲ್ಲಿ ಇಂದಿಗೂ ವೀರಶೈವ ಮತ್ತು ಸೂಫಿ ಸಂತರ ಒಡನಾಟ ಅಮೋಘವಾಗಿದೆ. ಇದರಿಂದ ಆ ಭಾಗದಲ್ಲಿ ಇಂದಿಗೂ ಹಿಂದೂ-ಮುಸ್ಲಿಮ್ ಸೌಹಾರ್ದತೆ ಉಳಿದ ಕಡೆಗಳಿಗಿನ್ನ ಗಾಢವಾಗಿದೆ.

ಶೈವ ಸಂಪ್ರದಾಯದ ಶಾಖೆಗಳಲ್ಲೊಂದಾದ ನಾಥ ಸಂಪ್ರದಾಯದವರು 1300ರಿಂದ ಸೂಫಿ ಪ್ರಭಾವಕ್ಕೊಳಗಾದರು (ತತ್ವಗಳನ್ನು ಮೆಚ್ಚಿ) ಬಿಜಾಪುರದ ಸೂಫಿ ಪರಂಪರೆಯಲ್ಲಿ ಮೂರು ಪಂಗಡಗಳನ್ನು ಕಾಣಬಹುದು. 1. ಚಿಸ್ತಿ 2. ಖಾದ್ರಿ 3. ಷತ್ತಾನಿ ಇವರು ಮೆಕ್ಕಾ, ಬಾಗ್ದಾದ್, ಮುಲ್ತಾನ್, ಗುಜರಾತ್, ದೆಹಲಿ, ಆಗ್ರಾ, ಗ್ವಾಲಿಯರ್, ಗುಜರಾತ್ ಪ್ರಾಂತಗಳಿಂದ 17ನೇ ಶತಮಾನದಲ್ಲಿ ವಲಸೆ ಬಂದವರಾಗಿದ್ದರು. ಅವರಲ್ಲಿ ಪ್ರಮುಖರಾದವರು ಷೇಕ್ ಅಬ್ದುಲ್ ಲತೀಫ್, ಷೇಕ್ ಅಬ್ದುಲ್ ರಜಾಕ್, ಷೇಕ್ ಹಸನ್ ಖಾದ್ರಿ, ಷೇಕ್ ಹಮೀದ್ ಖಾದ್ರಿ, ಷೇಖ್ ಹಾಷಿಮ್ ಪೀರ್ ಬಿಜಾಪುರಕ್ಕೆ ಸೂಫಿ ಸಂತರು ಅಧಿಕ ಸಂಖ್ಯೆಯಲ್ಲಿ ಬಂದದ್ದು ಸುಲ್ತಾನ ಜಗದ್ಗುರು ಬಾದ್‌ಷಾ ಎಂದು ಪ್ರಸಿದ್ಧನಾಗಿದ್ದ 2ನೇ ಇಬ್ರಾಹಿಮನ ಕಾಲದಲ್ಲಿ. 17ನೇ ಶತಮಾನದ ಕೊನೆ ಭಾಗದಲ್ಲಿ ಅನೇಕ ಪವಾಡಗಳಿಂದ ಖ್ಯಾತನಾದ ಸೂಫಿ ಸಂತನೆಂದರೆ ಷೇಕ್ ಅಮೀನುದ್ದೀನ್. ವಾರ್ಷಿಕವಾಗಿ ಇವರ ಹೆಸರಿನಲ್ಲಿ ನಡೆಯುವ ಉರಸ್ ಅಥವಾ ಜಾತ್ರೆಯಲ್ಲಿ ಹಿಂದೂ-ಮುಸ್ಲಿಮರು ಭೇದಭಾವವಿಲ್ಲದೆ ಇಂದೂ ಭಾಗವಹಿಸುತ್ತಿದ್ದಾರೆ. ಸಂತ ಅಮೀನುದ್ದೀನರ ಹೆಸರನ್ನು ಉಚ್ಚರಿಸಿ ಸು. 2 ಅಡಿಗೂ ಹೆಚ್ಚು ದಪ್ಪದ ಕಲ್ಲು ಗುಂಡುಗಳನ್ನು ಎರಡು ಬೆರಳುಗಳಿಂದ ಎತ್ತುವುದನ್ನು ಇಂದಿಗೂ ನೋಡಬಹುದು. ಅವರು ಪವಾಡಪುರುಷರಾಗಿದ್ದರೆಂಬುದಕ್ಕೆ ಇದು ಕುರುಹಾಗಿದೆ ಎನ್ನುತ್ತಾರೆ. ಜನಸಾಮಾನ್ಯರು ಅವರ ಕೃಪೆಯಿಂದ ಹರಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದಾರೆ. ಬಿಜಾಪುರದ ಬಳಿಯ ಷಾಪುರದ ಮತ್ತೊಬ್ಬ ಸೂಫಿಸಂತ ಟೀಪುಮಸ್ತಾನ್ ಔಲಿಯ (ಎಂದರೆ ದೇವದೂತ) 1725ರಲ್ಲಿ ಆರ್ಕಾಟಿಗೆ ಹೋಗಿ ನೆಲೆಸಿದರು. ಇವರ ಕೃಪೆಯಿಂದ ಹೈದರ್ ಅಲಿಗೆ ಟೀಪು ಜನಿಸಿದನೆಂದು ಹೇಳಲಾಗಿದೆ.

**ಉಗ್ರವಾದಿ ಸೂಫಿಗಳು ಮತ್ತು ಸಾಮಾಜಿಕ ವೈಷಮ್ಯ :** ಸೂಫಿಗಳಲ್ಲಿ ಕೆಲವರು ಸುನ್ನಿ ಪಂಥದವರಾಗಿದ್ದು ಮತ ಪ್ರಚಾರಕ್ಕಾಗಿ ಉಗ್ರವಾದದಲ್ಲಿ (Mililant) ಹಾಗೂ ಧರ್ಮಯುದ್ಧ (Zihad) ಮತ್ತು ರಕ್ತಪಾತದಲ್ಲಿ ನಂಬಿಕೆ ಇಟ್ಟಿದ್ದರು. ಅಂತವರು ಧರ್ಮಯುದ್ಧಗಳಿಗೆ ಬೆಂಬಲನೀಡಿ ತಾವು ಅವುಗಳಲ್ಲಿ ಭಾಗವಹಿಸುತ್ತಿದ್ದರು. ಇವರನ್ನು ಸೂಫಿ-ಘಾಜಿ (ಸೈನಿಕ)ಗಳೆಂದು ಕರೆಯಲಾಗುತ್ತಿದ್ದಿತು ಪ್ರೊ. ಈಟನ್ (ಪ್ರೊ. ಈಟನ್ ಸೂಫೀಸ್ ಆಫ್ ಬಿಜಾಪುರ್) ಇವರನ್ನು ಮಿಲಿಟೆಂಟ್ ಘಾಜಿಗಳೆಂದು ಕರೆದಿದ್ದಾರೆ. ಆದ್ದರಿಂದ ಇವರನ್ನು ಜಿಹಾದಿ ಸೂಫಿಗಳು ಅಥವಾ ಧರ್ಮಯುದ್ಧದ ಸೂಫಿಗಳೆಂದು ಕರೆಯಬಹುದು.

ರಹಮತ್ ತರೀಕೆರೆ ಪ್ರಕಾರ ಕರ್ನಾಟಕದಲ್ಲಿ ಮೊದಲಿಗೆ ಕಾಣಿಸಿಕೊಂಡವರೇ ಜಿಹಾದಿ ಸೂಫಿಗಳು. ಅವರಲ್ಲಿ ಪ್ರಮುಖರಾದವರು ಷೇಕ್ ಸೂಫಿ ಸರ್‌ಮಸ್ತ್, ಪೀರ್ ಖಂಡಾಯತ್, ಷೇಖ್ ಷಾಹಿದ್, ಪೀರ್ ಜುಮ್ಮಾ ಮೊದಲಾದವರು. ಇವರು ಗುಲ್ಬರ್ಗಾದ ಸಗರಪುರ, ಬಿಜಾಪುರದ ತಾಳೀಕೋಟೆ, ಬೀದರ್, ಚಿಕ್ಕಮಂಗಳೂರಿನ ಬಾಬಾ ಬುಡನ್‌ಗಿರಿ, ಗೋರಿಗುಂಡಿ, ಕೊಡಗಿನ ಎಮ್ಮೆ ಮಾಡ, ಮೊದಲಾದ ಕಡೆ ನಡೆದ ಜಿಹಾದ್ ಅಥವಾ ಧರ್ಮ ಯುದ್ಧಗಳಲ್ಲಿ ಭಾಗವಹಿಸಿದ್ದರು. ಅವರಲ್ಲಿ ಕೆಲವರು ಅಂತಹ ಯುದ್ಧಗಳಲ್ಲಿ ಮಡಿದು ಶಹೀದ್ ಅಂದರೆ ಅಮರರಾದರು. ಸಗರಪುರದ ಯುದ್ಧದಲ್ಲಿ ಹತರಾದವರ ಘೋರಿಗಳು ಇಂದಿಗೂ ಸಾಕ್ಷಿಯಾಗಿವೆ. ಈ ಕಾರಣದಿಂದ ಸಗರಪುರ ಕದನವನ್ನು ಎರಡನೇ ಕರ್ಬಲಾ ಎಂದು ಕರೆಯಲಾಯಿತು.

**ಸೂಫಿ ಸಂತರ ದರ್ಗಾಗಳು ಉರ್ಸ್ (ಜಾತ್ರೆ)ಗಳು :** ಸೂಫಿಗಳು ಸ್ಥಾಪಿಸಿದ ಖಿನ್‌ಖಾಗಳ (ಮಠಗಳು) ಬಗ್ಗೆ ಸುನ್ನಿಗಳ ವಿರೋಧ ಹೆಚ್ಚುತ್ತಲೆ ಇದ್ದಿತು. ಆದರೆ ಅವರ ವಿದ್ವತ್ತು, ತತ್ವಜ್ಞಾನ, ಪವಾಡ, ರೋಗ ನಿವಾರಣೆ ಮೊದಲಾದ ಜನಸೇವೆಗಳಿಂದಾಗಿ ಸೂಫಿಗಳನ್ನು ಹತ್ತಿಕ್ಕುವುದು ಸುನ್ನಿಗಳಿಂದಾಗಲಿಲ್ಲ. ಆದರೆ ಕ್ರಮೇಣ ಖಿನ್‌ಖಾನ್‌ಗಳಲ್ಲೆ ಈ ಸಂತರ ಸಮಾಧಿಗಳನ್ನು ಮಾಡಿದ್ದರಿಂದ ಅವುಗಳನ್ನು ದರ್ಗಾಗಳನ್ನಾಗಿ ಕರೆಯುವುದು ರೂಢಿಗೆ ಬಂದಿತು. ಇವುಗಳಲ್ಲಿ ಪ್ರತಿವರ್ಷ ಉರುಸ್ (ಜಾತ್ರೆ)ಗಳು ನಡೆಯಲಾರಂಭಿಸಿದವು. ಉದಾ: ಗುಲ್ಬರ್ಗಾದ ಬಂದೇ ನವಾಜ್ ದರ್ಗಾ, ಬಿಜಾಪುರದ ಅಮೀನುದ್ದೀನ್ ದರ್ಗಾ, ಅಬ್ದುಲ್ ರಜಾಕ್ ದರ್ಗ ಮೊದಲಾದುವು ಇವುಗಳಲ್ಲಿ ಜರುಗುವ ವಾರ್ಷಿಕ ಉರುಸ್‌ಗಳಲ್ಲಿ (ಸಮಾಧಿ) ಹಿಂದುಗಳು ಕೂಡ ಪಾಲ್ಗೊಳ್ಳುತ್ತಾರೆ.

ಸೂಫಿ ಸಂತರ ಪ್ರಭಾವಕ್ಕೊಳಗಾದ ಸುಲ್ತಾನ್ ಫಿರೋಜ್ ಬಹಮನ್‌ಷಾ, ಖಿನ್‌ಖಾಗಳಲ್ಲದೆ ಹಿಂದೂ ದೇವಾಲಯಗಳಿಗೂ ಭೂದತ್ತಿ ಹಾಗೂ ಗ್ರಾಮದತ್ತಿಗಳನ್ನು ನೀಡಿದ್ದಾನೆ. ಅಬುಲ್‌ಹಸನ್ ಕುತುಬ್‌ಷಾ, ಆಂಧ್ರದ ಶ್ರೀಶೈಲದ ಮಲ್ಲಿಕಾರ್ಜುನ ದೇವಸ್ಥಾನಕ್ಕೂ, ಭದ್ರಾಚಲದ ರಾಮಮಂದಿರಕ್ಕೂ, ಶಂಕರಗಿರಿ ದೇವಾಲಯಗಳಿಗೂ ದತ್ತಿ ನೀಡಿದ್ದನು. ಇವನ ಮಗ ಅಬ್ದುಲ್ಲಾ ಕುತುಬ್‌ಷಾ ಕೂಡ ಗೋಲ್ಕೊಂಡದಲ್ಲಿ ಹಿಂದೂ ದೇವಾಲಯಗಳಿಗೆ ದತ್ತಿ ನೀಡಿದ್ದನು.

## 2.5. ವಿಜಯನಗರ ಕಾಲದ ಸಾಮಾಜಿಕ ಶ್ರೇಣಿಯನ್ನು ಕುರಿತು ಮತ್ತಷ್ಟು ವಿವರಗಳು

**ಅ. ಬ್ರಾಹ್ಮಣರು :** ವಿಜಯನಗರ ಕಾಲದ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಪ್ರಮುಖ ಜಾತಿಗಳಿಂದ ಹಾಗೂ ತಾವು ಮಾಡುವ ಕೆಲಸದ ಸ್ವರೂಪದ ಮೇಲೆ ಆಧಾರಿತವಾದ ಇತರ ಉಪಜಾತಿಗಳಿಂದ ರಚಿತವಾಗಿತ್ತು. ವಿಜಯನಗರದ ಕಾಲಾವಧಿಯು ಹಿಂದೂ ಪುನಶ್ಚೇತನ ಕಾಲವಾಗಿತ್ತು; ಬ್ರಾಹ್ಮಣರು ತುಂಬ ಗೌರವಾದರಗಳಿಗೆ ಪಾತ್ರರಾಗಿದ್ದರು. ಮತ್ತು ಆ ಅವಧಿಯ ಆಗುಹೋಗುಗಳಲ್ಲಿ ಮುಖ್ಯ ಪಾತ್ರ ವಹಿಸಿದರು. ಸಮಾಜದಲ್ಲಿ ಬ್ರಾಹ್ಮಣರಿಗೆ ಉನ್ನತ ಸ್ಥಾನಮಾನವನ್ನು ಮನು ನೀಡಿದ್ದಾನೆ. ಆತನ ಪ್ರಕಾರ ಅರಸನು ಬೆಳಿಗ್ಗೆ ಬೇಗ ಎದ್ದು ವೇದಪಾರಂಗತರೂ ಪವಿತ್ರರೂ ಆದ ಬ್ರಾಹ್ಮಣರನ್ನು ಪೂಜಿಸಬೇಕು.[26] ಅರಸನು ಬ್ರಾಹ್ಮಣರು ತನ್ನನ್ನು ನಾಶಮಾಡದ ಹಾಗೆ ನೋಡಿಕೊಳ್ಳಬೇಕು; ಅವರನ್ನು ಕೆರಳಿಸಬಾರದು.[27] ಆದರೆ, ಮಧ್ಯಯುಗದಲ್ಲಿ ಸನಾತನೀಯರಾದ ಬ್ರಾಹ್ಮಣರು ತಮ್ಮ ಸ್ಥಾನಮಾನದಲ್ಲಿ ಗಣನೀಯವಾಗಿ ಕೆಳಗಿಳಿದ್ದುದನ್ನು ನಾವು ಕಾಣುತ್ತೇವೆ. ಸಾಲೆತೊರೆಯವರು ಹೇಳುವಂತೆ "ವಿಜಯನಗರದ ಅರಸರು ಬ್ರಾಹ್ಮಣನನ್ನು ಅತ್ಯುನ್ನತ ಗೌರವದಲ್ಲಿರಿಸುವುದರ ಮೂಲಕ ತಮ್ಮ ವರ್ತನೆಯಲ್ಲಿ ಪ್ರಾಚೀನ ಪರಂಪರೆಯ ಸ್ಪರ್ಶ ತೋರಿದರು; ಆದರೆ, ಅದೇ ಕಾಲದಲ್ಲಿ, ಆತನನ್ನು ರಾಜ್ಯದ ಸೇವಕನನ್ನಾಗಿ ಮಾಡುವುದರ ಮೂಲಕ ತಮ್ಮ ಮಧ್ಯಯುಗೀನ ಸಾರಸ್ವರೂಪವನ್ನೂ ಅವರು ತೋರಿದರು."[28] ಹಾಗಿದ್ದರೂ ಬ್ರಾಹ್ಮಣನಿಗೆ ಸಲ್ಲಬೇಕಾದ ಗೌರವಕ್ಕೆ ಉಪೇಕ್ಷೆಯುಂಟಾಗಲಿಲ್ಲ. ಇತರ ಎಲ್ಲರಿಗಿಂತ ಬ್ರಾಹ್ಮಣರನ್ನು ಅರಸನು (ಇಮ್ಮಡಿ ದೇವರಾಯ) ಹೆಚ್ಚು ಗೌರವದಿಂದ ಕಾಣುತ್ತಿದ್ದನೆಂದು ಅಬ್ದುಲ್ ರಜಾಕ್‌ತಿಳಿಸುತ್ತಾನೆ.[29]

ಅಬ್ದುಲ್ ರಜಾಕನ ತರುವಾಯ ವಿಜಯನಗರಕ್ಕೆ ಬಂದ ವಿದೇಶೀ ಸಂದರ್ಶಕರು ಸಹ ಸಮಾಜದಲ್ಲಿ ಬ್ರಾಹ್ಮಣರಿಗಿದ್ದ ಉನ್ನತ ಸ್ಥಾನಮಾನದ ಬಗ್ಗೆ ತಿಳಿಸುತ್ತಾರೆ. "ಈ ಬ್ರಾಹ್ಮಣರು ನಮ್ಮ ಕ್ರೈಸ್ತ ಭಿಕ್ಷುಗಳಂತಿರುತ್ತಾರೆ ಮತ್ತು ಪುಣ್ಯಪುರುಷರೆಂದು ಪರಿಗಣಿಸಲ್ಪಡುತ್ತಾರೆ. ನಾನು ಹೇಳುತ್ತಿರುವುದು ದೇವಾಲಯಗಳ ಪುರೋಹಿತರು ಮತ್ತು ಪಂಡಿತರಾದ ಬ್ರಾಹ್ಮಣರ ಬಗೆಗೆ. ಏಕೆಂದರೆ, ರಾಜನಲ್ಲಿ ಅನೇಕ ಬ್ರಾಹ್ಮಣರಿರುವವರಾದರೂ ಅವರು ಪುರ ಮತ್ತು ಪಟ್ಟಣಗಳ ಅಧಿಕಾರಿಗಳಾಗಿದ್ದು ಅವುಗಳ ಸರಕಾರಕ್ಕೆ ಸೇರಿದವರು; ಇತರರು ವರ್ತಕರು ಹಾಗೂ ಉಳಿದವರು ತಮ್ಮ ಸ್ವಂತದ ಆಸ್ತಿಪಾಸ್ತಿಯಿಂದ ಮತ್ತು ಸಾಗುವಳಿಯಿಂದ ಹಾಗೂ ತಮ್ಮ ಪಿತ್ರಾರ್ಜಿತ ಹೊಲಗಳಲ್ಲಿ ಬೆಳೆಯುವ ಫಸಲುಗಳಿಂದ ಜೀವಿಸುವವರು. ದೇವಾಲಯಗಳ ಉಸ್ತುವಾರಿಯುಳ್ಳ ಜನರು ವಿದ್ವಾಂಸರಾಗಿದ್ದು ಸಾವಿಗೀಡಾಗುವ ಯಾವುದನ್ನೂ, - ಮಾಂಸವನ್ನಾಗಲಿ, ಮೀನನ್ನಾಗಲಿ - ತಿನ್ನುವುದಿಲ್ಲ; ಸಾರನ್ನು ಕೆಂಪಾಗಿಸುವ ಯಾವುದನ್ನೂ ಅವರು ತಿನ್ನುವುದಿಲ್ಲ. ಏಕೆಂದರೆ ಅದು ರಕ್ತವೆಂದೇ ಅವರು ಹೇಳುತ್ತಾರೆ." ಎಂದು ಪೇಯಿಸ್ ತಿಳಿಸುತ್ತಾನೆ.[30] ಬ್ರಾಹ್ಮಣರು ಆರಾಧನಾ ಮಂದಿರಗಳ ಅರ್ಚಕರಾಗಿರುವರೆಂದು ಮತ್ತು ಅವರು ಸಾವಿಗೀಡಾಗುವ ಯಾವುದನ್ನೂ ತಿನ್ನುವುದಿಲ್ಲವೆಂದು ಬಾರ್ಬೋಸ ತಿಳಿಸುತ್ತಾನೆ. "ಅವರು ಮದುವೆಯಾಗುವುದು ಒಬ್ಬಳನ್ನೆ: ಆಕೆ ಮೃತಳಾದರೆ

ಮರುಮದುವೆಯಾಗುವುದಿಲ್ಲ; ಅವರ ಗಂಡುಮಕ್ಕಳು ಅವರೆಲ್ಲ ವಸ್ತುಗಳನ್ನು ಪಡೆಯುತ್ತಾರೆ. ರಾಜ್ಯದ ಅರಸ ಮತ್ತು ಮಹಾ ಅಧಿಪರು ಅವರಿಗೆ ನೀಡುವ ತುಂಬ ದಾನದತ್ತಿಗಳ ಮೇಲೆ ಅವರು ಜೀವಿಸುತ್ತಾರೆ; ಅನೇಕ ಬ್ರಾಹ್ಮಣರಿಗೆ ಸ್ಥಿರಾಸ್ತಿಗಳಿವೆ; ಇತರರು ಉತ್ತಮ ಆದಾಯ ಹೊಂದಿರುವ ಮಠ ದೇಗುಲಗಳಲ್ಲಿರುತ್ತಾರೆ."[31] ನ್ಯೂನಿಜನ ಪ್ರಕಾರ ಬ್ರಾಹ್ಮಣರು "ಪ್ರಾಮಾಣಿಕ ಜನ, ವ್ಯಾಪಾರ ಮಾಡುವವರು, ಬಹುತೀಕ್ಷ್ಣಮತಿಯುಳ್ಳವರು ಹಾಗೂ ಬಹುಪ್ರತಿಭಾವತರು, ಲೆಕ್ಕಪತ್ರದಲ್ಲಿ ಪರಿಣತರು, ತೆಳುದೇಹದವರು ಮತ್ತು ಸುರೂಪಿಗಳು; ಆದರೆ ಪರಿಶ್ರಮದ ಕೆಲಸಕಾರ್ಯಗಳಿಗೆ ಯೋಗ್ಯರಲ್ಲದವರು. ಇವರಿಂದ ಮತ್ತು ಇವರು ಕೈಗೊಳ್ಳುವ ಕರ್ತವ್ಯಗಳಿಂದ ರಾಜ್ಯವು ನಡೆಯುತ್ತದೆ."[32] ವಿಜಯನಗರ ಸಾಮ್ರಾಜ್ಯದಲ್ಲಿ ಬ್ರಾಹ್ಮಣರು ವಿವಿಧ ವೃತ್ತಿಗಳಲ್ಲಿ ನಿರತರಾಗಿದ್ದರು; ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ, ಕೆಲಸ ನಿರ್ವಹಿಸುತ್ತಿದ್ದರು. ಅವರು ಅರಸನಿಗೆ ಸಚಿವರಾಗಿ ಮತ್ತು ಪ್ರಾಂತಾಧಿಪತಿಗಳಾಗಿ ಸೇವೆ ಸಲ್ಲಿಸುತ್ತಿದ್ದ ತಮ್ಮ ಸಮರ್ಥ ಆಡಳಿತದಿಂದ ರಾಜ್ಯವನ್ನು ಶ್ರೀಮಂತಗೊಳಿಸಿದರು; ಅರಸನಿಗೆ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಸಲಹೆಗಾರರಾಗಿದ್ದರು. ಸೈನಿಕ ಹುದ್ದೆಗಳಲ್ಲೂ ಅವರು ಇದ್ದು ಅರಸನಿಗೆ ದಂಡನಾಯಕರಾಗಿ ಸೇವೆ ಸಲ್ಲಿಸಿದುದುಂಟು. ಇಮ್ಮಡಿ ದೇವರಾಯನು ಸಿಂಹಾಸನವೇರುವ ಸುಮಾರು 20 ವರ್ಷಗಳ ಮೊದಲು ವಿಠಣ್ಣ ಒಡೆಯನೆಂಬ ಬ್ರಾಹ್ಮಣನು ಕ್ರಿ.ಶ. 1403ರಲ್ಲಿ ಅರಗದ ರಾಜ್ಯಪಾಲನಾಗಿದ್ದನು.[33] ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ, ಆತನ ಸೋದರಿ ಹರಿಮಾಳನ್ನು ಮದುವೆಯಾಗಿ ಭಾವನಾದ ಸಾಳುವ ತಿಪ್ಪ ಅಥವಾ ತಿಪ್ಪರಾಜ ಹಾಗೂ ಆತನ ಮಗ ಗೋಪ ಆತ್ರೇಯಗೋತ್ರಕ್ಕೆ ಸೇರಿದ ಬ್ರಾಹ್ಮಣ ದಂಡನಾಯಕರಾಗಿದ್ದಂತೆ ತೋರುತ್ತದೆ.[34] ಕ್ರಿ.ಶ. 1430ರಲ್ಲಿ ಅಣ್ಣಾಮಾರಾಧ್ಯ ಉರುಫ್ ಕೊಂಪಲ್ಲಿ ಎಂಬ ಬ್ರಾಹ್ಮಣು ನಗರ ದ್ವಾರಗಳ ಅಧಿಪತಿಯಾಗಿ ನೇಮಕವಾಗಿದ್ದನು.[35]

ಊರುಗಳಲ್ಲಿ ಬ್ರಾಹ್ಮಣರು ಅಗ್ರಹಾರಗಳೆಂದು ಕರೆಯಲಾದ ಪ್ರತ್ಯೇಕ ವಠಾರವನ್ನು ಹೊಂದಿದ್ದು ಅಲ್ಲಿ ಅವರು ತಮ್ಮ ವೇದಶಾಸ್ತ್ರಗಳ ಅಧ್ಯಯನವನ್ನು ನಡೆಸುತ್ತಿದ್ದರು. ಕೆಲವೊಮ್ಮೆ ಸಂಪೂರ್ಣ ಗ್ರಾಮ ಹಾಗೂ ಅದರ ಅಕ್ಕಪಕ್ಕದ ಭೂಮಿಕಾಣೆಗಳನ್ನು ಮಾನ್ಯವಾಗಿ ಬ್ರಾಹ್ಮಣರಿಗೆ ನೀಡಲಾಗುತ್ತಿತ್ತು. ಅಗ್ರಹಾರಗಳ ಬ್ರಾಹ್ಮಣರು 'ಮಹಾಜನ'ರೆಂದು ಪರಿಚಿತರಾಗಿದ್ದರು. ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಕೆಲವು ವಿಷಯಗಲ್ಲಿ ಬ್ರಾಹ್ಮಣರಿಗೆ ಸ್ವಾತಂತ್ರ್ಯವಿತ್ತಾದರೂ ಅಗ್ರಹಾರಗಳಿಗೆ ರಾಜ್ಯವು ತನ್ನ ಅಧಿಕಾರಿಗಳನ್ನೂ ಹೇರುತ್ತಿತ್ತು.[36]

ವಿಜಯನಗರದ ಸೈನಿಕ ಇತಿಹಾಸದಲ್ಲಿ ಬ್ರಾಹ್ಮಣರು ಗಣನೀಯ ಪಾತ್ರವಹಿಸಿ ಕೀರ್ತಿಗಳಿಸಿದ್ದಾರೆ. ಈ ವಚಾರದಲ್ಲಿ ಡಾ. ಮಹಾಲಿಂಗಂರವರು ತಮ್ಮ ಅಭಿಪ್ರಾಯಗಳನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ: "The History of Vijayanagar aboands in instances where Brahmins were either generals or provincial Viceroys; Sayanna, Maddanna, Lakkanna and Suluva

Thimma - are good instances in point. The Brahmins apart from being generals of forces and lords of forts, were leaders of contingents in war. This is borne out by an inscription (Ad. 1521) in the Reign of Krishnadevaraya"

ನಾಲ್ಕು ವರ್ಣಗಳ ಒಂದು ಹಳೆಯ ಚೌಕಟ್ಟಿನಿಂದ ಹೊರಗಿದ್ದರೂ, ವಿಜಯನಗರ ಇತಿಹಾಸದಲ್ಲಿ ಧರ್ಮ ಮತ್ತು ವ್ಯಾಪಾರೀ ಕ್ಷೇತ್ರದಲ್ಲಿ ಗಣನೀಯ ಪಾತ್ರವಹಿಸಿದ ಮತ್ತೊಂದು ವರ್ಗವೆಂದರೆ ಜೈನರು.[37] ವಿಜಯನಗರ ಅರಸರು ಬ್ರಾಹ್ಮಣ, ಶೈವ ಹಾಗೂ ಜೈನಮತಗಳನ್ನು ಸಮಾನ ಭಾವನೆಯಿಂದ ಕಂಡು ಅವುಗಳನ್ನು ಪ್ರೋತ್ಸಾಹಿಸಿದುದು ಐತಿಹಾಸಿಕ ಸತ್ಯ.

ಆ ಕಾಲದ ಸೈನಿಕ ಇತಿಹಾಸದಲ್ಲಿ ಸಾಮಾನ್ಯ ಬ್ರಾಹ್ಮಣನು ಕೂಡ ತನ್ನ ಕೈಲಾದ ಸೈನಿಕ ಸಹಾಯವನ್ನು ನೀಡುತ್ತಿದ್ದನೆಂಬ ವಿಷಯ ತಿಳಿದುಬರುತ್ತದೆ.

"There were many Brahmins among ordinary soldiers too" (AASL. I.P. 150) "Even ordinary Brahmins contributed their share to the Military annals of the times" - CSPL, II, p. 126) ಕೃಷ್ಣದೇವರಾಯನು ಕೈಗೊಂಡ ರಾಯಚೂರು ದಿಗ್ವಿಜಯದಲ್ಲಿ ಭಾಗವಹಿಸಿದ ತಿರುಕ್ಕಾಡಮಾರ "ಆಪತ್ಸಹಾಯ"ನೆಂಬ ಬ್ರಾಹ್ಮಣನ ಹೆಸರನ್ನು ವರದಿಯೊಂದು[38] ಹೇಳುತ್ತದೆ.

ಕೃಷ್ಣದೇವರಾಯನ ಬಳಿಯಲ್ಲಿ ಹಳೆಯ ಸಂಪ್ರದಾಯದಂತೆ ["The old tradition of the king to have by his side Brahmin generals was maintained under that ruler" (BAS, SPL, II. p. 126] ರಾಯಸಂ ಕೊಂಡುಮರಸಯ್ಯ ಎಂಬ ಪ್ರಖ್ಯಾತ ಬ್ರಾಹ್ಮಣ ಸೇನಾನಿಯಿದ್ದುದಲ್ಲದೆ, ಸಾಳುವತಿಮ್ಮ, ಸಾಳುವ ಗೋವಿಂದಯ್ಯ, ಸಾಳುವ ವೀರನರಸಿಂಹ, ಕರ್ಣಿಕಮಂಗರಸಯ್ಯ - ಎಂಬ ಬ್ರಾಹ್ಮಣ ಸೇನಾನಿಗಳಿದ್ದರು.[39] ಸೇನಾಪತಿಗಳನ್ನಾಗಿ ಬ್ರಾಹ್ಮಣರನ್ನು ನೇಮಿಸುವುದರಲ್ಲಿ ಕೃಷ್ಣದೇವರಾಯ ತನ್ನದೇ ಆದ ಖಚಿತ ನಿಲುವನ್ನು ತಾಳಿ ಅದನ್ನು ತನ್ನ ಕೃತಿ 'ಆಮುಕ್ತ ಮಾಲ್ಯ'ದಲ್ಲಿ ಹೀಗೆ ವ್ಯಕ್ತಪಡಿಸಿದ್ದಾನೆ; 'Because a Brahmin would stand to his post even in times of danger and would continue in service though reduced to becoming a subordinate to Kshatriya or Sudra. it is always advisable for a king to make Brahmins as his officers."[40] ಕೋಟೆಯ ರಕ್ಷಣೆಯ ಸಂದರ್ಭದಲ್ಲಿ ಎಂತಹ ಅಧಿಕಾರಿಗಳನ್ನು ನೇಮಿಸಬೇಕೆಂದು ಹೇಳುತ್ತಾ, ಕೃಷ್ಣದೇವರಾಯ ತನ್ನ ಕೃತಿಯಲ್ಲಿ ಹೀಗೆ ಹೇಳುತ್ತಾನೆ: "Entrust your fortresses to such Brahmins (generals) as you are best acquainted with. Do not keep them weak, but give them such strong forces that they can be devoid of fear from their enemies" (Amukta, v. 207, p. 65, Qtd. SPL, II, p. 129)

**ಆ. ಕ್ಷತ್ರಿಯರು :** ವಿಜಯನಗರ ಕಾಲದ ರಾಮರಾಯನ ಬಖೈರಿನ ಹೇಳಿಕೆಯ ಪ್ರಕಾರ ಕ್ಷತ್ರಿಯರು ವಿಜಯನಗರ ಸೈನ್ಯದಲ್ಲಿ ಅದೃಷ್ಟವನ್ನು ಅರಸಿ ಉತ್ತರದಿಂದ 16ನೇ ಶತಮಾನದ ಪ್ರಾರಂಭದಲ್ಲಿ ಬಂದವರಾಗಿ ಹೇಳಿದೆ.[41] ಈ ಸಾಮ್ರಾಜ್ಯದ ಇತಿಹಾಸದಲ್ಲಿ ಕ್ಷತ್ರಿಯರ ಹೆಸರು ಬಹಳಮಟ್ಟಿಗೆ ಕಂಡು ಬರುವುದಿಲ್ಲ. ಇದಕ್ಕೆ ಕಾರಣ ವ್ಯಾಪಾರಿ ಮತ್ತು ವ್ಯವಸಾಯ ವರ್ಗದವರ ಚಟುವಟಿಕೆ ಬಹಳವಾಗಿತ್ತು. ಪ್ರಾಂತೀಯ ಆಡಳಿತಗಾರರಿಗೆ ಇವರು ಕೊಡುತ್ತಿದ್ದ ಶ್ರೀಮಂತ ಕೊಡುಗೆಯೇ ವಿಜಯನಗರ ಅರಸರ ಸೈನ್ಯ ಶಕ್ತಿಗೆ ಕಾರಣ. ಆದ್ದರಿಂದ ವಿಜಯನಗರದಲ್ಲಿ ಮಧ್ಯಮ ವರ್ಗದವರಾಗಿ, ಅವರ ಸಾಧನೆಗಳಿಗಾಗಿ ಹೆಸರು ಸ್ಥಾನಗಳಿತ್ತೇ ವಿನಾ ಕ್ಷತ್ರಿಯ ಮೂಲದವರೆಂದಲ್ಲ. ವಿಜಯನಗರದಲ್ಲಿ ಮೊದಲಿನಿಂದಲೂ ದಳಪತಿಗಳನ್ನು ಅವರ ಸಾಹಸ ಶೌರ್ಯಗಳಿಗಾಗಿ ಮಹಾಮಂಡಲೇಶ್ವರ ಮುಂತಾದ ಬಿರುದುಗಳಿಂದ ಕರೆಯುತ್ತಿದ್ದರೇ ಹೊರತು ಕ್ಷತ್ರಿಯರೆಂದಲ್ಲ. ಸಾಮ್ರಾಜ್ಯದ ಪ್ರಾರಂಭದಿಂದಲೂ ಕ್ಷತ್ರಿಯ ಸಂತತಿಗೆ ಸೇರದವರಿಂದಲೇ ದೇಶ ರಕ್ಷಣೆಯಲ್ಲಿ ಧುರೀಣ ಪಾತ್ರವಹಿಸಿದ ಕೀರ್ತಿ ಸಂದಿದೆ. ಇರುಗಪ್ಪ ನಾಯಕನಂತಹ ಜೈನ ದಂಡನಾಯಕ ಮತ್ತು ಇನ್ನೂ ಅನೇಕರಿಂದ ಸಾಮ್ರಾಜ್ಯಕ್ಕೆ ಗಣನೀಯ ಸೇವೆ ಸಂದಿದೆ. ಆದ್ದರಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಕ್ಷತ್ರಿಯರದ್ದೇ ಮೇಲುಗೈಯಾಗಿತ್ತು, ಉಳಿದ ಮತದವರದ್ದು ಏನೂ ಇಲ್ಲ ಅನ್ನುವಂತಿಲ್ಲ.[42]

ಬ್ರಾಹ್ಮಣ, ಕ್ಷತ್ರಿಯರಿಗೆ ಜಾತಿವಿದ್ಯೆಗಳೆಂದು 'ಗದುಗಿನ ಭಾರತ' ಇವುಗಳನ್ನು ಹೆಸರಿಸುತ್ತದೆ: ".... ವಿಪ್ರರಾದರೆ ಸರಸ ನವಭೋಜನದ" ಕಥೆ ಮೇಣ್ ನಿರತಿಶಯ ವೇದಾಂಗ ವೇದತರ್ಕಗಳು. ಅರಸುಗಳಿಗಾಯುಧದ ಗಜತುರಗ ರಥದೇರಾಟದ ಮಹಾಸ್ತ್ರದ ವಿರಚನೆಗಳಿವು - ಜಾತಿವಿದ್ಯೆಗಳು" ('ಗಭಾಅ', 17-23) ವೈಶ್ಯನ ವೃತ್ತಿ.

ದೋರಸಮುದ್ರ ಮತ್ತು ವಿಜಯನಗರ ರಾಜ್ಯಗಳನ್ನು ಕಟ್ಟಿದ ವೀರರು ಕ್ಷತ್ರಿಯ ವರ್ಗದವರಾಗಿರದೆ ದೇಶೀಯ ಮೂಲದ ಧೀರಪುರುಷರಾಗಿದ್ದರೆನ್ನುವುದು ಗಮನಿಸಬೇಕಾದ ಕುತೂಹಲಕರ ಸಂಗತಿ. ಗಮನಸೆಳೆಯುವ ಹಾಗೆ, ವಿಜಯನಗರದ ಇತಿಹಾಸದಲ್ಲಿ ಕ್ಷತ್ರಿಯ ಎಂಬ ಹೆಸರೇ ಗೋಚರಿಸುವುದಿಲ್ಲ. ಹಿಂದೂ ಸಾಮ್ರಾಜ್ಯದ ಜೀವಶಕ್ತಿಯು ವಾಣಿಜ್ಯ ಮತ್ತು ಕೃಷಿಕ ವರ್ಗಗಳ ಚಟುವಟಿಕೆಗಳಿಗೆ ಮತ್ತು ಜನರ ಸಾಂಸ್ಥಿಕ ಜೀವನಕ್ಕೆ ಸಲ್ಲತಕ್ಕದ್ದೆಂದು ಸಾಲೆತೊರೆಯವರು ತಿಳಿಸುತ್ತಾರೆ. ಅವರ ಪ್ರಕಾರ ನಮ್ಮ "ವಿಜಯನಗರದ ಶ್ರೇಷ್ಠತೆಗೆ ಮಧ್ಯಮವರ್ಗಗಳು ಮುಖ್ಯವಾಗಿ ಕಾರಣವೆಂಬ ಭಾವನೆಯು ಸೇನಾನಿಗಳ ವಂಶಮೂಲದ ಮಾತುಗಳಿಗಿಂತ ಹೆಚ್ಚಾಗಿ ಅವರ ಸಾಧನೆಗಳ ಪರಿಭಾಷೆಯಲ್ಲಿ ಮಾಡಿರುವ ಪ್ರಶಂಸೆಯಿಂದ ದೃಢೀಕರಿಸಲ್ಪಟ್ಟಿದೆ. ವಿಜಯನಗರ ಇತಿಹಾಸದ ಆರಂಭದಿಂದಲೇ ಸೇನಾನಿಗಳ ಕ್ಷತ್ರಿಯ ಹಕ್ಕುಬಾಧ್ಯತೆಯನ್ನು ಉಪೇಕ್ಷಿಸುವುದು ಹಾಗೂ 'ಮಹಾಮಂಡಲೇಶ್ವರ'ದಂಥ ಮಾಮೂಲಿನ ಬಿರುದುಗಳಿಂದ ಮತ್ತು ಅವರ ಸಾಹಸಕಾರ್ಯಗಳ ಕಥನದಿಂದ ವರ್ಣಿಸುವುದೇ ಪ್ರವೃತ್ತಿಯಾಯಿತು."[43] ದೇಶವನ್ನು ರಕ್ಷಿಸುವ ಸವಲತ್ತು ಮತ್ತು ಗೌರವವು ಕ್ಷತ್ರಿಯವರ್ಗಕ್ಕೆಂದೂ ಸೇರದ ಜನರ ಏಕಸ್ವಾಮ್ಯವಾಗಿದ್ದಿತು.

ವಾಸ್ತವವಾಗಿ ಕ್ಷತ್ರಿಯರು ವಿಶೇಷವಾಗಿ ಉತ್ತರ ಭಾರತದ ಇತಿಹಾಸದಲ್ಲಿ ಪರಿಚಿತವಾಗಿರುವಂತೆಯೇ ದಕ್ಷಿಣದಲ್ಲಿಯೂ ಈ ನೆಲದ ಮೂಲ ನಿವಾಸಿಗಳೆನಿಸಿರಲಿಲ್ಲ. ಅವರನ್ನು ಕೆಲವು ಶಾಸನಗಳಲ್ಲಿ 'ಬ್ರಹ್ಮಕ್ಷತ್ರಿಯ' ಎಂದು ಕರೆದಿದೆ. ಅರಗದ ಪ್ರಾಂತಾಧಿಕಾರಿಯಾದ ವಿಠಣ್ಣ ಒಡೆಯನೊಬ್ಬ ಬ್ರಹ್ಮಕ್ಷತ್ರಿಯನಾಗಿದ್ದನು.[44] ಬ್ರಹ್ಮಕ್ಷತ್ರಿಯರ ಉಗಮದ ಬಗ್ಗೆ ಶಾಸನಗಳಿಂದ ಏನೂ ತಿಳಿದುಬರುವುದಿಲ್ಲ. ಬ್ರಾಹ್ಮಣ ರಾಜ್ಯಪಾಲರು ಹಾಗೂ ದಣ್ಣಾಯಕರು ತಮ್ಮ ಪರಾಕ್ರಮ ಹಾಗೂ ದಂಡನಾಯಕರ ಸ್ಥಾನಗಳಿಂದಾಗಿ ಹಾಗೆ ಕರೆಯಲ್ಪಟ್ಟಿರಬೇಕು.

**ಇ. ಸೆಟ್ಟಿಗಳು :** ದಕ್ಷಿಣ ಭಾರತದ ಮೊದಲ ಇತಿಹಾಸದಲ್ಲಿ, ಅದರಲ್ಲಿಯೂ ಹೆಚ್ಚಾಗಿ ಕರ್ನಾಟಕ ಮತ್ತು ತಮಿಳುನಾಡುಗಳಿಗೆ ಸಂಬಂಧಿಸಿದಂತೆ ಸೆಟ್ಟಿಗಳು ಅಥವಾ ಚೆಟ್ಟಿಗಳು ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಸೆಟ್ಟಿಗಳ ಪೂರ್ವಿಕರು ಪ್ರಾಚೀನ ಸಮಾಜದ ವೈಶ್ಯರು ವ್ಯಾಪಾರ ಮತ್ತು ಲೇವಾದೇವಿ ವ್ಯವಹಾರ ಅವರಿಗೆ ನೀಡಲಾದ ಕರ್ತವ್ಯಗಳಾಗಿದ್ದವು. ಮಧ್ಯಯುಗದಲ್ಲಿ ದೇಶದುದ್ದಕ್ಕೂ ಪ್ರಮುಖ ವ್ಯಾಪಾರಿಗಳು ಸೆಟ್ಟಿಗಳಾಗಿದ್ದರು.[45] ಮೆಣಸು ಮತ್ತು ಅಮೂಲ್ಯ ರತ್ನಗಳನ್ನು ಅವರು ವ್ಯಾಪಾರ ಮಾಡುತ್ತಿದ್ದರು. ಕರಾವಳಿಯುದ್ದಕ್ಕೂ ಹಾದು ಹೋಗುತ್ತಿದ್ದ ವಿದೇಶೀ ಹಡಗುಗಳವರು ಅವರಿಂದ ಈ ಪದಾರ್ಥಗಳನ್ನು ಕೊಂಡುಕೊಳ್ಳುತ್ತಿದ್ದರು.[46] ತಮಿಳು ದೇಶದ ಚೆಟ್ಟಿನಾಡಿನ ಪ್ರದೇಶದಲ್ಲಿ, ವಿಶೇಷವಾಗಿ ರಾಮನಾಡು ಮತ್ತು ಮಧುರೆ ಜಿಲ್ಲೆಗಳಲ್ಲಿ ಅವರ ಕುಲವು ಇಂದಿಗೂ ತುಂಬ ಶ್ರೀಮಂತವಾದುದು. ಕರ್ನಾಟಕದಲ್ಲಿ ಅವರು ಗವರೆ, ಗಾತ್ರಿಗ, ಸೆಟ್ಟಿ, ಸೆಟ್ಟಿಗುತ್ತ, ಅಂಕಣಕಾರ, ಬೀರ, ಬೀರವಣಿಗ, ಗಂಡಿಗ, ಗವುಂಡ ಮತ್ತು ಗವುಂಡಸ್ವಾಮಿಗಳೆಂದು ಪರಿಚಿತವಾಗಿರುವ ಜಾತಿಯ ಬೇರೆ ಬೇರೆ ಭಾಗಗಳನ್ನು ಹೊಂದಿದ್ದರೆಂದು ತೋರುತ್ತದೆ.[47] ಸಾಮ್ರಾಜ್ಯದ ತಮಿಳು ಪ್ರದೇಶಗಳಲ್ಲಿ ಅವರು ತಮ್ಮನ್ನು ನಗರತ್ತಾರ್, ವೀರಕೋಡಿಯಾರ್, ಪೆರು-ನಗರತ್ತಾರ್[48] ಹಾಗೂ ವೈಶ್ಯವಾಣಿಯ ನಗರತ್ತಾರ್[49] ಎಂಬ ಶಬ್ದಗಳಿಂದ ವರ್ಣಿಸಿಕೊಂಡಿದ್ದಾರೆ. ವಿಜಯನಗರದ ಕಾಲದಲ್ಲಿ ಅವರದೊಂದು ಶ್ರೀಮಂತ ವ್ಯಾಪಾರಿ ವರ್ಗ. ಅವರು ತಮ್ಮದೇ ಆದ ಜಾತಿನಾಯಕರನ್ನು ಹೊಂದಿರುತ್ತಿದ್ದರು. ಅರಸನ ಸಾಮಂತರು ತೆರಿಗೆಗಳನ್ನು ವಿಧಿಸುವ ಮೊದಲು ಅಥವಾ ಸ್ಥಳೀಯ ದೇವಾಲಯಗಳಿಗೆ ದಾನಧರ್ಮಗಳನ್ನು ಮಂಜೂರುಮಾಡುವ ಮೊದಲು ಅವರ ಅನುಮತಿಯನ್ನು ಅನೇಕವೇಳೆ ಪಡೆಯುತ್ತಿದ್ದುದುಂಟು.[50] ಈ ಸೆಟ್ಟಿಗಳಲ್ಲಿ ಕೆಲವರು ಸಾಮ್ರಾಜ್ಯದ ಮತ್ತು ಪ್ರಾಂತೀಯ ಆಸ್ಥಾನಗಳಲ್ಲಿ ತುಂಬ ಪ್ರಾಮುಖ್ಯ ಪಡೆದರು. ತಮ್ಮ ವಾಣಿಜ್ಯ ಸಂಘಗಳ ನೇಕಾರರಾದ ಸೆಟ್ಟಿಗಳು ಪಟ್ಟಣಸ್ವಾಮಿಯಂಥ ಪ್ರಮುಖ ಸ್ಥಾನಮಾನಗಳನ್ನು ಪಡೆದರು. ಪೃಥುವೀಸೆಟ್ಟಿಯು ಅಂಥ ಒಬ್ಬ ಗಣ್ಯಪುರುಷ[51] ಕ್ರಿ.ಶ. 1430ರಲ್ಲಿ, ಒಬ್ಬ ಪ್ರಮುಖ ಪಟ್ಟಣಸ್ವಾಮಿಯಾದ ಚಿಯಿಬೆಸ್ಸಿಸೆಟ್ಟಿಯು ಸಂತೆಯೊಂದನ್ನು ನಡೆಸಲು ಭೂದಾನ ನೀಡಿದ.[52] ಕ್ರಿ.ಶ. 1427ರಲ್ಲಿ ಮಹಾ ಹಿರಿಯ ವರ್ತಕರು ಹಾಗೂ ಉಭಯ ನಾನಾದೇಶಿಗಳ ಪ್ರತಿನಿಧಿಗಳಿಗೆ ಪಟ್ಟಣಸ್ವಾಮಿಯ ಅಧಿಕಾರವನ್ನು ನೀಡಲಾಯಿತು.[53] ಪಟ್ಟಣಸ್ವಾಮಿಯು ವಣಿಕ ಸಂಘಗಳು ಅಸ್ತಿತ್ವದಲ್ಲಿದ್ದ ಪುರ ಅಥವಾ ನಗರ ಪ್ರದೇಶಗಳ ಆಡಳಿತಾಧಿಕಾರವನ್ನು ಹೊಂದಿದ್ದಂತೆ ತೋರುತ್ತದೆ.[54]

ಮಾನ್ಯವೊಂದರ ಜೊತೆಗೆ ಪಟ್ಟಣಸ್ವಾಮಿ ಸ್ಥಾನವನ್ನು 'ಸೆಟ್ಟಿ' ಜಾತಿಯು ಹೊಂದಿದ ಇನ್ನೊಂದು ದೃಷ್ಟಾಂತವೂ ಇದೆ; ಕ್ರಿ.ಸ. 1426ರಲ್ಲಿ ಬಲದಪಸೆಟ್ಟಿಯು ಅಂಥ ಗೌರವವನ್ನು ಹೊಂದಿದ್ದ.[55] ಬಾರ್ಬೋಸನ ಪ್ರಕಾರ ಸೆಟ್ಟಿಗಳು ಬಹುಮಟ್ಟಿಗೆ ಬಿಳಿಗೆ ತಿರುಗಿದ ಕಂದು ಬಣ್ಣದವರು ಹಾಗೂ ಸ್ಥೂಲದೇಹದವರು ಅವರು ಪ್ರಶಸ್ತ ಶಿಲೆ, ಸಣ್ಣಮುತ್ತು, ಹವಳ ಮತ್ತಿತರ ಚಿನ್ನ ಬೆಳ್ಳಿಯಂಥ ಅಮೂಲ್ಯ ವಸ್ತುಗಳ ವ್ಯಾಪಾರ ಮಾಡುವ ದೊಡ್ಡ ವರ್ತಕರು; ಅವರು ನಿಯೋಜಿತ ಬೀದಿಗಳಲ್ಲಿ ತಮ್ಮದೇ ಆದ ವಿಶಾಲ ಮನೆಗಳನ್ನು ಹೊಂದಿರುವರು; ಅವರು ಅಮೂಲ್ಯ ಆಭರಣಗಳನ್ನು ಧರಿಸುತ್ತಾರೆ; ವ್ಯವಹಾರ ಹಾಗೂ ಸಂಪತ್ಸಂಗ್ರಹದಲ್ಲಿ ಅವರು ಜಾಗರೂಕರು; ಸಂಯಮಿಗಳು ಮತ್ತು ಊಟೋಪಹಾರ ಹಾಗೂ ವೆಚ್ಚಮಾಡುವಲ್ಲಿ ಕ್ರಮಬದ್ಧರು. "ಅವರು ತಮ್ಮ ವ್ಯವಹಾರಗಳನ್ನು ತಾವೇ ನಿರ್ವಹಿಸುವರು; ಅವರ ಅಪರಾಧಗಳನ್ನು ಅರಸರು ವಿಚಾರಿಸಲಾರರು; ಒಬ್ಬರು ಇನ್ನೊಬ್ಬರಿಗೆ ನ್ಯಾಯವನ್ನು ಒದಗಿಸುವರು; ಅದರಿಂದ ಅರಸನಿಗೆ ತೃಪ್ತಿಯಾಗುವುದು. ಅವರು ಮರಣಹೊಂದಿದಾಗ ಅವರ ದೇಹಗಳನ್ನು ಸುಡಲಾಗುವುದು; ಅವರು ಹಸುವನ್ನು ಮಾತ್ರ ಬಿಟ್ಟು ಉಳಿದ ಎಲ್ಲವನ್ನೂ ತಿನ್ನುವರು."[56]

**ಈ. ವೀರಪಾಂಚಾಳರು:** ವೀರಪಾಂಚಾಳರೆಂದು ಕರೆಯಲಾದ ವ್ಯಾಪರ ಮತ್ತು ಕೈಗೆಲಸ ಮಾಡುವ ವರ್ಗವು ಪ್ರಾಮುಖ್ಯದಲ್ಲಿ ಸೆಟ್ಟಿ ಅಥವಾ ಚೆಟ್ಟಿಗಳಿಗೆ ಸರಿಸಮನಾಗಿತ್ತು. ಕರ್ಮಿಗಳಾಗಿ ಅವರಿಗೆ ಗ್ರಾಮ ಜನಸಮುದಾಯದಲ್ಲಿ ಒಂದು ಪ್ರಧಾನ ಸ್ಥಾನವಿತ್ತು. ಅವರಲ್ಲಿ ಅಕ್ಕಸಾಲೆ, ಕಮ್ಮಟದ ಆಚಾರಿ ಅಥವಾ ನಾಣ್ಯ ಟಂಕಿಸುವವನು, ಕಮ್ಮಾರ, ಬಡಗಿ ಹಾಗೂ ಕಲ್ಲುಕುಟಿಗರಿದ್ದರು,[57] ಅವರನ್ನು ಪಾಂಚಾಳರೆಂದೂ ಕರೆಯಲಾಗಿದೆ. ತೆಲುಗು ಮಾತನಾಡುವ ಪ್ರದೇಶದಲ್ಲಿ ಅವರನ್ನು ಪಂಚಾನಂವಾರು ಅಥವಾ ಪಂಚಾನುಲು ಎಂದು ಕರೆದಿದೆ.

ವೀರಪಾಂಚಾಳರು ತಮ್ಮ ಪ್ರಾಚೀನತೆ ಮತ್ತು ಶ್ರೇಷ್ಠತೆಯ ಬಗ್ಗೆ ಬಡಾಯಿ ಕೊಚ್ಚಿಕೊಳ್ಳುತ್ತಾರೆ. ಕ್ರಿ.ಶ. 1372ರ ಶಾಸನವೊಂದರಲ್ಲಿ ಅವರ ಉಗಮವನ್ನು ಧರ್ಮಶಾಸ್ತ್ರಕಾರನಾದ ಮನುವಿನಲ್ಲಿ ಗುರುತಿಸಿದೆ; ಅವರು ಅಪಾರ ಜ್ಞಾನ ಮತ್ತು ವಿದ್ವತ್ತುಳ್ಳವರೆಂದು, ಉನ್ಮಾನ, ಉಪಮಾನ, ವೇದ, ಶಾಸ್ತ್ರ, ತರ್ಕ ವ್ಯಾಕರಣ ಹಾಗೂ ಕಾವ್ಯಕಲೆಗಳಲ್ಲಿ ಹಾಗೂ ಅಶ್ವಶಿಕ್ಷೆ ಮತ್ತು ಗಜಶಿಕ್ಷೆಗಳಲ್ಲಿ ಪರಿಣತರೆಂದು ಉಲ್ಲೇಖಿಸಿದೆ. ಪಠಣ, ಲೇಖನ, ಭಾಷೆ ಮತ್ತು ಪುರಾಣಗಳಲ್ಲಿ ಅವರು ಪಾರಂಗತರೆಂದು ನಿರೂಪಿಸಿದೆ. ಅವರು 'ಯುಕ್ತರಣದ ಗಜಹಿತಕಾರುಣ್ಯ'ರೆಂದು ವರ್ಣಿಸಿದೆ.[58]

ಒಂದನೆಯ ದೇವರಾಯನ ಕಾಲದಲ್ಲಿ ವೀರಪಾಂಚಾಳರು ರಾಜಾಶ್ರಯವನ್ನು ಪಡೆದವರೆಂದು ತೋರುತ್ತದೆ. ರಾಜಾಸ್ಥಾನದಲ್ಲಿ ಸಿಂಹಾಸನವನ್ನು ತಯಾರಿಸಿದುದಕ್ಕೆ ಪ್ರತಿಫಲವಾಗಿ ಹರಿಹರಮಹಾರಾಯನು (ಅರಸನಾದ ಹರಿಹರ) ಎತ್ತು, ಎಮ್ಮೆ, ಬಂಡಿ, ರತ್ನಾಭರಣಗಳು ಇತ್ಯಾದಿಗಳ ಮೇಲಿನ ತೆರಿಗೆಯನ್ನು ಮಾನ್ಯಮಾಡಿದುದನ್ನು ಒಂದನೆಯ ದೇವರಾಯನು ಸ್ಥಿರೀಕರಿಸಿದ ವಿಷಯವನ್ನು ಕ್ರಿ.ಶ. 1418ರ ಶಾಸನವೊಂದು

ದಾಖಲಿಸುತ್ತದೆ.[59] ವಿದ್ಯಾನಗರ ಅಥವಾ ವಿಜಯನಗರದಲ್ಲಿ ರಥೋತ್ಸವ ಕಾಲದಲ್ಲಿ ವೀರಪಾಂಚಾಳರು ಕೆಲವು ವಿಶೇಷ ಹಕ್ಕುಗಳನ್ನು ಹೊಂದಿದ್ದರೆನ್ನುವುದನ್ನು ಅರಸ ಸದಾಶಿವರಾಯನಿಗೆ ಸೇರಿದ ಶಾಸನವೊಂದರಲ್ಲಿ ತಿಳಿಸಿದೆ. ವಿದ್ಯಾನಗರದ ರಥೋತ್ಸವ ಕಾಲದಲ್ಲಿ ಅವರಿಗೆ ಬೇಲೂರಿನಲ್ಲಿ ಎಲ್ಲೆಗಳನ್ನು ಗೊತ್ತುಮಾಡಿದ ನಿರ್ದಿಷ್ಟ ಪ್ರದೇಶವೊಂದನ್ನು ನಿಗದಿಗೊಳಿಸಲಾಯಿತು; ಅಲ್ಲಿ ಅವರು ಸಾಲುಮನೆಗಳನ್ನು ನಿರ್ಮಿಸುವುದು, ತಮ್ಮ ಮತಸಂಪ್ರದಾಯಗಳನ್ನು ಪಾಲಿಸುವುದು ಮತ್ತು ಒಡವೆ ವಸ್ತ್ರಗಳನ್ನು ತಯಾರಿಸುವುದು, ಬೇಲೂರಿನ ಚೆನ್ನಿಗರಾಯ ದೇವಾಲಯದಲ್ಲಿ ಅವರಿಗೆ ನೀಡಲಾಗಿದ್ದ ಸವಲತ್ತು ಮತ್ತು ಸ್ಥಾನಮಾನಗಳನ್ನು ಅನುಭೋಗಿಸುವುದು - ಇವು ನಡೆಯುತ್ತಿದ್ದವು.[60]

ವೀರಪಾಂಚಾಳರ ವೃತ್ತಿ ಸಂಘವು ತನ್ನ ನಿರ್ಣಯಗಳನ್ನು ಉಲ್ಲಂಘಿಸುವವರ ಮೇಲೆ ದಂಡ ವಿಧಿಸುವ ಅಧಿಕಾರವನ್ನು ಹೊಂದಿತ್ತು. ತೆರಕಣಾಂಬಿಯ ವೀರಪಾಂಚಾಳರು ತಮ್ಮ ಧರ್ಮವನ್ನು ಹಾಳುಮಾಡುವವನನ್ನು ಪಾಂಚಾಳ, ಆಹಳ ಅಥವಾ ವ್ಯಾಪಾರ, ಸಮಯ ಹಾಗೂ 'ನಾಡು'ಗಳಿಂದ ಬಹಿಷ್ಕರಿಸಲಾಗುವುದೆಂದು ಅಂಥ ಕಟ್ಟಳೆಯನ್ನು ಮಾಡಿದರು.[61] ವೀರಪಾಂಚಾಳ ವೃತ್ತಿ ಸಂಘವು ಧಾರ್ಮಿಕ ಉದ್ದೇಶಗಳಿಗಾಗಿ ತನ್ನ ಸದಸ್ಯರಿಗೆ ತೆರಿಗೆಗಳನ್ನು ವಿಧಿಸಬಹುದಿತ್ತು.[62] ಕೆಲವೊಂದು ಸಂದರ್ಭದಲ್ಲಿ ದೇವಾಲಯಗಳಿಗೆ ಸೇರಿದ ನರ್ತಕಿಯರ ಅಥವಾ ಪಾತ್ರದವರ ನಿರ್ವಹಣೆಯ ಉದ್ದೇಶದಿಂದ ಅವರು ದತ್ತಿ ನೀಡುತ್ತಿದ್ದರು.[63]

**ಉ. ಕೈಕ್ಕೋಲರು :** ಇವರನ್ನು 'ಸೇಂಗುತ್ತರ್' ಎಂದೂ (ತಮಿಳಿನಲ್ಲಿ) ಕರೆಯುತ್ತಿದ್ದರು.[64] ಇವರು ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಇವರಿಗೆ ಕೈಕೊಲ್ಲರು ಎಂಬ ಹೆಸರು ಬರಲು ಇವರ ಬಲವಾದ ಮೃಷ್ಟಿ (ಕೈ) ಕಾರಣ ಎಂದು ಹೇಳಬಹುದು.[65] ಇವರು ಚೇರ, ಚೋಳ, ಕೇರಳ, ಪಾಂಡ್ಯ ಹಾಗೂ ವಿಜಯನಗರ ಕಾಲದಲ್ಲಿ ಸಮಾಜದ ಒಂದು ಮುಖ್ಯ ವೃತ್ತಿಯನ್ನು ಅವಲಂಬಿಸಿದವರಂತೆ ಕಂಡುಬರುತ್ತಾರೆ.[62] ಶ್ರೀಲಂಕಾದ ಉತ್ತರ ಭಾಗದಲ್ಲಿ ರಾಮಸೇತು ಪ್ರದೇಶದಲ್ಲಿಯೂ ವಾಸವಾಗಿದ್ದುದಾಗಿ ಪ್ರವಾಸಿಗರ ದಾಖಲೆಗಳಿಂದ ದೃಢಪಟ್ಟಿದೆ.[66] ಪರಂಪರಾನುಗತವಾಗಿ ಮಾಡಿಕೊಂಡು ಬರುತ್ತಿದ್ದ ನೇಯ್ಗೆ ವೃತ್ತಿ ಇವರದು. ಕೆಲವರು ಸೈನ್ಯದ ಮುಖ್ಯಸ್ಥರಾಗಿಯೂ ಉತ್ತಮ ಸ್ಥಾನವನ್ನು ಪಡೆದಿದ್ದರು. ಅವರನ್ನು 'ಸಮಂತಾ ಸೇನಾಪತಿಗಳ್' ಎಂದು ಕರೆಯಲಾಗುತ್ತಿತ್ತು.[67] ಹೀಗೆ ವಿಜಯನಗರ ಕಾಲದಲ್ಲಿ ಆಯಗಾರರು ತಮ್ಮ ತಮ್ಮ ಪಾಲಿನ ವೃತ್ತಿಯನ್ನು ಮಾಡಿ ಆಯವನ್ನು ಪಡೆದು ಜೀವನ ಸಾಗಿಸುತ್ತಿದ್ದರು. ಇವರಿಂದ ವಿಜಯನಗರದ ಅರಸರಿಗೆ ಅಗತ್ಯ ಸೇವೆಗಳು ದೊರೆಯುತ್ತಿದ್ದವು.

ಈ ಜಾತಿಯೂ ವೃತ್ತಿಯಾಧಾರಿತವಾದುದಾಗಿದ್ದು ನೇಕಾರರನ್ನು ಉಲ್ಲೇಖಿಸುತ್ತದೆ; ಅವರು ನೇಯ್ಗೆಯಲ್ಲಿ ಬಳಸುವ ದಾರಹಿಡಿಕೆ ಸಲಕರಣೆಯಿಂದಾಗಿ ಅವರಿಗೆ ಕೈಕ್ಕೋಲರೆಂಬ ಹೆಸರು ಬಂದಿದೆ. ವಿಜಯನಗರ ಕಾಲದಲ್ಲಿ ಜನರಿಗೆ ಅವಶ್ಯಕವಾದ ಬಟ್ಟೆ ಬರೆಯ ಸರಬರಾಜನ್ನು ಮಾಡುತ್ತಿದ್ದುದರಿಂದ ಅವರದೊಂದು ಪ್ರಭಾವಶಾಲಿ ಸಮುದಾಯವಾಗಿತ್ತು. ಅವರು ಮಗ್ಗಗಳಿಂದ ಕೆಲಸ ಮಾಡುತ್ತಿದ್ದರು ಹಾಗೂ

ದೇವಾಲಯದ ಪರಿಸರದಲ್ಲಿ ವಾಸಿಸುತ್ತಿದ್ದರು. ಆ ಕಾಲದ ಬಹುಪಾಲು ಶೂದ್ರ ಜಾತಿಯವರಂತೆಯೇ ಕೈಕ್ಕೋಲರು ಕೂಡ ತಮ್ಮ ಕನ್ಯೆಯರನ್ನು 'ಬಸವಿ' ಅಥವಾ 'ದೇವದಾಸಿ'ಗಳಾಗಿ ಸಲ್ಲಿಸುವ ಪದ್ಧತಿಯನ್ನು ಅನುಸರಿಸುತ್ತಿದ್ದರು; ಅದೊಂದು ಪರವಾನಗಿ ಪಡೆದ ಧಾರ್ಮಿಕ ವೇಶ್ಯಾವೃತ್ತಿಯಾಗಿತ್ತು. ಆಡಳಿತ ಮತ್ತು ಸ್ಥಳೀಯ ತೆರಿಗೆ ವಸೂಲಾತಿಯಂಥ ದೇವಾಲಯದ ವಿಷಯದಲ್ಲಿ ಕೈಕ್ಕೋಲರ ಮಾತಿಗೆ ತುಸು ಅವಕಾಶವಿತ್ತು. ಶುಭಾಶುಭ ಸಮಾರಂಭಗಳೆರಡರಲ್ಲಿಯೂ ಅವರಿಗೆ ಶಂಖ ಊದುವ ಮತ್ತು ದಂಡ (ಪಾಲಕಿ) ಬಳಸುವ ಸವಲತ್ತುಗಳಿದ್ದವು.[68] ಹದಿನೆಂಟು ಸಂಪ್ರದಾಯಿಕ ಜಾತಿಗಳಲ್ಲಿ ಕೈಕ್ಕೋಲರು ಸೇರಿದ್ದರು. ವೃತ್ತಿಪರವಾದ ಒಂದು ಜಾತಿಗೆ ಸೇರಿದ ಅವರು ದಾನಧರ್ಮಗಳನ್ನು ಮಾಡುವಷ್ಟು ಮತ್ತು ದೇವಾಲಯಗಳನ್ನು ಕಟ್ಟಿಸುವಷ್ಟು ಸಿರಿವಂತರಾಗಿದ್ದರು.[69] ಕ್ರಿ.ಶ. 1370ರ ಶಾಸನವೊಂದರಲ್ಲಿ ದಾಖಲಿಸಿರುವಂತೆ ಅವರಿಗೆ ವಿಧಿಸಿದ ತೆರಿಗೆಗಳಲ್ಲಿ ರಿಯಾಯಿತಿಗಳು ಆಗಾಗ್ಗೆ ದೊರೆಯುತ್ತಿದ್ದುದುಂಟು.[70] ಕೆಲವೊಮ್ಮೆ ಅವರಿಗೆ ಕಟ್ಟುನಿಟ್ಟಾಗಿ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು.[71] ಕ್ರಿ.ಶ. 1445ರಲ್ಲಿ ಮಹಾಪ್ರಧಾನ ಅಣ್ಣಪ್ಪೈಯ್ಯಂಗಳ ಆದೇಶದ ಮೇರೆಗೆ ತಿರುಕ್ಕೋವಲಂನ ದೇವಾಲಯಕ್ಕೆ ಸ್ಥಳದ ಕೈಕ್ಕೋಲರಿಂದ ಸಲ್ಲಬೇಕಾದ ತೆರಿಗೆಗಳನ್ನು ಮಾನ್ಯ ಮಾಡಲಾಯಿತು.[72] ಕ್ರಿ.ಶ. 1426ರ ಒಂದು ಶಾಸನದ ಪ್ರಕಾರ ಪುಲಿವನ ನಾಡಿನ ತಿರುಪ್ಪುಲಿವನಂ ಗ್ರಾಮದ ಕೈಕ್ಕೋಲರು (ನೇಕಾರರು) ಮತ್ತು ಇತರ ಕಸಬುಗಾರರು ಸಲ್ಲಿಸಬೇಕಾದ ವೃತ್ತಿ ತೆರಿಗೆಯನ್ನು ಮಹಾಪ್ರಧಾನಿ ಮಲ್ಲರಸ ಉಡೈಯರ ಕಾರ್ಯಕರ್ತನಾದ ಸಲಕ್ಕಯ ನಾಯಕ್ಕರ ಆದೇಶದ ಮೇರೆಗೆ ನಿಗದಿಗೊಳಿಸಲಾಯಿತು.[73] ಕ್ರಿ.ಶ. 1428ರಲ್ಲಿ ಯಡಗರೈತಾಯನೂರು ಗ್ರಾಮದ 'ಕಾಣಿಯಾಚಿ'ಯ ಹಕ್ಕನ್ನು ಕೈಕ್ಕೋಲರಿಗೆ, ಅವರು ಅಲ್ಲಿಯೂರಿನ 'ಊರವರಿಗೆ' ಮತ್ತು ವಯಿರಭೋಜನ ಚತುರ್ವೇದಿಮಂಗಲವಾದ ನೆರುಕ್ಕುರಂ ಗ್ರಾಮದ 'ಸಭಾ'ಕ್ಕೆ ಮೂವತ್ತು ಪಣಂಗಳ ಮೊತ್ತವನ್ನು ನೀಡಿದುದಕ್ಕೆ ಪ್ರತಿಯಾಗಿ ನೀಡಲಾಯಿತು.[74] ಕ್ರಿ.ಶ. 1439ರ ಶಾಸನವೊಂದು ತಿರುಮಾದೈವಿಳಗರೈ ಗ್ರಾಮದಲ್ಲಿ ನೆಲಸಿದ ಕೈಕ್ಕೋಲರ್ ಮತ್ತಿತರ ಕಸಬುಗಾರರ ಮೇಲೆ ವಿಧಿಸಲಾದ ತೆರಿಗೆಗಳನ್ನು ಉಲ್ಲೇಖಿಸುತ್ತದೆ.[75]

**ಊ. ರೆಡ್ಡಿಗಳು ಮತ್ತು ಒಕ್ಕಲಿಗರು :** ರಾಷ್ಟ್ರಕೂಟರು ಮತ್ತು ರೆಡ್ಡಿಗಳ ಉಗಮದಲ್ಲಿ ಸಾಮ್ಯತೆ ಕಂಡುಬರುತ್ತದೆ. ಕ್ರಿ.ಪೂ. 200ರ ಹಿಂದೆಯೇ ಈ ರೆಡ್ಡಿಗಳ ಆಳ್ವಿಕೆ ನಡೆಸಿದಂತೆ ಕಂಡುಬರುತ್ತದೆ. ಹೆಚ್ಚಾಗಿ ದಖ್ಖನ್ ಪ್ರಸ್ಥಭೂಮಿಯಲ್ಲಿ ಇವರ ಆಳಿಕೆಯ ಪ್ರಭಾವವಿತ್ತು. ರೆಡ್ಡಿ ಎಂಬ ಪದವು ರಟ್ಟ, ರಾಷ್ಟ್ರಕೂಟ, ರೆಟ್ಟಿಗಳು, ರಾಷ್ಟಿಕಾಗಳು ಮುಂತಾಗಿ ಕರೆಯಲ್ಪಟ್ಟಿದೆ.[76] ಶಾತವಾಹನರ ಕಾಲದಲ್ಲಿ ಇವರ ನಾಣ್ಯದ ಕುರುಹು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿ ಸಿಕ್ಕಿದೆ. ಚೋಳಕಾಲ (7th BC)ದ ಶಾಸನದಲ್ಲಿ ಇವರ ಸಂಪೂರ್ಣ ಇತಿಹಾಸ ನಿರೂಪಿತವಾಗಿದೆ.[77] ಎಡಗರ್ ಥ್ರಸ್ಟನ್‌ರವರು "Castes and tribes of southern India" ಎಂಬ ಕೃತಿಯಲ್ಲಿ 'ರೆಡ್ಡಿಗಳು' ಗ್ರಾಮದ ಮುಖ್ಯಸ್ಥರಾಗಿದ್ದರೆಂದು ತಿಳಿಸುತ್ತಾರೆ.[78] 1325ರಲ್ಲಿ ರೆಡ್ಡಿಗಳ ಪ್ರಾಬಲ್ಯ ಕಾಕತೀಯರ ಆಳ್ವಿಕೆಯ ಕಾಲದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಪ್ರಮುಖವಾಗಿ 'ವಿಜಯನಗರ

ಕಾಲದಲ್ಲಿ ಕರ್ನಾಟಕದ ರೆಡ್ಡಿಗಳು ಮತ್ತು ಆಂಧ್ರಪ್ರದೇಶದ ರೆಡ್ಡಿಗಳಿಗೂ ಕರಾವಳಿ ತೀರದಲ್ಲಿ ದಂಗೆಗಳಾಗುತ್ತಿದ್ದವು. ಮುಂದೆ ಇವರು ಅನೇಕ ಒಪ್ಪಂದಗಳ ಮೂಲಕ ಒಂದಾಗಿ ವೈವಾಹಿಕ ಸಂಬಂಧದೊಂದಿಗೆ ಇವರ ಸಂಬಂಧಗಳು ಮತ್ತಷ್ಟು ವೃದ್ಧಿಸಿದವು. ಇದರೊಂದಿಗೆ ಯುದ್ಧವು ಕೊನೆಗೊಂಡಿತು. ಈ ವೈವಾಹಿಕ ಒಪ್ಪಂದದ ಮೂಲಕ ಸಂಬಂಧವೇರ್ಪಡಿಸುವುದು ಶಾತವಾಹನರ ಕಾಲದಲ್ಲಿ ಕಂಡುಬರುವುದನ್ನು ಕಾಣುತ್ತೇವೆ. ಎಡಗನ್ ಥ್ರುಸ್ಟನ್ ತಿಳಿಸಿರುವಂತೆ ರೆಡ್ಡಿಗಳು ಸಾಮಾಜಿಕವಾಗಿ ಉತ್ತಮ ಹಂತದಲ್ಲಿದ್ದರು ಮತ್ತು ಸ್ವಾಭಾವಿಕವಾಗಿಯೇ ಅಲ್ಲಿನ ರಾಜರ ಆಪ್ತ ಸಂಬಂಧ ಹೊಂದಿದ್ದರೆಂದು ತಿಳಿದುಬರುತ್ತದೆ.[79] ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ ಒರಿಸ್ಸಾದ ದೊರೆ ರೆಡ್ಡಿಗಳ ಮೇಲೆ ಯುದ್ಧಕ್ಕೆ ಅಣಿಯಾದಾಗ ವಿಜಯನಗರದ ದೊರೆ 2ನೇ ದೇವರಾಯನು ರೆಡ್ಡಿಗಳ ಜೊತೆ ಒಪ್ಪಂದ ಮಾಡಿಕೊಂಡಿದ್ದನ್ನು ಥ್ರುಸ್ಟನ್‌ರವರು ವಿವರಿಸಿದ್ದಾರೆ. ಹೀಗೆ ರೆಡ್ಡಿಗಳು ಸಮಾಜದಲ್ಲಿ ತನ್ನದೇ ಆದ ಒಡಂಬಡಿಕೆಯ ಜೀವನದ ಜೊತೆಗೆ ವಿಜಯನಗರದಲ್ಲಿ ಉತ್ತಮ ಸ್ಥಿತಿಯಲ್ಲಿದ್ದರೆಂದು ತಿಳಿಯಬಹುದಾಗಿದೆ. ಇದಕ್ಕೆ ರೆಡ್ಡಿಗಳಿಂದ ನಿರ್ಮಾಣವಾದ ವೆಲ್ಲೂರು ಕೋಟೆ ಜ್ವಲಂತ ಉದಾಹರಣೆಯಾಗಿದೆ.

ಸಾಮ್ರಾಜ್ಯದ ತೆಲುಗು ಮತ್ತು ತಮಿಳು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕೃಷಿಕ ವರ್ಗವು 'ರೆಡ್ಡಿ' ಎಂದು ಪರಿಚಿತವಾಗಿದ್ದರೆ ಕನ್ನಡ ಮಾತನಾಡುವ ಪ್ರದೇಶದಲ್ಲಿ ಅದು ಒಕ್ಕಲಿಗ ಅಥವಾ 'ವೊಕ್ಕಲಿಗ' ಎಂಬ ಹೆಸರಿನಿಂದ ಪರಿಚಿತವಾಗಿತ್ತು. ರೆಡ್ಡಿಗಳು ಹಾಗೂ ವೊಕ್ಕಲಿಗರು ಜನಸಂಖ್ಯೆಯ ಪ್ರಧಾನ ಭಾಗವಾಗಿದ್ದು ಗ್ರಾಮೀಣ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿದ್ದರು. ಕರ್ನಾಟಕದಲ್ಲಿ ವೊಕ್ಕಲಿಗರ ಮುಖ್ಯಸ್ಥನನ್ನು 'ಗೌಡ' ಅಥವಾ 'ನಾಡಗೌಡ' ಎಂದು ಕರೆಯಲಾಗುತ್ತಿತ್ತು. ಒಕ್ಕಲಿಗರು ತಮ್ಮ ಮುಖ್ಯಸ್ಥನ ಆಡಳಿತ ಅಥವಾ ಗೌಡಿಕೆಯ ವ್ಯಾಪ್ತಿಗೊಳಪಡುತ್ತಿದ್ದುದರಿಂದ ಅವರನ್ನು ಸಾಮಾನ್ಯವಾಗಿ 'ಗೌಡ'ರೆಂದು ಕರೆಯಲಾಗುತ್ತಿತ್ತು. ಆಂಧ್ರ ಮತ್ತು ತಮಿಳು ಪ್ರದೇಶಗಳಲ್ಲಿ ರೆಡ್ಡಿಗಳು ಅಥವಾ ಗ್ರಾಮಗಳ ಕೃಷಿಕರು 'ರೆಡ್ಡಿ' ಎಂದು ಕರೆಯಲಾದ ಮುಖ್ಯಸ್ಥನ ಕೈಕೆಳಗೆ ಬರುತ್ತಿದ್ದರು. ಕೃಷಿಕ ಸಮುದಾಯದ ಮುಖ್ಯಸ್ಥನಾದ 'ರೆಡ್ಡಿ' ಅಥವಾ 'ರೆಡ್ಡಿ'ಯು ಸಾಮಾನ್ಯವಾಗಿ ಗ್ರಾಮದ ಮುಖ್ಯಸ್ಥನೂ ಅಲ್ಲಿನ ವ್ಯವಹಾರಗಳ ಅಧೀಕ್ಷಕನೂ ಆಗಿರುತ್ತಿದ್ದನು. ಆತನನ್ನು 'ಗ್ರಾಮಕಾರ'ನೆಂದೂ ಕರೆಯಲಾಗುತ್ತಿತ್ತು. ಈ ಶಬ್ದದಿಂದ 'ಗೌಡ' ಪದ ವ್ಯುತ್ಪತ್ತಿಯಾಯಿತೆನ್ನುವುದು ಸ್ಪಷ್ಟ.[80]

ಪ್ರೌಢದೇವರಾಯನ ಕಾಲದಿಂದ ರೆಡ್ಡಿಗಳಿಗೆ ಪ್ರಾಮುಖ್ಯ ಬಂದಂತೆ ತೋರುತ್ತದೆ.[81] ಸಾಮ್ರಾಜ್ಯದಲ್ಲಿ ಅವರಿಗೆ ಗಣನೀಯವಾದ ಪ್ರಭಾವವಿತ್ತು. ರೆಡ್ಡಿ ಪ್ರಭುವಾದ ಪಂಥ ಮೈಲಾರನು ತನ್ನ ಜಾಣ್ಮೆ ಕೌಶಲ ಹಾಗೂ ಪರಾಕ್ರಮಗಳಿಂದ ದುಷ್ಟ ಅರಸರನ್ನು ದಮನ ಮಾಡುವ ಮೂಲಕ ಮತ್ತು ಗೌರವಾದರಗಳನ್ನು ಸಲ್ಲಿಸಿ ಹಾಗೂ ಮಹಾ ಕಾಣಿಕೆಗಳನ್ನು ನೀಡುವುದರ ಮೂಲಕ ಕೂಡ ತನ್ನ ಒಡೆಯನನ್ನು ಸಂಪ್ರೀತಗೊಳಿಸಿದಂತೆ ತೋರುತ್ತದೆ.[82] ಸಾಲೆತೊರೆಯವರ ಪ್ರಕಾರ, ದಕ್ಷಿಣದಲ್ಲಿ ನೆಲಸುನಾಡನ್ನು ಸ್ಥಾಪಿಸುವ ಮಹಾನ್ ಪ್ರಯತ್ನದ ಉದ್ದೇಶಕ್ಕೆ ರೆಡ್ಡಿಗಳು ನೆರವಾಗಿದ್ದಿರಬಹುದಾದ ಸಾಧ್ಯತೆಯುಂಟು; ತಿರುಚಿನಾಪಳ್ಳಿ, ಕೊಯಮುತ್ತೂರು ಹಾಗೂ ಸೇಲಂ ಜಿಲ್ಲೆಗಳಲ್ಲಿ ಅವರ ಉಪಸ್ಥಿತಿಯನ್ನು ಇದು ವಿವರಿಸಬಹುದು.[83]

**೩ು. ಒಕ್ಕಲಿಗರು :** ರೈತಾಪಿ ಜಾತಿಗಳನ್ನು ಒಕ್ಕಲು ಮತ್ತು ಗೌಡರು, ರೆಡ್ಡಿಗಳು ಎಂದು ಕರೆಯುತ್ತಿದ್ದರು. ಇವರು ತಮ್ಮ ಕಠಿಣ ಶ್ರಮ ಮತ್ತು ಬಂಡವಾಳಗಳಿಂದ ಹೊಸ ವಸತಿಗಳ ತಳಹದಿ ಹಾಕಿ, ಸಾಗುವಳಿ ಭೂಮಿಯನ್ನು ವಿಸ್ತರಿಸಿದರು. ಆದರಿಂದ ಅವರಿಗೂ ಸರಕಾರಕ್ಕೂ ಪ್ರಯೋಜನವಾಗುತ್ತಿತ್ತು. ಸರಕಾರಕ್ಕೆ ವರಮಾನ ಹೆಚ್ಚುತ್ತಿತ್ತು. ರೈತರಿಗೆ ಭೂಮಿಯ ಮೇಲೆ ಪೂರ್ಣ ಹಕ್ಕಿನ ಒಡೆತನ ಲಭ್ಯವಾಗುತ್ತಿತ್ತು. ಆದರೆ ಬ್ರಾಹ್ಮಣರಿಗೆ ಧಾರ್ಮಿಕ ನೆಲೆಗಳನ್ನು ರೂಪಿಸಿದಾಗ, ಸರಕಾರಕ್ಕೆ ತೆರಿಗೆಗಳ ವಿನಾಯಿತಿ ಮೊದಲಾದ ಕ್ರಮಗಳಿಂದಾಗಿ ಅಷ್ಟರಮಟ್ಟಿಗೆ ವರಮಾನ ನಷ್ಟವಾಗುತ್ತಿತ್ತು. ಜೊತೆಗೆ ಮಧ್ಯವರ್ತಿಗಳ ಒಂದು ವರ್ಗವು ಸೃಷ್ಟಿಯಾಗುವಂತಾಯಿತು. ಹೀಗೆ ಬ್ರಾಹ್ಮಣೇತರ, ಧಾರ್ಮಿಕರಲ್ಲದ ಕೃಷಿ ನೆಲೆಗಳು ಉದಯವು ಸಾಮಾಜಿಕ ವಿನ್ಯಾಸವನ್ನು ತೋರಿಸಿತ್ತು. ಅದುವರೆಗೆ ಯಾರ ಬೇಡಿಕೆಯೂ ಇದ್ದಿರದ ಭೂಮಿಯ ಮೇಲೆ ನಿಯಂತ್ರಣವನ್ನು ಸ್ಥಾಪಿಸಿತು. ಬ್ರಾಹ್ಮಣ ಮತ್ತು ಧಾರ್ಮಿಕ ನೆಲೆಗಳು ದೂರದ ಪ್ರದೇಶಗಳಲ್ಲಿ ಆರ್ಯೀಕರಣ ಪರಿಕಲ್ಪನೆಗಳನ್ನು ವಿಸ್ತರಿಸಲು ಸಹಾಯ ಮಾಡಿದುವು.

ಅಂತಹ ನೆಲೆಗಳ ರಚನೆಗೆ ಒಕ್ಕಲಿಗರು ಮತ್ತು ಗೌಡರು ಮುಖ್ಯ ಜವಾಬ್ದಾರರು. ಸಾಮಾನ್ಯವಾಗಿ ಈ ವಸತಿಗಳ ಗುಂಪನ್ನು ಒಕ್ಕಲು ಎಂದು ಕರೆಯಲಾಗುತ್ತಿತ್ತು. ಅನೇಕವೇಳೆ ಅದಕ್ಕೊಂದು ಸಂಖ್ಯೆ ಇರುತ್ತಿತ್ತು. ಅದು ಗ್ರಾಮಪಂಚಾಯಿತಿಯಲ್ಲಿ ಪ್ರತಿನಿಧಿಸುವ ರೈತ ಕುಟುಂಬಗಳ ಸಂಖ್ಯೆಯನ್ನು ಸೂಚಿಸುತ್ತಿದ್ದಿತು. ಉದಾಹರಣೆಗೆ ಚಕ್ಕರೆಯ ಊರು - ಮೂವತ್ತು ಒಕ್ಕಲು. ಅಂತಹ ವಸತಿಗಳ ಉದಯವು ಕೆಳಕಂಡಂತೆ ಸರ್ವಸಾಮಾನ್ಯವಾದ ಸ್ವರೂಪವನ್ನು ತೋರಿಸುತ್ತಿತ್ತು; ಮೊದಲನೆಯ ಹಂತ-ಕಾಡನ್ನು ಕಡಿಯುವುದು, ನೆಲವನ್ನು ಹಸನುಗೊಳಿಸಿ ಉಳುಮೆಗೆ ಯೋಗ್ಯವಾಗುವಂತೆ ಮಾಡುವುದು; ಎರಡನೆಯ ಹಂತ - ಒಂದು ನೀರಾವರಿ ಕೆರೆಯನ್ನು ಕಟ್ಟಿಸುವುದು; ಮೂರನೆಯ ಹಂತ-ಆರ್ಯೀಕರಣದ ಅಂಗವಾಗಿ ಒಂದು ದೇವಾಲಯವನ್ನು ಕಟ್ಟಿಸುವುದು. ನೆಲೆಗಳನ್ನು ಪವಿತ್ರಗೊಳಿಸುವುದು. ಅನಂತರ ಬ್ರಾಹ್ಮಣರು ಮತ್ತು ಗುರುಗಳನ್ನು ಆಹ್ವಾನಿಸಲಾಗುತ್ತಿತ್ತು. ಅವರು ಬಂದು ಸೂಕ್ತ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ವ್ಯಾಪಕ ಪ್ರಮಾಣದಲ್ಲಿ ನೀರಾವರಿ ಕಾರ್ಯಗಳು ನಡೆದಿದ್ದರೂ ಮಳೆ ಆಧಾರಿತ ಕೃಷಿಯ ಒಂದು ಜೂಜಿನಂತಿರುತ್ತಿತ್ತು. ಮಳೆ ವಿಫಲವಾದರೆ, ಕ್ಷಾಮವುಂಟಾಗುತ್ತಿತ್ತು. ಹಲವಾರು ಕಾರಣಗಳಿಂದ ಈ ಪರಿಸ್ಥಿತಿ ನಿರ್ಮಾಣವಾಗಬಹುದು. ಬರ, ನೆರೆ, ಬೆಳೆಯ ವಿಫಲತೆ, ಪ್ಲೇಗು ಮೊದಲಾದ ರೋಗಗಳು, ಇತ್ಯಾದಿ ರಟ್ಟಮತವು ಕ್ಷಾಮಕ್ಕೆ ಹಲವು ಕಾರಣಗಳನ್ನು ಹೇಳುತ್ತದೆ. (ಬರಬರುವಿಕೆ) ಕ್ಷಾಮ ಬಂದುದನ್ನು ಹೇಳುವ ಎರಡು ಶಾಸನಗಳು ದೊರಕಿವೆ. ಚಿತ್ರದುರ್ಗ ಜಿಲ್ಲೆ ದಾವಣಗೆರೆಯ ೧೪೨೪ರ ಒಂದು ಶಾಸನದಿಂದ, ಹರಿದ್ರಾನದಿಗೆ ಎರಡನೆಯ ದೇವರಾಯನು ೧೪೧೦ರಲ್ಲಿ ಕಟ್ಟಿಸಿದ ಅಣೆಕಟ್ಟೆಯಲ್ಲಿ ಬಿರುಕುಂಟಾಗಿ ಇತರ ಜೀವನೋಪಾಯವೆಲ್ಲ ಹಾನಿಗೊಳಗಾಗಿ ಬಹಳ ಕಷ್ಟವುಂಟಾಯಿತು. ಆಮೇಲೆ ಆ ಅಣೆಕಟ್ಟನ್ನು ಒಬ್ಬ ಅಧಿಕಾರಿಯು ದುರಸ್ತುಪಡಿಸಿದನು. ಜನರಿಗೆ ಬರಬಹುದಾದ ಕಷ್ಟವನ್ನು ಪರಿಹರಿಸಲು ಸರಕಾರವು ಎಷ್ಟು

ಜವಾಬ್ದಾರಿ ವಹಿಸುತ್ತಿದ್ದಿತು ಎಂಬುದನ್ನು ಇಂದು ಸೂಚಿಸುತ್ತದೆ. ಕೆರೆಯು ಎರಡೋ ಮೂರೋ ಸಾರಿ ಒಡೆದು ಹೋದರೆ ಬ್ರಾಹ್ಮಣರು ದೇವತೆಗಳ ತೃಪ್ತರ್ಥವಾಗಿ ಮನುಷ್ಯ ಅಥವಾ ಪ್ರಾಣಿಬಲಿ ಕೊಡಲು ಹೇಳುತ್ತಿದ್ದರು. ಅದರಂತೆ ನಡೆಸಲಾಗುತ್ತಿತ್ತು ಎಂದು ಪೇಸ್ ಹೇಳುತ್ತಾನೆ.[84]

ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು ಕೂಲಿಕೆಲಸಕಾರರನ್ನೂ ಜೀತದಾಳುಗಳನ್ನೂ ನೇಮಿಸಿಕೊಳ್ಳುತ್ತಿದ್ದರು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗಳಿಗೆ ಸೇರಿದವರಾಗಿರುತ್ತಿದ್ದರು. ಜೀತದಾಳುಗಳನ್ನು ಶಾಸನಗಳಲ್ಲಿ 'ಹೊಲೆಯಲು' ಮತ್ತು 'ಮುಲದ್ದು' ಎಂದು ಕರೆಯಲಾಗುತ್ತಿತ್ತು. ಇವರು ಸಾಮಾನ್ಯವಾಗಿ ಅಂತ್ಯಜ ಅಥವಾ ಅಸ್ಪೃಶ್ಯ ಜಾತಿಗಳಿಗೆ ಸೇರಿರುತ್ತಿದ್ದರು.

### ಜೀತಗಾರಿಕೆ ಚಾಲ್ತಿಯಲ್ಲಿದ್ದ ವಿವಿಧ ಸ್ಥಳಗಳು ಹೀಗಿವೆ

| ತಾಲೂಕು | ಜಿಲ್ಲೆ | ವರ್ಷ | ಆಕರ |
|---|---|---|---|
| ಕುಂದಾಪುರ | ದಕ್ಷಿಣ ಕನ್ನಡ | ಕ್ರಿ.ಶ. ೧೩೭೭ | ಸೌ.ಇ.ಇ.೯-೨ |
| ಮಳವಳ್ಳಿ | ಮಂಡ್ಯ | ೧೩೮೮ | ಎ.ಕ.೩.ಎಂ.ಎಚ್.೨೦ |
| ಕೊಪ್ಪ | ಚಿಕ್ಕಮಗಳೂರು | ೧೪೦೩ | ಎ.ಕ.೬,ಕೆಪಿ ೫,೧ |
| ಶೃಂಗೇರಿ | ಚಿಕ್ಕಮಗಳೂರು | ೧೪೦೮ | ಎ.ಕ.೬,ಎಸ್.ಆರ್.೨೫ |
| ಬಾಗೇಪಲ್ಲಿ | ಕೋಲಾರ | ೧೪೩೦ | ಎ.ಕ.೧೦,ಬಿ.ಪಿ. ೭೨ |
| ಚಾಮರಾಜನಗರ | ಮೈಸೂರು | ೧೫೪೯ | ಎ.ಕ.೪,ಸಿ.ಎನ್.೩೮ |

ಜೀತಗಾರಿಕೆಯು ರೂಪುಗೊಳ್ಳುವುದಕ್ಕೆ ಎರಡು ಬಗೆಯ ಶಕ್ತಿಗಳು ಕಾರಣ ಎಂದು ಶಾಸನಾಧಾರಗಳು ಸೂಚಿಸುತ್ತವೆ. ಮೊದಲನೆಯದಾಗಿ ಹಲವು ಬಗೆಯ ಭೂ ಒಡೆತನವಿದ್ದುದು, ಉಂಬಳಿ, ಕೊಡಗಿ, ಮಾನ್ಯ, ಸರ್ವಮಾನ್ಯ, ಅಗ್ರಹಾರ, ಬ್ರಹ್ಮದಾಯ, ದೇವದಾಯ ಮತ್ತು ಮಾಥಾಪುರ ಎಂಬುದಾಗಿ. ಅರಸರಿಗೂ ಸ್ಥಳದಲ್ಲಿರದ ಜಮೀನುದಾರರಿಗೂ ಭೂಮಿಯ ಒದಗಣೆಗಿಂತಲೂ ಕೂಲಿಯ ಒದಗಣೆಯನ್ನು ಕುರಿತು ಹೆಚ್ಚಿನ ಕಾತರತೆಯಿದ್ದುದು ಎರಡನೆಯ ಕಾರಣ.[85]

## 2.6. ಕೃಷಿಯಲ್ಲಿ ಜಾತಿಗಳು

ಕೃಷಿಯಲ್ಲಿ ನಿರತವಾಗಿದ್ದ ಮುಖ್ಯ ಜಾತಿಗಳೆಂದರೆ, ಶಾಸನಗಳಿಂದ ಕಂಡುಬರುವಂತೆ, ಶೂದ್ರರು, ಗೌಡರು ಅಥವಾ ಒಕ್ಕಲಿಗರು ಮತ್ತು ಹೊಲೆಯರು. ಶೂದ್ರ ಎಂಬ ವರ್ಗದಲ್ಲಿ ಮೇಲು ಮತ್ತು ಕೆಳ ಉಪಜಾತಿಗಳು ಹಲವು. ಕೃಷಿ ಅವರ ಪ್ರಧಾನ ವೃತ್ತಿ. ಒಕ್ಕಲಿಗರು ಅಥವಾ ಗೌಡರು ಸಾಮಾನ್ಯವಾಗಿ ನೆಲವನ್ನು

ಉಳುತ್ತಿದ್ದರು. ಕೃಷಿ ಅರ್ಥವ್ಯವಸ್ಥೆಗೆ ಅವರು ಬೆನ್ನೆಲುಬು. ದೇಶದ ಏಳಿಗೆಯು ಬಹುಮಟ್ಟಿಗೆ ಅವರನ್ನು ಅವಲಂಬಿಸಿದ್ದಿತು. ಕರ್ನಾಟಕದ ಅನೇಕ ಪಾಳೆಯಪಟ್ಟುಗಳ ಸ್ಥಾಪಕರು ಕೃಷಿಕರಾಗಿದ್ದರು ಎನ್ನುವುದು ಸ್ವಾರಸ್ಯವಾದ ಸಂಗತಿಯಾಗಿದೆ. ಹೊಲೆಯ ಅಥವಾ ಪರಿಯರು ಕರ್ನಾಟಕದಲ್ಲಿ ಕೃಷಿ ಕಾರ್ಮಿಕರಲ್ಲಿ ಹೆಚ್ಚಿನವರಾಗಿದ್ದರು. ಅವರು ಸಾಮಾನ್ಯವಾಗಿ ಮಣ್ಣಿನೊಂದಿಗೆ ಅತಿ ನಿಕಟ ಸಂಪರ್ಕ ಹೊಂದಿದ್ದರು. ಇದರ ಜೊತೆಗೆ ಕೂಲಿ ಕೊಟ್ಟು ನೇಮಿಸಿಕೊಳ್ಳುತತಿದ್ದ ಕಾರ್ಮಿಕರನ್ನೂ ಶಾಸನಗಳು ಉಲ್ಲೇಖಿಸುತ್ತವೆ.

ಭೂಮಾಲೀಕತ್ವದ ಸಮಸ್ಯೆ ಎಂದಿನಿಂದಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯದ ವಿಷವಾಗಿಯೇ ಬಂದಿದೆ. ಈ ಬಗೆಗೆ ಎರಡು ಅತಿರೇಕದ ಅಭಿಪ್ರಾಯಗಳು ಮಂಡಿತವಾಗಿವೆ. ವಿನ್ಸೆಂಟ್ ಸ್ಮಿತ್ ಮೊದಲಾದ ಬ್ರಿಟಿಷ್ ಚರಿತ್ರಕಾರರು, ರಾಜನೇ ನೆಲದ ಒಡೆಯ, ಏಕೈಕ ಮಾಲೀಕ ಎಂದು ಭಾವಿಸುತ್ತಾರೆ. ಇದಕ್ಕೆ ಎದುರಾಗಿ, ಕೆ.ಪಿ.ಜಯಸ್ವಾಲ್, ಯು.ಎನ್.ಘೋಷಾಲ್ ಮೊದಲಾದ ಭಾರತೀಯ ವಿದ್ವಾಂಸರಾಗಿ ಖಾಸಗಿ ಒಡೆತನದ ಪರವಾಗಿ ವಾದ ಮಾಡುತ್ತಾರೆ. ಆದರೆ ಆ ಕಾಲದ ಶಾಸನಗಳು ಮತ್ತು ಸಾಹಿತ್ಯಕ ಆಕರಗಳು ಸರಕಾರದ ಒಡೆತನವೂ ಖಾಸಗಿ ಒಡೆತನವೂ ಜೊತೆಜೊತೆಯಾಗಿ ಇದ್ದುದನ್ನು ದೃಢಪಡಿಸುತ್ತವೆ. ಸಂಪೂರ್ಣವಾಗಿ ರಾಜನ ಒಡೆತನ ಎಂಬುದಿರಲಿಲ್ಲ ಅಥವಾ ಸಂಪೂರ್ಣವಾಗಿ ಖಾಸಗಿ ಒಡೆತನ ಎಂಬುದಿರಲಿಲ್ಲ. ಆ ಕಾಲದ ಕರ್ನಾಟಕದಲ್ಲಿದ್ದ ಪರಿಸ್ಥಿತಿ ಅದು. ರಾಜ್ಯದ ಒಡೆತನದ ಕೆಲವು ಅಂಶಗಳನ್ನು ಇಲ್ಲಿ ಪರಿಶೀಲಿಸಲು ಪ್ರಯತ್ನ ಮಾಡಿದೆ.

ನೆಲದ ಮೇಲೆ ಒಡೆತನವಿರುವುದೆಂದರೆ ಮುಖ್ಯವಾಗಿ ತನಗೆ ಇಚ್ಛೆ ಬಂದಂತೆ ಅದನ್ನು ವಿನಿಯೋಗ ಮಾಡುವ ಹಕ್ಕು ಇರಬೇಕು. ಅಂದರೆ ನೆಲವನ್ನು ಮಾರಿಯೋ, ಬೇರಾವುದೇ ರೀತಿಯಲ್ಲಿಯೋ ಪರಭಾರೆ ಮಾಡುವುದು ಒಡೆತನದ ಲಕ್ಷಣವಾಗಿರುತ್ತದೆ. ಮಧ್ಯಕಾಲೀನ ಬಹುತೇಕ ಶಾಸನಗಳಲ್ಲಿ ರಾಜರು ಭೂಮಿಯನ್ನು ಪರಭಾರೆ ಮಾಡಿದ ವಿಷಯವು ಹೇರಳವಾಗಿ ಬರುತ್ತದೆ. ಉಡುಗೊರೆ ಅಥವಾ ಕಾಣಿಕೆಯ ರೂಪದಲ್ಲಿ ನೆಲವನ್ನು ರಾಜರು ವಹಿಸಿಕೊಟ್ಟಾಗ ಪೂರ್ಣ ಒಡೆತನದೊಂದಿಗೆ ಕೊಡುತ್ತಿದ್ದರು. ಪಡೆದವನಿಗೆ ರಾಜನಿಂದ ಪಡೆದ ಆ ಭೂಮಿಯನ್ನು ಮಾರುವ, ಅಡಮಾನ ಮಾಡುವ ಅಥವಾ ಬೇರೊಬ್ಬನಿಗೆ ಕೊಟ್ಟು ಬಿಡುವ ಪೂರ್ತಿ ಅಧಿಕಾರವಿರುತ್ತಿದ್ದಿತು. ಈಗಾಗಲೆ ಜನರು ವಾಸವಾಗಿರುವ, ಆಕ್ರಮಿತ ಗ್ರಾಮವನ್ನು ಹೀಗೆ ಪೂರ್ಣ ಒಡೆತನದೊಂದಿಗೆ ರಾಜನು ದಾನ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಆಗ, ಅಲ್ಲಿ ಈಗಾಗಲೆ ಇದ್ದ ಖಾಸಗಿ ಒಡೆತನವನ್ನು ಭಂಗಗೊಳಿಸಿದಂತಾಗುತ್ತಿತ್ತು. ರಾಜನು ಒಂದು ಗ್ರಾಮವನ್ನು ದಾನಮಾಡಿದರೆ ಅದಕ್ಕೆ ಎರಡು ದಾರಿಗಳಿರುತ್ತಿದ್ದವು. ೧) ರಾಜನು ಅಲ್ಲಿಯ ಖಾಸಗಿ ಆಸ್ತಿಗಳನ್ನೆಲ್ಲ ತಾನು ಕೊಂಡುಕೊಂಡು ಆಮೇಲೆ ಪೂರ್ಣ ಒಡೆತನದ ಹಕ್ಕಿನೊಂದಿಗೆ ದಾನಮಾಡುತ್ತಿದ್ದನು. ವಿಘ್ನೇಶ್ವರನು ತನ್ನ ಮಿತಾಕ್ಷರದಲ್ಲಿ ರಾಜನು ಯಾವುದೇ ನೆಲವನ್ನು ಯಾರಿಗಾದರೂ ದಾನ ಮಾಡಲು ಇಚ್ಛಿಸಿದರೆ, ಅದೇನಾದರೂ ಖಾಸಗಿ ಒಡೆತನದಲ್ಲಿದ್ದರೆ ಮೊದಲು ಅದನ್ನು ಅವನು ಬೆಲೆ ಕೊಟ್ಟು ಕೊಂಡುಕೊಳ್ಳಬೇಕು ಎಂದು ಹೇಳುತ್ತಾನೆ. "ಭಾರತದ ದೇಶೀಯ

ಕಾನೂನು ಸಾಮಾನ್ಯವಾಗಿ ಕೃಷಿ ಭೂಮಿಯೆಲ್ಲವೂ ರಾಜನ ಸೊತ್ತು ಎಂಬುದಾಗಿ ಪರಿಗಣಿಸಿದೆ" ಎಂಬ ವಿನ್ಸೆಂಟ್ ಸ್ಮಿತ್‌ನ ಅಭಿಪ್ರಾಯವನ್ನು ಪರಿಷ್ಕರಿಸಬೇಕಾಗಿದೆ. ಮಧ್ಯಯುಗೀನ ಕರ್ನಾಟಕದ ಅನೇಕ ಶಾಸನಗಳು ವಿಘ್ನೇಶ್ವರನ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಅನೇಕಾನೇಕ ಸಂದರ್ಭಗಳಲ್ಲಿ ರಾಜರು ನೆಲವನ್ನು ಕೊಂಡುಕೊಂಡು ಆಮೇಲೆ ಅದನ್ನು ದಾನಮಾಡುತ್ತಿದ್ದರು.

೨) ಎರಡನೆಯ ಸಾಧ್ಯತೆ, ರಾಜರು ಹೊಸದಾಗಿ ಗ್ರಾಮಗಳನ್ನು ಸ್ಥಾಪಿಸಿ ಅಲ್ಲಿ ವಾಸಮಾಡಲು ಸಮುದಾಯಗಳಿಗೆ ದಾನ ಮಾಡುತ್ತಿದ್ದರು. ಬ್ರಾಹ್ಮಣ ಕಾಲೋನಿಗಳನ್ನು ಅಥವಾ ಅಗ್ರಹಾರಗಳನ್ನು ಸ್ಥಾಪಿಸುವ ಸಲುವಾಗಿ ರಾಜರು ಹೊಸದಾಗಿ ಹಳ್ಳಿಗಳನ್ನು ನಿರ್ಮಿಸುತ್ತಿದ್ದರು. ಸಿರಾದ ೧೪೦೩ರ ಒಂದು ಶಾಸನವು, ಕಾಡನ್ನು ಸವರಿ ಸ್ವಚ್ಛಗೊಳಿಸಿದ ನಂತರ ಅಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿರುವುದನ್ನು ಕುರಿತು ಹೇಳುತ್ತದೆ. ಇದರಿಂದ ಹೀಗೆ ನಿರ್ಣಯಿಸಬಹುದು. "ಅನಾಕ್ರಮಿತ, ಕೃಷಿ ಸಾಧ್ಯ ಭೂಮಿಯು" ಸರಕಾರಕ್ಕೆ ಸೇರಿದ್ದು, ಅಂತಹ ಸಂದರ್ಭದಲ್ಲಿ ಖಾಸಗಿ ಒಡೆತನ ಯಾವುದೂ ಇರುವುದಿಲ್ಲವಾದ್ದರಿಂದ ಪೂರ್ಣ ಒಡೆತನದ ಹಕ್ಕಿನೊಂದಿಗೆ ಅದನ್ನು ದಾನಮಾಡಬಹುದಾಗಿತ್ತು.

ಹೀಗೆ "ಅನಾಕ್ರಮಿತ ಕೃಷಿ ಸಾಧ್ಯ ಬೀಳು ಭೂಮಿ"ಯ ಜೊತೆಗೆ, ತೆರಿಗೆ ಕೊಡದ ಅಥವಾ ರಾಜದ್ರೋಹದ ಅಥವಾ ಬೇರಾವುದೋ ಕಾರಣದಿಂದ ಮುಟ್ಟುಗೋಲು ಹಾಕಿಕೊಂಡ ಭೂಮಿಯ ಒಡೆತನವೂ ರಾಜನಿಗೆ ಸೇರಿರುತ್ತಿದ್ದಿತು. ಯಾವುದೋ ಅಪರಾಧಕ್ಕಾಗಿ ಒಬ್ಬನನ್ನು ಗಡೀಪಾರು ಮಾಡಿದರೆ, ಅವನು ಜಾತಿ ಭ್ರಷ್ಟನಾದರೆ, ಅವನ ಆಸ್ತಿಯೆಲ್ಲವೂ ಸರಕಾರಕ್ಕೆ ಸೇರಿಹೋಗುತ್ತಿತ್ತು. ಹೀಗೆ ಭೂಮಾಲೀಕರಾಗಿ ಅದರ ನಿಯಂತ್ರಣದಲ್ಲಿ ಬಹು ವಿಶಾಲವಾದ ಹಿಡುವಳಿ ಇರುತ್ತಿದ್ದಿತು. ಇವು ಬ್ರಿಟಿಷ್ ದೊರೆಗಳ ಡೆಮೆನ್ಸ್ (Demense) ನೆಲವನ್ನು ಹೋಲುತ್ತಿದ್ದುವು. ರಾಜರಿಗೆ ಸೇರಿದ್ದ ಗ್ರಾಮಗಳನ್ನು ಭಂಡಾರ ಗ್ರಾಮಗಳು ಅಥವಾ ರಾಜಧನತ್ವಕ್ಕೆ ಸೇರಿದ ಗ್ರಾಮಗಳು ಎಂದು ಕರೆಯುತ್ತಿದ್ದರು. ಇಂತಹ ಹಳ್ಳಿಗಳ ಮೇಲೆ ರಾಜರಿಗೆ ಸಂಪೂರ್ಣವೂ ಕೊನೆಯೇ ಇಲ್ಲದ್ದೂ ಆದ ಒಡೆತನ ಇರುತ್ತಿದ್ದಿತು. ಯಾವುದೇ ಖಾಸಗಿ ಒಡೆತನಕ್ಕೆ ತೊಂದರೆಯುಂಟಾಗುವ ಸಂದರ್ಭವೇ ಇಲ್ಲದೆ ಅವರು ಆ ಹಳ್ಳಿಯನ್ನು ತಮಗೆ ಇಚ್ಛೆಬಂದಂತೆ ವಿನಿಯೋಗಪಡಿಸಿಕೊಳ್ಳಬಹುದಾಗಿತ್ತು. ಅಂತಹ ನೆಲದ ಮೇಲೆ ಹಿಂದಿನ ಹಕ್ಕು ಯಾವುದೂ ಇರುತ್ತಿರಲಿಲ್ಲ.

ರಾಜನು ಕೊಂಡುಕೊಳ್ಳುವ ಯಾವ ಪ್ರಸ್ತಾಪವೂ ಇಲ್ಲದೆಯೇ, ಬೇಸಾಯದಲ್ಲಿ ಹಳ್ಳಿಗಳನ್ನು ಪರಭಾರೆ ಮಾಡಿರುವುದನ್ನು ಹೇಳುವ ಅನೇಕ ಶಾಸನಗಳಿವೆ. ಅಂತಹ ಸಂದರ್ಭದಲ್ಲಿ ಸರಕಾರವು ಅನುಭೋಗಿಗೆ ತನ್ನ ಹಕ್ಕುಗಳನ್ನು ಪ್ರಧಾನ ಮಾಡುತ್ತಿತ್ತು. ಖಾಸಗಿ ಸೊತ್ತುಗಳ ಮೇಲೆ ರಾಜರಿಗಿದ್ದ ಹಕ್ಕೆಂದರೆ, ಜಮೀನಿನ ಉತ್ಪನ್ನದ ರಾಜಭಾಗವನ್ನು ಪಡೆಯುವ ಹಕ್ಕು, ಇತರ ಸಲ್ಲಿಕೆಗಳನ್ನು, ನಿರ್ದಿಷ್ಟಪಡಿಸಿದ್ದರೆ, ಕೂಡ ದಾನ ಮಾಡಲಾಗುತ್ತಿತ್ತು. ವಿಜಯನಗರದ ರಾಜ ಹರಿಹರನು ಒಂದು ಭೂಮಿಯನ್ನು ದಾನ ಮಾಡಿದಾಗ, ಆ ಹಳ್ಳಿಯಲ್ಲಿ ಇನ್ನು ಮುಂದೆ ಯಾರು ಪಾವತಿಮಾಡುವ ಕಂದಾಯವನ್ನು ಅನುಭೋಗಿಗೆ

ಹಸ್ತಾಂತರಿಸಬೇಕಾಗುವುದೋ ಅಂತಹ ಜಮೀನುದಾರರ ಪಟ್ಟಿ ತಯಾರಿಸಬೇಕೆಂದು ಸ್ಥಳೀಯ ಅಧಿಕಾರಿಗಳನ್ನು ಕೇಳಿದನು. ಅಂತಹ ಮಾಲೀಕರ ಹೆಸರುಗಳನ್ನು ಶಾಸನವು ಪಟ್ಟಿ ಮಾಡುತ್ತದೆ. ಮೊದಲು ಸರಕಾರಕ್ಕೆ ಕಂದಾಯ ಪಾವತಿ ಮಾಡುತ್ತಿದ್ದ ಅವರು ಈ ದಾನದ ಅನಂತರ ಅದನ್ನು ಸ್ವೀಕರಿಸಿದ ಅನುಭೋಗಿಗೆ ಪಾವತಿ ಮಾಡಬೇಕಾಗಿತ್ತು. ಇಲ್ಲಿ ತೆರಿಗೆ ಸಂಗ್ರಹಿಸುವ ಸರಕಾರದ ಹಕ್ಕನ್ನು ಅನುಭೋಗಿಗೆ ವರ್ಗಾಯಿಸಿದಂತಾಯಿತೇ ಹೊರತು ಒಡೆತನವನ್ನಲ್ಲ.

ಖಾಸಗಿ ಭೂಮಿಯನ್ನು ಪರಭಾರೆ ಮಾಡುವುದಕ್ಕೆ ಮೊದಲು ಸರಕಾರದ ಅಥವಾ ರಾಜನ ಅನುಮತಿ ಪಡೆಯುವುದು ಅಗತ್ಯವೆ ಎಂಬ ಪ್ರಶ್ನೆಯನ್ನು ಪರಿಶೀಲಿಸುವುದು ಈ ಸಂದರ್ಭದಲ್ಲಿ ಅನುಚಿತವಾಗಲಾರದು. ವಿಘ್ನೇಶ್ವರನು ಅಂತಹ ಸಂದರ್ಭಗಳಲ್ಲಿ ನಗರದ ಗಣ್ಯ ಜನರು, ಬಂಧುಗಳು, ನೆರೆಯವರು ಮತ್ತು ವಾರಸುದಾರರ ಒಪ್ಪಿಗೆಯನ್ನು ಪಡೆಯಬೇಕೆಂದು ಹೇಳಿದರೂ ರಾಜನ ಪೂರ್ವಾನುಮತಿಯು ಅಗತ್ಯವೆಂದು ಸೂಚಿಸುವುದಿಲ್ಲ. ಶಾಸನಗಳೂ ಈ ವ್ಯಾಖ್ಯಾನಕಾರನ ದೃಷ್ಟಿಯನ್ನು ಪೋಷಿಸುತ್ತವೆ. ಭೂಮಿಯ ಖಾಸಗಿ ಪರಭಾರೆಯ ಸಂದರ್ಭದಲ್ಲಿ, ಪುತ್ರರು, ಪತ್ನಿಯರು, ಸೋದರರು, ತಮ್ಮನ ಮಕ್ಕಳು ಮತ್ತು ಅಲ್ಲಿಯ ಇವರ ಒಪ್ಪಿಗೆಯನ್ನು ಪಡೆದುಕೊಳ್ಳಲಾಗುತ್ತಿತ್ತೇ ಹೊರತು ರಾಜನ ಒಪ್ಪಿಗೆಯ ಉಲ್ಲೇಖ ಬರುವುದಿಲ್ಲ.

ಕೃಷಿಯೋಗ್ಯ ಬೀಳುಭೂಮಿ ಹಾಗೂ ರಾಜನಿಗೆ ಸೇರಿದ ಭೂಮಿ ಎರಡೂ ಸರಕಾರದ ಒಡೆತನದ ವ್ಯಾಪ್ತಿಗೆ ಸೇರಿದುವಾಗಿದ್ದುವು ಎನ್ನುವುದು ಮೇಲಿನ ಚರ್ಚೆಯಿಂದ ಹೊರತುಪಡಿಸುತ್ತದೆ. 'ಆಕ್ರಮಿತ' ಗ್ರಾಮಗಳಲ್ಲಿ ಸರಕಾರವು ನೆಲವನ್ನು ದಾನ ಮಾಡಿದ ಪಕ್ಷದಲ್ಲಿ, ಖಾಸಗಿ ಮಾಲೀಕರಿಂದ ಆ ನೆಲವನ್ನು ಮೊದಲು ಕೊಂಡುಕೊಳ್ಳುತ್ತಿತ್ತು; ಇಲ್ಲವೆ, ಅದರ ಮೇಲಿನ ತೆರಿಗೆಯ ಹಕ್ಕನ್ನು ದಾನ ಮಾಡುತ್ತಿದ್ದಿತೇ ಹೊರತು ಒಡೆತನದ ಅಧಿಕಾರವನ್ನಲ್ಲ ಎಂಬುದು ವೇದ್ಯವಾಗುತ್ತದೆ. ಈ ವಿಧಾನದಿಂದ ರಾಜ್ಯದಲ್ಲಿ ಖಾಸಗಿ ಒಡೆತನಕ್ಕೆ ಸರಕಾರವು ಮರ್ಯಾದೆ ಕೊಡುತ್ತಿತ್ತು. ಕೊನೆಯದಾಗಿ, ಸರಕಾರದ ಒಡೆತನವು ಖಾಸಗಿ ಒಡೆತನದೊಂದಿಗೆ ಎಂದೂ ಸಂಘರ್ಷಿಸುತ್ತಿರಲಿಲ್ಲ.

ಕೃಷಿಯು ಸ್ಥಿರಗತಿಯಲ್ಲಿ ಬೆಳೆದುದರಿಂದ, ಜನಸಂಖ್ಯೆ, ಜನರ ಸಾಮಾನ್ಯ ಪುರೋಭಿವೃದ್ಧಿ, ಸಾಗುವಳಿಯೋಗ್ಯ ಭೂಮಿಗೆ ಬೇಡಿಕೆ ಇವು ಬಹುಶಃ ಗಾಢವಾಗಿ ಅನುಭವಕ್ಕೆ ಬಂದಿರಬೇಕು. ಇದರ ಫಲವಾಗಿ ಗ್ರಾಮಸ್ಥರು ಮತ್ತು ಸರಕಾರಿ ಅಧಿಕಾರಿಗಳು ಸೂಕ್ತವಾದ ಗಡಿ ಗುರುತುಗಳನ್ನು ಪಾಲಿಸಲು ವಿಶೇಷವಾದ ಜಾಗರೂಕತೆ ವಹಿಸಿದರು. ಆ ಕಾಲದ ಅಸಂಖ್ಯಾತ ಕನ್ನಡ ಶಾಸನಗಳಿಂದಾಗಿ ಖಾಸಗಿ ಆಸ್ತಿಯ ನಿವೇಶನ ಹಾಗೂ ಗಡಿಗಳು ಹೆಚ್ಚು ಕರಾರುವಾಕ್ಕಾದುವು, ಹೆಚ್ಚು ವಿವರಪೂರ್ಣವಾದುವು ಎಂಬುದು ತಿಳಿಯುತ್ತದೆ. ಸ್ಥಳೀಯ ಪ್ರಭಾವೀ ಗಣ್ಯರ ಎದುರಿಗೆ ದಾಖಲೆ ಇಡುವ ಅಧಿಕಾರಿಗಳು ನೆಲವನ್ನು ಅಳತೆ ಮಾಡಿ ಎಚ್ಚರಿಕೆಯಿಂದ ಗುರುತಿಸಿದ್ದರೂ ಗಡಿವಿವಾದಗಳು ಏಳುತ್ತಿದ್ದುವು. ಕೃಷಿ ಭೂಮಿಯ ಎಲ್ಲೆ ಕಟ್ಟನ್ನು ಗುರುತಿಸಲು ಬಾವಿಗಳು, ಕೆರೆಗಳು, ಹೊಂಡಗಳು, ದೊಡ್ಡ ಮರಗಳು, ತೋಟಗಳು, ದೇವಾಲಯಗಳು, ತೊರೆಗಳು, ಕಲ್ಲಿನ ರಾಶಿ, ಕೃತಕವಾದ ದಿಣ್ಣೆಗಳು, ಇಳುಕಲು, ಬೆಟ್ಟ ಇವೆಲ್ಲವೂ ಉಪಯೋಗಕ್ಕೆ ಬರುತ್ತಿದ್ದುವು.

ಜಮೀನಿನ ಗಡಿಕಲ್ಲುಗಳನ್ನು ಎಲ್ಲೆ ಕಟ್ಟುವ ಶಿಲೆಗಳೆಂದು ಕರೆಯುತ್ತಿದ್ದರು. ಧಾರ್ಮಿಕ ಸಂಸ್ಥೆಗಳಿಗೆ ದಾನಮಾಡಿದ ಭೂಮಿಯ ಗಡಿಕಲ್ಲುಗಳ ಮೇಲೆ ಸಾಮಾನ್ಯವಾಗಿ ತ್ರಿಶೂಲ, ವಾಮನಮುದ್ರೆ, ಶಂಖಮುದ್ರೆ, ಶಂಖಚಕ್ರ ಮತ್ತು ಲಿಂಗಮುದ್ರೆ ಇರುತ್ತಿದ್ದುವು. ಅವು ದಾನ ಮಾಡಿದವನ ಧಾರ್ಮಿಕ ನಂಬಿಕೆಯನ್ನು ಸೂಚಿಸುತ್ತಿದ್ದುವು. ಲಿಂಗ, ತ್ರಿಶೂಲದಂತಹ ಗುರುತುಗಳು ಶಿವನನ್ನೂ ಶೈವಧರ್ಮವನ್ನೂ ಸೂಚಿಸಿದರೆ, ವಾಮನ, ಶಂಖ-ಚಕ್ರಗಳಂತಹ ಗುರುತುಗಳು ವಿಷ್ಣುವನ್ನು, ವೈಷ್ಣವ ಧರ್ಮವನ್ನು ಸೂಚಸುತ್ತಿದ್ದುವು.

ಗಡಿವಿವಾದಗಳನ್ನು ನಿವಾರಿಸಲು ಹಳ್ಳಿಯ ಮತ್ತು ಅಲ್ಲಿಯ ಭೂ ಹಿಡುವಳಿಗಳ ಗಡಿಗಳನ್ನು ಗುರುತಿಸುವ ಕಾರ್ಯವನ್ನು ನಾಲ್ಕೂ ದಿಕ್ಕಿನ ಹಳ್ಳಿಗಳಲ್ಲಿ ವಾಸಮಾಡುವ ಗಣ್ಯ ಜನರ ಸಮ್ಮುಖದಲ್ಲಿ ಮಾಡಲಾಗುತ್ತಿತ್ತು. ಕೆಲವೊಮ್ಮೆ ಗಡಿಕಲ್ಲುಗಳನ್ನು ನೆಡಲು ಒಬ್ಬ ಅಧಿಕಾರಿಯನ್ನು ಕಳುಹಿಸಿಕೊಡಲಾಗುತ್ತಿತ್ತು.

ನಾಡು ಜನರು ಗಡಿಕಲ್ಲುಗಳ ದುರುಪಯೋಗವು ನಡೆಯದಂತೆ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು. ಅಂತಹ ಸಂದರ್ಭ ಬಂದರೆ ವಿವರವಾದ ವಿಚಾರಣೆ ನಡೆಸಲಾಗುತ್ತಿತ್ತು. ತೀರ್ಥಹಳ್ಳಿಯ ೧೪೦೦ರ ಒಂದು ಶಾಸನವು; "ಕಲ್ಲುಗಳನ್ನು ಅನ್ಯಾಯವಾದ ರೀತಿಯಲ್ಲಿ ಹಾಕಿದಾಗ" ನಾಡು ಜನರು ಅದಕ್ಕೆ ಆಸ್ಪದಕೊಡಬಾರದೆಂದೂ, ಗಡಿಕಲ್ಲುಗಳನ್ನು ಸರಿಯಾಗಿ ನೆಟ್ಟ ನಂತರವೇ ಧರ್ಮವು ನೆಲೆಗೊಂಡಂತಾಗುವುದೆಂದೂ ನಿರ್ಧರಿಸಿದರು.

**ಋ. ನಾಯಿಂದರು :** ಪ್ರಾಚೀನ ಕಾಲದಿಂದಲೂ ನಾಯಿಂದರು ಸಾಮಾಜಿಕ ರಚನೆಯಲ್ಲಿ ಒಂದು ಪ್ರಮುಖ ಸಮುದಾಯವಾಗಿ ರೂಪುಗೊಂಡಿದ್ದಾರೆ. ಹಾಗೂ ಅವರ ಪ್ರಾಧಾನ್ಯವು ಅನೇಕ ಹಿಂದೂ ಧಾರ್ಮಿಕ ಕರ್ಮಗಳಲ್ಲಿ ವಿದಿತವಾಗುತ್ತದೆ.[86] ಇಮ್ಮಡಿ ದೇವರಾಯನ ಕಾಲದಲ್ಲಿ ನಾಯಿಂದರು ಸಮಾಜದ ಒಂದು ಪ್ರಧಾನ ಸಮುದಾಯವಾಗಿದ್ದರು; ಅವರ ವೃತ್ತಿಯು ತೆರಿಗೆಗೆ ಒಳಪಡುತ್ತಿತ್ತು. ತಂಜಾವೂರು ಜಿಲ್ಲೆಯ ತಿರುವೈಗಾವೂರಿನಲ್ಲಿರುವ ಕ್ರಿ.ಶ. 1429ರ ತೇದಿಯ ದೇಗುಲ ಭಿತ್ತಿ ಶಾಸನವೊಂದು ಪ್ರತಿಯೊಬ್ಬ ನಾಯಂದನಿಗೆ 4 ಪಣಂಗಳ ತೆರಿಗೆಯ ದರವನ್ನು ನಿಗದಿಗೊಳಿಸಿದ ವಿಷಯವನ್ನು ಉಲ್ಲೇಖಿಸುತ್ತದೆ ಹಾಗೂ ಈ ಮೊತ್ತವು ಆತ ಬಳಸುವ ಕ್ಷೌರದಕತ್ತಿ (ಕವಿರಿ)ಯ ತೆರಿಗೆಯನ್ನೂ ಒಳಗೊಂಡಿತ್ತು.[87] ಇಮ್ಮಡಿ ದೇವರಾಯನ ಆಳ್ವಿಕೆಯ ಒಂದು ಶತಮಾನದ ತರುವಾಯ ನಾಯಿಂದರು ರಾಜ ಕೃಪೆಗೆ ಪಾತ್ರರಾಗಿ ತೆರಿಗೆಗಳ ವಿನಾಯಿತಿ, ರಿಯಾಯಿತಿ ಮತ್ತು ತೆರಿಗೆ ಮನ್ನಾಗಳಂಥ ಸವಲತ್ತುಗಳನ್ನು ಹೊಂದಿದಂತೆ ಕಾಣುತ್ತದೆ.[88] ವೇಷಭೂಷಣ, ಇನಾಮು ಮತ್ತು ಭೂಮಿ ದಾನಗಳ ರೂಪದಲ್ಲಿ ಅವರಿಗೆ ಮಾಮೂಲಿನ ಬಹುಮಾನಗಳನ್ನು ಕರುಣಿಸಲಾಯಿತು.[89]

**ಎ. ಕುರುಂಬರು :** ಕುರುಬ ಈ ಹೆಸರಿನ ನಿಷ್ಪತ್ತಿ ಉದ್ಯೋಗ ವಾಚಕಕ್ಕಿಂತಲೂ ಬೇರೆಯಾಗಿಯೇ ಬಳಕೆಯಾದುದು ತಿಳಿದುಬರುತ್ತದೆ. 'ಕು' ಎಂದರೆ ಬೆಟ್ಟ ಎತ್ತರ, ಪ್ರದೇಶ ಎಂದು ತಮಿಳು, ತೆಲುಗು, ಕನ್ನಡ, ದ್ರಾವಿಡ ಭಾಷೆಗಳಲ್ಲಿ ಬಳಕೆಯಲ್ಲಿದೆ. ತಮಿಳು ಪ್ರದೇಶದಲ್ಲಿ ಕುರುಬರಂಥ ಕೆಲವು ಮೂಲನಿವಾಸಿ ಗಿರಿಜನ ಪಂಗಡಗಳಿದ್ದುವು. ಈ ಜನ ತನ್ನ ಕುರಿ ಹಿಂಡುಗಳನ್ನು ಮೇಯಿಸಲು ಹುಲ್ಲುಗಾವಲಿಗಾಗಿಯೇ ಅಥವಾ

ಮಳೆ ಗಾಳಿಗಳಿಂದ ತಪ್ಪಿಸಿಕೊಳ್ಳಲು ಗುಡ್ಡ ಬೆಟ್ಟಗಳಲ್ಲಿ ವಾಸವಾಗುತ್ತಿದ್ದರು. ಆದಕ್ಕಾಗಿ ಈ ಪಂಗಡಕ್ಕೆ ಕುರುಬರು ಎಂಬ ಹೆಸರು ಬಂದಿರಬೇಕು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಆದರೆ ಇಲ್ಲಿ ತಿಳಿದು ಬರುವುದೇನೆಂದರೆ, ಕುರುಬರು ಕುರಿಗಳ ಪೋಷಕರು ಹಾಗೂ ಪೋಷಕ ವೃತ್ತಿಯನ್ನು ಕೈಗೊಂಡಿದ್ದರೇ ವಿನಃ ಅವುಗಳನ್ನು ಕೊಂದು ತಿಂದು ಬದುಕಿದವರಲ್ಲ ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಕಾವ್ಯ ಪುರಾಣ ಕಥೆ ಹಾಗೂ ಇತರೆ ದಾಖಲೆಗಳಲ್ಲಿಯೂ ಕುರುಬರು ಮಾಂಸಾಹಾರಿಗಳೆಂದು ಹೇಳಿಲ್ಲ. ಆರ್ಯರು ಗೋಸಂರಕ್ಷಣೆಗೆ ಪ್ರಾಧಾನ್ಯತೆ ಕೊಟ್ಟಂತೆ ಕುರುಬರು ಕುರಿಯನ್ನು ಲಕ್ಷ್ಮಿಯೆಂದು ತಿಳಿದುಕೊಂಡಿದ್ದರು. ಹಾಲು ಶುಭ್ರತೆಯ ಸಂಕೇತ. ಕುರಿ ಮುಗ್ಧತೆಯ ಸಂಕೇತ ಹಾಗೂ ಹಾಲು ಮಾರಿ ಜೀವನ ಸಾಗಿಸುವ ವೃತ್ತಿಯಾಗಿದ್ದರಿಂದ ಹಾಲುಮತ ಎಂಬ ಮತ ಇವರಿಗೆ ಬಂದಿರಬಹುದು. ಹಾಲು ಕೆಟ್ಟರು ಕೆಡಬಹುದು, ಆದರೆ ಹಾಲುಮತ ಕೆಟ್ಟಿಲ್ಲ ಎನ್ನುವ ಮಾತು ಈ ಮತದವರಲ್ಲಿ ಜನಜನಿತವಾಗಿದೆ.

ಕರ್ನಾಟಕ ಪ್ರದೇಶದಲ್ಲಿ ತತ್ಸಮಾನವಾದ ಕುರುಬ ಪಂಗಡವು ವಾಸಿಸುತ್ತಿತ್ತು. ಮಹಾಭಾರತ ಸಂಗ್ರಾಮದಲ್ಲಿ ಭಾಗವಹಿಸಿದ ಯಾದವರಿಂದ ತಾವು ಬಂದವರೆಂದು ಕುರುಬ ಅಥವಾ ಕುರುಬರು ಹೇಳಿಕೊಳ್ಳುತ್ತಾರೆ. ದಕ್ಷಿಣ ಭಾರತದ ಪಲ್ಲವ ದೊರೆಗಳೊಂದಿಗೂ ಅವರು ಸಂಬಂಧಿಸಿದವರೆಂದು ಕೂಡ ಊಹಿಸಿದುದುಂಟು.[90] ವಿಜಯನಗರ ಸಾಮ್ರಾಜ್ಯದ ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿ ಅವರು ಪ್ರಬಲರಾಗಿದ್ದರು. ಕುರುಬ ಮತ್ತು ಬೇಡರಂಥ ಕಾಡು ಪಂಗಡಗಳಿಗೆ ಸೇರಿದ ಬಂಡಾಯ ಅಧಿಪರನ್ನು ದಮನ ಮಾಡುವುದೇ ವಿಜಯನಗರದ ಅರಸರ ನೀತಿಯಾಗಿತ್ತು.[91] ವಿಜಯನಗರದ ಅರಸರು ಕುರುಬರೊಡನೆ ವ್ಯವಹರಿಸುವಾಗ 'ಸಕಲವರ್ಣಾಶ್ರಮಧರ್ಮ'ದ ನೀತಿಯನ್ನು ಪ್ರೋತ್ಸಾಹಿಸಲಿಲ್ಲ; ಏಕೆಂದರೆ ಅವರು ಸಮಾಜದ ಇತರ ವರ್ಗಗಳಿಗೆ ನೀಡಿದಷ್ಟೇ ಸ್ವಾತಂತ್ರ್ಯವನ್ನು ಕುರುಬರಿಗೆ ಕೊಡಲಿಲ್ಲ ಎಂದು ಸಾಲೆತೊರೆಯವರು ಅಭಿಪ್ರಾಯಪಡುತ್ತಾರೆ.[92]

**ಏ. ಕರ್ಣಂ ಮತ್ತು ಇತರ ಅಮುಖ್ಯ ಜಾತಿಗಳು :** ಕರ್ಣಂಗಳನ್ನು 'ಕರನ್' ಮತ್ತು 'ಕರನಮ್'ಗಳೆಂದೂ ಸಹ ಕರೆಯುತ್ತಾರೆ.[93] ಈ ಸಮುದಾಯ ಹೆಚ್ಚಾಗಿ ಆಂಧ್ರಪ್ರದೇಶ ಮತ್ತು ಒರಿಸ್ಸಾದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದರು. ಇವರನ್ನು ತಮಿಳುನಾಡಿನಲ್ಲಿ ವಣಿಕರೆಂದು ಕರೆಯುತ್ತಿದ್ದರು. ಇವರು ಕಮಾಸ್ತ ವಂಶಕ್ಕೆ ಸೇರಿದವರಾಗಿದ್ದು[94] ಪ್ರಾರಂಭದಲ್ಲಿ ತಮ್ಮನ್ನು ಬ್ರಾಹ್ಮಣರೆಂದು ಕರೆದುಕೊಳ್ಳುತ್ತಿದ್ದರು. ಕಾಲಾನಂತರದಲ್ಲಿ ವೃತ್ತಿಗನುಗುಣವಾಗಿ ಮತ್ತು ಪ್ರದೇಶಕ್ಕನುಗುಣವಾಗಿ ಇವರು ಬ್ರಾಹ್ಮಣರ ಉಪಜಾತಿಗಳಾಗಿ ಹೋದರೆಂದು ತಿಳಿಯುತ್ತದೆ. ವಿಜಯನಗರದ ಕಾಲದಲ್ಲಿ ಮಲೆನಾಡು ಪ್ರಾಂತ್ಯದಲ್ಲಿ ಶಾನುಭೋಗ ಹಾಗೂ ಇತರೆ ಹೆಸರುಗಳಲ್ಲಿ ಕರೆದಿರುವುದು ಇದನ್ನು ಸಾಕ್ಷಿಕರಿಸಿವೆ. ವಿಜಯನಗರದಲ್ಲಿ ಇವರನ್ನು ಗಾಣಿಗರೆಂದು ಕರೆಯುತ್ತಿದ್ದು ಇವರ ವೃತ್ತಿ ಬದುಕನ್ನು ಅನುಮೋದಿಸುತ್ತಾ ಅಂದಿನ ಸಾಮಾಜಿಕ ಪರಿಸ್ಥಿತಿಯ ಸ್ಥಿತ್ಯಂತರದ ಅನಾವರಣಿಕೆಯಾಗಿದೆ.

**ಐ. ದೊಂಬರು :** ಇವರನ್ನು ಪಾಕಿಸ್ತಾನದಲ್ಲಿ ಡೂಮಕಿ, ಪ್ರಾಕೃತ ಭಾಷೆಯಲ್ಲಿ ಡೊಂಬ ಮತ್ತು ಕಾಶ್ಮೀರ ಸಂಸ್ಕೃತದಲ್ಲಿ ಡುಂಬ[95] ಎಂದೂ ಕರ್ನಾಟಕದಲ್ಲಿ ದೊಂಬರನ್ನು 'ಚಾಂಡಾಲ'ರೆಂದೂ ಸಹ ಕರೆಯುತ್ತಾರೆ. ಸಂಸ್ಕೃತದಲ್ಲಿ ದೊಂಬ, ದೂಂ, ದೊಮಕಿ, ದೊಂಬರಿ ಹೀಗೆ ಇನ್ನೂ ಹತ್ತು ಹಲವು ಹೆಸರಿನಿಂದ[96] ಕರೆಯಲ್ಪಡುವ ಈ ಜನಾಂಗವು ಸಮಾಜದಿಂದ ಪ್ರತ್ಯೇಕವಾಗಿಯೇ ಉಳಿದಿದೆ. ಇದು ಸಾಮಾಜಿಕ ಕಟ್ಟಳೆಯೂ ಕೂಡ. ಇವರು ಉತ್ತರ ಭಾರತದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ.[97] ವೃತ್ತಿಯಾಧಾರಿತ ಉಪಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬದುಕು ನಡೆಸುತ್ತಾ ಬಂದಿದ್ದಾರೆ. ಪ್ರದೇಶಕ್ಕನುಗುಣವಾಗಿ ಮತಾಂತರ ಇವರಲ್ಲಿ ಹೆಚ್ಚಾಗಿ ಕಂಡು ಬರುವುದು. ಇದು ಅವರ ಆರ್ಥಿಕ ಪರಿಸ್ಥಿತಿಯನ್ನಾಧರಿಸಿತ್ತು. ವಿಜಯನಗರ ಕಾಲದಲ್ಲಿ ಸಹ ಹೆಚ್ಚಾಗಿ ಕಂಡುಬರುತ್ತವೆ.

ದೊಂಬರು ರಾಜ್ಯದಲ್ಲಿದ್ದ ಗಾರುಡಿಗರು. ಅವರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆಯುವ ಜನಾಂಗದವರು. ದೊಂಬರು ಜನರಿಗೆ ತಮ್ಮ ದೊಂಬರಾಟದಿಂದ ರಂಜನೆಯನ್ನು ಒದಗಿಸುತ್ತಿದ್ದರೆನ್ನುವುದನ್ನು ಅಬ್ದುಲ್ ರಜಾಕ್ ಹಾಗೂ ಲಿನ್‌ಸ್ಕಾಟನ್ ಗಮನಿಸಿದ್ದಾರೆ. ಅವರು ದೇಶದುದ್ದಕ್ಕೂ ಸಂಚರಿಸುವ ಹಾವಾಡಿಗರಾಗಿದ್ದರು. ವಿಷಗಳ ತಯಾರಿಕೆಯಲ್ಲಿ ಅವರು ತುಂಬಾ ಪರಿಣತರಾಗಿದ್ದರೆಂದು ಲಿನ್‌ಸ್ಕಾಟನ್ ತಿಳಿಸುತ್ತಾನೆ. ಹುಲ್ಲುಹೊದಿಸಿದ ಅವರ ಪುಟ್ಟ ಮತ್ತು ತಗ್ಗಾದ ಮನೆಗಳು ಕಿಟಕಿಗಳನ್ನು ಹೊಂದಿರಲಿಲ್ಲ ಹಾಗೂ ತಗ್ಗಾದ ಮತ್ತು ಕಿರಿದಾದ ಬಾಗಿಲುಗಳಿಂದ ಕೂಡಿದ್ದವು. ಮಹಾನವಮಿ ಉತ್ಸವಕ್ಕೆ ರಾಜಧಾನಿಯಲ್ಲಿ ನೆರೆದ ಗಣ್ಯರು ಮತ್ತು ಜನಸಾಮಾನ್ಯರಿಗೆ ದೊಂಬರು ತುಂಬು ರಂಜನೆಯನ್ನು ನೀಡುತ್ತಿದ್ದರು.[98] ತಾವು ಗ್ರಾಮಗಳಲ್ಲಿ ತಮ್ಮ ಆಟವನ್ನು ಪ್ರದರ್ಶಿಸುವುದಾಗಿ ಕ್ರಿ.ಶ. 1532ರಲ್ಲಿ ದೊಂಬರು ಒಪ್ಪಂದವೊಂದನ್ನು ಮಾಡಿಕೊಂಡರು.[99] ದೊಂಬರ ಪ್ರಯೋಜನಕ್ಕಾಗಿ 'ದೊಂಬರಿಪನ್ನು' ಎಂಬ ಕಾಣಿಕೆಯೊಂದನ್ನು ಆಗಾಗ ಸರಕಾರವು ಸಂಗ್ರಹಿಸುತ್ತಿದ್ದುದುಂಟು.[100]

**ಒ. ತಿಟ್ಟಿಯನರು ಮತ್ತು ಸೌರಾಷ್ಟ್ರೀಯರು :** ತಿಟ್ಟಿಯನರು ಮತ್ತು ಸೌರಾಷ್ಟ್ರೀಯರಂಥ ಕೆಲವು ಸಮುದಾಯಗಳು ಪರ್ಯಾಯ ದ್ವೀಪದಲ್ಲಿ ವಸಾಹತು ಸ್ಥಾಪಿಸಿದ್ದರು ಹಾಗೂ ದಕ್ಷಿಣದಲ್ಲಿ ವ್ಯಾಪಿಸಿದ್ದರು. ತಿಟ್ಟಿಯನರನ್ನು ಕಂಬಲತ್ತಾರ್ ಎಂಬ ಶಬ್ದದಿಂದಲೂ ಕರೆಯಲಾಗುತ್ತಿತ್ತು. ಅವರ ಆಶ್ರಯ ದೇವತೆಗಳೆಂದರೆ ಜಕ್ಕಣ ಹಾಗೂ 'ಸತಿ' ಆಚರಿಸಿದ ಬೊಮ್ಮಕ್ಕ.[101] ಸೌರಾಷ್ಟ್ರೀಯ ವಿಶೇಷವಾಗಿ ರೇಷ್ಮೆಯ ನೇಕಾರರಾಗಿದ್ದರು ಹಾಗೂ ಅವರು ವಿಜಯನಗರ ಸಾಮ್ರಾಜ್ಯದಲ್ಲಿ ಬಟ್ಟೆ ವ್ಯಾಪಾರದಲ್ಲಿ ನಿರತರಾಗಿದ್ದರು. ಅವರಲ್ಲಿ ಕೆಲವರು ದಕ್ಷಿಣದಲ್ಲಿ ಮಧುರೆ ಮತ್ತು ತಿರುಚಿನಾಪಳ್ಳಿಗಳಂಥ ಊರುಗಳಲ್ಲಿ ನೆಲಸಿದರು ಮತ್ತು ತಮ್ಮ ಉದ್ಯಮದ ಚಟುವಟಿಕೆಯಿಂದಾಗಿ ಅವರು ಸಿರಿವಂತರಾಗಿದ್ದರು. ಮಹಾಲಿಂಗಂ ಅವರ ಪ್ರಕಾರ "ಅವರು ಬ್ರಾಹ್ಮಣ ಜಾತಿ ಹೆಸರುಗಳನ್ನು ಧರಿಸಿದ್ದರು ಹಾಗೂ ತಾವು ಮೂಲತಃ ಬ್ರಾಹ್ಮಣರೆಂದೂ, ಆದರೆ ಅನಂತರ ಕಾಲದಲ್ಲಿ ತಮ್ಮ ಸ್ಥಾನಮಾನವನ್ನು ಕಳೆದುಕೊಂಡು ಅವನತಿ ಹೊಂದಿದವರೆಂಬ ಕೆಲವು ದಂತಕತೆಗಳನ್ನು ಅವರು ಹರಡಿದರು."[102]

**ಓ. ಜೋಗಿಗಳು :** ಜೋಗಿಗಳನ್ನು 'ಗಿರಿ' ಮತ್ತು ಗೋಸ್ವಾಮಿ'[103] ಎಂತಲೂ ಶಿವಯೋಗಿಗಳೆಂದೂ ಕರೆಯುತ್ತಿದ್ದರು. ಇವರು ಯೋಗ ಮಾಡುತ್ತಿದ್ದುದರಿಂದ ಈ ಹೆಸರು ಬರಲು ಕಾರಣವಾಗಿದೆ. ಇವರು ಶಿವನ ಆರಾಧಕರಾಗಿದ್ದು ಕೇಸರಿಯುಕ್ತ ಬಟ್ಟೆ ತೊಡುತ್ತಿದ್ದರು.[104] ಇವರು ಉತ್ತರ ಭಾರತಕ್ಕಿಂತ ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ವಿಜಯನಗರ ಕಾಲದಲ್ಲಿ ಈ ಸಮುದಾಯವು ಅನಾದಿ ಕಾಲದಿಂದಲೂ ಬಂದಂತಹ ವೃತ್ತಿಯಾಧಾರಿತ ಉಪಕಸುಬನ್ನು ಆಧರಿಸಿದ್ದರು. ಕಾಲಾಕ್ರಮೇಣ ವ್ಯವಸಾಯವನ್ನು ಸಹ ಜೀವನ ನಿರ್ವಹಣೆಗಾಗಿ ಮಾಡುತ್ತಿದ್ದರೆಂದು ವಿಜಯನಗರಕ್ಕೆ ಭೇಟಿ ನೀಡಿದ ಬಾರ್ಬೋಸ ತಿಳಿಸಿದ್ದಾನೆ.[105]

ಬಾರ್ಬೋಸ ಮತ್ತು ಪೇಯಿಸ್ ತಾವು ವಿಜಯನಗರಕ್ಕೆ ಭೇಟಿ ನೀಡಿದ ಸಮಯದಲ್ಲಿ ಕಂಡ ಜೋಗಿಗಳ ಬಗ್ಗೆ ಕೆಲವು ವಿವರಗಳನ್ನು ನೀಡಿದ್ದಾರೆ. ಹಿಂದೂಗಳು "ಮುಸಲ್ಮಾನರ ಅಧಿಕಾರದೊಳಗೆ ಇರಲು ಇಷ್ಟಪಡದೆ ಆ ನಾಡಿನಿಂದ (ಅವರಲ್ಲಿ ಬಹುಭಾಗ) ಮುಂದೆ ಹೋಗುತ್ತಿದ್ದರು ಹಾಗೂ ಇಡೀ ಪ್ರಪಂಚದಲ್ಲಿ ಸಾಗಿಹೋಗುತ್ತ ಯಾವುದೇ ಸ್ಥಳದಲ್ಲಿಯೂ ತಂಗದಿರಲು ಸಂಕಲ್ಪಿಸಿ ಅಲ್ಪ ಉಡಿಗೆ ತೊಡಿಗೆಗಳನ್ನು ಧರಿಸುತ್ತಿದ್ದರು; ಅವರು ತಮ್ಮ ಯಾತ್ರೆಯಲ್ಲಿ ಸಾಯುವತನಕ ಹೀಗೆ ಮಾಡುವುದನ್ನು ಮುಂದುವರಿಸುತ್ತಿದ್ದರು" ಎಂದು ಬಾರ್ಬೋಸ ಹೇಳುತ್ತಾನೆ.[106]

ಜೋಗಿಗಳು 'ದಾರ್ಚ' (ಧಾರವಾಡ) ನಗರದ ಪ್ರವೇಶದ್ವಾರಗಳಲ್ಲಿ ಪುಟ್ಟ ಹಾಗೂ ತಗ್ಗಾದ ಮೊಗಸಾಲೆಗಳಲ್ಲಿ ಕುಳಿತುಕೊಂಡಿರುತ್ತಿದ್ದುದನ್ನು ಪೇಯಿಸ್ ಗಮನಿಸಿದ್ದನು.[107] ವಿಜಯನಗರದ ದ್ವಾರಗಳು ಮತ್ತು ಪಶುಬಲಿಗಳನ್ನು ಕುರಿತು ವಿವರಿಸುತ್ತ ಪೇಯಿಸ್ "ಈ ಪಶುಬಲಿಯ ಸಮಯಕ್ಕೆ ಅಲ್ಲೊಬ್ಬ ಆ ದೇವಾಲಯದ ಮೇಲ್ವಿಚಾರಣೆಯಲ್ಲಿರುವ ಜೋಗಿ ಉಪಸ್ಥಿತನಿದ್ದು ಕುರಿ ಅಥವಾ ಆಡಿನ ತಲೆ ಕಡಿದ ಸಲಕ್ಕೊಮ್ಮೆ ಮೂರ್ತಿ ಆ ಬಲಿಯನ್ನು ಸ್ವೀಕರಿಸುವುದರ ಸಂಕೇತವಾಗಿ ಕೊಂಬು ಊದುತ್ತಾನೆ."

ಈ ಅಲೆಮಾರಿ ಜನರ ಬಗ್ಗೆ ಬಾರ್ಬೋಸ ಇನ್ನೂ ಕೆಲವು ವಿವರಗಳನ್ನು ನೀಡುತ್ತಾನೆ. ಆತ ಹೀಗೆ ತಿಳಿಸುತ್ತಾನೆ: "ಈ ಜನರು ತಮ್ಮದೇ ಆದದ್ದೇನನ್ನೂ ಹೊಂದಿರುವುದಿಲ್ಲ; ಏಕೆಂದರೆ ತಾವು ಒಮ್ಮೆ ಹೊಂದಿದ್ದ ಆಸ್ತಿಪಾಸ್ತಿಯನ್ನೆಲ್ಲ ಕಳೆದುಕೊಂಡುಬಿಟ್ಟಿದ್ದಾರೆ; ಅವರು ಬರಿಮೈಯಲ್ಲಿ ಮತ್ತು ಬರಿಗಾಲಲ್ಲಿ ಹೋಗುತ್ತಾರೆ, ತಲೆಯ ಮೇಲೆ ಏನನ್ನೂ ಧರಿಸಿರುವುದಿಲ್ಲ ಹಾಗೂ ಮುಸಲ್ಮಾನೀ ಹಿತ್ತಾಳೆ ಪಟ್ಟಿಗಳಿಂದಷ್ಟೇ ತಮ್ಮ ಮಾನವನ್ನು ಅವರು ಮುಚ್ಚಿಕೊಳ್ಳುತ್ತಾರೆ; ಅದರ ಮೇಲೆ ಹಲವು ನಾಣ್ಯಗಳಿಂದ ಕೂಡಿದ ನಡುಪಟ್ಟಿಗಳು ಇಳಿಬಿದ್ದಿದ್ದು ಅವು ಎರಡು ಕಡೆಗೂ ಓಲಾಡುತ್ತಿರುತ್ತವೆ; ಇವು ನಾಲ್ಕು ಬೆರಳಿನ ಅಗಲದವು, ವರ್ತುಲ ಸ್ತಂಭಾಕೃತಿಯವು; ಅವುಗಳ ಮೇಲೆ (ಗಂಡಸರು ಹಾಗೂ ಹೆಂಗಸರ) ಅನೇಕ ಆಕೃತಿಗಳಿರುತ್ತವೆ. ಇವನ್ನು ಅವರು ಎಷ್ಟು ಬಿಗಿಯಾಗಿ ಕಟ್ಟಿರುತ್ತಾರೆಂದರೆ ಅವು ಅವರ ಹೊಟ್ಟೆಗಳನ್ನು ಹೊರಚಾಚಿಕೊಂಡಿರುವಂತೆ ಮಾಡಿರುತ್ತವೆ. ಇದಲ್ಲದೆ ಅವರು ತಮ್ಮ ಕೊರಳ ಮತ್ತು ಸೊಂಟಗಳ ಮೇಲೆ ಭಾರವಾದ ಕಬ್ಬಿಣದ ಸರಪಳಿಗಳನ್ನು ಹೊತ್ತಿರುತ್ತಾರೆ. ಅವರ ದೇಹ ಮತ್ತು ಮುಖಗಳು ಬೂದಿಯಿಂದ ಲೇಪಿತವಾಗಿರುತ್ತವೆ. ಚಿಕ್ಕ ಕೊಂಬು ಅಥವಾ ಮಹಾಪ್ರಭುಗಳ

ಭವನಗಳಲ್ಲಿ ಅದನ್ನು ಊದಿ, ಕೂಗಿ ಆಹಾರಭಿಕ್ಷೆ ಬೇಡುತ್ತಾರೆ. ಅವರು ನಮ್ಮ ಕಾಲದ ಈಜಿಪ್ಟಿನ ಜನರಂತೆ ಗುಂಪುಗುಂಪಾಗಿ ಹೋಗುತ್ತಾರೆ. ಒಂದು ಸ್ಥಳದಲ್ಲಿ ಹೆಚ್ಚು ಕಾಲ ನಿಂತಿರಬೇಕಾದ ಕಟ್ಟುಪಾಡೇನೂ ಅವರಿಗಿಲ್ಲ; ಕೆಲವು ದಿನಗಳು ಮಾತ್ರ ಇರುವ ಪರಿಪಾಠವಿದೆ."[108]

**ಋ. ಪರಯ ಮತ್ತು ಹೊಲೆಯರು :** ವಿಜಯನಗರ ಸಾಮ್ರಾಜ್ಯದಲ್ಲಿ ಅತ್ಯಂತ ಕೆಳಸ್ತರದ ವರ್ಗಗಳೆಂದರೆ ತಮಿಳುದೇಶದ ಪರಯರು ಹಾಗೂ ಕರ್ನಾಟಕ ಪ್ರದೇಶದ ಹೊಲೆಯರು. ಹೊಲೆಯ ಎಂಬ ಶಬ್ದ 'ಹೊಲ'ದಿಂದ ವ್ಯುತ್ಪತ್ತಿ ಹೊಂದಿದ್ದು, ಹೊಲೆಯನೆಂದರೆ ಹೊಲದ ಕೆಲಸಗಾರನೆಂದರ್ಥ.[109]ಈ ಜಾತಿಯ ಸದಸ್ಯರು ಸಾಮಾನ್ಯವಾಗಿ ದಾಸ ವೃತ್ತಿಯಲ್ಲಿ ನಿರತರಾಗಿದ್ದರು; ಕೆಲವರು ಗ್ರಾಮಾಡಳಿತದ ಆಯಗಾರ ವ್ಯವಸ್ಥೆಯಲ್ಲಿ ತೋಟಿ ಮತ್ತು ತಳಾರರಾಗಿ ಸೇವೆ ಸಲ್ಲಿಸಿದರು. ಅವರು ಕೆಳಮಟ್ಟದ ಗ್ರಾಮಸೇವಕರಾಗಿದ್ದರು.[110] ಶಾಂತಿರಕ್ಷಣೆಯ ಉದ್ದೇಶಗಳಿಗೆ ತಳಾರಿಯನ್ನು ನೇಮಕಮಾಡಿಕೊಳ್ಳಲಾಗುತ್ತಿತ್ತು. ಆತನನ್ನು ತಳವಾರ, ಕಾಪು ಅಥವಾ ಕಾವಲ್ ಎಂದೂ ಕರೆಯಲಾಗುತ್ತಿತ್ತು.[111] ಕ್ರಿ.ಶ. 1369ರಲ್ಲಿ ಪುಲ್ಲಿಯೂರು ನಾಡಿನ ತೋಟ್ಟಿಯಂ (ತೋಟಿ) ಜಾತಿಯ ಜನರು ಪ್ರತಿ ಗ್ರಾಮಕ್ಕೂ ಒಂದು ಪಣವನ್ನು ತೆರಿಗೆಯಾಗಿ ಸಲ್ಲಿಸಬೇಕಾಗಿತ್ತು.[112]

**ಎ. ಅಂತ್ಯಜರು :** ಉತ್ತಮಕುಲದವ ಹೀನ ಕುಲದವ[113] ಎಂಬ ವರ್ಗಭೇದಗಳು ಎಂದಿನಿಂದ ಸಮಾಜದಲ್ಲಿ ಹುಟ್ಟಿಕೊಂಡವೋ ಅಂದಿನಿಂದಲೂ ಅನೇಕ ರೀತಿಯ ಸಮಸ್ಯೆಗಳು ಸಮಾಜದಲ್ಲಿ ಹುಟ್ಟಿಕೊಳ್ಳುತ್ತಿವೆ. ದೇವರ ಸೃಷ್ಟಿಯಲ್ಲಿ ಹುಟ್ಟಿದವರೆಲ್ಲ ಒಂದೇ ಆದರೂ ಇತಿಹಾಸದ ಪುಟಗಳು ಮಾತ್ರ ನಮಗೆ ಎಲ್ಲಿಯೂ ವರ್ಗರಹಿತ ಸಮಾಜ ಒಂದಿತ್ತು ಎಂದು ರೂಢಿ ಹೇಳಿದ ಪ್ರಕರಣ ದೊರೆಯುವುದಿಲ್ಲ. ಮಾನವರಲ್ಲಿ ಹೀಗೇಕೆ ವರ್ಗಭೇದ ಇದು ಸಲ್ಲದು ಎಂದು ಕವಿಗಳೂ ದಾರ್ಶನಿಕರೂ ಕಾಲಕಾಲಕ್ಕೆ ಚಿಂತನೆ ಮಾಡಿದ್ದಾರೆ: "ನಡೆವುದೊಂದೇ ಭೂಮಿ | ಕುಡಿವುದೊಂದೇ ನೀರು | ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ | ನಡುವೆ ಎತ್ತಣದು ಸರ್ವಜ್ಞ." ಈ ಪ್ರಪಂಚದಲ್ಲಿ ಉತ್ತಮರು ಅಧಮರೆಂದರೆ ಯಾರು ? 'ಉತ್ತಮರು ಎಂಬುವರು ಸತ್ಯದಲಿ ನಡೆದಿಹರು' ಉತ್ತಮ ವರ್ಣಿಗಳೆ ಉತ್ತಮರು ಎನ್ನಬೇಡ' ಮತ್ತೆ ತನ್ನಂತೆ ಬಗೆವರೆಲ್ಲರನು | ಉತ್ತಮರು ಎನ್ನು |' - ಎಂದು ಉತ್ತಮರ ವಿಚಾರದಲ್ಲಿ ಸರ್ವಜ್ಞ ತಿಳಿವಳಿಕೆ ಹೇಳಿದ್ದಾನೆ.

ಜಾತಿಪದ್ಧತಿಗಳು ಹೇಗೆ ಮಧ್ಯಯುಗದಲ್ಲಿ ಜನಜೀವನವನ್ನು ಹದಗೆಡಿಸಿತ್ತು, ಅಸ್ಪೃಶ್ಯತೆಯ ಹೆಸರಿನಲ್ಲಿ ಜನರು ಹೇಗೆ ಸುಲಿಗೆ ಮಾಡುತ್ತಿದ್ದರು ಎಂಬುದನ್ನು ಅಂದಿನ ಸಮಾಜದ ಸ್ಪಷ್ಟದರ್ಶಿಗಳಾದ ಕನಕ, ಪುರಂದರ, ಸರ್ವಜ್ಞ ಮುಂತಾದವರು ತೋರಿಸಿದ್ದಾರೆ.

ತಮ್ಮಲ್ಲೇ ಅನೇಕ ದುರ್ಗುಣಗಳನ್ನಿಟ್ಟುಕೊಂಡು ಹೊಲೆಯರು ಎನ್ನಿಸಿಕೊಂಡವರು ಇತರರನ್ನು, ಹೊಲೆಯರೆಂದು ಹಳಿಯುವುದು ಯಾವ ನ್ಯಾಯ ಎಂದು ದಾಸರು ವಿಚಾರಪರರ ಗಮನ ಸೆಳೆದಿದ್ದಾರೆ. 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ | ಶ್ರೀಹರಿಯ ಸ್ಮರಣೆಯನು ಬಲ್ಲವರು ಪೇಳಿ" ಹೊಲೆಯರು ಊರಿಂದ ಹೊರಗೆ ಇರುತ್ತಿದ್ದರು ಎಂಬ ಧ್ವನಿ ಇಲ್ಲಿದೆ. ಫಾಹಿಯಾನ್, ಯುವನ್‌ಚ್ವಾಂಗ್, ಇತ್ಸಿಂಗ್,

ಆಲ್‌ಬೆರೂನಿ ಮುಂತಾದ ವಿದೇಶೀ ಪ್ರವಾಸಿಗಳು ಭರತಖಂಡದಲ್ಲಿ ಚಂಡಾಲರಿಗೆ ಊರಿನ ಹೊರಗೆ ವಾಸಸ್ಥಾನವಿದ್ದಿತೆಂದೂ, ಅವರು ಊರಿನ ಒಳಕ್ಕೆ ಬಂದರೆ ತಾವು ಬರುತ್ತಿದ್ದೇವೆಂಬ ಎಚ್ಚರಿಕೆ ಕೊಡುತ್ತಿದ್ದರೆಂದೂ ಹೇಳಿರುವರು. ಹಾಗೆ ಬರುವಾಗ ಸಂಬಳಿ, ಸಂಬಳಿ ಎಂದು ಹೇಳಿಕೊಂಡು ಕೋಲು ತಟ್ಟುತ್ತಾ ಬರುತ್ತಿದ್ದರೆಂದು ಕೆಲವು ಕನ್ನಡ ಕಾವ್ಯಗಳ ಉಲ್ಲೇಖವಿದೆ. ಆ ಕೋಲಿಗೆ 'ಸಂಬಳಿ ಗೋಲು' ಎಂದು ಹೆಸರು.

"ಕಾಲಕ್ರಮದಲ್ಲಿ ಅಸ್ಪೃಶ್ಯತಾ ನಿಯಮಗಳು ಕಟುತರವಾದವು. ಆದರೂ ನಾಯನ್ಮಾರರಂತಹ ಶಿವಭಕ್ತರೂ ಕೆಲವರು ಆಳ್ವಾರರೂ ಅಸ್ಪೃಶ್ಯರಾಗಿದ್ದರೂ ಸವರ್ಣಗಳ ಜನರಿಂದಲೂ ಗೌರವ ಹೊಂದಿದ್ದರು. ಶ್ರೀಶಂಕರರು 'ಮನೀಷಾಪಂಚಕ'ದಲ್ಲಿ ಜ್ಞಾನಿಯಾದವನು ಚಂಡಾಲನಾಗಲೀ, ದ್ವಿಜನಾಗಲಿ ಗುರುವೆಂದು ಹೇಳಿರುವರು. ಶ್ರೀ ರಾಮಾನುಜರು ಅಂತ್ಯಜರಿಗೆ ತಿರುಕ್ಕುಲತ್ತಾರ್ ಎಂದು ಹೆಸರಿಟ್ಟು ಕೆಲವು ಹಕ್ಕುಗಳನ್ನು ಕೊಟ್ಟರು. ವೀರಶೈವರು ಸ್ಪೃಶ್ಯಾಸ್ಪೃಶ್ಯ ನಿಯಮಗಳನ್ನು ಲೆಕ್ಕಿಸಲಿಲ್ಲ. ಹರಿದಾಸ ಕೂಟದವರು ಊರ ಹೊರಗಿರುವವನು ಹೊಲೆಯನಲ್ಲ ದುಷ್ಕರ್ಮ ಮಾಡುವವನೇ ನಿಜವಾದ ಹೊಲೆಯನೆಂದು ಸವರ್ಣದವರ ದುರಭಿಮಾನವನ್ನು ಖಂಡಿಸಿರುವರು. ಹೀಗೆ ಹರಿಜನೋದ್ಧಾರಕಾರ್ಯ ನಡೆಯುತ್ತಲೇ ಬಂತು."

## 2.7. ಬಲಗೈ ಮತ್ತು ಎಡಗೈ ಜಾತಿಗಳ ಸ್ವರೂಪ

ವಿಜಯನಗರ ಸಾಮ್ರಾಜ್ಯದಲ್ಲಿ ಜಾತಿಗಳು ಬಲಗೈ ಮತ್ತು ಎಡಗೈ ಎಂದು ಕರೆಯಲಾದ ಎರಡು ವಿಭಾಗಗಳಾಗಿ ವಿಭಜಿತವಾಗಿದ್ದವು. ತಮಿಳು ದೇಶದಲ್ಲಿ ಈ ವಿಭಾಗಗಳು 'ವಲಂಗೈ' ಮತ್ತು 'ಇಡಂಗೈ' ಎಂದು ಪರಿಚಿತವಾಗಿದ್ದರೆ ಕರ್ನಾಟಕದಲ್ಲಿ ಕ್ರಮವಾಗಿ 'ಬಲಗೈ' ಮತ್ತು 'ಎಡಗೈ' ಎಂದು ಪರಿಚಿತವಾಗಿದ್ದವು. ಕ್ರಿ.ಶ. 11ನೆಯ ಶತಮಾನದಿಂದಲೇ, ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ದೊರೆತ ಶಿಲಾಶಾಸನಗಳಲ್ಲಿ ಈ ಜಾತಿಸಮುದಾಯಗಳಿಗೆ ಸಂಬಂಧಿಸಿದ ಉಲ್ಲೇಖಗಳಿವೆ.[114] ಪ್ರತಿ ಗುಂಪೂ ತೊಂಬತ್ತೆಂಟು ಒಳ ಜಾತಿಗಳಿಂದ ಕೂಡಿದ್ದವೆಂದು ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ಆದರೆ, ಈ ತೊಂಬತ್ತೆಂಟು ಒಳ ಜಾತಿಗಳು ಯಾವುವೆಂಬುದು ಖಚಿತವಾಗಿ ನಮಗೆ ತಿಳಿಯದು. ಆದರೂ ಇವು ಹದಿನೆಂಟು ವೃತ್ತಿಪರ ಜಾತಿಗುಂಪುಗಳಿಗೆ ಸಂಬಂಧಿಸಿದ ಉಲ್ಲೇಖಗಳು. "ಆ ಹದಿನೆಂಟು ಜಾತಿಗಳ ಒಳಪಂಗಡಗಳೇ ಪ್ರಾಯಶಃ ತೊಂಬತ್ತೆಂಟು ಒಳಜಾತಿಗಳಿರಬೇಕು" ಎಂದು ಮಹಾಲಿಂಗಂ ಹೇಳುತ್ತಾರೆ.[115]

ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಜೀವನದಲ್ಲಿ ಈ ಜಾತಿಗುಂಪುಗಳು ಪ್ರಾಬಲ್ಯ ಹೊಂದಿದ್ದವು. ಈ ಎರಡು ಗುಂಪುಗಳಾಗಿ ಮಾಡಿದ ಜಾತಿಗಳ ವಿಂಗಡಣೆಯ ಉಗಮದ ಬಗ್ಗೆ ಅನೇಕ ಕಥನಗಳಿವೆ. ಸಾಮಾನ್ಯವಾಗಿ ಎಲ್ಲ ಬ್ರಾಹ್ಮಣರು, ಕ್ಷತ್ರಿಯರು ಮತ್ತು ಇತರ ಕೆಲವರನ್ನು ತಟಸ್ಥರೆಂದು ಪರಿಗಣಿಸಲಾಗುತ್ತದೆ. ಹಾಗಿದ್ದರೂ ಬಲಗೈ ಎಂದು ಕರೆಯಲಾದ ವೈಷ್ಣವ ಬ್ರಾಹ್ಮಣರು ಮತ್ತು ಅವರ ಅನುಯಾಯಿಗಳು ಹಾಗೂ ಎಡಗೈ ಎಂದು ಕರೆಯಲಾದ ಶೈವ ಬ್ರಾಹ್ಮಣರು ಮತ್ತು ಅವರ ಅನುಯಾಯಿಗಳ ನಡುವಣ ವಿವಾದವೊಂದು 'ಇಡಂಕೈ ವಲಂಕೈ ಕೈಫಿಯತ್'ನಲ್ಲಿ ದಾಖಲಾಗಿರುವುದನ್ನು ನಾವು ನೋಡುತ್ತೇವೆ.

ವಲಂಗೈಯರ್ ಅಥವಾ ಬಲಗೈ ಜಾತಿಗಳು ಎಲ್ಲ ಕೃಷಿಕ ಪಂಗಡಗಳನ್ನು ಒಳಗೊಂಡಿದ್ದವು. ಇಡಂಗೈಯರ್ ಅಥವಾ ಎಡಗೈ ಜಾತಿಗಳು ಮುಖ್ಯವಾಗಿ ವ್ಯಾಪಾರಿ ಮತ್ತು ಕೈಗಾರಿಕೆಯ ಪಂಗಡಗಳನ್ನು ಒಳಗೊಂಡಿದ್ದವು. ಅತ್ಯಂತ ಕೆಳಗಿನ ಜಾತಿಗಳೂ ಅತ್ಯುನ್ನತ ಜಾತಿಗಳೊಂದಿಗೆ ಸೇರಿಸಿರುವ ರೀತಿಯಿಂದ ಪ್ರಾಚೀನ ವರ್ಣಾಶ್ರಮಕ್ಕೆ ಒಂದು ಸವಾಲಿನ ತೆರದಲ್ಲಿ - ಕೊನೆಯಪಕ್ಷ ಸಣ್ಣಪುಟ್ಟ ಸಾಮಾಜಿಕ ಸವಲತ್ತುಗಳು ಸಂಬಂಧಪಟ್ಟಂತೆ - ಬಲಗೈ ಮತ್ತು ಎಡಗೈ ಗುಂಪುಗಳಾಗಿ ಜನರ ವಿಂಗಡಣೆಯು ನಡೆದಿರುವಂತೆ ತೋರುತ್ತದೆ. ಕೆಲವೊಮ್ಮೆ ಇವೆರಡೂ ಜಾತಿ ವಿಭಾಗಗಳು ಸಾಮಾಜಿಕ ಮತ್ತು ಆರ್ಥಿಕ ಅನ್ಯಾಯದ ವಿರುದ್ಧ ಹೋರಾಡಲು ಒಂದುಗೂಡಿದವು. ದಕ್ಷಿಣ ಆರ್ಕಾಟಿನ ಜನರು ಅರಸನ ಕಂದಾಯ ವಸೂಲಿಗಾರರ ಕೈಯಲ್ಲಿ ಎಷ್ಟು ನರಳಿದ್ದರೆಂದರೆ ಕ್ರಿ.ಶ. 1429ರಲ್ಲಿ ಪರಸ್ಪರ ವಿರೋಧಿಗಳಾದ ವಲಂಗೈ ಮತ್ತು ಎಡಂಗೈ ಜಾತಿಗಳ ನಡುವೆ ಒಪ್ಪಂದವೊಂದು ಏರ್ಪಟ್ಟು, ಇವೆರಡೂ ಜಾತಿ ಸಂಘಗಳು ತಮ್ಮ ಸಮುದಾಯದ ಯಾರಾದರೂ ಕಂದಾಯ ವಸೂಲಿಗಾರನಿಗೆ ನೆರವಾದಲ್ಲಿ ಆತನನ್ನು ದಂಡಿಸಬೇಕೆಂದು ತೀರ್ಮಾನಿಸಿಕೊಂಡವು.[116] ಈ ಜಾತಿ ಗುಂಪುಗಳ ಸದಸ್ಯರು ತಾವು ಸಲ್ಲಿಸಿದ ಸೇವೆಗಾಗಿ ದಾನದತ್ತಿಗಳನ್ನು ಪಡೆದರು. ಕ್ರಿ.ಶ. 1435ರ ತೇದಿಯ, ಶಾಸನವೊಂದು ದೇವಿಯ ಗುಡಿಯಲ್ಲಿ ನಡೆಯುವ ತಿರುಪ್ಪೂರಂ ಉತ್ಸವದ ಸಂದರ್ಭದಲ್ಲಿ 'ಇಡಂಗೈ' ಜಾತಿಯವರು ಕಹಳೆಯೂದುವ ವೆಚ್ಚ ಭರಿಸುವದಕ್ಕಾಗಿ ಸೆಂಗತ್ತುಕೋಟ್ಟಂನ ತಿರುಮಂಗಲಂ ಗ್ರಾಮವನ್ನು ಸರ್ವಮಾನ್ಯವಾಗಿ ದಾನವಿತ್ತ ವಿಷಯವನ್ನು ನಿರೂಪಿಸುತ್ತದೆ.[117]

ಕ್ರಿ.ಶ. 1205ರ ಒಂದು ಶಾಸನ ಕರ್ಣಾಟಕದಲ್ಲಿ ಹೊಲೆಯರ ಮೇಲೂ, ಅವರ ಮಕ್ಕಳ ಮೇಲೂ ತೆರಿಗೆಗಳನ್ನು ಹಾಕುತ್ತಿದ್ದರೆಂದು ಹೇಳುತ್ತದೆ.[118] 1430ರ ಮತ್ತೊಂದು ಶಾಸನ ಹೊಲೆಯರು ತಾವು ಕೊಡಬೇಕಾಗಿದ್ದ ಸುಂಕದಿಂದ ವಿಮುಕ್ತರಾಗಿದ್ದರೆಂದು ಹೇಳುತ್ತದೆ.[119] ಅಲ್ಲದೆ ಅವರು ಊರ ಕೆಲಸಕಾರ್ಯಗಳಿಗೂ ನೆರವಾಗುತ್ತಿದ್ದರು.[120]

ಒಟ್ಟಿನಲ್ಲಿ ವಿಜಯನಗರ ಕಾಲದಲ್ಲೂ ಹೊಲೆಯರು ಎಂಬ ಒಂದು ವರ್ಗದ ಜನ ಇದ್ದರು ಅವರ ಮೇಲೆ ತೆರಿಗೆಗಳನ್ನು ಹಾಕುತ್ತಿದ್ದರು, ಆದರಿಂದ ವಿನಾಯಿತಿಯೂ ಅವರಿಗೆ ದೊರಕಿತ್ತು; ಹೊಲಗೇರಿ ಎಂಬ ಕೇರಿಗಳಿದ್ದವು ಅವು ಸಾಮಾನ್ಯವಾಗಿ ಊರ ಹೊರಗೆ ಇದ್ದವು, ಅವರನ್ನು ಅಸ್ಪೃಶ್ಯರೆಂಬ ಭಾವನೆಯಿಂದ ಕಾಣುತ್ತಿದ್ದರು ಎಂಬ ಈ ಕೆಲವು ವಿಷಯಗಳನ್ನು ಸಾಹಿತ್ಯ ಗ್ರಂಥಗಳಿಂದ ಹಾಗೂ ಕೆಲವು ಶಾಸನಗಳಿಂದ ತಿಳಿಯಬಹುದು. ಆದರೆ ವಿದೇಶೀ ಪ್ರವಾಸಿಗರ ವರದಿಯಲ್ಲಾಗಲೀ ಶಾಸನಗಳಲ್ಲಾಗಲೀ ಹೊಲೆಯರ ಸಾಂಘಿಕ ಜೀವನದ ಒಂದು ಸಂಪೂರ್ಣ ಚಿತ್ರ ನಮಗೆ ದೊರೆಯುವುದಿಲ್ಲ ಆದರೆ ಸಮಾಜದಲ್ಲಿ ಯಾವ ಸ್ಥಾನಮಾನವನ್ನೂ ಹೊಂದಿರದಿದ್ದ ಅಂತ್ಯಜರ ಬಗೆಗೆ ನಮ್ಮ ಸಾಹಿತ್ಯ ಕೃತಿಗಲು ಅನುಕಂಪ ತಾಳಿವೆ. ಸಮಾಜದಲ್ಲಿ ಜನ ಅವರನ್ನು ಕಾಣುತ್ತಿದ್ದ ರೀತಿಯನ್ನು ಕಂಡು ಕವಿಗಳ, ಸಂತರ, ಸುಧಾರಕರ, ಹೃದಯ ಮಿಡಿದಿದೆ. ಜನರ ನೈತಿಕ ಮಟ್ಟವನ್ನು ಸುಧಾರಿಸುವುದರ ಮೂಲಕ ಸಮಾಜವನ್ನು ಸಂಸ್ಕರಿಸಲು ಹೊರಟ ಸಂತರಾದ ಕನಕಪುರಂದರರು ಜನತೆಯನ್ನು

ಕೆಣಕಿ ನಿಜವಾದ ಹೊಲೆಯ ಯಾರು ಎಂಬುದನ್ನು ಯೋಚಿಸಿ ಎಂದು ಜನರಿಗೆ ಸವಾಲಿನಂತೆ ಪ್ರಶ್ನೆಗಳನ್ನು ಹಾಕಿದ್ದಾರೆ: "ಹೊಲೆಯ ಬಂದಾನೆಂದು ಒಳಗೆ ದೇವರ ಮಾಡಿ | ಘಣ ಘಂಟೆ ಬಾರಿಸುತ | ತನುವಿನ ಕೋಪ ಹೊಲೆಯಲ್ಲವೇನಯ್ಯ | ಮನಸಿನ ವಂಚನೆ ಹೊಲೆಯಲ್ಲವೇನಯ್ಯ | ಇಂಥ ಹೊರಗಿದ್ದ ಹೊಲೆಯನನ್ನು ಒಳಗೆ ತುಂಬಿಟ್ಟುಕೊಂಡು | ಇದಕೇನು ಮದ್ದು ಪುರಂದರ ವಿಠಲ |" ಹಾಗಾದರೆ ಹೊಲೆಯ ಯಾರು ? "ಸೂಳೆಯನು ಕಾವಿ ಶುದ್ಧ ಹೊಲೆಯ | ಕೊಂಡ ಸಾಲಗಳನು ತಿದ್ದದಾತನೆ ಹೊಲೆಯ | ಉಂಡ ಸಮಸ್ಯೆಗಳು ಬಗೆವಾತನೆ ಹೊಲೆಯ | ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ | ಶುರದೇ ಆದರೂ ... ಹೊಲೆಯ ಆಸೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ | ಲೇಸು ಉಪಕಾರವ ಮಾಡದವ ಹೊಲೆಯ | ಮೋಸದಲ್ಲಿ ಮುನಿದು ಕೆಡಿಸುವ ಹೊಲೆಯ | ಹುಸಿಯ ಬೊಗಳುವವನೊಬ್ಬ ಹುಚ್ಚಹೊಲೆಯ | ಪರಸತಿಗೆ ಅಳು(ಕ)ದವ (ಅಳುಕಿದವ ?) ಪಾಪಿ ಹೊಲೆಯ | ಗುರು ಹಿರಿಯರನು ನಮಿಸದಾತನೆ ಹೊಲೆಯ | ಪುರಂದರ ವಿಠಲನ ನೆನೆಯದವ ಹೊಲೆಯ."

ದಾಸರು ಕೊಟ್ಟಿರುವ ಈ ದೀರ್ಘ ವಿರಣೆಯಲ್ಲಿ ಸಮಾಜದಲ್ಲಿ ಎಷ್ಟೆಷ್ಟು ತರಹದ ಅನಾಚಾರಗಳನ್ನು ಜನ ಮಾಡುತ್ತಿದ್ದರು ಎಂಬುದರ ಒಂದು ಚಿತ್ರ ದೊರೆಯುತ್ತದೆ. ಹೀಗೆ ತಮ್ಮೊಳಗೆ ಅನೇಕ ತಪ್ಪುಗಳನ್ನಿಟ್ಟು ಕೊಂಡು ಬೇರೆಯವರಲ್ಲಿ ತಪ್ಪನ್ನರಸುವವರು ನಿಜವಾದ ಹೊಲೆಯರು ಎಂದು ದಾಸರ ಹೊಲೆಯ ಎಂಬ ಪದಕ್ಕೆ ಒಂದು ಹೊಸ ವ್ಯಾಖ್ಯಾನವನ್ನೇ ನೀಡಿದ್ದಾರೆ. ಹೊಲೆಯರು ಯಾರು ಎಂಬುದನ್ನು ಹೇಳಹೊರಟ ದಾಸರ ಕಣ್ಣು ಮುಂದೆ ಸಮಾಜದಲ್ಲಿ ಕಾಣುತ್ತಿದ್ದ ಸಮಾಜದ್ರೋಹಿಗಳ ಒಂದು ಚಿತ್ರವೆ ನಿಂತಿದೆ.

ಹೀಗೆ ಹೊಲೆಯರು ಸಮಾಜದಲ್ಲಿ ಏನೂ ಸ್ಥಾನಮಾನಗಳಿಲ್ಲದೆ ಹೀನಸ್ಥಿತಿಯಲ್ಲಿ ಕವಿಗಳ, ಕಲಾವಿದರ, ದಾರ್ಶನಿಕರ, ಸಂತರ, ಸುಧಾರಕರ, ಸಹಾನುಬೂತಿಯನ್ನು ಪಡೆದುಕೊಂಡು ಬಂದಿದ್ದಾರೆ. ಅವರ ಸ್ಥಿತಿ ಅಂದಿನಿಂದ ಇಂದಿನವರೆಗೂ ಶೋಚನೀಯ ಸ್ಥಿತಿಯಲ್ಲಿದೆ. ಶಾಸನಗಲ್ಲಿ ಕಂಡುಬರುವ ಬೇರೆ ಬೇರೆ ಜಾತಿಯವರ ಸಾಮಾಜಿಕ ಸ್ಥಾನಮಾನಗಳನ್ನು ಡಾ. ಚಿದಾನಂದಮೂರ್ತಿಯವರು ವಿವರಿಸುತ್ತಾ, ಭಿನ್ನ ಭಿನ್ನ ಜಾತಿಗಳವರು ಸಾಮಾಜಿಕವಾಗಿ ಯಾವ ಯಾವ ಹಂತದಲ್ಲಿದ್ದರು ಎಂಬುದನ್ನು ಹೇಳುವುದು ಕಷ್ಟವೇ. ಎಲ್ಲರಿಗಿಂತ ಬ್ರಾಹ್ಮಣರು ಮೇಲಿನ ಹಂತದಲ್ಲಿದ್ದರೆಂಬುದು ನಿರ್ವಿವಾದುದು. ಬಹು ಕೆಳಗಿನ ಹಂತದಲ್ಲಿದ್ದವರು ಹರಿಜನರು ಎಂಬುದೂ ನಿರ್ವಿವಾದವಾದುದು ಎಂದು ಹೇಳುತ್ತಾರೆ.

ವಿಜಯನಗರ ಸಾಮ್ರಾಜ್ಯ ಸಮೃದ್ಧ ಸಂಪತ್ತಿನಿಂದ ತುಂಬಿ ತುಳುಕಿತ್ತು ಮುತ್ತು ರತ್ನಗಳನ್ನು ಬೀದಿಯಲ್ಲಿ ರಾಶಿ ಹಾಕಿ ಮಾರಾಟ ಮಾಡಲಾಗುತ್ತಿತ್ತು. ಅದು ಚಿನ್ನದ ನಾಣ್ಯಗಳು ಚಲಾವಣೆಯಲ್ಲಿದ್ದ ಸುವರ್ಣ ಯುಗವಾಗಿತ್ತು. ಆರು ತಿಂಗಳ ಕಾಲ ವಿಜಯನಗರವನ್ನು ಲೂಟಿ ಮಾಡಿದ ಮುಸ್ಲಿಮರು ದೇವಾಲಯಗಳನ್ನು ನಾಶ ಮಾಡಿದರು - ಹೀಗೆ ವಿಜಯನಗರ ಕುರಿತ ಪ್ರತೀತಿ ಇಂದಿಗೂ ಕನ್ನಡ ನಾಡಿನಲ್ಲಿ ಜನಜನಿತವಾಗಿದೆ.

ಪಾಶ್ಚಾತ್ಯ ಮತ್ತು ಭಾರತೀಯ ಇತಿಹಾಸಕಾರರು ಮಧ್ಯಕಾಲೀನ ಯುಗದಲ್ಲಿ ಭಾರತಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರ ಕಥನಗಳನ್ನೇ ಬಹುಪಾಲು ಆಧರಿಸಿದ್ದಾರೆ. ಅದರಲ್ಲೂ ಭಾರತೀಯ ಚರಿತ್ರೆಕಾರರು ಪರಂಪರೆಯ ಹೆಮ್ಮೆಯ ಭಾಗವಾಗಿ ಸನಾತನ ಊಳಿಗಮಾನ್ಯ ಸಂಸ್ಕೃತಿಯನ್ನು ಮೆರೆಸಿದ್ದರು. ಪಾಶ್ಚಾತ್ಯ ಚರಿತ್ರೆಕಾರರು ಭಾರತೀಯ ಹಿಂದೂ-ಮುಸ್ಲಿಂ ಸಮುದಾಯಗಳ ನಡುವೆ ಅನೈಕ್ಯತೆಯನ್ನು ಬಿತ್ತಿದ್ದಾರೆ. ಈ ಎರಡು ಬಗೆಯ ಇತಿಹಾಸ ಬರವಣಿಗೆಯ ಉದ್ದೇಶ ಮತ್ತು ವೈಧಾನಿಕತೆಯಿಂದ ವಾಸ್ತವ ಸ್ಥಿತಿಗತಿಗಳು ಹೊರಗುಳಿದಿವೆ. ಚರಿತ್ರೆಯ ಪುಟಗಳಲ್ಲಿ ರಾಜರು, ರಾಜಾಶ್ರಿತರು, ರಾಜಪೋಷಕರು, ರಾಜನ ಆಡಳಿತಾಧಿಕಾರಿಗಳು, ಸೇನಾಧಿಕಾರಿಗಳು, ರಾಜನ ಆಕ್ರಮಣಗಳು, ವ್ಯಾಪಾರಿಗಳು, ಶ್ರೀಮಂತರು, ಭೂಮಾಲೀಕರನ್ನು ಹೊರತು ಶ್ರಮಿಕ ಸಮುದಾಯಗಳ ಕುರಿತು ಒಂದೆರಡು ವಾಕ್ಯಗಳಿಗಿಂತ ಹೆಚ್ಚೇನೂ ಕಂಡುಬರುವುದಿಲ್ಲ. ಹಾಗಾಗಿ ವಿಜಯನಗರ ಕುರಿತ ಪ್ರಚಲಿತ ಪ್ರತೀತಿ ಬಹುಮಟ್ಟಿಗೆ ಇತಿಹಾಸದ ಪುಟಗಳಲ್ಲಿ ಕಂಡುಬರುವ ವಿವರಗಳ ಸ್ಥೂಲ ಪ್ರತಿಬಿಂಬವೆಂದೇ ಹೇಳಬಹುದು. ಹೀಗೆ ಅನುಮಾನ ಹುಟ್ಟಲು ಕಾರಣವಾದ ಅಂಶವನ್ನು ಪರಿಶೀಲಿಸಬಹುದು. ರಾಬರ್ಟ್ ಸಿವೆಲ್ ತನ್ನ 'ಎ ಫರಗಾಟನ್ ಎಂಪೈರ್' ಗ್ರಂಥದಲ್ಲಿ ರಕ್ಕಸತಂಗಡಿ ಯುದ್ಧದಲ್ಲಿ ರಾಮರಾಯನ ತಲೆ ಕಡಿದ ನಂತರ ವಿಜಯನಗರದಲ್ಲಿ ಮೂರು ದಿನಗಳಲ್ಲಿ ನಡೆದ ಮೂರು ಬಗೆಯ ಲೂಟಿಗಳನ್ನು ಕೌಟೊನನ್ನು ಆಧರಿಸಿ ಪ್ರಸ್ತಾಪಿಸಿದ್ದಾನೆ.

ಯುದ್ಧದಿಂದ ಸೋತು ಹಿಂದಿರುಗಿದ ಮೊದಲ ದಿನ ರಾಮರಾಯನ ಸೋದರ ತಿರುಮಲ ಮತ್ತು ಅವನ ಸಂಬಂಧಿಕರು ಸಿಂಹಾಸನನಿಷ್ಠ ಸೈನಿಕರ ಬೆಂಗಾವಲಿನಲ್ಲಿ ಅರಮನೆಯ ನೂರು ದಶಲಕ್ಷ ಪೌಂಡುಗಳಿಗಿಂತ ಅಧಿಕ ಬೆಲೆಯ ಬಂಗಾರ, ವಜ್ರಗಳು ಮತ್ತು ಬೆಲೆಯುಳ್ಳ ಹರಳುಗಳು, ರಾಜಲಾಂಛನಗಳು, ರತ್ನಖಚಿತ ಸಿಂಹಾಸನ ಮೊದಲಾದುವನ್ನು ಐನೂರೈವತ್ತು ಆನೆಗಳ ಮೇಲೆ ಹೊರಿಸಿಕೊಂಡು ದಕ್ಷಿಣದ ಪೆನುಕೊಂಡ ಕೋಟೆಗೆ ಓಡಿಹೋದರು.

ಮರುದಿನ ಬ್ರಿಂಜಾರಿ, ಲಂಬಾಡಿ, ಕುರುಬ ಮತ್ತು ಕಾಡುಜನರ ತಂಡಗಳು ವಿಜಯನಗರದಲ್ಲಿ ಆರು ಬಾರಿ ಉಗ್ರಾಣಗಳನ್ನು ಮತ್ತು ಅಂಗಡಿಗಳನ್ನು ಲೂಟಿ ಮಾಡಿದರು.

ಯುದ್ಧದಲ್ಲಿ ಗೆದ್ದ ಮುಸಲ್ಮಾನರು ನಂತರ ಐದು ತಿಂಗಳ ಕಾಲ ಇಡೀ ವಿಜಯನಗರದ ಸಂಪತ್ತನ್ನು ಲೂಟಿ ಮಾಡಿ ನಾಶಗೊಳಿಸಿದರು. ಮಾತ್ರವಲ್ಲದೆ, ಬ್ರಾಹ್ಮಣರು ದಿನನಿತ್ಯ ಭೇಟಿ ನೀಡುವ ಜನರಿಂದ ಕಾಣಿಕೆ ಮತ್ತು ಹಣ ಪಡೆಯುತ್ತಿದ್ದ ಹಾಗೂ ರಾಜರು ಮತ್ತು ದೊರೆಗಳು, ವರ್ತಕರು ಮತ್ತು ಭೂಮಾಲೀಕರು ಸಮೃದ್ಧ ಕಾಣಿಕೆ ಅರ್ಪಿಸುತ್ತಿದ್ದ ದೇವಾಲಯಗಳಲ್ಲಿ ಸಂಪತ್ತು ಪ್ರತಿವರ್ಷವೂ ಹೆಚ್ಚುತ್ತಿದ್ದು, ಮೊದಲಬಾರಿಗೆ ಅವನ್ನು ಕೊಳ್ಳೆ ಹೊಡೆದ ಮುಸ್ಲಿಮರು ನೂರು ಸಾವಿರ ಪೌಂಡು ಬೆಲೆಯ ಬಂಗಾರವನ್ನು ಹೊತ್ತೊಯ್ದರು.

ಇವು ಮಾತ್ರವಲ್ಲದೆ, ವಿಜಯನಗರದಲ್ಲಿ ಶೈವ ಮತ್ತು ವೈಷ್ಣವ ಮತಗಳು ಪ್ರಬಲವಾಗಿದ್ದವು. ಇವೆರಡರ ನಡುವೆ ಪ್ರಾಬಲ್ಯ ಮೆರೆಯುವ ವಿಷಯದಲ್ಲಿ ಸ್ಪರ್ಧೆಯುಂಟಾಗಿ ವೈಮನಸ್ಯ ಬೆಳೆದಿತ್ತು. ಸೋತ

ವಿಜಯನಗರದಲ್ಲಿ ಇವೆರಡು ಮತಗುಂಪುಗಳ ನಡುವೆ ತೀವ್ರ ತಿಕ್ಕಾಟವಾಗಿ ಹಂಪೆಯ ಮೂಲ ವಿರೂಪಾಕ್ಷ ದೇವಾಲಯ ಮತ್ತು ಹೆಬ್ಬಂಡೆಯ ಮೇಲೆ ಕೊರೆದ ಮೂರ್ತಿಗಳಿರುವ ದೇವಾಲಯಗಳು, ಶಾಕ ದೇವಾಲಯಗಳನ್ನು ಹೊರತುಪಡಿಸಿ, ಉಳಿದೆಲ್ಲವೂ ಲೂಟಿಯಾಗಿ ಸರ್ವನಾಶವಾದವು ಎಂದು ಹೇಳಲಾಗುತ್ತದೆ. ಇದಕ್ಕೆ ಇತಿಹಾಸದ ಪುಟಗಳಲ್ಲಿ ಯಾವ ಸಮರ್ಥನೀಯ ಆಧಾರಳೂ ಇಲ್ಲವಾಗಿ ಘಟಿಸಿದ್ದಿರಬಹುದಾದ ವೈದಿಕ ಮತಗಳ ನಡುವಿನ ಸಂಘರ್ಷ ಮುಗುಮ್ಮಾಗಿ ಮುಸ್ಲಿಮರ ದಾಳಿ ಮತ್ತು ಲೂಟಿಯ ಭಾಗವಾಗಿ ಸೇರ್ಪಡೆ ಹೊಂದಿರುವ ಸಾಧ್ಯತೆಯಿದೆ.

ಗೆದ್ದ ಮುಸ್ಲಿಂ ರಾಜರಿಗೆ ಸ್ವಮತ ಸ್ಥಾಪನೆ - ಪರಮತ ಖಂಡನೆಗಳ ಜೊತೆಗೆ ವಿಜಯನಗರದ ಸಂಪತ್ತಿನ ಮೇಲೆ ಕಣ್ಣಿತ್ತು ಅದುವರೆಗೂ ಸೋಲಿಸಲಾಗದಿದ್ದ ವಿಜಯನಗರ ಸಾಮ್ರಾಜ್ಯವನ್ನು ಅವರು ಹೇಗೋ ಒಮ್ಮೆ ಸೋಲಿಸಿದ ನಂತರ ಅದನ್ನು ಪೂರ್ತಿಯಾಗಿ ಮಣಿಸಬೇಕಿತ್ತು. ಅಲ್ಲದೆ ಯುದ್ಧದಲ್ಲಿ ಗೆದ್ದ ತಮ್ಮ ಸೈನಿಕರನ್ನು ಸಂತೋಷಪಡಿಸುವ ಉದ್ದೇಶದಿಂದಲೂ ಅವರು ಲೂಟಿಯನ್ನು ಉತ್ತೇಜಿಸಿದರು. ವೈದಿಕ ಮತಗಳು ಕೂಡ ಮುಸ್ಲಿಂ ಧರ್ಮದಂತೆ ಸ್ವಮತ ಪ್ರತಿಪಾದನೆ ಮತ್ತು ಪರಮತ ಖಂಡನೆಯ ನೀತಿಯನ್ನು ಅನುಸರಿಸುತ್ತಿದ್ದುದರಿಂದ ಅವುಗಳ ನಡುವೆ ತಾರಕಕ್ಕೇರಿದ ಸಂಘರ್ಷವನ್ನು ತಳ್ಳಿಹಾಕಲಾಗದು. ಆ ಸಂದರ್ಭದಲ್ಲಿ ಪಡೆದಿದ್ದಿರಬಹುದಾದ ವಿರೋಧಿ ದೇವಾಲಯಗಳ ಧ್ವಂಸ ಮತ್ತು ಲೂಟಿಗಳು ಮತೀಯ ಮನಃಸ್ಥಿತಿಗೆ ಅನುಗುಣವಾಗಿಯೆ ಇವೆ.

ಇವೆಲ್ಲಕ್ಕಿಂತ ಸಮಾಜದ ತಳವರ್ಗಗಳಿಗೆ ಸೇರಿದ ಪಿಂಜಾರಿ, ಲಂಬಾಡಿ, ಕುರುಬ ಮತ್ತು ಕಾಡುಜನರ ತಂಡಗಳು ಆರು ಬಾರಿ ಲೂಟಿ ಮಾಡಿದುದು ಭಿನ್ನ ಬಗೆಯ ಸಂಗತಿಯಾಗಿ ಕಾಣುತ್ತದೆ. ಶಿಷ್ಟ ಸಮಾಜದ ಕೆಳಸಮುದಾಯಗಳು ಮತ್ತು ಊರಾಚೆ ವಾಸಮಾಡುತ್ತಿದ್ದ ಜನಸಮುದಾಯಗಳು ಯುದ್ಧದಲ್ಲಿ ಸೋಲುಂಡ ರಾಜ್ಯಗಳಲ್ಲಿ ಲೂಟಿ ಮಾಡಿದವು ಎಂದರೆ ಅವರ ಆರ್ಥಿಕ ಸ್ಥಿತಿ ಉತ್ತಮವಾಗಿರಲಿಲ್ಲ ಎಂದೇ ಅರ್ಥ. ದಮನಿತ ವರ್ಗಗಳಿಗೆ ಸೇರಿದ ಸಮುದಾಯಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಅಸಹಾಯಕರಾಗಿದ್ದಿರಬೇಕು. ಅರಾಜಕತೆ ಉಂಟಾಗಿದ್ದ ಸಂದರ್ಭದಲ್ಲಿ ಅವು ತಮ್ಮ ಅವಕಾಶವನ್ನು ಬಳಸಿಕೊಂಡಿದ್ದಿರಬಹುದು. ನಿರ್ಗತಿಕರು, ಹಸಿವಿನ ಶೂಲೆ ತಾಳದವರು ಮಾತ್ರ ಲೂಟಿ ದರೋಡೆಯಂಥ ಅಕ್ರಮ ಸಂಪಾದನೆಗೆ ಮುಂದಾಗಲು ಸಾಧ್ಯ. ಈ ಜನತೆ ಅಕ್ಕಿ, ಗೋಧಿ, ಮುಸುಕಿನ ಜೋಳ, ಜವೆ, ಅವರೆ, ಹಸಿಕಡಲೆ, ಬೇಳೆಕಾಳು, ಹುರುಳಿ ಮತ್ತಿತರ ಧಾನ್ಯಗಳ ದಾಸ್ತಾನುಗಳಿದ್ದ ಮಳಿಗೆ - ಅಂಗಡಿಗಳ ಮೇಲೆ ದಾಳಿ ನಡೆಸಿದ್ದು ಗಮನಾರ್ಹವಾಗಿದೆ.

ವಿಜಯನಗರದ ಬೀದಿಗಳಲ್ಲಿ ಮುತ್ತು ರತ್ನ ವಜ್ರ ವೈಡೂರ್ಯಗಳನ್ನು ಬಳ್ಳದಿಂದ ಅಳೆದು ಮಾರಾಟ ಮಾಡುತ್ತಿದ್ದ, ಚಿನ್ನದ ತಟ್ಟೆಯಲ್ಲಿ ಊಟ ಮಾಡುತ್ತಿದ್ದ ಚಿತ್ರಗಳ ನಡುವೆ ಈ ಪ್ರಶ್ನೆ ನಮ್ಮನ್ನು ಮತ್ತೊಂದು ದಿಕ್ಕಿಗೆ ಎಳೆದೊಯ್ಯುತ್ತದೆ. ವಿಜಯನಗರದ ಚರಿತ್ರೆಯ ಬಹುಪಾಲು ಪಠ್ಯಗಳು ಆ ಸಾಮ್ರಾಜ್ಯದ

ಗತವೈಭವವನ್ನೇ ಕಟ್ಟಿಕೊಂಡಿರುವ ಹಿನ್ನೆಲೆಯಲ್ಲಿ ಅಂದಿನ ಕಾಲದಲ್ಲಿದ್ದಿರಬಹುದಾದ ದಟ್ಟದಾರಿದ್ರ್ಯ ಸ್ಥಿತಿಗತಿಗಳು ಮಧ್ಯಯುಗದ ಸಂಸ್ಕೃತಿಯನ್ನು ಅರಿಯುವಲ್ಲಿ ವೈಭವದಷ್ಟೆ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಎ.ಎನ್. ಲಾಂಗ್‌ಹರ್ಸ್ಟ್ ತನ್ನ 'ಹಂಪಿ ರೂಯಿನ್ಸ್' ಕೃತಿಯಲ್ಲಿ ಬಡವರ ಮನೆಗಳಂತೂ ಕೊಳಕಿನ ಮುದ್ದೆಯಾಗಿ ಇವತ್ತಿನ ದೊಡ್ಡ ನಗರಗಳ ಕೊಳಚೆ ಪ್ರದೇಶಗಳನ್ನು ನೆನಪಿಗೆ ತರುವಂತಿದ್ದವು ಎಂದು ಹೇಳುತ್ತಾನೆ. ಲಾಂಗ್‌ಹರ್ಸ್ಟ್‌ನಿಗೆ ವಿಜಯನಗರದಲ್ಲಿದ್ದ ಜನರ ದಾರುಣ ಜೀವನ ಕಣ್ಣುಕಟ್ಟಿದೆ. ಆದರೆ ಅವರು ಸಮಾಜದ ಯಾವ ಸಮುದಾಯಗಳಿಗೆ ಸೇರಿದವರೆಂಬ ಅರಿವು ಅವನಿಗೆ ಇದ್ದಂತೆ ಇಲ್ಲ.

ಪೋರ್ಚುಗೀಸ್ ಪ್ರವಾಸಿಗ ಡಾರ್ಟೆ ಬಾರ್ಬೋಸಾ ತನ್ನ 'ದಿ ಬುಕ್ ಆಫ್ ಡಾರ್ಟೆ ಬಾರ್‌ಬೋಸಾ' ಎಂಬ ಪ್ರವಾಸ ಕಥನದಲ್ಲಿ, ಸಾಮಾನ್ಯ ಜನರ ಮನೆಗಳು ಹುಲ್ಲುಹೊದಿಸಿದವಾಗಿದ್ದವು. ಅವನ್ನು ಅವರವರ ವೃತ್ತಿಗಳಿಗೆ ಅನುಗುಣವಾಗಿ ವಿಂಗಡಿಸಲಾಗಿತ್ತು. ಉದ್ದ ಬೀದಿಯ ಅಕ್ಕಪಕ್ಕದಲ್ಲಿ ಅಗಲವಾದ ಅಂಗಳದಿಂದ ಅವು ಕೂಡಿದ್ದವು ಎನ್ನುತ್ತಾನೆ. ಅವನು ಕೆಳಸಮುದಾಯಗಳ ಕೇರಿಗಳನ್ನು ಕುರಿತು ವಿವರಣೆ ನೀಡಿದ್ದಾನಾದರೂ ಅದು ಭಾರತೀಯ ಸಮಾಜದ ಏಣಿಶ್ರೇಣಿ ವ್ಯವಸ್ಥೆಗೆ ಅನುಗುಣವಾಗಿ ಖಚಿತವಾಗಿಲ್ಲ.

ಬಿ.ಎ. ಸಾಲತೊರೆ ತಮ್ಮ 'ವಿಜಯನಗರ ಸಾಮ್ರಾಜ್ಯದ ರಾಜಕೀಯ ಮತ್ತು ಸಾಮಾಜಿಕ ಜೀವನ' ಕೃತಿಯಲ್ಲಿ "ವಿಜಯನಗರ ಕಾಲದಲ್ಲಿ ಶ್ರೇಣಿಗಳು ಹಿಂದಿನ ಯಾವ ಶತಮಾನಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿ ಸಂಘಟನೆಯನ್ನೂ ಪ್ರಭಾವವನ್ನೂ ಪಡೆದಿದ್ದವೆಂದು ಹೇಳಬಹುದು. ಶ್ರೇಣಿಗಳ ಸದಸ್ಯರನ್ನು ವೀರ ಬಣಜಿಗರೆಂದು ಕರೆಯಲಾಗುತ್ತಿತ್ತು. ಅವರು ಬಲವತ್ತರವಾದ ಪ್ರಭಾವವುಳ್ಳವರೇ ಆಗಿದ್ದರು. ಶ್ರೇಣಿಗಳ ಧುರೀಣರು ರಾಜ್ಯಾಲಯದಲ್ಲಿಯೂ ಸಹ ಬಲವಾದ ಹಿಡಿತವುಳ್ಳವರಾಗಿದ್ದಂತೆ ಕಂಡುಬರುತ್ತದೆ. ಶ್ರೇಣಿ ಧುರೀಣರು ಸರ್ಕಾರಕ್ಕೆ ಅರ್ಜಿ ಸಲ್ಲಿಸಿದಂತೆ ಅದು ಹೊಸ ಪಟ್ಟಣಗಳನ್ನು ನಿರ್ಮಿಸಿತು. ಅಲ್ಲದೆ ಶ್ರೇಣಿಯ ಪ್ರಮುಖರು ಸರಕಾರದಿಂದ ಕೆಲ ಕರವಿನಾಯಿತಿಯನ್ನೂ ಪಡೆದರು" ಎಂದು ಹೇಳಿದ್ದಾರೆ. ಜಾತಿ ವ್ಯವಸ್ಥೆಯ ಮಧ್ಯಮ ಕ್ರಮಾಂಕದಲ್ಲಿ ಬರುವ ವ್ಯಾಪಾರಿ ವರ್ಗ ವಿಜಯನಗರ ಕಾಲದಲ್ಲಿ ಆಡಳಿತ ವ್ಯವಸ್ಥೆಯೊಂದಿಗೆ ಲಾಭದಾಯಕ ಸಂಬಂಧ ಹೊಂದಿತ್ತು. ಸಮಕಾಲೀನ ಶ್ರೀಮಂತ ಸಮಾಜದಲ್ಲಿ ಸಮಪಾಲು ಪಡೆದ ಜನವರ್ಗವಾಗಿತ್ತು.

ವಿಜಯನಗರದ ಕಾಲದಲ್ಲಿ ಜಾತಿ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಈ ವ್ಯವಸ್ಥೆಯಲ್ಲಿ ಮೇಲುವರ್ಗಗಳು ಆಳುವ ವರ್ಗಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದವು ಮತ್ತು ಸ್ವಕೇಂದ್ರಿತ ನೀತಿಯನ್ನು ಅನುಸರಿಸಿದ್ದವು. ಅಂದಿನ ಕಾಲದಲ್ಲಿ ದೇವಾಲಯಗಳು ಸಾಮಾಜಿಕ - ಆರ್ಥಿಕ ಕೇಂದ್ರಗಳಾಗಿ ರೂಪಿತವಾಗಿದ್ದವು. ವಿಜಯನಗರದ ದೇವಾಲಯಗಳು ಕ್ರೋಢೀಕೃತ ಸಂಪತ್ತಿನ ಕೇಂದ್ರಗಳಾಗಿದ್ದವು. ಸಂಪತ್ತಿನ ಉಪಭೋಗದಲ್ಲಿ ಆಳುವ ಸಾಮಾಜಿಕ - ರಾಜಕೀಯ ವರ್ಗಗಳು ಸಿಂಹಪಾಲು ಹೊಂದಿದ್ದವು. ಈ ಮಾತನ್ನು

ಡೊಮಿಂಗ್ ಪಯೇಸ್‌ನ ಬಣ್ಣನೆ ಸಮರ್ಥಿಸುತ್ತದೆ: "ಬಂಗಾರದ ಗಿಲೀಟು ಮಾಡಿದ, ತಾಮ್ರ ಹೊದಿಸಿದ ಚಿಕ್ಕ ಪಾವಟಿಗೆಗಳಿವೆ ಮತ್ತು ಅಲ್ಲಿಂದ ಮೇಲಿನವರೆಗೆ ಪೂರ್ತಿ ಬಂಗಾರದ ಪದರ ಕೂಡಿಸಲಾಗಿದೆ... ದ್ವಾರ ಮಂಟಪವಿದೆ. ಅದರ ಮೇಲೆ ಮಾಣಿಕ್ಯ, ವಜ್ರ ಇತರ ಎಲ್ಲ ಬೆಲೆಯುಳ್ಳ ಹರಳುಗಳು ಮತ್ತು ಮುತ್ತುಗಳ ಕೆಲಸವಿದೆ. ದ್ವಾರಮಂಟಪದ ಮೇಲೆ ಎರಡು ಸುವರ್ಣ ಲೋಲಕಗಳಿವೆ. ಈ ಕೋಣೆಯಲ್ಲಿ ಒಂದು ಮಂಚವಿದೆ. ಅದರ ಕಾಲುಗಳು ದ್ವಾರಮಂಟಪದಂತೆಯೆ ಇವೆ. ಅಡ್ಡಪಟ್ಟಿಗಳನ್ನು ಬಂಗಾರದಿಂದ ಹೊಂದಿಸಲಾಗಿತ್ತು." ಹಾಗೆಯೇ "... ಮೂರು ಬಂಗಾರದ ಕಡಾಯಿಗಳನ್ನು ಕಂಡೆವು. ಅವುಗಳು ಎಷ್ಟು ದೊಡ್ಡವಿದ್ದವೆಂದರೆ ಪ್ರತಿಯೊಂದರಲ್ಲಿ ಅರ್ಧ ಆಕಳನ್ನು ಬೇಯಿಸಬಹುದಿತ್ತು. ಅವುಗಳೊಂದಿಗೆ ಬಹಳ ದೊಡ್ಡ ಬೆಳ್ಳಿಯ ಕಡಾಯಿಗಳು ಮತ್ತು ಕೆಲವು ಚಿಕ್ಕ ಹಾಗೂ ಕೆಲವು ದೊಡ್ಡ ಬಂಗಾರದ ಪಾತ್ರೆಗಳಿದ್ದವು." ಇದು ವಿಜಯನಗರದ ಅರಮನೆಯ ಬಣ್ಣನೆಯ ಸಣ್ಣ ಉದಾಹರಣೆ. ಅಲ್ಲಿ ಮರ, ಕಲ್ಲು, ಮಣ್ಣು, ಕಬ್ಬಿಣ ಮತ್ತಿತರ ಲೋಹಗಳ ಬದಲಿಗೆ ಚಿನ್ನವನ್ನು ಬಳಸಲಾಗಿತ್ತು. ಆಳುವ ವರ್ಗಗಳ ಜೀವನ ವಿಧಾನದಲ್ಲಿ ಸಂಪತ್ತಿನ ದುಂದು ಬಳಕೆ ಯಥೇಚ್ಛವಾಗಿತ್ತು.

ಅಸ್ಪೃಶ್ಯರು ಊರ ಹೊರಗೆ ವಾಸಿಸುತ್ತಿದ್ದು, ನಡುಹಗಲಿನಲ್ಲಿ ಮಾತ್ರ ಊರು ಪ್ರವೇಶ ಮಾಡುವ ನಿಯಮವಿತ್ತು. ಆ ಸಂದರ್ಭದಲ್ಲಿ 'ಸಂಬೋಳಿ' ಎಂದರಚಿ ಕೋಲು ಕುಟ್ಟುತ್ತ, ತಮ್ಮ ಬರುವಿಕೆ ಬಗ್ಗೆ ಎಚ್ಚರಿಕೆ ನೀಡಬೇಕಿತ್ತು. ಈ ಸೂತಕಾಚರಣೆ ಕೆಳಜಾತಿಗಳ ಮೇಲೆ ಬಹಿಷ್ಕೃತ ಜೀವನ ಹೇರುವ ಮೂಲಕ ಅವರ ಹಕ್ಕುಗಳನ್ನು ಜೀವಿತಾವಧಿ ಪೂರ್ತಿ ಕಸಿದುಕೊಂಡಿತ್ತು. ಅವರು ತಮ್ಮ ಮೇಲೆ ಹೊರಿಸಲಾಗಿದ್ದ ಮುಟ್ಟದ, ನೆರಳು ಬೀಳದ ಮತ್ತು ನೋಡದ ಬಹಿಷ್ಕಾರವನ್ನು ಸ್ವಹಿತ ದೃಷ್ಟಿಕೋನದಿಂದ ಪಾಲನೆ ಮಾಡಬೇಕಿತ್ತು. ಸಂಬೋಳಿ ಆಚರಣೆ ಸಾರ್ವಜನಿಕ ಪ್ರದೇಶಗಳ ಸ್ವಚ್ಛತೆ ಮಾಡುವ ಭಾಗವಾಗಿದ್ದು, ಅಸ್ಪೃಶ್ಯರ ಸಾಮಾಜಿಕ ಜೀವನ ಅಧೋಗತಿಯಲ್ಲಿದ್ದ ಸಂಕೇತವಾಗಿದೆ. ಅವರ ಆರ್ಥಿಕ ಜೀವನ ಆಧುನಿಕ ಜಾಡಮಾಲಿಗಳ ಸ್ಥಿತಿಯನ್ನು ಹೋಲುತ್ತದೆ. ಅಂದು ಗುಲಾಮರು, ಸೂಳೆದೆರೆ ಕಟ್ಟಲಾಗದಂಥ ಕಡು ಬಡತನದಲ್ಲಿದ್ದ ಮಹಿಳೆಯರ ಬಗ್ಗೆಯೂ ಪ್ರಸ್ತಾಪಗಳಿವೆ.

ವಿಜಯನಗರ ಸಾಮ್ರಾಜ್ಯದ ಆರ್ಥಿಕ ವ್ಯವಸ್ಥೆ ಸಂಪೂರ್ಣವಾಗಿ ಬೇಸಾಯವನ್ನು ಅವಲಂಬಿಸಿತ್ತು. ಭೂ ಕಂದಾಯ ಸಾಮ್ರಾಜ್ಯದ ಮುಖ್ಯ ಮೂಲ ಆದಾಯವಾಗಿತ್ತು. ಸಾಮಾನ್ಯವಾಗಿ ಭೂಕಂದಾಯ ಕೃಷಿ ಉತ್ಪನ್ನದ ೧/೬ ಭಾಗದಷ್ಟು, ಕೆಲವು ವೇಳೆ ೧/೪ರಷ್ಟು ನೀಡಬೇಕಿತ್ತು. ಆದರೆ ಬ್ರಾಹ್ಮಣರು ಮತ್ತು ದೇವಾಲಯಗಳ ಭೂಮಿಗೆ ಉತ್ಪನ್ನದ ೧/೨೦ ರಿಂದ ೧/೩೦ ಭಾಗವಾಗಿರುತ್ತಿತ್ತು. ರೈತ ಸಮುದಾಯ ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸಿದ ಪರಿಣಾಮವಾಗಿ ವಸಾಹತು ಮತ್ತು ವಸಾಹತೋತ್ತರ ಕಾಲದಲ್ಲಿ ರೈತ ಹೋರಾಟಗಳು ನಡೆದಿವೆ. ಅದು ವಸಾಹತುಪೂರ್ವ ಕಾಲದ ಸಣ್ಣಪುಟ್ಟ ರಾಜ್ಯಗಳು ಮತ್ತು ಸಾಮ್ರಾಜ್ಯಗಳಲ್ಲಿದ್ದ ಸ್ಥಿತಿಯ ಮುಂದುವರಿದ ಭಾಗವಾಗಿದ್ದಿರಬೇಕು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲೂ ನೂರಾರು ರೈತ

ದಂಗೆಗಳು ನಡೆದವೆಂದು ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ರೈತ ಸಮುದಾಯ ಎದುರಿಸಿದ ಸಮಸ್ಯೆಗಳು, ಆರ್ಥಿಕ ಸ್ಥಿತಿಗತಿಗಳು ಅಧ್ಯಯನದ ವಿಷಯವಾಗಿದೆ.

ಶಿಷ್ಟ ಸಮಾಜದ ಹಿಂದುಳಿದ ಮತ್ತು ಕೆಳಸಮುದಾಯಗಳು ಮತ್ತು ಊರಾಚೆ ಜೀವಿಸುತ್ತಿದ್ದ ಸಮುದಾಯಗಳ ಆರ್ಥಿಕ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ. ಆದರೆ ವಿಜಯನಗರ ಕಾಲದಲ್ಲಿ ಜೀವಿಸಿದ್ದ ಕನಕ-ಪುರಂದರರು ತಮ್ಮ ರಚನೆಗಳಲ್ಲಿ ನೀಡುವ ಚಿತ್ರಣ ಅಧಿಕೃತವಾಗಿದೆ. ಅವರು ಭಾಗವತರಾಗಿ ಸಾಮ್ರಾಜ್ಯದುದ್ದಗಲ ತಿರುಗಿದವರೂ ಒಟ್ಟು ಸಮಾಜದ ನಿಕಟ ಸಂಪರ್ಕ ಪಡೆದಿದ್ದವರೂ ಆಗಿದ್ದರು.

ಕನಕದಾಸರ 'ಮೋಹನ ತರಂಗಿಣಿ'ಯ ೧೮ನೆಯ ಅಧ್ಯಾಯ 'ಅನಿರುದ್ಧನ ಬೇಟೆ' ಅಷ್ಟಾದಶ ಬಣ್ಣನೆಯ ಭಾಗವಾಗಿದೆ. ಅನಿರುದ್ಧನ ಸೈನಿಕ ಪಡೆ ಅವನನ್ನು ಹಿಂಬಾಲಿಸಿ ಕಾಡಿನ ಬೇಟೆಯಲ್ಲಿ ಭಾಗವಹಿಸುತ್ತದೆ. ಬೇಡರ ಪಡೆ ಬೇಟೆಯ ಉಜ್ಜುಗದಲ್ಲಿ ವ್ಯಕ್ತಪಡಿಸಿರುವ ಉತ್ಸಾಹ, ಹುಮ್ಮಸ್ಸು, ಸಂಭ್ರಮದ ಭಾವನೆಗಳು ಹಂಪಿ ಸುತ್ತಮುತ್ತಲಿನ ಇಂದಿನ ಕಾಲದ ಬೇಡ ಜನತೆ ಯುಗಾದಿಯ ಹಬ್ಬದ ದಿನದಂದು ಬೇಟೆಯಾಡಿದ ಮಿಗಗಳ ಮೆರವಣಿಗೆಯಲ್ಲಿನ ಮನಃಸ್ಥಿತಿಯನ್ನು ಹೋಲುತ್ತದೆ. ಇಂದಿನ ಹೊಸಪೇಟೆ ಮತ್ತು ಕೊಪ್ಪಳದ ಸುತ್ತಮುತ್ತಲ ಪ್ರದೇಶಗಳಲ್ಲಿ ಬೇಡ ಮತ್ತು ಕುರುಬ ಸಮುದಾಯಗಳೇ ಪ್ರಮುಖ ಸಮುದಾಯಗಳಾಗಿದ್ದು, ಇದು ಅಂದಿಗೂ ಅನ್ವಯವಾಗುವ ವಾಸ್ತವಾಂಶವಾಗಿದೆ. ಕನಕದಾಸರು ತಮ್ಮ ಕಾವ್ಯದಲ್ಲಿ ಬೇಡರ ಬಗ್ಗೆ ನೀಡಿರುವ ಮಾಹಿತಿ ಅಂದಿನ ಬೇಡ ಸಮುದಾಯದ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಬಹುಸಂಖ್ಯಾತರಾಗಿದ್ದ ಅವರು ವಿಜಯನಗರದ ಸೈನಿಕ ಪಡೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೆಂದು ಇದರಿಂದ ತಿಳಿಯಬಹುದು. ಅಂದು ರಾಜನಿಂದ ನೇಮಕವಾಗಿ ನಿಗದಿತ ಸಂಬಳ ಪಡೆಯುತ್ತಿದ್ದ ಸೈನಿಕರು ಮತ್ತು ಯುದ್ಧ ಕಾಲದಲ್ಲಿ ಸೈನಿಕರಾಗಿ ಹೋರಾಡಿ ಲಾಭದಾಯಕ ಇನಾಮು ಪಡೆಯಲು ಸಾವಿನ ಹಂಗು ತೊರೆದು ಹೋರಾಡುವ ಸೈನ್ಯಪಡೆ ಎಂದು ಎರಡು ವಿಭಾಗಗಳಿದ್ದವು.

ಅನಿರುದ್ಧನು ಸೈನ್ಯದೊಡನೆ ಹೊರಟು ಮುಂಬನದಲ್ಲಿದ್ದ ಬುಡಕಟ್ಟು ಮಹಿಳೆಯರಾದ ಚಿಂಚಿತಿಯರ ಆಟಗಳನ್ನು ನೋಡಲು ಬರುತ್ತಾನೆ. ಯೌವನ ತುಂಬಿದ ಆ ಮಹಿಳೆಯರ ಗುಂಪು ಗಜದಂತ ಮುಸಲದಿಂದ (ಒನಕೆ) ಬಿದಿರಕ್ಕಿ ಕುಟ್ಟುತ್ತಿದ್ದು 'ರಂಗುನೀಲದ ಪುತ್ಥಳಿಗಳಂತೆ' ಕಂಡಿದ್ದಾರೆ. ಬಳ್ಳಾರಿ ಮತ್ತು ನಲ್ಲೂರು ಜಿಲ್ಲೆಗಳಲ್ಲಿ ಚೆಂಚು ಬುಡಕಟ್ಟು ಇಂದಿಗೂ ಕಂಡುಬರುತ್ತದೆ. ವಿಜಯನಗರದ ಶಿಲ್ಪಗಳಲ್ಲಿ ಕೆತ್ತನೆ ವೃತ್ತಿ ಮಾಡಿರುವ ಬಿಲ್ಲುಗಾತಿಯರನ್ನು ಚೆಂಚು ಬುಡಕಟ್ಟಿನ ಮಹಿಳೆಯರೆಂದೂ ಚೆಂಚುಲಕ್ಷ್ಮಿಯರೆಂದೂ ಕರೆಯಲಾಗುತ್ತದೆ. ಚಿಂಚಿತಿಯರು ಚೆಂಚು ಬುಡಕಟ್ಟಿನ ಮಹಿಳೆಯರಾಗಿದ್ದು, ತಮ್ಮಲ್ಲಿಗೆ ಬಂದ ರಾಜನಿಗೆ ಪತ್ರೋಪಹಾರವನ್ನು ಹಾಕಿ ಸ್ವಾಗತ ನೀಡುತ್ತಾರೆ. ಅನಂತರ ಅವರು ಕಾಡಿನಲ್ಲಿ ಸಂಗ್ರಹಿಸಿದ ಆಹಾರ ಮತ್ತು ಕಾಡಿನಲ್ಲಿ ಸಾಹಸ ಮೆರೆದು ಬೇಟೆಯಾಡಿ ಪಡೆದ ಕ್ರೂರ ಪ್ರಾಣಿಗಳ ವಿಶಿಷ್ಟ ವಸ್ತುಗಳನ್ನು ಅರ್ಪಿಸುತ್ತಾರೆ. ಅವರು ಸಮರ್ಪಿಸಿದ ಆಹಾರ ಪದಾರ್ಥಗಳಲ್ಲಿ ಬಿದಿರಕ್ಕಿ, ಜೇನುತುಪ್ಪ, ಖರ್ಜೂರ, ದ್ರಾಕ್ಷಿ, ಬದರಿ ಮುಂತಾದ

ಸತ್ಫಲಗಳು ಮತ್ತು ಉದುರಿದ ಕಳಿತ ಹಣ್ಣುಗಳಿದ್ದುದು ಗಮನಿಸತಕ್ಕದ್ದಾಗಿದೆ. ಬಿದರಕ್ಕಿ ಬರಗಾಲದಲ್ಲಿ ಫಸಲು ಬಿಡುವ ಧಾನ್ಯವಾಗಿದೆ. ವಿಜಯನಗರದಲ್ಲಿ ದಾಸ್ತಾನು ಮಾಡುತ್ತಿದ್ದ ಮತ್ತು ಬಳಸುತ್ತಿದ್ದ ಅಕ್ಕಿ, ಗೋಧಿ, ಜವೆ, ಬೇಳೆ ಕಾಳು ಮತ್ತಿತರ ದವಸ ಧಾನ್ಯಗಳ ಬಳಕೆಯೆ ಬುಡಕಟ್ಟುಗಳಲ್ಲಿ ಇರಲಿಲ್ಲವೆಂಬುದು ಮುಖ್ಯ. ಇಂಥ ಕಾಡು ಜನತೆಗೆ ಕಾಡಿನಲ್ಲಿ ಬರ ಬಂದು ಆಹಾರ ಉತ್ಪಾದನೆಯಿಲ್ಲದೆ ಕಾಡು ಫಲಾಹಾರಗಳು ಸಂಗ್ರಹವಾಗದೆ ಇದ್ದ ಸಂದರ್ಭಗಳಲ್ಲಿ ಗೆಡ್ಡೆ ಗೆಣಸು, ಕಂದ ಮೂಲಗಳನ್ನು ಅಗೆದು ತಿಂದು ಹಸಿವು ನೀಗಿಸುವುದು ಅನಿವಾರ್ಯವಾಗಿತ್ತು. ಅದಕ್ಕೂ ಕೊರತೆಯುಂಟಾದಾಗ ನಗರಗಳಲ್ಲಿ ದಾಸ್ತಾನು ಮಾಡಿರುವ ಧಾನ್ಯಗಳನ್ನು ಪಡೆಯಬೇಕಿತ್ತು. ಆದರೆ ಅದನ್ನು ಪಡೆಯಲು ಅಗತ್ಯವಾದ ಹಣಕಾಸು ಮತ್ತು ಸಂಪತ್ತಿಲ್ಲದ ಹೀನ ಸ್ಥಿತಿಯಲ್ಲಿ ಹಸಿವನ್ನು ಹಿಂಗಿಸಿಕೊಳ್ಳುವುದು ಹೇಗೆ ? ಸೋತ ವಿಜಯನಗರದಲ್ಲಿ ಆರು ಬಾರಿ ಉಗ್ರಾಣ ಮತ್ತು ಅಂಗಡಿಗಳನ್ನು ಲೂಟಿ ಮಾಡಿದ ಪಿಂಜಾರಿಗಳು, ಲಂಬಾಡಿಗಳು, ಕುರುಬ ಮತ್ತು ಕಾಡುಜನರ ತಂಡಗಳ ಸ್ಥಿತಿಯೂ ಇದೇ ಆಗಿತ್ತು.

ಕನಕದಾಸರ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಹಾಡಿನ ಸಾಲು ಜೀವನದ ಮೂಲ ಅವಶ್ಯಕತೆಯಾದ ಅನ್ನ, ಬಟ್ಟೆ ಮತ್ತು ಸೂರಿನ ಸಮಸ್ಯೆ ವಿಜಯನಗರದ ಬಹುಪಾಲು ಸಮುದಾಯಗಳ ಸಮಸ್ಯೆಯಾಗಿತ್ತೆಂದು ಕಾಣಿಸಿದೆ. ಅಂದು 'ಕೊಟ್ಟಣವನು ಕುಟ್ಟಿಕೊಂಡು ಕಟ್ಟಿಗೆಯನು ಹೊತ್ತುಕೊಂಡು ಕಷ್ಟ ಮಾಡಿ ಬದುಕುವುದು' ಮತ್ತು 'ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮನು ಮಾಡಿ ರೆಂಟೆ ಹೊಡೆದು ಬೆಳೆಸುವುದು' ಸಾಮಾನ್ಯವಾಗಿತ್ತು. ಸಮಾಜದಲ್ಲಿ ನೆಲೆಸಿದ್ದ ಜೀವನ ವೃತ್ತಿಗಳೆಲ್ಲ ಶ್ರಮಜೀವಿಗಳಿಗೆ ಅವರ ಶ್ರಮಕ್ಕೆ ತಕ್ಕ ಫಲವಾಗಿ ಸಂಪತ್ತು ದೊರೆಯದಂತೆ ಮಾಡುವ ವೃತ್ತಿಗಳಾಗಿದ್ದವು. ಈ ಸಾಮಾಜಿಕಾಂಶ ಬೌದ್ಧಿಕ ಶರಣಾಗತಿ ಮತ್ತು ಭೌತಿಕ ಶರಣಾಗತಿಯನ್ನು ಉಂಟುಮಾಡಿತ್ತು. ಕೆಳಜಾತಿಯವರನ್ನು ಪರರ ಸೇವೆಗೆ, ದಾಸ್ಯವೃತ್ತಿಗೆ, ಊಳಿಗತನಕ್ಕೆ ಮಾತ್ರ ಯೋಗ್ಯರನ್ನಾಗಿಸಿತ್ತು. ಬಂಟನಾಗಿ ಬಾಗಿಲ ಕಾಯ್ವೆ ಹರಿಯ/ ವೈಕುಂಠದ ಸೊಂಪಿನ ದಾಸರ ಮನೆಯ / ಎಂಜಲ ಹರಿವಾಣಂಗಳ ಬೆಳಗುವೆ / ಸಂಜೆಗೆ ಪಂಜಿನ ದಾಸನಾಗಿರುವೆ / ಮೀಸಲೂಳಿಗವ ನಾ ಮಾಡಿಕೊಂಡಿರವೆ / ಶೇಷ ಪ್ರಸಾದವ ನಾ ಮಾಡಿಕೊಂಡಿರುವೆ ಎಂಬ ಸಾಲುಗಳು ಅಂದಿನ ಪರಿಸ್ಥಿತಿಯನ್ನು ಸೂಚಿಸುತ್ತವೆ. ಕಸ ಗುಡಿಸುವ, ರಂಗೋಲಿ ಹಾಕುವ, ರತ್ನಗಂಬಳಿ ಹಾಸುವ ಮತ್ತು ಮಡಚಿಡುವ ಮನೆಗೆಲಸದ ಕಾಯಕ ದಾಸ್ಯತನದಿಂದ ಕೂಡಿದ್ದು ಕೆಳಜಾತಿಗಳ ಬದುಕು ದಾರಿದ್ರ್ಯವೇ ಆಗಿತ್ತು. (ಹುಟ್ಟಿದಂದಿನಾರಭ್ಯ.../ಕಷ್ಟಪಟ್ಟೆನು.... ದಟ್ಟದಾರಿದ್ರ್ಯವನು ಪರಿಹರಿಸದಿದ್ದರೆ / ಮುಟ್ಟುವುದು ದೂರು ನಿನಗೆ ಕೃಷ್ಣ) ಆರ್ಥಿಕ, ಸಾಮಾಜಿಕ, ನೈತಿಕ ಕ್ಷೇತ್ರಗಳಲ್ಲಿ ಆವರಿಸಿಕೊಂಡಿದ್ದ ದಟ್ಟ ದಾರಿದ್ರ್ಯ, ಅಸ್ಪೃಶ್ಯತೆಯ ಆಚರಣೆ ಮತ್ತು ಮಾನವೀಯ ದೌರ್ಜನ್ಯಗಳಿಂದ ಕೆಳಜಾತಿಗಳ ಬದುಕು ಭೀಕರವಾಗಿತ್ತು. ಮನುಷ್ಯನಲ್ಲಿ ಮನುಷ್ಯತ್ವ ಕಾಣಲಾಗದ ಸ್ಥಿತಿ ಮನೆಮಾಡಿತ್ತು. ದಾಸಾರ್ಯರ ದಾಸರ ದಾಸ ನಾನು / ಗುಟ್ಟು ಮಾಡಿಕೊಂಡಿರದೆ ಕಂಡವರಿಗೆ ಕಾರ್ಪಣ್ಯ / ಪಟ್ಟು ಬಡವನಾದೆನಲ್ಲ, ಎಂಬ ಹಳಹಳಿಕೆಯ ಹಿಂದೆ ಅಡಿಯಾಳುತನ, ಬಡತನ,

ಅನ್ಯಾಯ, ದುಃಸ್ಥಿತಿ, ಶೋಷಣೆ, ಅಪಮಾನ, ನೋವು ಅಸಹಾಯಕತೆ ತುಂಬಿವೆ. ಹುಟ್ಟು ದಾಸಿಯ ಮಗನು ಪರದೇಶಿಯೋ ಎಂಬ ಮಾತು ಕೆಳಜಾತಿಯ ಹೆಂಗಸನ್ನು ತಾಯಿಯಾಗಿ ಪಡೆದ ತಪ್ಪಿಗೆ ಇಡೀ ಜೀವನಪರ್ಯಂತ ದಾಸನಾಗಿ ಮೇಲುವರ್ಗದವರ ಸೇವೆ ಮಾಡಿಕೊಂಡಿದ್ದ ಸ್ಥಿತಿ ಇತ್ತು. ದಾಸದಾಸರ ಮನೆಯ ದಾಸಿಯರ ಮಗ ನಾನು / ಶಂಕುದಾಸರ ಮನೆಯ ಮಂಕುದಾಸನು ನಾನು / ಮಂಕುದಾಸನು ನಾನು ಮರುಳದಾಸ / ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ / ಬಿಂಕದಿ ಬಾಗಲ ಕಾವ, ಬಡ ದಾಸ ನಾನಯ್ಯ / ಹಲವು ದಾಸರ ಮನೆಯ ಹೊಲೆಯ ದಾಸನು ನಾನು / ಕುಲವಿಲ್ಲದ ದಾಸ ಕುರುಬ ದಾಸ - ಹೀಗೆಲ್ಲ ಕನಕದಾಸರು ಶಿಷ್ಟ ಸಮಾಜದ ಹಿಂದುಳಿದ ಮತ್ತು ಬಲಹೀನ ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಹೀನಾಯ ಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ.

ಪುರಂದರರ ರಚನೆಗಳಲ್ಲೂ ತೀವ್ರ ಬಡತನದ ಚಿತ್ರವಿದೆ. ಜೀವನದ ಅವಶ್ಯಕ ವಸ್ತುಗಳಾದ ಅನ್ನ, ನೀರು, ವಸತಿ ಸಮಸ್ಯೆಗಳಿಂದ ಪಾಡುಪಡುತ್ತಿದ್ದ ಸ್ಥಿತಿ ವಿಜಯನಗರ ಸಾಮ್ರಾಜ್ಯದ ಜನತೆಯದಾಗಿತ್ತೆಂದು 'ಅನುಗಾಲವು ಚಿಂತೆ ಜೀವಕೆ' ಮತ್ತು 'ಯಾರಿಗೆ ಯಾರುಂಟು ಎರವಿನ ಸಂಸಾರ' ದಾಖಲಿಸಿವೆ. ತೊಂಡನಾಗಿ ತಿರುಗಿ ತುತ್ತ ತರುವ ಚಿಂತೆ / ಅತ್ತು ಅನ್ನಕೆ ಕಾಡುವ ಚಿಂತೆಯು / ತುತ್ತಿನ ಆಸೆಗೆ ತುರುಗಳ ಕಾಯ್ದರು / ಸುತ್ತೇಳು ಕಡೆಯಿಲ್ಲದಾ ಚಿಂತೆಯು ಮತ್ತು ಬಾಯಾರಿತು ಎಂದು ಬಾವಿ ನೀರಿಗೆ ಪೋದೆ... / ಬಿಸಿಲ ತಾಳದೆ ಮರದ ನೆರಳಿಗೆ ಪೋದೆ... / ಅಡವಿಲಿ ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ... ಹೀಗೆ ಅಂಕೆಗೆ ಒಳಪಡದ ತೊಂಡು ದನವೊಂದು ಊರೂರಿನ ಕೇರಿ ಹೊಲಗದ್ದೆಗಳನ್ನು ಅಲೆಯುವ ಹಾಗೆ ಮಾನವನೂ ತುತ್ತು ಅನ್ನ ಸಂಪಾದಿಸಲು ಅಲೆಯುವಂಥ ಸ್ಥಿತಿಯಿತ್ತು. ಅಂದು ನದಿ, ಕಾಲುವೆ, ಕೆರೆ, ಬಾವಿಗಳ ವ್ಯವಸ್ಥೆ ಇದ್ದರೂ ಕುಡಿಯುವ ನೀರಿನ ವ್ಯವಸ್ಥೆ ವ್ಯಾಪಕವಾಗಿ ಸಮರ್ಪಕವಿರಲಿಲ್ಲ. ಜನರ ವಸತಿಯೂ ಸಮಸ್ಯೆಯಾಗಿತ್ತು. ಬಡವರು ಕಾಡಿನಲ್ಲಿ ಮರದ ನೆರಳಲ್ಲಿ ವಾಸಮಾಡುತ್ತಿದ್ದರು. ಹಣ ಗಳಿಸುವ ಧಾರಣ ಶಕ್ತಿ ಪಡೆಯದವರು ಜೀವನದ ಅವಶ್ಯಕತೆಯನ್ನು ಅಲೆಮಾರಿಗಳ ಹಾಗೆ, ಭಿಕ್ಷುಕರ ಹಾಗೆ ಪೂರೈಸಿಕೊಳ್ಳಬೇಕಾಗಿತ್ತು. ಸಮಾಜದಲ್ಲಿ ಆರ್ಥಿಕ ಶಕ್ತಿಯನ್ನಾಧರಿಸಿದ ಅಸಮಾನ ವರ್ಗಗಳ ಭಾಗವಾಗಿ ಬಡತನವಿತ್ತು. ಹಾಗಾಗಿ ಆರ್ಥಿಕ ಅಸಮಾನತೆಗೂ ಸಾಮಾಜಿಕವಾದ ಜಾತಿ ಆಧಾರಿತ ತಾರತಮ್ಯ ನೀತಿಗೂ ಪರಸ್ಪರ ಸಂಬಂಧ ಕಲ್ಪಿಸಬಹುದು.

ಕೆಳಜಾತಿಗೆ ಸೇರಿದ ಬಡವನೊಬ್ಬ ಸಾಲ ಮಾಡಿ ಅದನ್ನು ತೀರಿಸಲಾಗದ ಸ್ಥಿತಿಯಿತ್ತು. 'ಕೊಟ್ಟ ಸಾಲ ಕೊಡದೆ ಭಂಡಾಟ ಮಾಡುತ್ತಾನೆ' ರಚನೆಯಲ್ಲಿ ಬಡವರು ಜೀವನ ನಡೆಸಲೆಂದು ಸಾಲ ಪಡೆಯುವುದು, ಅದನ್ನು ಹಿಂದಿರುಗಿಸಲಾಗದ ಪಾಪಪ್ರಜ್ಞೆಯಿಂದ ನರಳುವುದು, ಸಾಲ ನೀಡಿದವನಿಗೆ ಮುಖ ತೋರಿಸಲಾಗದೆ ತಲೆಮರೆಸಿಕೊಂಡು ಅಡವಿಗಳಲ್ಲಿ ತಿರುಗುವುದು - ಹೀಗೆ ಉಭಯ ಸಂಕಟದಲ್ಲಿ ನರಳಿದ ಚಿತ್ರವಿದೆ. ಈ ಸಂಬಂಧ ಅನ್ನದ ಮೇಲೆ ಪ್ರಮಾಣ ಮಾಡಿದ್ದಲ್ಲಿ ಹಸಿದ ಹೊಟ್ಟೆಯಲ್ಲಿರುತ್ತಿದ್ದುದು, ಬೈದು ಅಪಮಾನಿಸಿದರೆ ತನಗಲ್ಲವೆಂಬಂತೆ ಸುಮ್ಮನಾಗಿ ಬಿಡುತ್ತಿದ್ದುದು, ಪಡೆದ ಹಣ ಹಿಂದಿರುಗಿಸದೆ ಮುಂದಡಿಯಿಡದಂತೆ

ಕಟ್ಟಿಹಾಕಿದರೆ ತನ್ನ ನಿಲುವನ್ನು ಸಮರ್ಥಿಸಿ ಕಟ್ಟುಗ್ರವಾಗಿ ಹೋರಾಡುತ್ತಿದ್ದುದು ದಾರುಣ ಜೀವನದ ಭಾಗವಾಗಿತ್ತು.

ಪುರಂದರದಾಸರು ನಾಡಿನ ಸಂಚಾರದ ಸಮಯದಲ್ಲಿ ಕಂಡುಕೊಂಡ ವಾಸ್ತವ ಸಂಗತಿ - ಹಸಿವು ಮತ್ತು ಬಟ್ಟೆಯ ಸಮಸ್ಯೆಗಳು. 'ಲಂಗೋಟಿ ಬಲುವೊಳ್ಳೇದಣ್ಣ' ಅಂಥದೊಂದು ರಚನೆಯಾಗಿದೆ. ಲಂಗೋಟಿ ಬಡವರು, ಬೈರಾಗಿಗಳು, ಕಳ್ಳರು, ಬ್ರಾಹ್ಮಣರು, ಭಿಕ್ಷುಕರು, ಮಠದಯ್ಯ ಮೊದಲಾದ ಸಮಾಜದ ನಾನಾ ಜನವರ್ಗಗಳ ಉಡುಗೆಯಷ್ಟೆ ಆಗಿರದೆ ಭಿಕ್ಷುಕರ ಸ್ಥಿತಿಗತಿ, ಸಾಕ್ಷರಹೀನತೆ, ಬಡತನ, ಅಧಿಕಾರಹೀನಸ್ಥಿತಿಯ ಸಂಕೇತವಾಗಿದೆ.

'ಈ ಗ್ರಾಮದಲ್ಲಿ ವಾಸ ಇರುವುದೆ ಪ್ರಯಾಸ' ಎಂಬ ರಚನೆ ವಿಜಯನಗರ ಸಾಮ್ರಾಜ್ಯದ ಗ್ರಾಮಗಳಲ್ಲಿದ್ದ ದುಸ್ತರ ಸ್ಥಿತಿಯ ದಾಖಲೆಯಾಗಿದೆ. ವಿಜಯನಗರ ಸಾಮ್ರಾಜ್ಯ ಸಂಪದ್ಭರಿತವಾಗಿದ್ದು, ಹೊರದೇಶಗಳೊಂದಿಗೆ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಹಂಪೆಯ ಸಾಲು ಮಂಟಪಗಳಲ್ಲಿ ದವಸ ಧಾನ್ಯ ಮತ್ತು ಹವಳಗಳನ್ನು ರಾಶಿ ಹಾಕಿ ಮಾರಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ಆರ್ಥಿಕ ಚಟುವಟಿಕೆಗಳಲ್ಲಿ ಉಂಟಾದ ಹೆಚ್ಚಳದಿಂದಾಗಿ ಗ್ರಾಮಗಳು ಪಟ್ಟಣಗಳಾಗಿಯೂ ಪಟ್ಟಣಗಳು ನಗರಗಳಾಗಿಯೂ ಬೆಳವಣಿಗೆ ಕಂಡವು.

ಅದರ ಪರಿಣಾಮವಾಗಿ ಸಂಚಾರಿ ಮಾರುಕಟ್ಟೆಗಳಾದ ಸಂತೆಗಳು ಸಂಘಟಿತವಾದುವು. ವಿಜಯನಗರ ಸಾಮ್ರಾಜ್ಯ ಆರ್ಥಿಕ ಸುಭದ್ರ ಸ್ಥಿತಿಯಲ್ಲಿತ್ತು. ಆದರೆ ವಿಜಯನಗರದ ಗ್ರಾಮಗಳಲ್ಲಿ ಇತರ ಸಾಮಾಜಿಕ ಸಮಸ್ಯೆಗಳಿಗೆ ಕಾರಣವಾಗುವ ಮಟ್ಟಿಗೆ ಬಡತನ ತೀವ್ರತರವಾಗಿ ಅಡರಿಕೊಂಡಿತ್ತು. ಇಲ್ಲಿನ ಜನ ತಮ್ಮ ಬಡತನದ ಬೇಗೆಯನ್ನು ಪರಿಹರಿಸಿಕೊಳ್ಳಲು ಅನುಸರಿಸಿದ ಮಾರ್ಗ ನಾಗರಿಕ ಸಮಾಜದ ರೀತಿಯದ್ದಾಗಿರಲಿಲ್ಲ. ಅವರ ಹಸಿವಿನ ಶೂಲೆ ಅವರನ್ನು ಕೆಡುಕರನ್ನಾಗಿ, ಕಳ್ಳರನ್ನಾಗಿ, ಸುಳ್ಳರನ್ನಾಗಿ, ಕಪಟಿಗಳನ್ನಾಗಿ, ಊರೂರು ತಿರುಗಿ ಹೊಟ್ಟೆ ಹೊರೆಯುವಂತೆ ಒಡವೆ - ವಸ್ತು ಹೊಂದುವಂತೆ ಮಾಡಿತ್ತು. ದುಡಿಮೆಯಿಲ್ಲದೆ ಜೀವನ ಸಾಗಿಸಲು ಹೆಣಗುತ್ತಿದ್ದುದು ಬಡಜನರು ಅಡ್ಡದಾರಿ ಹಿಡಿದು ಕಷ್ಟಪಡುತ್ತಿದ್ದುದನ್ನು ಕಟ್ಟಿಕೊಡುತ್ತದೆ.

ಕೊನೆಯದಾಗಿ ಈ ಕಾಲದ ಸಮಾಜವು ಪ್ರಾಚೀನ ಧರ್ಮಶಾಸ್ತ್ರಕಾರರು ರೂಪಿಸಿದ ವರ್ಣಾಶ್ರಮ ಧರ್ಮವನ್ನು ಆಧರಿಸಿದುದಾಗಿತ್ತೆಂದು ಹೇಳಬಹುದು. ನಾಲ್ಕು ವರ್ಣಗಳಲ್ಲದೆ ಸಮಾಜದಲ್ಲಿ ವೃತ್ತಿಯಾಧಾರಿತವಾದ ಅನೇಕ ಉಪಜಾತಿಗಳು ಹುಟ್ಟಿದ್ದು, ಪ್ರತಿಯೊಂದು ವೃತ್ತಿಯೂ ತನ್ನದೇ ಆದ ಸಂಘವನ್ನು ಹೊಂದಿತ್ತು. ಪ್ರಮುಖ ಜಾತಿಗಳೆಂದರೆ ಬ್ರಾಹ್ಮಣ, ಸೆಟ್ಟಿ, ವೀರಪಾಂಚಾಳ, ಕೈಕ್ಕೋಲರ, ರೆಡ್ಡಿ, ವೊಕ್ಕಲಿಗ, ನಾಯಿಂದ, ಕುರುಂಬ ಅಥವಾ ಕುರುಬ, ಕರಣಂ, ದೊಂಬ, ತಿಟ್ಟೆಯನ್, ಸೌರಾಷ್ಟ್ರೀಯ, ಜೋಗಿ ಹಾಗೂ ಇತರ ಕಿರಿಯ ಜಾತಿಗಳು. ಜಾತಿಗಳು ಸಾಮಾನ್ಯವಾಗಿ ಬಲಗೈ ಮತ್ತು ಎಡಗೈ ಪಂಗಡಗಳೆಂದು ವಿಂಗಡಿತವಾಗಿತ್ತು ಹಾಗೂ ಈ ಪಂಗಡಗಳ ನಡುವೆ ಸಾಮಾಜಿಕ ಹಕ್ಕುಗಳಿಗಾಗಿ ಹೋರಾಟ ಹೊಡೆದಾಟಗಳು ಸಾಮಾನ್ಯವಾಗಿದ್ದವು ಹಾಗಿದ್ದರೂ ಅವರು ಸಮುದಾಯದ ಸಾಮಾನ್ಯ ಕಾರಣಕ್ಕಾಗಿ ಒಂದುಗೂಡುತ್ತಿದ್ದರು; ತಮ್ಮನ್ನು ಪೀಡಿಸುತ್ತಿದ್ದ ತೆರಿಗೆ ವಸೂಲಿಗಾರರನ್ನು ಅವರು ಜಂಟಿಯಾಗಿ ವಿರೋಧಿಸಿದರೆಂಬ ಸಂಗತಿಯಿಂದ ಇದು ಸೂಚಿತವಾಗುತ್ತದೆ.

ಬಲಗೈ ಮತ್ತು ಎಡಗೈ ಪಂಗಡಗಳು ಕ್ರಿ.ಶ. 1429ರಲ್ಲಿ ಜಂಟಿಯಾಗಿ ಠರಾವೊಂದನ್ನು ಮಂಡಿಸಿ ಸ್ವೀಕರಿಸಿ ತಮ್ಮ ಪಂಗಡಗಳಿಗೆ ಸೇರಿದ ಯಾವುದೇ ವ್ಯಕ್ತಿಯು ತೆರಿಗೆ ವಸೂಲಿಗಾರರಿಗೆ ನೆರವಾದಲ್ಲಿ ಅವನನ್ನು ಕೊಂದುಹಾಕಬೇಕೆಂದು ನಿರ್ಧರಿಸಿತು. ಸಂಗಮ ವಂಶದ ಆಳ್ವಿಕೆಯ ಒಂದು ಹೊಸ ಲಕ್ಷಣವೆಂದರೆ ವಿಜಯನಗರದ ಧಾರ್ಮಿಕ ಮತ್ತು ವಾಣಿಜ್ಯ ಜೀವನದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ ವೀರಶೈವ (ಲಿಂಗಾಯತ) ಹಾಗೂ ಜೈನರ ಪ್ರಾಬಲ್ಯ.

## 2.8. ವಿಜಯನಗರ ಕಾಲದಲ್ಲಿ ಮಹಿಳೆಯರ ಸ್ಥಾನಮಾನ

ಮನುಧರ್ಮಶಾಸ್ತ್ರದ ಪ್ರಕಾರ "ಮಹಿಳೆ ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲೂ, ಪ್ರಾಯದಲ್ಲಿ ಗಂಡನ ಆಶ್ರಯದಲ್ಲೂ, ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲೂ, ಇವರಾರೂ ಇಲ್ಲದಿದ್ದರೆ ಬಂಧುಗಳ ಆಶ್ರಯದಲ್ಲಿರತಕ್ಕದ್ದು; ಮಹಿಳೆ ಸ್ವತಂತ್ರವಾಗಿರಲು ಅರ್ಹಳಲ್ಲ; ಸ್ತ್ರೀ ಅಬಲೆ, ಆದ್ದರಿಂದ ಅವಳಿಗೆ ಪುರುಷನ ರಕ್ಷಣೆ ಅವಶ್ಯಕ." (ಕ್ರಿ.ಪೂ. ೧೫೦ ಪುಶ್ಯಮಿತ್ರ ಸುಂಗನ ರಾಜಪುರೋಹಿತಮನು)

ಈ ಕಾಲದಲ್ಲೂ ಕೂಡ ಬಾಲ್ಯವಿವಾಹ ಮುಂದುವರಿದಿದ್ದಿತು. ಸಮಾಜ ಪುರುಷ ಪ್ರಧಾನವಾಗಿದ್ದು ಈ ಸಮ್ರಾಜ್ಯ ಅಪಾರ ಸೇನಾಬಲ ಅವಲಂಬಿಸಿದ್ದಿತು. ಈ ಹಿನ್ನೆಲೆಯಲ್ಲಿ ಪುತ್ರ ಸಂತಾನವಾದಾಗ ತೋರಿಸುತ್ತಿದ್ದ ಸಂಭ್ರಮ ಹೆಣ್ಣು ಮಗು ಜನನವಾದಾಗ ಕಂಡುಬರುತ್ತಿರಲಿಲ್ಲ. ಮಹಿಳೆಯ ವಿದ್ಯಾಭ್ಯಾಸವನ್ನು ಉಪೇಕ್ಷಿಸಲಾಯಿತು. ಸವರ್ಣೀಯ ಮಹಿಳೆಯರಿಗೆ ಉಪನಯನವಾಗಲೀ, ದೀಕ್ಷೆಗಳಾಗಲಿ ಇರಲಿಲ್ಲ. ಬ್ರಾಹ್ಮಣಾದಿಯಾಗಿ ಎಲ್ಲ ವರ್ಗದ ಬಾಲಕಿಯರು ಬಹುತೇಕವಾಗಿ ಅನಕ್ಷರಸ್ಥರಾಗಿರುತ್ತಿದ್ದರು. ಅವರಿಗೆ ಮನೆ ಕೆಲಸಗಳಲ್ಲಿ ಸಾಕಷ್ಟು ತರಬೇತಿ ನೀಡಲಾಗುತ್ತಿದ್ದಿತು. ಬಾಲಕಿಯರು ಸಂಜೆ ವೇಳೆ ಪುರಾಣ ಪ್ರವಚನಗಳ ಮೂಲಕ ನೀತಿ ಪಾಠಗಳನ್ನು ಕಲಿಯುತ್ತಿದ್ದರು. ಶೂದ್ರ ಮಹಿಳೆಯರು ದೇವಾಲಯ ಹೊರಾಂಗಣದಲ್ಲಿ ಮಾತ್ರ ಕುಳಿತು ಪುರಾಣ, ಪ್ರವಚನ ಕೇಳಿಸಿಕೊಳ್ಳಬಹುದಿತ್ತು. ಸಾಮಂತರು ಮತ್ತು ಶ್ರೀಮಂತ ಕುಟುಂಬದ ಬಾಲಕಿಯರು ಅಕ್ಷರಾಭ್ಯಾಸ ಸಾಹಿತ್ಯ, ನೃತ್ಯ ಮತ್ತು ಸಂಗೀತವನ್ನು ಅಭ್ಯಾಸ ಮಾಡುತ್ತಿದ್ದರು.

ವಿವಾಹಿತ ಮಹಿಳೆಯರಿಗೆ ಸ್ಥಿರಾಸ್ತಿಗಳಲ್ಲಿ ಪಾಲಿರಲಿಲ್ಲ. ಆಭರಣಗಳ ಮೇಲೆ ಅವಳಿಗೆ ಹಕ್ಕಿದ್ದು ಅದು ಆಪದ್ಧನವೂ ಆಗಿದ್ದಿತು. ಈ ಆಭರಣಗಳ ಮೇಲೆ ಹೆಣ್ಣು ಮಕ್ಕಳು ಅಥವಾ ಸೊಸೆಯಂದಿರಿಗೆ ಮಾತ್ರ ಹಕ್ಕಿದ್ದಿತು. ಅವಿವಾಹಿತ ಮಹಿಳೆಯರಿಗೆ ಕೂಡ ಸ್ಥಿರಾಸ್ತಿಯಲ್ಲಿ (ಗೃಹ, ಜಮೀನು) ಹಕ್ಕಿರಲಿಲ್ಲ. ಅವಳು ತಂದೆಯ ಮರಣಾನಂತರ ಹತ್ತಿರದ ಬಂಧುಗಳ ಆಶ್ರಯದಲ್ಲಿರಬೇಕಾಗಿದ್ದಿತು. ವಿಧವೆಯರಿಗೆ ಮಕ್ಕಳಿಲ್ಲದಾಗ ಗಂಡನ ಸ್ಥಿರಾಸ್ತಿ ದಕ್ಕುತ್ತಿದ್ದಿತು. ಆದರೆ ಅದರ ಉಸ್ತುವಾರಿಯನ್ನು ಬಂಧುಗಳ ಸಹಾಯದಿಂದ ನಿರ್ವಹಿಸಬೇಕಿದ್ದಿತು. ಕಾರ್ಮಿಕವರ್ಗದ ಮಹಿಳೆಯರು ಅನೇಕ ವೇಳೆ ಜೀತದಾಳುಗಳಾಗಿ ಕೆಲಸ ಮಾಡುತ್ತಿದ್ದರು.

ವಿಜಯನಗರ ಕಾಲದಲ್ಲಿ ವೇಶ್ಯಾವೃತ್ತಿ ಅಧಿಕೃತವಾಗಿದ್ದು ಗೌರವಸ್ಥಾನ ಹೊಂದಿದ್ದಿತು. ಅವರನ್ನು ನಿತ್ಯ ಸುಮಂಗಲಿಯರೆಂದು ಪರಿಗಣಿಸಲಾಗಿದ್ದಿತು. ರಾಜಬೀದಿಗಳಿದ್ದಂತೆ ವೇಶ್ಯೆಯರ ಬೀದಿಗಳು ಇದ್ದುವು. ಅವರಿಗೆ ರಾಜರು, ಸಾಮಂತರು, ಶ್ರೀಮಂತರು ಮತ್ತು ಸೈನಿಕರಿಂದ ಹೆಚ್ಚಿನ ಬೇಡಿಕೆಯಿದ್ದಿತು. ಸೇನಾ ಶಿಬಿರಗಳ ಬಳಿ ವೇಶ್ಯೆಯರ ಶಿಬಿರಗಳು ಸಾಮಾನ್ಯವಾಗಿದ್ದವು. ಇವರನ್ನು ಗಣಿಕಾಸ್ತ್ರೀಯರೆಂದು ಕರೆಯುತ್ತಿದ್ದರು. ಇವರಲ್ಲಿ ಅನೇಕರು ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಲ್ಲಿ ಪರಿಣಿತರಾಗಿದ್ದರು. ಕೆಲವು ವೇಶ್ಯೆಯರು ಆರ್ಥಿಕ ಹಾಗೂ ಹೃದಯ ಶ್ರೀಮಂತರಾಗಿದ್ದು ದೇವಸ್ಥಾನ, ಕೆರೆ, ಕುಂಟೆ, ಬಾವಿ, ಅರವಟ್ಟಿಗೆ, ಛತ್ರ ಮೊದಲಾದ ಸಾರ್ವಜನಿಕ ಸೇವಾಕಾರ್ಯಗಳನ್ನು ಮಾಡುವುದರಲ್ಲಿ ಹೆಸರುವಾಸಿಯಾಗಿದ್ದರು. ಕೆಲವು ಗಣಿಕಾಸ್ತ್ರೀಯರು ಉದಾತ್ತ ಗೃಹಿಣಿ ಹಾಗೂ ಸಹಧರ್ಮಿಣಿಯರಂತೆ ಇದ್ದರು.

ರಾಜನರ್ತಕಿಯಾದ ಚಿನ್ನಾಂಬ ಎಂಬ ಗಣಿಕಾಸ್ತ್ರೀಯನ್ನು ಕೃಷ್ಣದೇವರಾಯ ತನ್ನ ಎರಡನೇ ರಾಣಿಯನ್ನಾಗಿ ಸ್ವೀಕರಿಸಿದ್ದನು. ಶ್ರೀಮಂತ ವೇಶ್ಯೆಯರು ವೃತ್ತಿ ತೆರಿಗೆಯನ್ನು ಕೂಡ ಪಾವತಿಸಬೇಕಿದ್ದಿತು. ವೇಶ್ಯಾವಾಟಿಕೆಗೆ ಹೆಚ್ಚಿನ ಸತ್‌ಶೂದ್ರವರ್ಗದ ಬಡ ಕುಟುಂಬಗಳ ಹೆಣ್ಣು ಮಕ್ಕಳು ಮತ್ತು ವಿಧವೆಯರನ್ನು ತಂದು ಸೇರಿಸಿಕೊಳ್ಳಲಾಗುತ್ತಿದ್ದಿತು. ಗ್ರಾಮಾಂತರ ಪ್ರದೇಶಗಳಲ್ಲಿ ಕೂಡ ವೇಶ್ಯಾವೃತ್ತಿ ಪ್ರಚಲಿತವಾಗಿದ್ದು ಅದನ್ನು ಬಸವಿ ಬಿಡುವ ಪದ್ಧತಿ ಎಂದು ಕರೆಯುತ್ತಿದ್ದರು. ಇವರಿಗೆ ಸಾಹಿತ್ಯ, ಸಂಗೀತ, ಲಲಿತಕಲೆಗಳ ಪರಿಚಯವಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಶತ್ರುಗಳ ರಹಸ್ಯಗಳನ್ನು ತಿಳಿಯಲು ಶೂದ್ರ ಮಹಿಳೆಯರನ್ನು ಅಂತಹವರ ಗೃಹಗಳಲ್ಲಿ ನಿಯೋಜಿಸಲಾಗುತ್ತಿದ್ದಿತು. ವರದಕ್ಷಿಣೆ ರೂಢಿಯಲ್ಲಿದ್ದಿತಾದರೂ ತೆರೆದ ಪದ್ಧತಿ ಅಥವಾ ಕನ್ಯಾಶುಲ್ಕ (ವಧುದಕ್ಷಿಣೆ) ಕೂಡ ಚಾಲ್ತಿಯಲ್ಲಿದ್ದಿತು. ಈ ಬಗ್ಗೆ ಕೆಲವು ಶಾಸನಗಳಲ್ಲು ಸಹಿತ ಸ್ಪಷ್ಟವಾದ ಮಾಹಿತಿ ಇದೆ.

ಅವರವರ ಜಾತಿ, ಒಳಜಾತಿಗಳಲ್ಲಿ ವಿವಾಹಗಳು ನಡೆಯುತ್ತಿದ್ದವು. ತಂದೆತಾಯಿಗಳ ಇಚ್ಛೆಯ ಮೇರೆಗೆ ವಿವಾಹ ಸಂಬಂಧ ಏರ್ಪಡುತ್ತಿದ್ದವು. ಕ್ಷತ್ರಿಯ ವರ್ಗ ದಕ್ಷಿಣ ಭಾರತದಲ್ಲಿ ಅತ್ಯಂತ ವಿರಳವಾಗಿದ್ದರಿಂದ ಸ್ವಯಂವರ ಪದ್ಧತಿಯೂ ಇಲ್ಲಿ ಕಂಡುಬರಲಿಲ್ಲ. ಪತಿ ಪತ್ನಿಯರಲ್ಲಿ ಹೊಂದಾಣಿಕೆ ಇಲ್ಲದಾಗ ಕಾನೂನುಬದ್ಧವಾಗಿ ವಿಚ್ಛೇದನ ಪಡೆಯಲು ಹಿಂದೂ (ಖಾಯಿದೆ) ಧರ್ಮಶಾಸ್ತ್ರದಲ್ಲಿ ಅವಕಾಶವಿರಲಿಲ್ಲ. ಆದ್ದರಿಂದ ಸಹಜವಾಗಿಯೇ ಅನೇಕ ವೇಳೆ ಇಂತಹವರು ಪುನಃ ಒಂದಾಗುತ್ತಿದ್ದುದುಂಟು. ಹಾಗಾಗದಿದ್ದಲ್ಲಿ ಮಹಿಳೆ ಗಂಡನದೇ ತಪ್ಪಿದ್ದಾಗಲೂ ಗಂಡ ಬಿಟ್ಟವಳೆಂಬ ಕಳಂಕಕ್ಕೆ ಗುರಿಯಾಗಬೇಕಿದ್ದಿತು. ಇಂತಹ ಕೆಲವು ಮಹಿಳೆಯರು ಶ್ರೀಮಂತರ ಮನೆಗಳಲ್ಲಿ ಕೆಲಸ ಮಾಡಿಕೊಂಡು ಜೀವನ ಸಾಗಿಸಿದರೆ, ಇನ್ನು ಕೆಲವರು ಕೂಡಿಕೆ ಪದ್ಧತಿಯಲ್ಲಿ ದಂಪತಿಗಳಾಗುತ್ತಿದ್ದರು. ಈ ಪದ್ಧತಿ ಶೂದ್ರರಲ್ಲಿ ರೂಢಿಯಲ್ಲಿದ್ದಿತು.

ಸತಿ ಸಹಗಮನ ಪದ್ಧತಿ ಕೆಲವು ವರ್ಗದಲ್ಲಿ ಆಚರಣೆಯಲ್ಲಿದ್ದಿತು. ಮಡದಿ ಪತಿಯ ಶವದೊಡನೆ ಚಿತೆ ಏರುವುದೇ ಸತಿಸಹಗಮನ. ಹಾಗೆ ಮಾಡಲು ಇಚ್ಛಿಸದವರು ತಲೆಯ ಕೂದಲನ್ನು ತೆಗೆಯುವ

ಶಿಕ್ಷೆಗೊಳಪಡಬೇಕಿದ್ದು ಸರಳ ಜೀವನ ನಡೆಸಬೇಕಿದ್ದಿತು. ಒಟ್ಟಾರೆ ಅವರು ಪುರುಷರಿಂದ ಆಕರ್ಷಿತರಾಗದಂತೆ ಉಡುಪು ತೊಟ್ಟು ಜೀವನ ಸವೆಸಬೇಕಾಗಿದ್ದಿತು. ಈ ಪದ್ಧತಿ ಬ್ರಾಹ್ಮಣ ವಿಧವೆಯರಿಗೆ ಸೀಮಿತವಾಗಿದ್ದಿತು.

ವಿಜಯನಗರಕ್ಕೆ ಭೇಟಿ ಇತ್ತ ವಿದೇಶೀ ಪ್ರವಾಸಿಗಳು ತಮ್ಮ ವರದಿಯಲ್ಲಿ ವೇಶ್ಯೆಯರ ಬಗೆಗೆ ಪ್ರಸ್ತಾಪಿಸುತ್ತ ಅವರು ಅಧಿಕ ಸಂಖ್ಯೆಯಲ್ಲಿದ್ದರೆಂದೂ, ಅವರದೇ ಬೀದಿಗಳು ಇದ್ದವೆಂದೂ ಹೇಳುವುದರ ಜೊತೆಗೆ ಅರಮನೆಯಲ್ಲಿ ಕೆಲವು ಸಮಾರಂಭಗಳು ನಡೆದಾಗ ಅವರು ಕೆಲವು ವಿಶೇಷ ಸೌಲಭ್ಯಗಳನ್ನು ಪಡೆದಿದ್ದರೆಂದೂ ಹೇಳುವರು. ಪಾಯೇಸನ ವಿವರಣೆ ಈ ರೀತಿ ಇದೆ: "ಈ ಸ್ತ್ರೀಯರು ರಾಜನ ಅಂತಃಪುರದ ಸ್ತ್ರೀಯರು ಬಳಿಗೆ ಹೋಗಬಹುದಲ್ಲದೆ ಅವರೊಡನೆ ಕುಳಿತು ಎಲೆಅಡಿಕೆ ಸೇವಿಸಬಹುದು. ಬೇರೆ ಯಾರಿಗೂ ಅವರಷ್ಟೇ ದೊಡ್ಡವರಾದರೂ ಇಂತಹ ಅವಕಾಶ ಸಿಕ್ಕುವುದಿಲ್ಲ" ವೇಶ್ಯೆಯರ ಆಸ್ತಿಪಾಸ್ತಿಗಳನ್ನು ಕುರಿತು ಬಾರ್ಬೋಸ ಮತ್ತು ಪಾಯೇಸರ ಹೇಳಿಕೆಗಳನ್ನು ಗಮನಿಸಿದರೆ ಅವರು ಎಷ್ಟು ವೈಭವದಿಂದ ಬಾಳುತ್ತಿದ್ದರು ಎಂಬುದರ ಅರಿವಾಗುತ್ತದೆ. ಒಟ್ಟಿನಲ್ಲಿ ವಿದೇಶೀ ಪ್ರವಾಸಿಗಳ ಬರವಣಿಗೆಗಳಿಂದ ನಮಗೆ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯೆಯರಿಗಿದ್ದ ಸ್ಥಾನಮಾನದ ಬಗೆಗೆ ಒಂದು ಸ್ಥೂಲ ಚಿತ್ರ ದೊರೆಯುತ್ತದೆ.

ವೇಶ್ಯೆಯರನ್ನು ಕುರಿತು ಸ್ಮೃತಿಗಳು, ಶಾಸನಗಳು, ವಿದೇಶೀ ಪ್ರವಾಸಿಗರು ಎಲ್ಲರೂ ಹೇಳಿದ್ದಾರೆ. ಆದರೆ ಸಾಹಿತ್ಯ ಕೃತಿಗಳಲ್ಲಿ ಕವಿಗಳು ಕೊಡುವ ವೇಶ್ಯೆಯರ ಚಿತ್ರಕ್ಕೂ ಮೇಲೆ ಹೇಳಿದ ಕೆಲವು ಮೂಲಗಳಿಂದ ದೊರೆಯುವ ವೇಶ್ಯಾಚಿತ್ರಕ್ಕೂ ಬಹಳ ವ್ಯತ್ಯಾಸವಿದೆ. ವೇಶ್ಯೆಯರು, ವೇಶ್ಯಾವಾಟಿಕೆಗಳು ಇದ್ದವು; ಅವರಲ್ಲಿ ಅಪಾರ ಹಣವಂತರೂ ಇದ್ದರು - ಇಂತಹ ಕೆಲವು ಹೇಳಿಕೆಗಳು ಹೊರತಾಗಿ ವೇಶ್ಯೆಯರ ಬಗೆಗೆ ಜನರ ಭಾವನೆಗಳು ಏನಿದ್ದವು; ಸಮಾಜದಲ್ಲಿ ಅವರಿಗಿದ್ದ ಸ್ಥಾನಮಾನಗಳೇನು ವೇಶ್ಯಾವಾಟಿಕೆಗಳಲ್ಲಿ ಜೀವನ ಹೇಗಿರುತ್ತಿತ್ತು; ವೇಶ್ಯೆಯರ, ವಿಟರ, ಕುಂಟಣಿಗಳ ಮನೋವೃತ್ತಿ ಹೇಗಿರುತ್ತಿತ್ತು - ಮುಂತಾದ ಮುಖ್ಯ ವಿಷಯಗಳ ವಿಚಾರದಲ್ಲಿ ಅವು ಬೆಳಕು ಚೆಲ್ಲಲಾರವು. ವೇಶ್ಯೆಯರ ವಿಚಾರದಲ್ಲಿ ಇಂದು ಜನ ಯಾವ ಭಾವನೆಯನ್ನು ತಾಳಿದ್ದಾರೆ, ಸಮಾಜದಲ್ಲಿ ಅವರಿಗೆ ಯಾವ ರೀತಿಯ ಸ್ಥಾನವಿದೆ - ಎಂಬುದನ್ನು ಸಾಹಿತ್ಯ ಕೃತಿಗಳಲ್ಲಿ ಕೆಲವಿಗಳು ಕೊಡುವ ಕೆಲವು ಜೀವಂತ ಚಿತ್ರಗಳೊಂದಿಗೆ ಹೋಲಿಸಿ ನೋಡಿದರೆ, ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ವೇಶ್ಯೆಯರ ಜೀವನದ ವಿಚಾರದಲ್ಲಿ, ಯಾವ ರೀತಿಯ ಹೆಚ್ಚಿನ ಬದಲಾವಣೆಗಳೂ ಆಗಿಲ್ಲ ಎಂಬುದನ್ನು ಅರಿಯಬಹುದು.

ವೇಶ್ಯೆಯರ ಬಗೆಗೆ ಕವಿಗಳ ಪ್ರತಿಕ್ರಿಯೆಯನ್ನು ತಿಳಿಯಲು ಆದಿಕವಿ ಪಂಪನಿಂದ ಹಿಡಿದು ಒಂದು ಸಾವಿರ ವರ್ಷದ ಇತಿಹಾಸವುಳ್ಳ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಅವರ ಬಗೆಗೆ ಸದಭಿಪ್ರಾಯವನ್ನು ಮೂಡಿಸುವ ಕವಿವಾಕ್ಯ ಬಹಳ ಕಡಿಮೆ ಪ್ರಮಾಣದಲ್ಲಿ ಗೋಚರವಾಗುವುವು. ಮುಂದೆ ಉಲ್ಲೇಖಿಸಿರುವ ಕವಿ ವಾಕ್ಯಗಳಲ್ಲಿ ವೇಶ್ಯೆ ಎಂಬ ಪದ ಕೂಡ ಬಹಳ ವಿರಳವಾಗಿ ದೊರೆತು, ಸೂಳೆ, ಪಾದರಿ, ಬೆಲೆವೆಣ್ಣು, ಗಣಿಕೆ, ಜಾರೆ - ಎಂಬ ಪದಗಳು ಹೆಚ್ಚಾಗಿ ಕಂಡುಬರುವುವು. ಹೆಸರುಗಳು ಯಾವುದೇ ಇದ್ದರು, ಕವಿಗಳು ಆ ಹೆಸರುಗಳ

ಮುಂದೆ ಬಳಸಿರುವ ಕಟೂಕ್ತಿಗಳು ಇಲ್ಲಿ ಮುಖ್ಯ. ಬೇರೆ ಬೇರೆ ಕಾಲಗಳಲ್ಲಿದ್ದ ಕವಿಗಳು ವೇಶ್ಯೆಯರ ಬಗೆಗೆ ಹೇಳಿರುವ ಈ ಮಾತುಗಳು, ಆಯಾ ಕಾಲದಲ್ಲಿ ಜನಮನದಲ್ಲಿ ಬೇರೂರಿದ್ದ ಭಾವನೆಗಳಾಗಿರಲೂಬಹುದು. ಏಕೆಂದರೆ ಸಾಹಿತ್ಯವು ಜನಜೀವನದ ಪ್ರತಿಬಿಂಬವಾದರೆ, ಕವಿ ಅದನ್ನು ಪ್ರತಿಬಿಂಬಿಸುವ ಬಿಂಬಗ್ರಾಹಿ. ಹೆಚ್ಚು ವಿವರಗಳಿಗೆ ಹೋಗದೆ ಕವಿಗಳು ಬೇರೆ ಬೇರೆ ಕಾಲದಲ್ಲಿ ವೇಶ್ಯೆಯರ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಯಾವ ರೀತಿ ಮೂಡಿಸಿದ್ದಾರೆ ಎಂಬುದನ್ನು ಮುಂದೆ ಕಾಣಬಹುದು; ಸೂಳೆಗೊಬ್ಬಳು ಮಗಳು ಹುಟ್ಟಿದರೆ ಪ್ರಯೋಜನವೇನು ? ಆ ಹೆಣ್ಣು ಮತ್ತೊಂದು ಬೆಲೆವೆಣ್ಣು; "ಬೆಲೆವೆಣ್ ಪೆಣ್ಣಂ ಪೆತ್ತಂತೆ" ಸೂಳೆಯೊಡನೆನಿತು ಕಾಲಮಿರ್ದೊಡಂ ಮಿಂಡರೆಂಬರಲ್ಲದೆ ಪೆಱರಿಲ್ಲ" ಬಿಟ್ಟಿಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ... ಅಣ್ಣಾ ನಾನು ಸೂಳೆಯಲ್ಲ ಸೂಳೆತನುಮುಟ್ಟಿ ಅಪ್ಪುವಳಲ್ಲದೆ ಮನಮುಟ್ಟಿ ಅಪ್ಪಳು ಸೂಳೆಯ ಮಗ ಮಹಳವ (ಶ್ರಾದ್ಧ) ಮಾಡಿದಡೆ ತಾಯ ಹೆಸರಾಯ್ತು. ತಂದೆಯ ಹೆಸರಿಲ್ಲ. ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯಕೊಂಡರೆ ಕೂಸಿಂಗಲ್ಲ ಬೊಜಗಂಗಲ್ಲ (ವಿಟ). ಬೆಲೆವೆಣ್ಣೆಂದೊಡೆ ಬೇಟವೆತ್ತಣದೊ ! ಎಂದು ವಿಳೆಯೊಳು ಬಿಟ್ಟಿಯುಂಟೇ ಸೂಳೆಮಿಂಡರಿಗೆ ಕೊಡುಗೈ ವೇಶ್ಯೆಯ ವಶ್ಯವೈ. ಸೂಳೆಯರು ಇಂಥವರಲ್ಲಿ ಯಾರನ್ನೆ ಆಗಲಿ, ಹಣಕೊಟ್ಟ ಮಾತ್ರಕ್ಕೆ ಒಲಿಯುವರು ಎಂದು ಸೋಮನಾಥ ಹೇಳಿ, ಹೇಗೆ ಅವರು ಹಣದಾಸೆಗಾಗಿ, ಯಾವುದನ್ನೂ ಲೆಕ್ಕಿಸುವುದಿಲ್ಲ ಎಂಬುದನ್ನು ಬಹಳ ಅರ್ಥವತ್ತಾಗಿ ವರ್ಣಿಸಿದ್ದಾನೆ; ಮುದುಕ, ಕುಂಟ, ಕುರುಡ, ಮೂಗ, ಮೂರ್ಖ, ಹೇಡಿ, ಕಿವುಡ, ಚಂಡಾ, ಕುಷ್ಠರೋಗವುಳ್ಳವನು ಇವರನ್ನೆಲ್ಲ ಸೂಳೆ ಹಣಕ್ಕಾಗಿ ಒಲಿಯುವಳು.

ಸೂಳೆಯರ ಹಣದಾಸೆಯ ಪ್ರಭಾವವನ್ನು ಕುರಿತು ಸೋಮನಾಥನು ಕೊಡುವ ಇನ್ನೂ ಒಂದು ಉದಾಹರಣೆಯನ್ನು ನೋಡಬಹುದು: ಹಣವಿರುವವನು ಹೆಣದಂತೆ ಅವಲಕ್ಷಣವಾಗಿದ್ದರೂ ಸೂಳೆ ಅವನನ್ನು ಯಾವಾಗಲೂ ಬಿಟ್ಟಿರದೆ ಪ್ರೀತಿಯನ್ನು ತೋರಿಸುತ್ತಿರುವಳು; ಬೂಟಾಟಿಕೆಯ ಮಾತುಗಳನ್ನಾಡಿ ಅವನ ಮನಸ್ಸನ್ನು ಸಂತೋಷಗೊಳಿಸಿ ಹಾಲ ಮುಂದಣ ಬೆಕ್ಕು ಆಡುವಂತೆ ವಿನೋದವಾಡುತ್ತಿರುವಳು. ಅವನಲ್ಲಿ ಹಣವು ಮುಗಿದ ಕೂಡಲೆ ಮಾತನ್ನೂ ಆಡಳು. ಸೂಳೆಯ ಗುಣವೆ ಇಂತಹುದು. ಭಾಸ್ಕರಕವಿಯು 'ಜೀವಂಧರ ಚರಿತೆ'ಯಲ್ಲಿ - ಹೊನ್ನಿನಾಸೆಗೆ ಬದಿರ, ಅಂಧಕ, ತೊನ್ನ, ಚೋರ, ಕೃತಘ್ನ, ಖಳರಿಗೆ - ತನ್ನನ್ನು ಇತ್ತು ಎದೆಗೊಯ್ಸಿಕೊಂಡು ಅನುಭವಿಸಿ, ನಾಚಿಗೆಗೆಟ್ಟು, ನನ್ನಿಗೆಟ್ಟು, ನಾನಾ ವರ್ಣದ ಎಂಜಲ ತಿಂದು ಬಾಳುವ ವೇಶ್ಯೆಯರ ಬಾಳ ಸುಡಲಿ - ಎಂದು ಅವರ ಬಾಳಿಗೆ ಹೇಸಿ ನುಡಿಯುತ್ತಾನೆ. ಹಗೆಯನ್ನು ಉರಗನನ್ನು ಜಾರವನಿತೆಯನ್ನು ನಂಬಿದ ಮೂಢರಿಗೆ ವಿಗಡವೆಂದಿದ್ದರೂ ತಪ್ಪದು ಎಂದು ಮತ್ತೊಬ್ಬ ಕವಿ ಎಚ್ಚರಿಸುತ್ತಾನೆ.

ಸೂಳೆಯರು ಉದರನಿಮಿತ್ತವಾಗಿ ಬಹುವಿಧ ನಾಟಕವನ್ನಾಡುತ್ತಾರೆ. ಒಬ್ಬನ ಕೈವಿಡಿದು ಒಬ್ಬನಿಗೆ ಮಾತುಕೊಟ್ಟು, ಒಬ್ಬನಿಗೆ ಸನ್ನೆಯಮಾಡಿ ಮತ್ತೊಬ್ಬನ ಸಂಗ ಮಾಡುವ ಹಾದರಗಿತ್ತಿಯರು ಇವರು. ಹಲಬರ ಮಹಿಳೆ ಹೇಗೆ ಸತಿ ಎನಿಸುವುದಿಲ್ಲವೊ, ಹಾಗೆಯೆ ಸೂಳೆಯರು ಏಕಪುರುಷನಲ್ಲಿ ವಿಹರಿಸುವುದು ಸಾಧ್ಯವಿಲ್ಲ.

ಹಾದರಕ್ಕೆ ಮತ್ತೊಂದು ಹೆಸರಾಗಿ, ಬಣ್ಣದಾಸೆಗೆ ಬದುಕು ಮಾರಿದ ಬಾಳು ಈ ಗಣಿಕೆಯರದು. ಹಣವೇ ಇವರಿಗೆ ಸರ್ವಸ್ವ. ಎಣಿಸುವರೆ ಧನಹೀನರನ್ನು ದಿಟಗಣಿಕೆಯರು ? 'ರೊಕ್ಕವಿದ್ದರೆ ಸೂಳೆಯರು, ರೊಕ್ಕ ತೀರಲು ಸೂಳೆ ಹೋಹಳು. ಹಣವುಹರೆಯಿರುವನಕ ಗಣಿಕೆ ಗಣಗಣಿಸುತ್ತಿರುವಳು, ಹಣವುಹರೆ ಹೋದ ಬಳಿಕಾ ಸೂಳೆ ಶುನಕನಂತಿರುವಳು. ಸಸಿಗೆ ನೀರೆರೆಯುವಂತೆ ರಸಿಕರಾದವರು, ಪ್ರೀತಿಯಿಂದ ದಿನವು ಧನವನ್ನು ಬೆಲೆವಣ್ಗೆ ನೀಡುತ್ತಿದ್ದರೆ ಆಗ ಅವಳಿಂದ ಅವನಿಗೆ ಅಸದಳ ಬೇಂಟವು ಒದಗುವುದು. ವಂಶಪಾರಂಪರ್ಯವಾಗಿ ಈ ವೇಶ್ಯಾವೃತ್ತಿ ನಡೆದು ಬರುತ್ತಿದೆ ಎಂಬ ಒಂದು ಅಭಿಪ್ರಾಯವನ್ನು (ಸ್ವಲ್ಪ ಮಟ್ಟಿಗೆ) ಒಪ್ಪಬಹುದಾದರೂ, ಆರ್ಥಿಕ ದುಃಸ್ಥಿತಿ, ಕೆಲವು ಸಾಮಾಜಿಕ ಸಮಸ್ಯೆಗಳೂ ಇದಕ್ಕೆ ಕಾರಣವಾಗಿವೆ ಎಂದು ಕೆಲವು ಕವಿಗಳು ಚಿಂತನೆ ಮಾಡಿದ್ದಾರೆ. ಬಡವನ ಸ್ತ್ರೀ, ವೃದ್ಧನ ವಧು, ಷಂಡನ ಮಡದಿ, ರೋಗಿಯ ಪೆಂಡತಿಯು, ಪೊಡವಿಯೊಳಿವರಾದಿ ಸೃಷ್ಟಿ ಹಾದರಕೆ ಎಂದು ಒಬ್ಬ ಕವಿ ಪ್ರಪಂಚದಲ್ಲಿ ಹಾದರಕ್ಕೆ ಈ ಸಂದರ್ಭಗಳು ಸನ್ನಿವೇಶಗಳು ಕಾರಣವಾಗುತ್ತವೆ ಎಂದು ಹೇಳಿದ್ದಾನೆ. 'ಬಡವನ ಹೆಂಡತಿಯು ಕಡು ಚೆಲ್ವೆಯಾದರೆ ನಡುಬೀದಿಯೊಳಗೆ ದವನವ ಬಿತ್ತಲು ಮುಡಿಯದವರಾರು" ಎಂದು ಸರ್ವಜ್ಞನು ಇದೇ ಅಭಿಪ್ರಾಯವನ್ನು ಸೂಚಿಸುತ್ತಾನೆ.

ವೇಶ್ಯೆಯರು ವಾಸಮಾಡುತ್ತಿದ್ದ ಜಾಗಗಳು, ಅಲ್ಲಿ ಅವರು ವಿಟರನ್ನು ಆಕರ್ಷಿಸುತ್ತಿದ್ದ ರೀತಿ ಇವುಗಳನ್ನು ಕುರಿತ ಸ್ವಾರಸ್ಯವಾದ ವಿವರಣೆಗಳನ್ನು ಕವಿಗಳು ಕೊಡುತ್ತಾರೆ. ಅಬ್ದುರ್‌ರಜಾಕ್ ಮತ್ತು ಪಾಯೇಸ್ ಅವರುಗಳು ಹೇಳುವಂತೆ ರಾಜಧಾನಿಯಲ್ಲಿ ಅವರದೇ ಕೇರಿಗಳಿದ್ದವು.72 ನಾನಾ ವೃತ್ತಿಯವರ ಮನೆಗಳಿದ್ದಂತೆ ದ್ವಾರವತಿಯ ಬೀದಿಯಲ್ಲಿ ವಾರಾಂಗನೆಯರ ಮನೆಗಳೊಪ್ಪಿದವು. ಎಂದು ಕನಕದಾಸರು ಹೇಳಿದರೆ, "...ರಸಿಕರ ಬೇಟದ ಬೆಳವೊಲ ನೆನಲ್ಲಲ್ಲಿ ವೇಶ್ಯಾವಾಟ ವಿಡಾಯವೆತ್ತಿಹುದು..." ಎಂದು ನಂಜುಂಡಕವಿ ಹೇಳುತ್ತಾನೆ. ಆ ಮನೆಗಳ ಸೊಬಗನ್ನು ಏನು ಹೇಳುವುದು: 'ಪಾರಿವವಿಲ್ಲದದುಯ್ಯಲೆಗಳಿಲ್ಲದ ರಾಜಕೀರಮಿಲ್ಲದ ಸೌಮಿಲ್ಲದ ತೋರಣ ಕನಕ ಘಂಟೆಗಳಿಲ್ಲದ ಸೂಳೆಗೇರಿಗಳಿಲ್ಲ ತತ್ಪುರದೊಳು ನವಿಲ ಉಯ್ಯಲ, ಮಕರ ತೋರಣ, ಮೀನಧ್ವಜ, ಸಂಜ್ಞಾಘಂಟೆ - ಇವುಗಳಿಂದ ಶೋಭಿಸುವ ಮೊಗಸಾಲೆ ಪೊಂಗಳಸಗಳುಳ್ಳ ಉಪ್ಪರಿಗೆಯ ಸಾಲುಸಾಲುಗಳುಳ್ಳ ವೇಶ್ಯಾವಾಟವು ಮನಮೋಹಕವಾಗಿದ್ದಿತು. ವೇಶ್ಯೆಯರ ಮನೆಯಲ್ಲಿ 'ಸಂಜ್ಞಾಘಂಟೆ ಇರುವ ವಿಚಾರವನ್ನು ಮೂವರು ಹೇಳಿದ್ದಾರೆ. ಬಹುಶಃ ವಿಟರ ಆಗಮನ ಸೂಚನೆಯನ್ನು ಕೊಡುವ ಸಲುವಾಗಿ ಇದು ಇದ್ದಿತೆಂದು ತೋರುತ್ತದೆ. 'ಬಲಿದು.... ದೂರು ಹೊಂದಿಸಿದ ಹೊಂಗಂಟೆಯನು ಸಾನಂದದಲಿ ದನಿಗೆಯ್ಯೆ ಚೇಟಿಯರಾಗಳೆತ್ತೆತಂದು ಇಂದುಮುಖಿಗೊತ್ತೆಯನು ಕೊಂಡು...' (ಜೀಚ', 3-14) ವೈದೂಷಿಕ ವಿಟಾನ್ವಿತ ಸೂಳೆಗೇರಿಗಳೆಸದವೊಗ್ಗಿನಲ್ಲಿ ಎಂಬ ಮಾತು, ಸೂಳೆಗೇರಿಗೆ ಬರುತ್ತಿದ್ದ ವಿಟರು ಕೇವಲ ಕಾಮಕೇಳಿಯಲ್ಲಿ ಮಾತ್ರ ಆಸಕ್ತರಾಗಿರದೆ ಬುದ್ಧಿವಂತರೂ ಆಗಿದ್ದರೆಂಬುದನ್ನು ಸೂಚಿಸುತ್ತದೆ.

ಹೊಟ್ಟೆಯ ಪಾಡಿಗಾಗಿ ಈ ವೃತ್ತಿಯನ್ನು ನಡೆಸುತ್ತಿರುವ ಅವರು, ಆ ವಿಟರು ಹೇಗೆ ಇರಲಿ, ಅವರನ್ನು ಸ್ವಲ್ಪವೂ ಬೇಜಾರು ಮಾಡದೆ, ಬರುವ ಒಬ್ಬೊಬ್ಬರನ್ನೂ, ಬೇಸರಪಡಿಸದೆ, ಅವರಲ್ಲಿ ತಮಗೆ ಅನುರಾಗವಿಲ್ಲ

ಎಂಬ ಭಾವನೆಗಳಿಗೆ ಆಸ್ಪದಕೊಡದೆ ಮನೆಗೆ ಬಂದ ಎಲ್ಲರನ್ನೂ ತಮ್ಮ ಒಲವಿನ ಬಲೆಗೆ ಸಿಕ್ಕಿಸಿಕೊಳ್ಳುತ್ತಿದ್ದರು. ಕವಿ ಅಂತಹ ಚಾಣಾಕ್ಷೆಯನ್ನು ವಿಟವಿದಗ್ಧೆಯರೆಂದು ಪ್ರಶಂಸಿಸಿದ್ದಾನೆ: "ಒಬ್ಬನೊಳು ಮಾತಾಡುತೊಬ್ಬಗೆ ಹುಬ್ಬು ಹಾಯ್ಕುತ ಕಲೆಯುತೊಬ್ಬನನುಬ್ಬಿಸುತ ಮತ್ತೊಬ್ಬನೊಳು ನಗುತೊಬ್ಬಗೊಲವೆಸಗಿ ಒಬ್ಬರೊಲ್ಲರ ನಿರೀಕ್ಷಿಸಲೊಬ್ಬನಿವಳೆನಗೊಲಿದಳೆಂದುಬ್ಬುರ್ತಿದಳು ವಿಟವಿದಗ್ಧೆಯ ದೊರ್ವಳಿರುಳಿನೊಲು." ವಯೋಧರ್ಮಕ್ಕೆ ಅನುಗುಣವಾಗಿ ಅವರ ಯೌವನವೆಲ್ಲ ಕರಗಿ ವೃದ್ಧಾಪ್ಯದ ಸೂಚನೆಗಳು ಇಣುಕುತ್ತಿವೆ.

ಪ್ರತಿಯೊಂದು ವೃತ್ತಿಯವರಿಗೂ ಹೇಗೆ ತಮ್ಮದೇ ಆದ ಒಂದೊಂದು ಕುಲಧರ್ಮ, ವೃತ್ತಿ ನಿಯಮಗಳಿರುತ್ತವೆಯೋ, ಅದೇ ರೀತಿಯಲ್ಲಿ ವೇಶ್ಯೆಯರಿಗೂ ಕುಲಧರ್ಮ ಉಂಟೆಂದು, ಅವರ ಮಾತುಗಳಿಂದಲೇ ತಿಳಿದು ಬರುತ್ತದೆ. ಇನ್ನೂ ವೇಶ್ಯಾವೃತ್ತಿಗೆ ಕಾಲಿಡುತ್ತಿರುವ ಮಗಳಿಗೆ ತಾಯಿ ವೇಶ್ಯಾಧರ್ಮವನ್ನು ಹೀಗೆ ಬೋಧಿಸುತ್ತಾಳೆ: "ದುಂಬಿ ಹೂವುಗಳಿಂದ ನವಪರಿಮಳವನ್ನು ಕೊಂಬಂತೆ, ಧನಿಕರಿಗೆ ಒಲುಮೆಗಳನಳವಡಿಸಿ, ತನು ಹೊಱತೆಲ್ಲವು ಸೆಳೆದು, ಜಲಪತ್ರೋದಕವೊಲು ಮನನಿಲುಕಿ ನಿಲುಕದ ತೆಱದಿ ನಿಲಬೇಕೆಲೆರಮಣಿ - ಗಣಿಕೆಯರಿಗಿದು ಕುಲಧರ್ಮವವನಿಯಲಿ. ಮರುಳು ಮಗಳೇ, ರೂಪಗುಣವದು ಸರಕವಸ್ತುವೆ ? ಬಾತೆ ಜವ್ವನ ಜರಿಯದಂದೇ ಗಳಿಸಬೇಕೀ ಪ್ರಾಯವದು ಹೋಗಿ ಮರಟಿ ಬರಲುಯ್ಯಾಲೆಯಲ್ಲೀ ಹರೆಯದಲ್ಲಿಯೆ ಧನವನಾರ್ಜಿಸಬೇಕು, ನರೆತಬಟಿಕಾರ್ಗೇನು ಫಲ... ಸ್ಮರಸಮಾನಾಕಾರನಾಗಲಿ, ಸರಸಸುಕಲಾ ಪ್ರೌಢನಾಗಲಿ, ಕರೆಯದಿರು ಕದಲದಿರು ನಿರ್ಧನಿಕರನು, ಧನವುಳ್ಳ ನರಮೃಗಾಧಮ ನಾಗಲವನೊಳು ನೆರೆದು ದೇಹಮಾಡಿ ವಸ್ತುವ ಹೇಱುವುದೇ ಕುಲಧರ್ಮವೆಮಗೆ..." ಆದ್ದರಿಂದ 'ಪರಿಮಳವಿಲ್ಲದರಳನಳಿ ಬಿಡುವಂತೆ, ಪುರುಳಿಲ್ಲದವನ ನೀ ಬೇಗ ಪರಿಹರಿಸುವುದಿದು ಸೂಳೆಸಿದ್ಧಾಂತದ ಪರಮರಹಸ್ಯ ಕೇಳಬಲೆ"

**ಅ. ಸಾಮಾನ್ಯ ಸ್ತ್ರೀಯರ ಸ್ಥಿತಿಗತಿ :** ವಿಜಯನಗರ ಕಾಲದಲ್ಲಿಯೇ ಅಲ್ಲದೆ ನಮ್ಮ ಪ್ರಾಚೀನ ಭಾರತದ ಚರಿತ್ರೆಯನ್ನು ಗಮನಿಸುವುದಾದರೂ ರಾಜರ ಆಸ್ಥಾನದಲ್ಲಿಯೇ ಎಲ್ಲಾ ವೃತ್ತಿಗಳಿಗಿಂತಲೂ ವೇಶ್ಯಾವೃತ್ತಿ ಸ್ವಾಭಾವಿಕ ವೃತ್ತಿಯಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ. ವೇಶ್ಯಾವಾಟಿಕೆಯು ವಿಜಯನಗರದಲ್ಲಿ ಒಂದು ರಾಜಪೋಷಿತವಾದ ವೃತ್ತಿಯಾಗಿದ್ದಿತು ಎಂದು ಹೇಳುವುದಕ್ಕೆ ಅನೇಕ ಆಧಾರಗಳು ದೊರಕುತ್ತವೆ. ಪುರುಷನೊಂದಿಗೆ ಸ್ತ್ರೀಯೊಬ್ಬಳು ತಾತ್ಕಾಲಿಕವಾಗಿ ಮಾಡಿಕೊಳ್ಳುವ ಲೈಂಗಿಕ ಒಪ್ಪಂದವೇ ವೇಶ್ಯಾವೃತ್ತಿ. ಇದನ್ನು ಸಮಾಜದಲ್ಲಿ ಅಕ್ರಮ ಲೈಂಗಿಕ ಸಂಬಂಧವೆಂತಲೂ ಭಾವಿಸಲಾಗುತ್ತದೆ. ಪ್ರತಿಯೊಂದು ಸಮಾಜವೂ ಸಹ ಇದನ್ನು ಕೆಟ್ಟದೆಂದು ಹೇಳುತ್ತಲೆ ತಮ್ಮ ತಮ್ಮ ವ್ಯವಸ್ಥೆಯಲ್ಲಿ ಮಾರ್ಪಾಟು ಮಾಡಿಕೊಂಡು ಬರುತ್ತಲಿವೆ. ವಿಜಯನಗರದಲ್ಲಿ ವೇಶ್ಯಾಪದ್ಧತಿಯು ಆಳವಾಗಿ ಬೇರೂರಲು ಅನೇಕ ಕಾರಣಗಳನ್ನು ಕೊಡಬಹುದು. ಪ್ರಮುಖವಾಗಿ

ಅ. ಬಡತನ, ಆ. ಅಜ್ಞಾನ, ಇ. ಆಸ್ಥಾನದ ನೃತ್ಯಗಾರ್ತಿಯರು ಹಾಗೆ ವೇಶ್ಯಾವೃತ್ತಿ, ಈ. ಯುದ್ಧದ ಸಂದರ್ಭದಲ್ಲಿ ವೇಶ್ಯೆಯರಿಗೂ ಕನ್ಯೆಯರಿಗೂ ಸ್ಥಾನಮಾನ, ಉ. ಬದುಕಲು ಬೇರೆ ಮಾರ್ಗವಿಲ್ಲದೆ ವೇಶ್ಯಾವೃತ್ತಿ ಕೈಗೊಂಡಿದ್ದು.

ವಿದೇಶಿ ಪ್ರವಾಸಿಗನಾದ ಬಾರ್ಬೋಸನು "ಕೆಲವು ಶ್ರೀಮಂತ ವೇಶ್ಯೆಯರು ಬಡತನದ ಬೇಗೆಯಲ್ಲಿರುವ ಪೋಷಕರನ್ನು ತಮ್ಮ ಹೆಣ್ಣು ಮಕ್ಕಳನ್ನು ವೇಶ್ಯಾವೃತ್ತಿಗೆ ಕಳುಹಿಸಲು ಒತ್ತಾಯಿಸುತ್ತಾರೆ. ಈ ಸಂದರ್ಭದಲ್ಲಿ ತಮ್ಮ ತಮ್ಮ ಮಕ್ಕಳ ಮಾರಾಟ ಅಥವಾ ವೃತ್ತಿ ಪರಿಣಿತಿಗಾಗಿ ಅಂಥವರ ಹತ್ತಿರ ಕಳುಹಿಸುತ್ತಾರೆ" ಎಂದು ಬರೆದಿರುವನು.

ಗಂಡ ಸತ್ತ ನಂತರ ಹೆಂಡತಿಯು ಗಂಡನ ಚಿತೆಯಲ್ಲಿಯೇ ಜೀವಂತವಾಗಿ ಬಿದ್ದು ಸಾಯುವುದನ್ನು "ಸತಿಸಹಗಮನ" ಎಂದು ಕರೆಯುವುದು. ಇಂಥ ಸಂದರ್ಭದಲ್ಲಿ ಹೆಂಡತಿಯು ಸಹಗಮನ ಮಾಡದೆ ಉಳಿದುಕೊಂಡರೆ ಅಂಥವಳನ್ನು ಅಗೌರವದಿಂದ ಕಾಣಲಾಗುತ್ತಿತ್ತು. ಅವರ ತಲೆಯನ್ನು ಬೋಳಿಸಿ ಮನೆತನಕ್ಕೆ ಅಮಂಗಳವೆಂದು ಬಗೆದು ಹೊರಗೆ ಕಳುಹಿಸುವುದು, ಕೊನೆಗೆ ದಿಕ್ಕಿಲ್ಲದೆ ಅವಳು ದೇವಾಲಯವೊಂದರಲ್ಲಿ ದೇವದಾಸಿಯಾಗಿ ನಂತರ ವೇಶ್ಯಾವೃತ್ತಿಯಲ್ಲಿ ತೊಡಗುವುದಾಗಿ ಬಾರ್ಬೋಸನು ಹೇಳಿದ್ದಾನೆ.

ವಿಜಯನಗರದ ಅರಸರು ಯುದ್ಧ ಸಂದರ್ಭದಲ್ಲಿಯೂ ಸೈನಿಕ ಶಿಬಿರಗಳಲ್ಲಿ ವೇಶ್ಯೆಯರಿಗೂ, ಕನ್ಯೆಯರಿಗೂ ಪ್ರಮುಖ ಸ್ಥಾನ ಕಲ್ಪಿಸಿ ಕೊಡುತ್ತಿದ್ದರು. ಯುದ್ಧದ ಸಮಯದಲ್ಲಿ ಸೈನಿಕರು ಕೇಳುತ್ತಿದ್ದುದು ಹೆಚ್ಚಿನ ಸಂಬಳವನ್ನಲ್ಲ ಬದಲಿಗೆ ಮದುವೆಯಾಗದ ಹುಡುಗಿಯರನ್ನು. ಇವರು ಯುದ್ಧ ಮಾಡದಿದ್ದರೂ ಸಹ ಸೈನಿಕರು ಯುದ್ಧದಲ್ಲಿ ವೀರಾವೇಶದಿಂದ ಹೋರಾಡುವಂತೆ ಮಾಡುತ್ತಾರೆ. ಈ ಯುವತಿಯರ ಮೇಲಿನ ಆಸೆಗಾಗಿ ಬೇರೆ ಸಾಮಂತ ರಾಜ್ಯಗಳಿಂದಲೂ ಶ್ರೀಮಂತರು, ಸರದಾರರು ಬಂದು ರಾಜನ ಸೈನ್ಯವನ್ನು ಸೇರಿಕೊಳ್ಳುತ್ತಿದ್ದರು. ಪ್ರತಿಯೊಬ್ಬರು ಏಳೆಂಟು ಮುದ್ದು ಯುವತಿಯರನ್ನು ತಮ್ಮ ಸೇವೆಗೆ ಸೇರಿಸಿಕೊಂಡಿರುತ್ತಾರೆ. ಇವರಿಗೆ ರಾಜನ ಬೊಕ್ಕಸದಿಂದ ಸಂಬಳ ದೊರೆಯುತ್ತದೆ.... ಎಂಬ ಬಾರ್ಬೋಸನ ಹೇಳಿಕೆಯು ಯುದ್ಧಗಳು ಕೂಡ ವಿಜಯನಗರದಲ್ಲಿ ವೇಶ್ಯಾವೃತ್ತಿಯ ವೃದ್ಧಿಗೆ ಮೂಲಕಾರಣವಾಗಿತ್ತೆಂಬುದನ್ನು ಸೂಚಿಸುತ್ತವೆ.

ಮದುವೆಯಾಗದ ಇಂತಹ ಯುವತಿಯರು ಯುದ್ಧರಂಗದಿಂದ ಬದುಕಿ ಬಂದರೆ ಅವರು ಮುಂದೆ ಅನುಸರಿಸಬೇಕಾಗಿದ್ದದ್ದು ವೇಶ್ಯಾವೃತ್ತಿಯೊಂದನ್ನೇ. ಯೋಧರು, ಸರದಾರರು, ಶ್ರೀಮಂತರುಗಳು ಸೈನ್ಯದಲ್ಲಿ ಬಂದು ಸೇರಿಕೊಳ್ಳುತ್ತಿದ್ದುದು ಯುವತಿಯರಿಗಾಗಿಯೇ ಹೊರತು ಹೋರಾಡುವುದಕ್ಕಲ್ಲ. ಈ ಸಮಯದಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ವಿಜಯನಗರದ ಸೈನಿಕರಲ್ಲಿಯೇ ಯುವತಿಯರಿಗಾಗಿ ಅಂತಃಕಲಹ ಉಂಟಾಗಿ ಸಾಮ್ರಾಜ್ಯದ ಐಕ್ಯತೆಗೆ ಭಂಗ ತಂದುಕೊಂಡ ಸಂದರ್ಭಗಳು ಅನೇಕವಿವೆ. ವಿಜಯನಗರದ ಪತನಕ್ಕೆ ಇದೊಂದು ಕಾರಣವೆಂದೂ ಅಭಿಪ್ರಾಯಪಡಲಾಗಿದೆ.

ವಿಜಯನಗರದ ಸಾಹಿತ್ಯ ಕೃತಿಗಳಲ್ಲಿ ವೇಶ್ಯೆಯರ ಬಗೆಗೆ ವಿಸ್ತಾರವಾದ ವರ್ಣನೆಗಳು ದೊರೆಯುತ್ತವೆ. ರಾಜಸಭೆಯು ಶೋಭಿಸಬೇಕಾದರೆ ಅದರಲ್ಲಿ ಇರಬೇಕಾದ ನಾನಾ ವೃತ್ತಿಯ ಜನರುಗಳಲ್ಲಿ ಪ್ರಮುಖರಾದವರೆಂದರೆ ವೇಶ್ಯೆಯರು ಎಂದು ಸೋಮನಾಥ ಕವಿ ಹೇಳಿರುವುದು ಕಂಡುಬರುತ್ತದೆ. ಏಕೆಂದರೆ ವೇಶ್ಯೆಯರನ್ನು ಶುಭ ಶಕುನದ ಚಿಹ್ನೆಗಳಲ್ಲಿ ಒಂದೆಂದು ನಂಬಲಾಗಿತ್ತೆಂದು ಇದೇ ಕವಿ ವಿವರಿಸುತ್ತಾನೆ. ವೇಶ್ಯಾ ವೃತ್ತಿಯ ಆರಂಭದ ಬಗ್ಗೆ ಡಾ.ಎನ್. ಸರಸ್ವತಿಯವರು ತಮ್ಮ "The position of women during the vijayanagar period" ಎಂಬ ಕೃತಿಯಲ್ಲಿ ವೇಶ್ಯಾವೃತ್ತಿಯನ್ನು ಆರಂಭಿಸುವ ಮುನ್ನ ಆ ಸಮುದಾಯವು "ಮುದ್ರಾದಿಕೋತ್ಸವಂ" (Showing the mirror) ಎಂಬ ಧಾರ್ಮಿಕ ಆಚರಣೆಯೊಂದನ್ನು ನಡೆಸುತ್ತದೆ. ಚೈತ್ರ ಮಾಸದ ಪೂರ್ಣಿಮೆಯ ದಿನದಂದು ಜರುಗುವ ಈ ಕಾರ್ಯಕ್ರಮಕ್ಕೆ ಸಮುದಾಯದ ಸದಸ್ಯರೆಲ್ಲರನ್ನೂ ಆಮಂತ್ರಿಸಲಾಗುತ್ತದೆ. ತಂದೆಯು ತನ್ನ ಮಗಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವಳ ಮುಖವನ್ನು ಕನ್ನಡಿಯಲ್ಲಿ ನೋಡುತ್ತಾನೆ. ಏಕೆಂದರೆ ಕನ್ನಡಿಯನ್ನು ಅವರು ಮಹಾಲಕ್ಷ್ಮೀ ಎಂದು ಭಾವಿಸುತ್ತಾರೆ. ಅನಂತರ ಆಶೀರ್ವದಿಸುತ್ತಾನೆ. ಪ್ರೌಢರಾದ ನಂತರ ವೇಶ್ಯಾವೃತ್ತಿಗಿಳಿಯುವ ಎಲ್ಲಾ ಕನ್ಯೆಯರಿಗೂ ಇದು ಅನ್ವಯಿಸುತ್ತಿತ್ತು ಎಂದು ಬರೆದಿರುವುದು ಕಂಡುಬರುತ್ತದೆ. ಇಂದಿಗೂ ಸಹ ಹಂಪಿಯ ಸುತ್ತಮುತ್ತಲ ಪರಿಸರದಲ್ಲಿ ಗೌಪ್ಯವಾಗಿ ನಡೆದು ಬರುತ್ತಿರುವುದನ್ನು ಕಾಣಬಹುದಾಗಿದೆ ಎಂದಿದ್ದಾರೆ.

ವಿಜಯನಗರದ ರಾಜಧಾನಿ ವಿದ್ಯಾರಣ್ಯದಲ್ಲಿದ್ದ ಪ್ರಸಿದ್ಧ ಪೇಟೆಗಳಲ್ಲಿ ಅಚ್ಯುತಪೇಟೆಯೂ ಒಂದು. ಅದನ್ನು 'ಸೂಳೆ ಬಜಾರ್' ಎಂತಲೇ ಕರೆಯಲಾಗುತ್ತಿತ್ತು. ಆದರೆ ಈ ಬಗೆಯ ಅಭಿಪ್ರಾಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿರುವುದು ಕಂಡುಬರುತ್ತದೆ. ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗರು ತಮ್ಮ ಬರವಣಿಗೆಯಲ್ಲಿ ನೀಡಿರುವ ವಿವರಣೆಗಳು ಐಷಾರಾಮದ ಜೀವನ ನಡೆಸುತ್ತಿದ್ದ ವೇಶ್ಯೆಯರ ಬದುಕನ್ನು ಕುರಿತು ಮಾತ್ರ. ಆದರೆ ರಾಜಧಾನಿಯ ಪರಿಸರವನ್ನು ಕಂಡ ಸಮಕಾಲೀನ ಕವಿಗಳು ತಮ್ಮ ಕೃತಿಗಳಲ್ಲಿ ವೇಶ್ಯೆಯರ ಸ್ಥಿತಿಗತಿ, ಸ್ವಭಾವ ಹಾಗೂ ಅವರ ಪರಿಸರವನ್ನು ಭಿನ್ನಭಿನ್ನವಾಗಿ ಹೇಳಿರುವುದು ಕಂಡುಬರುತ್ತದೆ. ಉದಾಹರಣೆಗೆ : ಚೆನ್ನಬಸವ ಪುರಾಣದಲ್ಲಿ ವೇಶ್ಯೆಯನ್ನು ಸುಳ್ಳಿನಂಗಡಿ, ಮತ್ಸರದ ಮನೆ, ಮೋಸ ಕಪಟಗಳ ವಾಸಸ್ಥಾನ, ಆಸೆಯ ಆಶ್ರಯ, ಅತೀ ಆಸೆಯ ಅಂಗಡಿ, ಸ್ವಾರ್ಥಿಗಳು ನಡೆಸುವ ಮಂದಿರ, ಜಗಳಗಳು ನಡೆಯುವ ಕೇಂದ್ರಸ್ಥಾನ, ನೆಪಗಳ ನೆಲೆ, ಹೊಸ ಹೊಸ ರೀತಿಯ ಚತುರತೆಯ ಚಾವಡಿ, ಮೋಸಗಳ ಮೂಲಸ್ಥಾನ, ಅಸಾಧ್ಯವಾದ ಸಾಮರ್ಥ್ಯದ ಮನೆಯಾಗಿದ್ದಿತು ಎಂದು ಹೇಳಿರುವುದು ಕಂಡುಬರುತ್ತದೆ.

ಅಂದಿನ ಶ್ರೀಮಂತ ವೇಶ್ಯೆಯರು ತಮ್ಮ ಮನೆಗಳಲ್ಲಿ ವೀಣೆ, ಕೊಳಲು, ಸಂಗೀತ ಲಹರಿಯನ್ನು ನಡೆಸುತ್ತಿದ್ದರು. ಕರ್ಪೂರದ ದೀಪಗಳು, ಸುಗಂಧ ಧೂಪಗಳು, ಸಂಗೀತ ಧಾರೆಗಳೆಂಬ ಬಂಧನಗಳು ಯಾವ ಪುರುಷನನ್ನು ಮನೆಯಿಂದ ಆಚೆ ಹೋಗುವ ಹಾಗೆ ಮಾಡುತ್ತಿರಲಿಲ್ಲ. ವಿಜಯನಗರದ ವೇಶ್ಯೆಯರು ಶಿಕ್ಷಣ ಪಡೆಯುವ ಹಕ್ಕುಳ್ಳವರಾಗಿದ್ದರು. ಸ್ವತಃ ಅರಸರೇ ವೃತ್ತಿಪರ ಶಿಕ್ಷಣ ನೀಡಲು ದತ್ತಿಗಳನ್ನು ನೀಡುತ್ತಿದ್ದುದ್ದಕ್ಕೆ

ಅನೇಕ ಸಾಕ್ಷಿಗಳಿವೆ. ನವರಾತ್ರಿಯ ಸಮಯದಲ್ಲಿ ವೇಶ್ಯೆಯರ ಕುಸ್ತಿಗಳೂ ನಡೆಯುತ್ತಿದ್ದವೆಂದು ಅಬ್ದುಲ್ ರಜಾಕ್ ತಿಳಿಸಿದ್ದಾನೆ.

ವಿಜಯನಗರದ ರಾಜಕೀಯ ರಂಗದಲ್ಲಿಯೂ ವೇಶ್ಯೆಯರು ತಮ್ಮನ್ನು ಉನ್ನತ ಮಟ್ಟದಲ್ಲಿ ಗುರುತಿಸಿಕೊಂಡಿದ್ದರೆಂಬುವುದು ಕಂಡುಬರುತ್ತದೆ. ಒಂದು ದೃಷ್ಟಿಯಲ್ಲಿ ವೇಶ್ಯಾವೃತ್ತಿಯೇ ರಾಜರಕ್ಷಿತವಾಗಿತ್ತು ಎನ್ನಬಹುದು. ಸ್ವಾತಂತ್ರ್ಯವಾಗಿದ್ದ ವೇಶ್ಯೆಯರು ತಮ್ಮದೇ ಒಂದು ವರ್ಗವೆಂದು ಗುರುತಿಸಿಕೊಳ್ಳುತ್ತಿದ್ದರು. (ಅಂದರೆ ದೇವದಾಸಿಯರಲ್ಲದವರು) ಇವರುಗಳು ಅರಸರ, ಸರದಾರರ, ಶ್ರೀಮಂತರ ಆಶ್ರಯವನ್ನು ಪಡೆದಿದ್ದರು. ಈ ವರ್ಗದಲ್ಲಿಯೇ ಕೆಲವರು ಅರಸರಿಗೆ ಮತ್ತು ಸರದಾರರಿಗೆ ಸೂಳೆಯರಾಗಿದ್ದರು. ಪ್ರಖ್ಯಾತ ದೊರೆ ಎನ್ನಿಸಿಕೊಂಡಿರುವ ಕೃಷ್ಣದೇವರಾಯನ ಪಟ್ಟದ ರಾಣಿಯರಲ್ಲಿ ಚಿನ್ನಾದೇವಿ ಒಬ್ಬ ವೇಶ್ಯೆ ಎಂಬುವುದು ಇಲ್ಲಿ ಮುಖ್ಯವಾಗಿ ಗೋಚರಿಸುತ್ತದೆ. ಇದರಿಂದಾಗಿ ವೇಶ್ಯೆಯರಿಗೆ ಅಪಾರ ಗೌರವವಿತ್ತು. ಅರಸರು ತಮ್ಮ ಸಾಮರ್ಥ್ಯದ ಪ್ರದರ್ಶನದ ನೆಪದಲ್ಲಿ ಭವ್ಯವಾಗಿ ಆಚರಿಸುತ್ತಿದ್ದ ದಸರೆಯ ಹಬ್ಬಗಳಲ್ಲಿ ರಾಜರು ಆಮಂತ್ರಿಸಿದ ಪಟ್ಟಿಯಲ್ಲಿ ವೇಶ್ಯೆಯರೂ ಇರುತ್ತಿದ್ದರು ಎಂದು ತಿಳಿಯಬಹುದು. "ದಸರೆಯಲ್ಲಿ ರಾಜನು ಹೊಸನಗರದಿಂದ ರಾಜಧಾನಿಯವರೆಗೆ ಹಬ್ಬವನ್ನು ಆಚರಿಸುತ್ತಾನೆ. ಆಗ ರಾಜ್ಯದ ಎಲ್ಲಾ ಭಾಗಗಳಿಂದ ದೇವದಾಸಿಯರು, ದಳವಾಯಿಗಳೂ, ಸಾಮಂತರೂ ತಮ್ಮ ಪರಿವಾರದ ಸಮೇತ ಬರುತ್ತಾರೆ" ಎಂದು ಪೇಸ್ ಹೇಳಿದ್ದಾನೆ.

ವೇಶ್ಯೆಯರಿಂದ ತೆರಿಗೆ ಪಡೆದು ರಾಜ್ಯದ ವೆಚ್ಚಕ್ಕೆ ಬಳಸುತ್ತಿದ್ದುದು ನಮ್ಮ ಭವ್ಯ ಚರಿತ್ರೆಯ ದುರಂತಗಳಲ್ಲೊಂದು. ವೇಶ್ಯೆಯರು ನೀಡುತ್ತಿದ್ದ ತೆರಿಗೆಯ ರೀತಿನೀತಿಯನ್ನು ಅಬ್ದುಲ್ ರಜಾಕ್ ಈ ರೀತಿ ವಿವರಿಸುತ್ತಾನೆ. "ವಿಜಯನಗರದ ಏಳು ಕೋಟೆಗಳಲ್ಲಿ ಈ ರೀತಿಯ ಅನೇಕ ವೇಶ್ಯಾಗೃಹಗಳಿದ್ದವು. ಈ ವೇಶ್ಯಾಗೃಹಗಳ ಮೇಲೆ ಹಾಕಿದ ತೆರಿಗೆಯಿಂದ ಬೊಕ್ಕಸಕ್ಕೆ ಹನ್ನೆರಡು ಸಾವಿರ ಆದಾಯ ಬರುತ್ತಿತ್ತು. ಈ ಹಣದಿಂದ ಸೈನಿಕರಿಗೆ ಸಂಬಳವಾಗಿ ಕೊಡುತ್ತಿದ್ದರು" ಎಂದು ಹೇಳಿರುವುದು ವೇಶ್ಯೆಯರ ಆದಾಯವನ್ನು ಸೂಚಿಸುತ್ತದೆ. ಹಾಗೂ ವಿಜಯನಗರದಲ್ಲಿ ಈ ವೃತ್ತಿಯ ಸ್ಥಾನಮಾನವನ್ನು ತಿಳಿಸುತ್ತದೆ.

ವಿಜಯನಗರದ ಕಾಲದಲ್ಲಿ ಸತಿ ಸಹಗಮನ ಪದ್ಧತಿಯು ವ್ಯಾಪಕವಾಗಿ ಕಂಡುಬರುತ್ತದೆ. ಈ ಪದ್ಧತಿಯು ವಿಜಯನಗರದ ಅಥವಾ ಭಾರತದಲ್ಲಿಯೇ ಅಲ್ಲದೆ ಈಜಿಪ್ಟ್, ಗ್ರೀಕ್, ಚೀನಾ, ಸಿರಿಯಾ ಮುಂತಾದ ದೇಶಗಳಲ್ಲಿಯೂ ಆಚರಣೆಯಲ್ಲಿದ್ದದು ಕಂಡುಬರುತ್ತದೆ. ಅಂದಿನ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ಕೇವಲ ಉಪಭೋಗದ ವಸ್ತುವನ್ನಾಗಿಸಿಕೊಂಡಿರುವುದರ ಪ್ರತೀಕವಾಗಿ ಇದು ಗೋಚರಿಸುತ್ತದೆ. ಸತಿಯು ಸಹಗಮನವಾಗುತ್ತಿದ್ದದ್ದು ಎರಡು ರೀತಿಯಲ್ಲಿ.

**೧. ಸಹಗಮನ :** ಅಂದರೆ ಗಂಡ ಸತ್ತರೆ ಅವನ ಜೊತೆಯಲ್ಲಿಯೇ ಜೀವಂತವಾಗಿ ಚಿತೆಗೆ ಅಥವಾ ಹೂಳುವುದಾದರೆ ಜೀವಂತವಾಗಿ ಸಮಾಧಿ ಮಾಡಿಸಿಕೊಳ್ಳುವುದು ಇದಕ್ಕೆ ಸಹಗಮನ ಎಂದು ಕರೆಯಲಾಗಿದೆ.

**೨. ಅನುಗಮನ :**ಗಂಡನು ಎಲ್ಲೋ ದೂರದಲ್ಲಿ ಸತ್ತರೆ, (ಅದು ಯುದ್ಧ ರಂಗದಲ್ಲಾಗಬಹುದು) ಅಥವಾ ಬೇಟೆಯಾಡುವ ಸಮಯದಲ್ಲಿ ಮರಣ ಹೊಂದಿದರೆ ಗಂಡನನ್ನು ನೆನೆದುಕೊಂಡು ಬೆಂಕಿಯಲ್ಲಿ ಜೀವ ಅರ್ಪಣೆ ಮಾಡಿಕೊಳ್ಳುವ ಕ್ರಿಯೆಗೆ ಅನುಗಮನ ಎಂತಲೂ ಕರೆಯಲಾಗುತ್ತಿತ್ತು.

ವಿಜಯನಗರ ಸಾಮ್ರಾಜ್ಯದಾದ್ಯಂತ ಇದಕ್ಕೆ ಸಂಬಂಧಿಸಿದ ಅನೇಕ ಶಿಲ್ಪಗಳು, ಶಾಸನಗಳು ದೊರಕುತ್ತವೆ. ಸತಿ ಸಹಗಮನವು ಬೆಂಕಿಗೆ ಹಾರಿ ಜೀವ ಬಿಡುವ ರೂಪ ಒಂದಾದರೆ, ಜೀವಂತವಾಗಿ ಸಮಾಧಿ ಮಾಡಿಸಿಕೊಳ್ಳುವುದು ಮತ್ತೊಂದಾಗಿತ್ತು. ಕೆಲವು ಕಡೆ ನೀರಿಗೆ ಹಾರುವುದು ಹಾಗೂ ಎತ್ತರದ ಪ್ರದೇಶಗಳಿಂದ ಕಮರಿಗಳಿಗೆ ಹಾರಿ ಜೀವ ಬಿಡುವ ಪದ್ಧತಿಯೂ ಇತ್ತೆಂದು ತಿಳಿದುಬರುತ್ತದೆ.

ವಿಜಯನಗರದಲ್ಲಿ ಆಚರಣೆಯಲ್ಲಿದ್ದ ಸತಿ ಪದ್ಧತಿಯ ಕುರಿತು ವಿಪುಲವಾಗಿ ದೇಶೀಯ ಮತ್ತು ವಿದೇಶೀಯ ಸಾಕ್ಷ್ಯಾಧಾರಗಳು ದೊರೆಯುತ್ತವೆ. ಈ ಅನಿಷ್ಟ ಪದ್ಧತಿಯ ಉಗಮ ಮತ್ತು ಬೆಳವಣಿಗೆಗಳಿಗೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕಾರಣಗಳೇನೇ ಇದ್ದರೂ ಸಹ ವಿಜಯನಗರದಲ್ಲಿ ಇದೊಂದು ಸಾಮಾಜಿಕ ಮೌಢ್ಯ ವಿಧಿಯಾಗಿದ್ದಿತ್ತೆನ್ನಬಹುದು. ಕನ್ನಡದ ಧ್ವಜಪತಾಕೆಯನ್ನು ಜಗತ್ತಿಗೆ ಸಾರಿದ ಸಾಮ್ರಾಜ್ಯವೆಂದು, ಕನ್ನಡದ ನಾಡಿನ ಚರಿತ್ರೆಯನ್ನು ಶ್ರೀಮಂತಗೊಳಿಸಿದ ರಾಜಮಹಾರಾಜರ ತಾಣವೆಂದು ಹೆಸರು ಪಡೆದಿರುವ ವಿಜಯನಗರ ಸಾಮ್ರಾಜ್ಯದಲ್ಲಿಯೇ ಅತ್ಯಂತ ಹೆಚ್ಚಿನ ಸತಿ ಘಟನೆಗಳು ನಡೆದಿರುವುದು ಕಂಡುಬರುತ್ತದೆ. ಹಿಂದೂ ಧರ್ಮದ ರಕ್ಷಣೆಯ ಹೆಸರಿನಲ್ಲಿಯೇ ದಕ್ಷಿಣ ಭಾರತದಲ್ಲಿ ಹುಟ್ಟಿಕೊಂಡ ವಿಜಯನಗರ ಸಾಮ್ರಾಜ್ಯದ ಆಳುವ ವರ್ಗದ ಅತಿಯಾದ ಪ್ರೋತ್ಸಾಹವೇ ಈ ಜೀವ ವಿರೋಧಿ ಆಚರಣೆಗೆ ಕಾರಣವೆನ್ನಬಹುದಾಗಿದೆ. ಈ ಕೆಟ್ಟ ಪದ್ಧತಿಯ ಆಚರಣೆಯ ವಿಧಿ ವಿಧಾನಗಳನ್ನು ಅಂದು ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗರು ಸ್ವತಃ ವೀಕ್ಷಿಸಿ ತಮ್ಮ ಬರವಣಿಗೆಗಳಲ್ಲಿ ದಾಖಲಿಸಿದ್ದಾರೆ. ಸಾಮ್ರಾಜ್ಯದ ಹಳ್ಳಿ, ಗ್ರಾಮಗಳಲ್ಲಿ ನಡೆಯುತ್ತಿದ್ದ ಭೀಕರ ಸ್ವರೂಪದ ಸತಿ ಪದ್ಧತಿಯನ್ನು ತಿಳಿಯಲು ವಿದೇಶೀಯರ ಬರವಣಿಗೆಗಿಂತಲೂ ಸಮಕಾಲೀನ ದೇಶೀಯ ಸಾಹಿತಿಗಳ ಸಾಹಿತ್ಯವು ಹೆಚ್ಚಿನ ರೀತಿಯಲ್ಲಿ ನೆರವಾಗುತ್ತವೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸತಿಗೆ ಸಿದ್ಧವಾಗುತ್ತಿದ್ದ ರೀತಿ ಹಾಗೂ ಸತಿ ನಡೆಯುವಾಗಿನ ಸನ್ನಿವೇಶವನ್ನು ಹೆಚ್.ಎಲ್. ನಾಗೇಗೌಡರು ತಮ್ಮ ಪ್ರವಾಸಿ ಕಂಡ ಇಂಡಿಯಾ ಸಂಪುಟ ೨ರಲ್ಲಿ (ಬಾರ್ಬೋಸನ ಹೇಳಿಕೆಯನ್ನು) ತಿಳಿಸಿದ್ದಾರೆ. ಅದರ ಪ್ರಕಾರ ನೋಡುವುದಾದರೆ, ನಾನಿದ್ದ ಏಳು ತಿಂಗಳುಗಳ ಕಾಲದಲ್ಲಿ ಇಲ್ಲಿನ ಸಮಾಜದಲ್ಲಿ ನಡೆಯುತ್ತಿದ್ದ ಅನೇಕ ವಿಚಿತ್ರ ಹಾಗೂ ಅಮಾನುಷ ಕೃತ್ಯಗಳನ್ನು ಕಂಡೆ. ಗಣ್ಯರಾದ ಗಂಡಸರಾಗಲಿ, ಹೆಂಗಸರಾಗಲಿ ಸತ್ತರೆ ಇವರು ಸುಡುತ್ತಾರೆ. ಮದುವೆಯಾದ ಗಂಡಸು ಸತ್ತರೆ ಅವನ ಹೆಂಡತಿ ಚಿತೆಯಲ್ಲಿ ಬಿದ್ದು ಸಾಯುತ್ತಾಳೆ, ಗಂಡ ಸತ್ತ ಮೇಲೆ ಹೆಂಡತಿ ಒಂದು ಅಥವಾ ಮೂರು ತಿಂಗಳುಗಳ ನಂತರ ಚಿತೆಯಲ್ಲಿ ಬೀಳುವುದಕ್ಕೆ ಸಿದ್ಧಳಾಗುತ್ತಾಳೆ. ನಿರ್ದಿಷ್ಟವಾದ ದಿನದಂದು ಬಹಳ ಹೊತ್ತಿಗೆ ಮುಂಚೆ ಎದ್ದು ಕುದುರೆಯ ಮೇಲೋ ಅಥವಾ ಎಂಟು ಜನ ಹೊತ್ತ ಪಲ್ಲಕ್ಕಿಯ ಮೇಲೋ ಕುಳಿತು ಚಿತೆಯು ಸಿದ್ಧವಾಗಿರುವ

ಸ್ಥಳಕ್ಕೆ ಹೊರಡುತ್ತಾಳೆ. ಆಕೆ ಮದುವೆಗೆ ಸಿದ್ಧವಾಗಿರುವ ವಧುವಿನಂತೆ ಅಲಂಕಾರ ಮಾಡಿಕೊಂಡಿರುತ್ತಾಳೆ. ತಲೆಯ ಕೂದಲನ್ನು ಇಳಿ ಬಿಟ್ಟಿರುತ್ತಾಳೆ. ತನ್ನ ಯೋಗ್ಯತೆಗನುಸಾರವಾಗಿಯೇ ಒಡವೆ ವಸ್ತ್ರಗಳನ್ನು ಹಾಕಿಕೊಂಡಿರುತ್ತಾಳೆ. ಊರನ್ನು ಆಳುವ ಅರಸನ, ಪಾಳೆಯಗಾರನ ಅಪ್ಪಣೆಯನ್ನು ಪಡೆದು, ಅರಿಶಿನದ ಸೀರೆಯನ್ನುಟ್ಟು, ಆಭರಣಗಳನ್ನು ತೊಟ್ಟು ಪರಿಪರಿಯಾದ ಪುಷ್ಪಗಳಿಂದ ಅಲಂಕರಿಸಿಕೊಂಡು ಅವಳನ್ನು ಊರಿನ ಸುತ್ತೆಲ್ಲಾ ಮೆರವಣಿಗೆ ಮಾಡಲಾಗುತ್ತಿತ್ತು. ವೆನೀಸ್‌ನಲ್ಲಿ ಮದುವೆಗೆ ಹೊರಟ ಹೆಚ್ಚಿನ ಮೆರವಣಿಗೆಯಂತೆ, ಎಡಗೈಯಲ್ಲಿ ಅವಳು "ನಾನು ನನ್ನ ನಲ್ಲನೊಡನೆ ಚಿರನಿದ್ರೆ ಮಾಡಲು ಹೋಗುತ್ತಿರುವೆ" ಎಂದು ಹಾಡುತ್ತಾ ಹಾಡುತ್ತಾ ಮುಂದುವರಿಯುತ್ತಾಳೆ. ಮೆರವಣಿಗೆಯಲ್ಲಿ ಆಕೆಯ ನೆಂಟರಿಷ್ಟರು, ಬಂಧು ಬಳಗದವರೆಲ್ಲರೂ ಭಾಗವಹಿಸುತ್ತಾರೆ ಎಂದು ಸಂಪೂರ್ಣ ಚಿತ್ರಣವನ್ನು ನೀಡಿದ್ದಾನೆ.

ಬಾರ್ಬೋಸನು ಇನ್ನೂ ಮುಂದುವರಿದು ಸತಿಯು ನಡೆಯುತ್ತಿದ್ದ ಅಂತಿಮ ಕ್ಷಣಗಳನ್ನು ಸಹ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಸಾಮಾನ್ಯವಾಗಿ ಸತಿ ಆಚರಣೆಯು ನದಿಯ ದಡದಲ್ಲಿ ನಡೆಯುತ್ತಿತ್ತು. ಬೆಳಿಗ್ಗೆ ಸತಿಗೆ ಆಹುತಿಯಾಗುವವಳನ್ನು ಮೆರವಣಿಗೆಯಲ್ಲಿ ಕರೆದೊಯ್ದು ಮಧ್ಯಾಹ್ನದ ವೇಳೆಗೆ ನದಿಯ ದಡ ಸೇರುತ್ತಾರೆ, ಅಲ್ಲಿ ಚಿತೆಗೆ ಅಗತ್ಯವಾಗಿ ಬೇಕಾಗಿರುವ ಕಟ್ಟಿಗೆ, ಎಣ್ಣೆ ಮುಂತಾದವುಗಳೆಲ್ಲವೂ ಸಿದ್ಧವಾಗಿರುತ್ತಿದ್ದವು. ಈ ಅನಿಷ್ಟ ಪದ್ಧತಿಯನ್ನು ನೋಡಲು ಬಂದವರೆಲ್ಲರಿಗೂ ಊಟದ ವ್ಯವಸ್ಥೆಯು ತುಂಬ ವಿಜೃಂಭಣೆಯಿಂದಲೇ ನಡೆದಿರುತ್ತದೆ. ಚಿತೆಗೆ ಸಿದ್ಧಳಾಗಿರುವ ವಿಧವೆಯೂ ಸಹ ಎಲ್ಲರ ಜೊತೆಯಲ್ಲಿಯೇ ಸಂತೋಷದಿಂದ ಊಟ ಮಾಡಿ, ಸ್ವಲ್ಪ ಹೊತ್ತು ಕಾಲ ಕಳೆಯುತ್ತಾಳೆ. ಒಂದು ವರ್ಗವು ಚಿತೆಯನ್ನು ಸಿದ್ಧಮಾಡುತ್ತದೆ. (ಸಾಮಾನ್ಯವಾಗಿ ಹೊಲೆಯರು ಹಾಗೂ ಮಾದಿಗರು ಈ ಕಾರ್ಯವನ್ನು ನಿರ್ವಹಿಸುತ್ತಿದ್ದರೆಂದು ಕಂಡುಬರುತ್ತದೆ) ವಿಧವೆಯು ತನ್ನ ಗಂಡನ ಹತ್ತಿರದ ಸಂಬಂಧಿಯೊಬ್ಬನ ಕೈಹಿಡಿದು ನದಿಯ ಬಳಿಗೆ ಹೋಗುತ್ತಾಳೆ. ತನ್ನ ವಸ್ತುಗಳನ್ನೆಲ್ಲಾ ಕಳಚಿ ತಂದೆ ತಾಯಿಯರಿಗೆ ಕೊಟ್ಟು ನದಿಯಲ್ಲಿ ಸ್ನಾನ ಮಾಡಿ ಮೊಳದ ಅರಿಶಿಣದ ಬಟ್ಟೆಯನ್ನು ಉಟ್ಟುಕೊಳ್ಳುತ್ತಾಳೆ. ಮತ್ತೆ ಗಂಡನ ಕಡೆಯವರ ಕೈ ಹಿಡಿದು ಚಿತೆಯ ಬಳಿ ಇರುವ ವೇದಿಕೆಯ ಮೇಲೆ ನಿಂತು ಮಕ್ಕಳಿಗೆ, ನೆಂಟರಿಷ್ಟರಿಗೆ ಬುದ್ಧಿ ಮಾತನಾಡುತ್ತಾಳೆ. ಅನಂತರ ಸತಿಯಾಗುವ ಬಗ್ಗೆ ಮಾತನಾಡಿ, ಸತಿಗೆ ಸಿದ್ಧಳಾಗುತ್ತಾಳೆ. ಒಬ್ಬರು ಅವಳ ತಲೆಯ ಮೇಲೆ ಒಂದು ಗಡಿಗೆ ಎಣ್ಣೆಯನ್ನು ಸುರಿಯುತ್ತಾರೆ. ಬರಿದಾದ ಗಡಿಗೆಯನ್ನು ಬೆಂಕಿಗೆ ಬಿಸಾಡುತ್ತಾರೆ. ಹಾಗೆ ಬಿಸಾಡಿದ ಕೂಡಲೇ ವಿಧವೆಯು ಚಿತೆಗೆ ಹಾರಿ ಹಾಗೂ ದೇಹ ದಹನ ಮಾಡಿಕೊಳ್ಳುತ್ತಾಳೆ. ನೆರೆವದರೆಲ್ಲರೂ ಜೋರಾಗಿ ಬೊಬ್ಬೆ ಹಾಕುತ್ತಾರೆ. ಏಕೆಂದರೆ ಚಿತೆಗೆ ಹಾರಿದ ವಿಧವೆಯು ಸಾಯುವ ತನಕ ಅವಳೂ ಸಹ ಕಿರುಚಾಡುವುದು ಸಹಜ. ಅವಳ ಕೂಗು ನೆರೆದಿರುವವರಿಗೆ ಕೇಳಿಸದಿರಲಿ ಎಂದು ಇವರು ಜೋರಾಗಿ ಬೊಬ್ಬೆ ಹಾಕುತ್ತಿದ್ದರು ಎಂದು ವಿವರಿಸಿದ್ದಾರೆ.[121]

ಕೇವಲ ಆಳುವ ವರ್ಗಕ್ಕೆ ಈ ಪದ್ಧತಿಯು ಸೀಮಿತವಾಗಿರದೆ, ಇತರ ವರ್ಗಗಳೂ ಸಹ ಪರಿಸರದ ಪ್ರಭಾವದಿಂದಾಗಿ ಈ ಆಚರಣೆಗೆ ಒಳಗಾಗಿದ್ದವೆಂಬುದು ಕಂಡು ಬರುತ್ತದೆ. ಬ್ರಾಹ್ಮಣ ವರ್ಗದ ಸ್ತ್ರೀಯರು ಸತಿ ಹೋಗುವುದನ್ನು ಅವರ ಶಾಸ್ತ್ರಗಳು ನಿಷೇಧಿಸಿವೆಯಾದರೂ ಕ್ರಮೇಣ ಅನೇಕ ಪ್ರಭಾವಗಳಿಂದ ಸತಿ ಪದ್ಧತಿಯೂ ಇವರಲ್ಲಿಯೂ ಆಚರಣೆಗೆ ಬಂದಿರುವುದು ಕಂಡುಬರುತ್ತದೆ. ವಿಜಯನಗರದ ರಾಜಧಾನಿಯಲ್ಲಿ ಬ್ರಾಹ್ಮಣ ಸ್ತ್ರೀಯರು ಸತಿ ಹೋಗುತ್ತಿದ್ದರೆಂಬುದನ್ನು ಕುರಿತು ಇಟಲಿಯ ನಿಕಿಲೊಕೊಂಟಿ ತನ್ನ ವರದಿಯಲ್ಲಿ ವಿವರಿಸಿದ್ದಾನೆ. ಹಾಗೆಯೇ ಜೈನ ಧರ್ಮದ ಅನುಯಾಯಿಗಳು ಸತಿ ಪದ್ಧತಿಯನ್ನು ಸಾಮ್ರಾಜ್ಯದ ಇತರೆ ಕಡೆಗಳಲ್ಲಿ ಆಚರಿಸುತ್ತಿದ್ದು ಸಮಕಾಲೀನ ಶಾಸನಗಳಿಂದ ತಿಳಿದುಬರುವುದಾದರೂ ರಾಜಧಾನಿಯಲ್ಲಿದ್ದ ಜೈನರು ಸತಿ ಆಚರಿಸುವ ಬಗ್ಗೆ ಮಾಹಿತಿ ದೊರೆಯುವುದಿಲ್ಲ.

ವಿಜಯನಗರದ ಅರಸರುಗಳು ಭಾರತದ ಇನ್ಯಾವುದೇ ಸಂಸ್ಥಾನದ ರಾಜರುಗಳಿಗಿಂತಲೂ ಹೆಚ್ಚಿನ ಬಲಾಢ್ಯರಾಗಿದ್ದರೆ ಸಾಮಾನ್ಯವಾಗಿ ಪ್ರತಿಯೊಬ್ಬ ರಾಜನು ಹನ್ನೆರಡು ಸಾವಿರ ಹೆಂಡತಿಯರನ್ನು ಹೊಂದಿರುತ್ತಿದ್ದನೆಂದೂ ಇವರಲ್ಲಿ ನಾಲ್ಕು ಸಾವಿರ ಜನ ಇವನು ಹೋದೆಡೆಯಲ್ಲೆಲ್ಲಾ ಕಾಲ್ನಡಿಗೆಯಲ್ಲಿ ಹೋಗುತ್ತಿದ್ದರೆಂದು, ಇವರಿಗಿಂತಲೂ ಹೆಚ್ಚು ರೂಪವತಿಯರಾದ ನಾಲ್ಕು ಸಾವಿರ ಹೆಂಡತಿಯರು, ಕುದುರೆಯ ಮೇಲೆ ಸವಾರಿ ಮಾಡುತ್ತಾ ಹೋಗುತ್ತಿದ್ದರೆಂದೂ ಹಾಗೆಯೇ ಇವರುಗಳಲ್ಲಿ ಸುಮಾರು ಎರಡು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂಬ ವಾಗ್ದಾನ ಮಾಡಿ ರಾಜನ ಕೈಹಿಡಿಯುತ್ತಿದ್ದರೆಂದು ಬಾರ್ಬೋಸಾ ವಿವರಿಸಿದ್ದಾನೆ. ಇಷ್ಟೇ ಅಲ್ಲದೆ ಅವನು ಮುಂದುವರೆದು ಬರೆಯುತ್ತಾ: "ರಾಜ ಸತ್ತರೆ ಅಂತಃಪುರದ ಸುಮಾರು ನಾನೂರು, ಐನೂರು ಸ್ತ್ರೀಯರು ಅವನೊಡನೆ ಚಿತೆಯಲ್ಲಿ ಬೀಳುತ್ತಾರೆ. ಇದಕ್ಕಾಗಿಯೇ ಚಿತಾಗ್ನಿಯನ್ನು ತುಂಬ ದೊಡ್ಡದಾಗಿ ಮಾಡಿರುತ್ತಾರೆ. ಶ್ರೀಗಂಧ, ತೇಗ, ಹೊನ್ನೆ ಮುಂತಾದ ಮರಗಳನ್ನು, ಎಣ್ಣೆ ತುಪ್ಪವನ್ನು ಹೇರಳವಾಗಿ ಶೇಖರಿಸುತ್ತಾರೆ. ಈ ಚಿತೆಯಲ್ಲಿ ಬೀಳುವುದಕ್ಕಾಗಿ ನಾಮುಂದು ತಾಮುಂದು ಎಂದು ನುಗ್ಗಿ ಬರುತ್ತಾರೆ. ಇದೊಂದು ಅಪೂರ್ವವಾದ ದೃಶ್ಯ" ಎಂದು ಅಂದಿನ ರಾಜಾಸ್ಥಾನದಲ್ಲಿ ಇದ್ದ ಸತಿ ಪದ್ಧತಿಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾನೆ.

ಮೇಲಿನ ಎಲ್ಲ ಉಲ್ಲೇಖಗಳು ಭವ್ಯ ಸಾಮ್ರಾಜ್ಯವೆಂದೆನ್ನಿಸಿಕೊಂಡಿರುವ ವಿಜಯನಗರದಲ್ಲಿ ಮನೆಮಾಡಿಕೊಂಡಿದ್ದ ಅನಿಷ್ಟತೆಯನ್ನು ಸೂಚಿಸುತ್ತದೆ. ಧರ್ಮ ಸಂಸ್ಕೃತಿಗೆ ಹಾಗೂ ಅದರ ರಕ್ಷಣೆಗೆ ಬದ್ದರಾಗಿದ್ದ ಆಡಳಿತಗಾರರು ಇಂತಹ ಅನಿಷ್ಟ ಪದ್ಧತಿಯನ್ನು ನಿರ್ಮೂಲನೆ ಮಾಡದೆ, ತಾವೇ ಪ್ರೋತ್ಸಾಹಿಸಿಕೊಂಡು ಬಂದಿರುವುದು ಖೇದ ತರುವ ವಿಷಯವೆ.

ವಿಜಯನಗರದ ಇತಿಹಾಸದ ಬಗ್ಗೆ ವಿಶಿಷ್ಟ ರೀತಿಯ ಬೆಳಕು ಚೆಲ್ಲಲು ಇಂದು ನಮ್ಮ ಮುಂದೆ ಅನೇಕ ಸಾಹಿತ್ಯಾಧಾರಗಳು ಹಾಗೂ ದೇವಾಲಯಗಳು ತೆರೆದ ಪುಸ್ತಕದಂತೆ ಕಂಗೊಳಿಸುತ್ತಿವೆ. ಅವುಗಳ ಸಹಾಯದಿಂದ

ಅಂದಿನ ಕಾಲದಲ್ಲಿ ಸ್ತ್ರೀಯರ ಸ್ಥಾನ ಹಾಗೂ ಅವರು ಆಸ್ಥಾನದಲ್ಲಿ ಹಾಗೂ ಸಮಾಜದಲ್ಲಿ ಬದುಕುತ್ತಿದ್ದ ಸ್ಥಿತಿಗತಿಯ ಬಗ್ಗೆ ತಿಳಿಯಲು ಸಹಕಾರಿಯಾಗಿವೆ.

ಕರ್ನಾಟಕದ ಪ್ರಾಚೀನ ಇತಿಹಾಸವನ್ನು ಗಮನಿಸಿದರೆ ಅದು ಗಂಗರ ಕಾಲದಿಂದ ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ಇಕ್ಕೇರಿ ಅರಸರು, ಮೈಸೂರು ಒಡೆಯರವರೆಗೂ ಸಹ ಮಹಿಳೆಯರು ರಾಜಕೀಯವಾಗಿ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ರಾಜರ ಅನುಪಸ್ಥಿತಿಯಲ್ಲಿ ರಾಣಿಯರೇ ಆಳ್ವಿಕೆ ನಡೆಸಿರುವುದಕ್ಕೆ ಅನೇಕ ಆಧಾರಗಳಿವೆ. ಕೃಷ್ಣದೇವರಾಯನು ತನ್ನ ರಾಣಿಯಾದ ಜಗನ್ಮೋಹಿನಿಗೆ ಆಂಧ್ರಪ್ರದೇಶದ ಉಸ್ತುವಾರಿಯನ್ನು ವಹಿಸಿದ್ದದ್ದು ಕಂಡುಬರುತ್ತದೆ. ಅಂದಿನ ಕಾಲದ ಮಹಿಳೆಯರು ಗೃಹಿಣಿಯರಾಗಿ, ಯುದ್ಧದ ಸಮಯದಲ್ಲಿ ಹೋರಾಟಗಾರ್ತಿಯರಾಗಿ, ವ್ಯಾಪಾರಗಾರರಾಗಿ, ಕುಸ್ತಿ ಮಾಡುವವರಾಗಿ, ಕವಯತ್ರಿಯರಾಗಿ, ಸಾಹಿತಿಗಳಾಗಿ ಹಾಗೂ ಗವರ್ನರ್‌ಗಳಾಗಿ, ಆಡಳಿತಾಧಿಕಾರಿಗಳಾಗಿ, ರಾಣಿಯರ ಸಖಿಯರಾಗಿ, ಕೃಷಿಕರಾಗಿ, ಸಂಸಾರದ ಭಾರ ಹೊರುವವರಾಗಿ, ವೇಶ್ಯೆಯಾಗಿ ಕಂಗೊಳಿಸಿರುವುದು ಕಂಡುಬರುತ್ತದೆ.

ಸಾಮಾನ್ಯವಾಗಿ ಮದುವೆ, ಉಪನಯನ ಮುಂತಾದ ಶುಭಕಾರ್ಯಗಳು ನಡೆಯುತ್ತಿದ್ದ ಸಂದರ್ಭದಲ್ಲಿ ಇಲ್ಲಿನ ಮಹಿಳೆಯರು ಸುಂದರವಾಗಿ ಅಲಂಕರಿಸಿಕೊಳ್ಳುತ್ತಿದ್ದರೆಂದು ವಿದೇಶಿ ಪ್ರವಾಸಿಗರಾದ ಪಾಯಸ್ ಹೇಳಿದ್ದಾರೆ. ಹೆಂಗಸರುಗಳು, ದೇವಗಿರಿ, ಹೊಲಿ, ಮಗರಿ ಹಾಗೂ ಕಾಡಿಗೆ ನೀರಿನ ಸೀರೆಗಳನ್ನು ಹೆಚ್ಚಾಗಿ ಇಷ್ಟಪಡುತ್ತಿದ್ದರು. ಪಾಯಿಸ್ ಇನ್ನು ಮುಂದುವರೆದು ಅಂದಿನ ಸ್ತ್ರೀಯರು ತುಂಬ ಸುಂದರಿಯರಾಗಿದ್ದರು, ಒಬ್ಬಳಿಗೂ ಒಂದು ಗುಂಜಿಯ ಕೊಬ್ಬಾಗಲಿ, ಬೊಜ್ಜು ಆಗಲಿ ಇರಲಿಲ್ಲ. ಸೀರೆಯಂಥ ಸರ್ವೆ ಸಾಧಾರಣವಾದ ಉಡುಗೆಯನ್ನು ಎಷ್ಟು ಕಲಾತ್ಮಕವಾಗಿ ಧರಿಸಬಹುದೆಂಬುದನ್ನು ಇವರಿಂದ ನೋಡಿ ಕಲಿಯಬೇಕು ಎಂದು ಹೇಳಿರುವುದಲ್ಲದೆ, ಅಂದಿನ ಕಾಲದಲ್ಲಿಯೇ ರವಿಕೆ, ಕಂಚುಳಿಕೆ, ಕುಪ್ಪಸಗಳಾಗಲಿ, ಅಂಗದಟ್ಟಿ ಅಥವಾ ಅಂಗವಟ್ಟವೆಂದು ಕರೆಯಲ್ಪಡುತ್ತಿದ್ದ ಲಂಗ ಅಂದು ಸಾಕಷ್ಟು ಪರಿಚಯವಿತ್ತೆವೆನ್ನಬಹುದು. ಸೀರೆಯ ನಿರಿಗೆಗಳನ್ನು ಪಾದಗಳವರೆಡೆ ಇಳಿಬಿಟ್ಟು, ಅವು ಹೊತ್ತ ನಕ್ಷೆ, ಕುಸುರಿಯ ಕೆಲಸಗಳು ಸುಂದರವಾಗಿ ಗೋಚರಿಸುವಂತೆ ಉಡುತ್ತಿದ್ದರು ಎಂದು ಪೇಸ್ ವರ್ಣಿಸಿದ್ದಾನೆ.

ಯುದ್ಧದಲ್ಲಿ ರಾಜರ ಜೊತೆ ಹಾಗೂ ಸೈನಿಕರು ಯುದ್ಧದಲ್ಲಿ ಲವಲವಿಕೆಯಾಗದಿರಲೆಂದು ಸುಂದರವಾದ ಹುಡುಗಿಯರನ್ನು ಕರೆದುಕೊಂಡು ಹೋಗುತ್ತಿದ್ದುದು ಸಾಮಾನ್ಯವಾಗಿದ್ದಿತ್ತು. ಯುದ್ಧದ ಸಮಯದಲ್ಲಿ ಸಾಮಂತ ರಾಜರುಗಳು, ಪಾಳೆಗಾರರುಗಳು ಯುದ್ಧಕ್ಕಿಂತಲೂ ಪ್ರಮುಖವಾಗಿ ಆ ಸಮಯದಲ್ಲಿ ಯುದ್ಧರಂಗಕ್ಕೆ ಬರುವ ಸುಂದರಿಯರನ್ನು ಅನುಭವಿಸುವುದಕ್ಕಾಗಿಯೇ ಬರುತ್ತಿದ್ದರೆಂದು ಅನೇಕ ದೇಶೀ ಹಾಗೂ ವಿದೇಶಿ ಸಾಹಿತ್ಯದಿಂದ ತಿಳಿದುಬರುತ್ತದೆ. ಇಷ್ಟೇ ಅಲ್ಲದೆ ಮಹಿಳೆಯರೂ ಸಹ ಕತ್ತಿ ಹಿಡಿದು ಯುದ್ಧ ಮಾಡುತ್ತಿದ್ದರೆಂದು ಇಂದಿಗೂ ದೇವಾಲಯಗಳ ಮೇಲೆ ಚಿತ್ರಿತವಾಗಿರುವ ಚಿತ್ರಗಳಿಂದ ತಿಳಿಯಬಹುದು.

**ಆ. ಮೇಲುವರ್ಗದ ಸ್ತ್ರೀಯರು :** ವಿಜಯನಗರದ ಆಳ್ವಿಕೆಯಲ್ಲಿ ಮಹಿಳೆಯರೂ ಸಹ ವ್ಯಾಪಾರಗಾರ್ತಿಯರಾಗಿದ್ದರು. ರಾಜಧಾನಿಯಲ್ಲಿ 'ಸೂಳೆ ಬಜಾರ್' ಎಂದು ಕರೆಸಿಕೊಳ್ಳುವ ವ್ಯಾಪಾರಿ ಕೇಂದ್ರದಲ್ಲಿ ಮಹಿಳೆಯರೇ ವ್ಯಾಪಾರದ ಕೇಂದ್ರಬಿಂದುವಾಗಿದ್ದರು. ಸಂತೆ, ಜಾತ್ರೆಗಳಲ್ಲಿಯೂ ಇವರೆ ಹೆಚ್ಚಾಗಿ ವ್ಯಾಪಾರದಲ್ಲಿ ತೊಡಗುತ್ತಿದ್ದರು. ತರಕಾರಿ, ಸಾಂಬರು ಪದಾರ್ಥಗಳು, ಹಣ್ಣು-ಹಂಪಲುಗಳು, ಚಿನ್ನ, ಬೆಳ್ಳಿ, ಬಟ್ಟೆ, ಹೆಣ್ಣಿನ ಶೃಂಗಾರದ ವಸ್ತುಗಳು ಇವರಿಂದ ವ್ಯಾಪಾರವಾಗುತ್ತಿದ್ದ ವಸ್ತುಗಳಾಗಿದ್ದವು. ಮಹಾನವಮಿ ಹಬ್ಬವು ವಿಜಯನಗರದ ಅರಸರ ಕಾಲದಲ್ಲಿ ನಾಡಹಬ್ಬವಾಗಿ ಕಂಗೊಳಿಸಿತ್ತು. ಇದನ್ನು ದಸರಾ ಹಬ್ಬ ಎಂತಲೂ ಕರೆಯುತ್ತಾರೆ. ಇಂತಹ ಹಬ್ಬದ ದಿನ ರಾಜಧಾನಿಯಲ್ಲಿನ ಮಹಾನವಮಿ ದಿಬ್ಬದ ಮುಂದೆ ಮಹಿಳೆಯರಿಂದ ಕುಸ್ತಿಯ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತಿತ್ತೆಂದು ಶಾಸನಗಳಲ್ಲಿ ಕಂಡುಬರುತ್ತದೆ. ಸ್ವತಃ ಮಹಾರಾಜರೇ ಈ ಸ್ಪರ್ಧೆಯನ್ನು ವೀಕ್ಷಿಸಿ ಗೆದ್ದವರಿಗೆ ಬಿರುದು ಬಾವಲಿಗಳನ್ನು ಕೊಡುವುದು ಸಾಮಾನ್ಯವಾಗಿದ್ದಿತ್ತು.

ವಿಜಯನಗರ ಆಳ್ವಿಕೆಯ ಕಾಲದಲ್ಲಿ ಮಹಿಳೆಯರೂ ಸಹ ವಿದ್ಯವಂತರಾಗಿ ಅಂದು ಸಂಸ್ಕೃತ ಹಾಗೂ ಕನ್ನಡ, ತೆಲುಗು ಭಾಷೆಯಲ್ಲಿ ಪಾಂಡಿತ್ಯ ಪಡೆದಿದ್ದರೆಂಬುದಕ್ಕೆ ವೀರ ಕಂಪಣ್ಣನ ಮಡದಿ ಗಂಗಾದೇವಿಯೇ ಸಾಕ್ಷಿಯಾಗಿದ್ದಾಳೆ. ಇವಳು ಅಂದು ರಚಿಸಿದ "ಮಧುರ ವಿಜಯಂ" ಅಥವಾ "ವೀರ ಕಂಪಣ್ಣರಾಯ ಚರಿತ" ಎಂಬ ಸಂಸ್ಕೃತ ಗ್ರಂಥವು ವಿಜಯನಗರದ ಅಂದಿನ ಇತಿಹಾಸ ತಿಳಿಯಲು ಹೆಚ್ಚಿನ ಸಹಕಾರವಾಗಿದೆ ಎನ್ನಬಹುದು. ಆಸ್ಥಾನದ ಅನೇಕ ರಾಣಿಯರು ವಿದ್ಯಾವಂತರಾಗಿದ್ದರೆಂದು ವಿದೇಶೀ ಪ್ರವಾಸಿಗರು ತಿಳಿಸುತ್ತಾರೆ.

ಮೇಲೆ ಹೇಳಿದವುಗಳೆಲ್ಲ ರಾಜ ಪರಿವಾರದ ಸ್ತ್ರೀಯರ ಜೀವನವನ್ನು ಸೂಚಿಸುವುದಾದರೆ ಸಾಮಾನ್ಯ ಜನತೆಯ ಬದುಕು ಚಿಂತಾಜನಕವಾಗಿತ್ತು. ತಿನ್ನಲು ಅನ್ನವಿಲ್ಲದೆ, ಉಡಲು ಬಟ್ಟೆ ಇಲ್ಲದೆ ಭೂಮಿಯ ಮೇಲೆ ಹುಟ್ಟುವುದೇ ಪಾಪದ ಅಥವಾ ಕರ್ಮದ ಕಾಲವಾಗಿತ್ತೆನ್ನಬಹುದು. ಜೀವನಕ್ಕೆ ಆಧಾರವಾಗಿ ವ್ಯವಸಾಯವನ್ನೆ ನಂಬಿದ್ದರು, ಮಳೆ ಬಿದ್ದರೆ ಮಾತ್ರ ಬೆಳೆ, ಇಲ್ಲದಿದ್ದರೆ ಸಾವೇ ಗತಿಯಾಗಿತ್ತು. ಹೆಚ್ಚಿನ ಮಹಿಳೆಯರು ಆರೋಗ್ಯಹೀನರಾಗಿದ್ದರು. ಅವರು ತಲೆಯ ಕೂದಲನ್ನು ಬಾಚಿಕೊಳ್ಳದೆ ತರಗೆಲೆಗಳಂತೆ ಬಿಟ್ಟುಕೊಳ್ಳುತ್ತಿದ್ದರು, ಮೈಗೆ ಪ್ರಾಣಿಗಳ ಚರ್ಮವನ್ನು ಸುತ್ತಿಕೊಳ್ಳುತ್ತಿದ್ದರು. ಗಂಡಸರು ಸೊಂಟಕ್ಕೆ ಮಾತ್ರ ಒಂದು ಚಿಕ್ಕ ಬಟ್ಟೆ ಅಥವಾ ಮರದ ತೊಗಟೆಗಳಿಂದ ಮುಚ್ಚಿಕೊಳ್ಳುತ್ತಿದ್ದರೆಂದು ಬಾರ್ಬೋಸ ಹೇಳಿದ್ದಾನೆ.

ಬಹುಪತ್ನಿತ್ವ ಪದ್ಧತಿಯು ಹೆಚ್ಚಾಗಿ ರೂಢಿಯಲ್ಲಿತ್ತು. ಈ ಪದ್ಧತಿಯು ಕೇವಲ ರಾಜರಲ್ಲಿ ಅಥವಾ ಶ್ರೀಮಂತರುಗಳಲ್ಲಿ ಮಾತ್ರವಲ್ಲದೆ ಸಾಮಾನ್ಯ ಜನತೆಯಲ್ಲಿಯೂ ವಿರಳವಾಗಿ ಇದ್ದಿತೆಂದು ಕಂಡುಬರುತ್ತದೆ. ಪುರಂದರದಾಸರು ಇದನ್ನು ಕಂಡೇ ಏನೋ "ಇಬ್ಬರ್ಹೆಂಡಿರ ಸುಖವ ಇಂದು ಕಂಡೆನಯ್ಯ" ಎಂದು ಹಾಡಿರುವುದು. ಈ ಒಂದು ಸಾಲಿನಿಂದಲೇ ಇಬ್ಬರೆಂಡತಿಯರನ್ನು ಕಟ್ಟಿಕೊಂಡವರು ಸಂಸಾರದಲ್ಲಿ ಅನುಭವಿಸುತ್ತಿದ್ದ ನೋವಿನ ಸುಖವನ್ನು ಸುಂದರವಾಗಿ ಚಿತ್ರಿಸಿದೆ ಎನ್ನಬಹುದು. ಆದರೆ ಅದು ವಿರಸವಾಗಿ ಪರಿವರ್ತನೆಯಾಗುವ ಸನ್ನಿವೇಶಕ್ಕೆ ದಾಸರು "ಇವಳಿಂದ ಫಲವಿಲ್ಲ, ಅವಳಿಂದ ಸುಖವಿಲ್ಲ, ಇವರಿಬ್ಬರ ಸಂಗವಭಿಮಾನ ಭಂಗ" ಎಂದು ವ್ಯಂಗ್ಯವಾಗಿ ಹಾಡಿರುವುದೆನ್ನಬಹುದು.

ವಿಜಯನಗರದಲ್ಲಿ ವಿಧವೆಯರನ್ನು ಹಾಗೂ ಬಂಜೆ (ಮಕ್ಕಳಾಗದವರನ್ನು)ಯರನ್ನು ತುಂಬ ಕೀಳಾಗಿ ನೋಡಿಕೊಳ್ಳಲಾಗುತ್ತಿತ್ತು. ಅಂದು ಅಸ್ಪೃಶ್ಯತೆಯು ಯಾವ ಪ್ರಮಾಣದಲ್ಲಿ ಬೇರು ಬಿಟ್ಟಿತೋ ಅಷ್ಟೇ ಪ್ರಮಾಣದಲ್ಲಿ ಈ ಮಹಿಳೆಯರನ್ನು ಶೋಷಣೆ ಮಾಡಲಾಗುತ್ತಿತ್ತು. ಗಂಡ ಸತ್ತಮೇಲೆ ವಿಧವೆಯು ಅಗ್ನಿಗೆ ಆಹುತಿಯಾಗದೆ ಅಥವಾ ಸಹಗಮನ ಮಾಡಿಕೊಳ್ಳದೆ ಬದುಕುವುದಿದ್ದರೆ ಅವಳು ಪ್ರಾಣಿಗಿಂತಲೂ (ನಾಯಿಗಿಂತಲೂ) ಹೀನಾಯವಾದ ಬದುಕನ್ನು ನಡೆಸಬೇಕಿತ್ತು. ಸಮಾಜದ ಯಾವುದೇ ಶುಭಕಾರ್ಯ ಅಥವಾ ಅಶುಭ ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ಒಂದು ರೀತಿಯಲ್ಲಿ ಗೃಹ ಬಂಧನದಲ್ಲಿರಬೇಕಾಗಿತ್ತು. ಆದರೆ ಗೃಹದಲ್ಲಿಯೂ ಅನೇಕ ಕಟ್ಟುನಿಟ್ಟುಗಳು ಇದ್ದವು. ಬೆಳಿಗ್ಗೆ ಎದ್ದು ಇವಳ ಮುಖ ನೋಡಿದರೆ, ಕೆಲಸಕ್ಕೆ ಹೊರಗಡೆ ಹೋಗುವಾಗ ಇವಳು ಎದುರಿಗೆ ಬಂದರೆ ಅಪಶಕುನವೆಂದು ನಂಬಿ ಇವಳನ್ನು ಅವಮಾನಗೊಳಿಸುತ್ತಿದ್ದರು.

ಒಟ್ಟಾರೆ ಹೇಳುವುದಾದರೆ ವಿಜಯನಗರದರಸರ ಕಾಲದಲ್ಲಿ ಮಹಿಳೆಯರು ಎಷ್ಟೇ ಉನ್ನತ ಸ್ಥಾನಮಾನವನ್ನು ಪಡೆದಿದ್ದರೂ ಸಹ ಅವರು ಕೊನೆಯಲ್ಲಿ ಕೇವಲ ಒಂದು ಭೋಗದ ವಸ್ತುವಾಗಿಯೇ ಉಳಿದುಕೊಂಡಿದ್ದರು. ರಾಜಧಾನಿಯಲ್ಲಿಯೇ ಆಗಲಿ, ಆಸ್ಥಾನದ ಉಪರಾಣಿಯರ ಜೀವನವೇ ಇರಲಿ, ಯುದ್ಧದಲ್ಲಿ ಹೋರಾಡುವ ಮಹಿಳೆಯ ಪಾತ್ರವಿರಲಿ ಅಥವಾ ವ್ಯಾಪಾರ ಕೈಗೊಂಡ ಮಹಿಳೆಯೇ ಆದರೂ ಸಹ ಪುರುಷನ ವಕ್ರದೃಷ್ಟಿಗೆ ಬಲಿಯಾಗುವುದು ಸಹಜವಾಗಿತ್ತು.

1583ರಲ್ಲಿ ಆಗಮಿಸಿದ್ದ ಲಿಂಚಿಸ್ಟನ್ ಎಂಬ ಪ್ರವಾಸಿ ಸತಿ ವಿಚಾರವಾಗಿ ಹೇಳುತ್ತಾ ಒಂದು ಅನಾಗರೀಕ ಪದ್ಧತಿ ಬ್ರಾಹ್ಮಣರಲ್ಲಿದ್ದಿತ್ತು ಎಂದು ದಾಖಲಿಸಿದ್ದಾನೆ. ಅನೇಕ ಬಡ ಬ್ರಾಹ್ಮಣ ವಿಧವೆಯರು ಊಟದ ಮನೆಗಳನ್ನು ನಡೆಸಿ ಜೀವನ ಸಾಗಿಸುತ್ತಿದ್ದರು. ಈ ಸವರ್ಣೀಯರ ಶವ ಸಂಸ್ಕಾರದಲ್ಲಿ ಸುಡುವ ಪದ್ಧತಿ ರೂಢಿಯಲ್ಲಿದ್ದಿತು.

ಸಮಾಜದಲ್ಲಿ ಸ್ತ್ರೀಯರಿಗೆ ಗೌರವಾನ್ವಿತ ಸ್ಥಾನಮಾನಗಳಿದ್ದಿತಾದರೂ ಅದರ ವಲಯ ಪರಿಮಿತವಾಗಿದ್ದಿತು. ಕೆಲವು ಮಹಿಳೆಯರು ವಿದ್ಯಾವಂತರು, ಸಂಗೀತ ನೃತ್ಯ ಕಲಾವಿಶಾರದೆಯರಾಗಿದ್ದರು. ರಾಜಮನೆತನದ ಗಂಗಾದೇವಿ, ಚಿನ್ನಾಂಬ, ವರದಾಂಬಿಕಾ, ತಿರುಮಲಾಂಬಾ, ಮೋಹನಾಂಗಿ, ಭದ್ರಾಂಬ, ಹೊನ್ನಮ್ಮ ಮೊದಲಾದವರು ವಿದ್ವನ್ಮಣಿಗಳಾಗಿದ್ದರು. ಕೃಷ್ಣದೇವರಾಯನ ಎರಡನೆಯ ಮಡದಿ ಚಿನ್ನಾಂಬ ನೃತ್ಯ ವಿಶಾರದೆಯಾಗಿದ್ದಳು. ಹೊನ್ನಮ್ಮ ಪ್ರೌಢದೇವರಾಯನ ಅರಮನೆಯಲ್ಲಿ ವರದಿಗಾರಳಾಗಿದ್ದಳು. ಅಚ್ಯುತನ ಕಾಲದ ವರದಿಗಾರ್ತಿ ತಿರುಮಲಮ್ಮ ಸಂಸ್ಕೃತದಲ್ಲಿ ಕವಯಿತ್ರಿಯೂ ಆಗಿದ್ದಳು.

ವಿಜಯನಗರ ಅರಸರ ಕಾಲದಲ್ಲಿ ರಾಜಧಾನಿ ಹಾಗೂ ಸಾಮ್ರಾಜ್ಯದ ಪ್ರಮುಖ ಪಟ್ಟಣಗಳಲ್ಲಿ ಸೂತಿಕಾಗೃಹಗಳಿದ್ದವು. (ಹೆರಿಗೆಯ ಮನೆಯನ್ನು ಸೂತಿಕಾಗೃಹವೆಂದೂ ಕರೆಯಲಾಗುತ್ತಿತ್ತು.) ಹೆರಿಗೆ ಮಾಡಿಸುವವಳನ್ನು ಸೂಲಗಿತ್ತಿಯೆಂದೂ ಕರೆಯುವ ವಾಡಿಕೆಯಾಗಿತ್ತು. ಇಂದಿಗೂ ಸಹ ಈ ಪದಗಳ ಬಳಕೆ

ಇರುವುದು ಕಂಡುಬರುತ್ತದೆ. ಕೇವಲ ಶ್ರೀಮಂತರು, ರಾಜಪರಿವಾರದವರಿಗೆ ಮಾತ್ರ ಈ ಸೂಲಗಿತ್ತಿಯರ ಸೌಲಭ್ಯ ದೊರಕುತ್ತಿತ್ತು. ಇದಕ್ಕಾಗಿಯೇ "ಸಡಗರದ ನಾರಿಯರು ಹಡೆಯುವಾಗ ಸೂಲಗಿತ್ತಿ" ಎಂಬ ದಾಸರ ಪದ ಅವರ ಬೇಡಿಕೆ ಹಾಗೂ ಜೀವನ ಮಟ್ಟವನ್ನು ಸೂಚಿಸುತ್ತದೆ. ಹಣವಂತರು ಹಾಗೂ ಉತ್ತಮ ಜಾತಿ ಎಂದು ತಾವೇ ಕರೆದುಕೊಂಡಿದ್ದ ಜನಾಂಗಕ್ಕೆ ಮಾತ್ರ ದೊರಕುತ್ತಿದ್ದ ಸೂಲಗಿತ್ತಿಯರು ರಾಜಧಾನಿಯಲ್ಲಿ ವಿಶೇಷ ಮಹತ್ವ ಪಡೆದಿದ್ದ ಮಹಿಳೆಯರಾಗಿದ್ದರು.

ಕೆಳವರ್ಗದ ಸ್ತ್ರೀಯರ ಸ್ಥಿತಿಮಾತ್ರ ಶೋಚನೀಯವಾಗಿತ್ತು. ಉದಾ: ದೇವದಾಸಿ ಮತ್ತು ಸತೀಪದ್ಧತಿ ಹಾಗೂ ವೇಶ್ಯಾವಾಟಿಕೆ ದೇವರ ಹೆಸರಿನಲ್ಲಿ ರೂಢಿಯಲ್ಲಿದ್ದ ದೇವದಾಸಿ ಪದ್ಧತಿಯಿಂದ ಸ್ತ್ರೀಯರ ಶೋಷಣೆಯಾಗುತ್ತಿತ್ತು. ದೇವದಾಸಿಯರು ಕೆಲವು ದೇವರ ಹೆಸರಿನಲ್ಲಿ ಸಾರ್ವಜನಿಕರ ಭೋಗವಸ್ತುವಾಗಿ ಪರಿಣಮಿಸುತ್ತಿದ್ದರು. ನೃತ್ಯ ಸಂಗೀತದಲ್ಲಿ ಅವರು ನುರಿತವರಾಗಿದ್ದು ರಾಜನ ಆಸ್ಥಾನ ಹಾಗೂ ದೇವಾಲಯಗಳಿಗೆ ಸಂಬಂಧಿಸಿದಂತೆ ಇದ್ದರು. ಇದರಿಂದಾಗಿ ದೇವಾಲಯದ ವಾತಾವರಣ ಕಲುಷಿತವಾಗಿತ್ತು. ಆದರೆ ಅದಕ್ಕೆ ಧರ್ಮದ ಅಂಗೀಕಾರವಿತ್ತು. ಅದೊಂದು ಕುರುಡು ನಂಬಿಕೆಯಾಗಿದ್ದು ಅಮಾಯಕರೇ ಅದರಲ್ಲಿ ಬಲಿಯಾಗುತ್ತಿದ್ದರು. ಈ ಪದ್ಧತಿಯನ್ನು ತಾವು ಆಚರಿಸದ ಉನ್ನತ ವರ್ಗ ಕೆಳವರ್ಗದಿಂದ ಮಾತ್ರ ಇದನ್ನು ತಪ್ಪದೆ ಆಚರಣೆಯಲ್ಲಿ ತರುವಂತೆ ನೋಡಿಕೊಳ್ಳುತ್ತಿತ್ತು. ಕೆಲವು ದೇವದಾಸಿಯರು ಮತ್ತು ವೇಶ್ಯೆಯರು ಕಲಾವಿದೆಯರಾಗಿದ್ದು ರಾಜನ ಆಸ್ಥಾನದಲ್ಲಿ ಮನ್ನಣೆ ಪಡೆದಿದ್ದರು. ವೇಶ್ಯೆಯರು ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು. ಪ್ರವಾಸಿ ಅಬ್ದುಲ್ ರಜಾಕ್ ವೇಶ್ಯಾವಾಟಿಕೆಯ ಬಗ್ಗೆ ವಿವರವಾದ ಮಾಹಿತಿಯನ್ನೇ ನೀಡಿದ್ದಾನೆ. ದೊರೆತಿರುವ ಅನೇಕ ಶಾಸನಗಳೂ ಆ ಬಗ್ಗೆ ಸ್ಪಷ್ಟ ವಿವರಣೆ ಒಳಗೊಂಡಿವೆ. ವೇಶ್ಯಾವೃತ್ತಿ ಅಧಿಕೃತವಾಗಿ ಸರ್ಕಾರದ ಮನ್ನಣೆ ಪಡೆದಿತ್ತು. ಅವರ ಮೇಲೆ ತೆರಿಗೆಯನ್ನೂ ವಿಧಿಸಲಾಗುತ್ತಿತ್ತು. ಅವರಿಂದ ವಸೂಲಾಗುತ್ತಿದ್ದ ತೆರಿಗೆಯೊಂದರಿಂದಲೇ ಕಾವಲು ಪಡೆಯ ವೇತನವನ್ನು ಭರಿಸಲಾಗುತ್ತಿತ್ತು ಎಂಬುದಾಗಿ ಅಬ್ದುಲ್ ರಜಾಕ್ ತಿಳಿಸುತ್ತಾನೆ.[122] ಗುಲಾಮಗಿರಿ ರೂಢಿಯಲ್ಲಿದ್ದು ದಾಸ, ದಾಸಿಯರ ಮಾರಾಟವೂ ಇದ್ದಿತು. ಸಾಲಗಾರರು ಜೀತದಾಳುಗಳಾಗಿದ್ದು ಋಣಮುಕ್ತರಾಗಬೇಕಿದ್ದಿತು. ಜೀತದಾಳುಗಳಲ್ಲಿಯೂ ಸ್ತ್ರೀಯರೂ ಇರುತ್ತಿದ್ದರು. ಗುಲಾಮರು ಮತ್ತು ಜೀತದಾಳುಗಳನ್ನು ದಯಾಪರತೆಯಿಂದ ನೋಡಿಕೊಳ್ಳುತ್ತಿದ್ದರೆಂಬುದು ಸಮಾಧಾನ ತರುವ ಸಂಗತಿಯಾದರೂ ಸರ್ವ ಸ್ವಾತಂತ್ರ್ಯ ಅವರಿಗಿರಲಿಲ್ಲ. ಸಮಾಜದಲ್ಲಿ ಏಕಪತ್ನಿತ್ವ ಸಾಮಾನ್ಯವಾಗಿದ್ದರೂ ಬಹುಪತ್ನಿತ್ವವೂ ರೂಢಿಯಲ್ಲಿದ್ದಿತು. ಧನಿಕರು ಹಾಗೂ ಅರಸರಲ್ಲಿ ಇದು ಸಾಮಾನ್ಯವಾಗಿತ್ತು. ಹೀಗೆ ವಿಜಯನಗರ ಕಾಲದ ಸಾಮಾಜಿಕ ಸ್ಥಿತಿಯಲ್ಲಿ ಜಾತಿಗಳ ಸ್ಥಿತಿಗತಿ, ಸ್ಥಾನಮಾನಗಳ ಪರಿಸ್ಥಿತಿಯನ್ನು ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು**


1. ಎಫಿಗ್ರಾಫಿಯಾ ಇಂಡಿಕಾ, ಸಂ. IV, ಪು. ೧೮೯
2. ಹಿಸ್ಟರಿ ಆಫ್ ಧರ್ಮಶಾಸ್ತ್ರ, ಕ.ನಿ.ಪಿ.ವಿ.ಸಂ. ೧, ಪು. ೨೨೭
3. ಅದೇ: ಸಂ. ೧, ಪು. ೨೨೭-೨೮
4. ಎಫಿಗ್ರಾಫಿಯಾ ಇಂಡಿಕಾ: ಸಂ. IV, ಪು. ೧೮೯
5. ಇಂಡಿಯನ್ ಆಂಟಿಕ್ವರಿ, ಸಂ., VI ಪು. ೨೪೧
6. MAR: ಪು. ೧೯೮ (೧೯೨೯)
7. ಎಫಿಗ್ರಾಫಿಕಾ ಇಂಡಿಕಾ: ಸಂ. VI, ಪು. ೨೪೧
8. ಇಂಡಿಯನ್ ಆಂಟಿಕ್ವರಿ; ಪು. ೧೬೫
9. ಭಾರತೀಯ ಸಂಸ್ಕೃತಿ: ಡಾ.ಎಸ್. ಶ್ರೀಕಂಠಶಾಸ್ತ್ರಿ, ಪ್ರಸಾರಾಂಗ, ಮೈಸೂರು ೧೯೬೬
10. ಕರ್ನಾಟಕ ಚರಿತ್ರೆ, ವಿಜಯನಗರ ಕಾಲದ ಸಮಾಜ, ಪು. ೨೪೩ - ೨೪೪
11. ಬಿ.ಎ. ಸಾಲೆತೊರೆ, ಬಾ ಪು. 31, ಸೋಷಿಯಲ್ ಅಂಡ್ ಪೊಲಿಟಿಕಲ್ ಲೈಫ್
12. EC. Vol - VIII, TI, 14 (A.D. 1423)
13. Manu, Vol - VII, 137-8, ಪು. 221
14. ಅದೇ, Vol - IX, 313, ಪು. 397
15. ಸಾಲೆತೊರೆ ಬಿ.ಎ : Soc. & Pol. Life, Vol. II (ಮದ್ರಾಸ್ 1934), ಪು. 120
16. SII, No. 153, Vol. I 1890, ಪು. 164
17. ಸೆವೆಲ್ ಆರ್. : A Forgotton Empire, ಪು. 237-38
18. ಡೇಮ್ಸ್ : Barbosa, Vol. I, ಪು. 217
19. ಸೆವೆಲ್ ಆರ್. : A Forgotton Empire, ಪು. 370-71
20. ಎಕ Vol - VI, KP. 52, ಪು. 370-71
21. ಹಯವದನರಾವ್. ಸಿ : MG, Vol.II, part - III, ಪು. 1669-1670

21.a. ಕರ್ನಾಟಕ ಚರಿತ್ರೆ, ಪುಟ. ೨೫೨ - ೨೫೨

22. ಬಟರ್‌ವರ್ತ್ ಚೆಟ್ಟಿ : Nel Ins, I, ಪು. 16
23. The Agrarian system of Karnataka, 1336-1761, p. 124-125
24. ಅದೇ
25. ಜನಪದ ತಂತ್ರಜ್ಞಾನ ಚಕ್ಕೆರೆ ಶಿವಶಂಕರ, ಪುಟ. ೧೭೨ - ೭೩
26. ಎಕ Vol - IV, yl 45
27. ಸಾಲೆತೊರೆ ಬಿ.ಎ. : Soc. & Pol. Life, Vol.II, ಪು. 32-33
28. ಎಕ Vol - VI, K.P. 52-3
29. ವೆಂಕಟರತ್ನಂ ಎ.ವಿ. :Local self government of Vijayanagara empire, ಪು. 126
30. ಫಿಲಿಪ್ಸ್, ಜಿಯೊ : 'Mahuan's Account of Cochin, Calicut and Aden; JRAS (1896) ಪು. 344
31. ಎಕ, Vol - VII, SK, 118, ಪು. 87
32. 1911ರ 82; 1911ರ 222
33. 1912ರ 405
34. ಎಕ, Vol - IX, Bn 96 (ಕ್ರಿ.ಶ. 1402)
35. ವೆಂಕಟರತ್ನಂ ಎ.ವಿ : ಪೂರ್ವೋಕ್ತ, ಪು. 111
36. ಎಕ Vol - X, Bg. 72
37. ಎಕ Vol - Ix, An 64
38. ಮಹಾಲಿಂಗಮ್ ಟಿ.ವಿ : EC life, ಪು. 29
39. EC ಎಕ, Vol - X, BP. 83
40. ಡೇಮ್ಸ್ : Barbosa, Vol I, ಪು. 70-3

41. ಎಕ, Vol - IX, Bn. 12
42. ಎಕ, Vol - IV, Bn 12.
43. SII, Vol. IX, (ii) ಸಂ. 437
44. EC, Vol - IV, Gu. 34
45. 1917ರ 368 : ARSZIE, 1918, ii ಪ್ಯಾರಾಗಳು, 68 ಮತ್ತು 70; 1918ರ 162; 1921ರ 1921ರ 473; 1922ರ 41; 1910ರ 186
46. 1916ರ 312
47. ಎಕ, Vol -IV, Ch. 97
48. ARSIE, 1918, ಪು. 166
49. MER; ಸಂ 1934-35ರ 265 ಅನುಬಂಧ ಬಿ. (ಕ್ರಿ.ಶ. 1445)
50. ಅದೇ, ಸಂ. 1923ರ 214 ಅನುಬಂಧ ಸಿ. (ಶಾ.ಶಕ 1348 ಅಥವಾ ಕ್ರಿ.ಶ. 1426)
51. ಅದೇ ಸಂ. 1934-35ರ 209 ಅನುಬಂಧ ಬಿ. (ಕ್ರಿ.ಶ. 1428)
52. ಅದೇ, ಸಂ. 1928-29ರ 263, ಅನುಬಂಧ ಬಿ
53. ಸೋಮಶೇಖರ ಶರ್ಮ ಎಂ. : History of the Reddi Kingdoms (ವಾಟರ್, 1948), ಪು. 219
54. ಸಾಲೆತೊರೆ ಬಿ.ಎ. : Soc & Pol. Life vol II, ಪು, 37
55. ಬಟರ್‌ವರ್ತ್‌ಚೆಟ್ಟಿ : ಪೂರ್ವೋಕ್ತ V, ಪು. 153
56. ಸಾಲೆತೊರೆ ಬಿ.ಎ.: ಪೂರ್ವೋಕ್ತ; ರಂಗಾಚಾರಿ ವಿ : "The History of the Naik Kingdom of Madura' IA XI-III, (1914) ಪು. 138-39
57. Grihya Sutras (Sanktayana), ಪು. I, ಅಧ್ಯಾಯ 28, ಖಂಡ 6 ಮತ್ತು 24 ಪು. 57
58. HISI ಪು. 216; 1914ರ 59 (ಕ್ರಿ.ಶ. 1429)
59. ಎಕ, Vol - XI, HK, 11 ಮತ್ತು 110 (ಕ್ರಿ.ಶ. 1546)
60. ಸಾಲೆತೊರೆ ಬಿ.ಎ. : ಪೂರ್ವೋಕ್ತ Vol. II, ಪು. 40
61. ಅದೇ, ಪು. 41 ಮತ್ತು 42
62. ಹಯವದನರಾವ್ ಸಿ : MG, Vol. I (1927), ಪು. 230
63. ಸಾಲೆತೊರೆ ಬಿ.ಎ.: ಪೂರ್ವೋಕ್ತ, Vol. II, ಪು. 40
64. T. Madhava Menon, D. Tyagi; Santhro pological survey of India, Vol. I
65. Sailenda nath sen : Ancient Indian history of Civilization,m Vol - IV, 2011.
66. Ananda Ranga Pillai : Private Diary of Ananda Ranga Pillai
67. V. Manikam : Kongu Nadu, A history upto AD to 1400
68. ಅದೇ, ಪು. 48
69. ಎಲಿಯೆಟ್ : History of India, Vol. IV, ಪು. 118-19 ಲಿನ್‌ಷೆಂಟೆನ್ : Purchas His Pilegrimes, X, (Glasgow, 1905) ಪು. 247-8
70. 1926ರ 309
71. 1920ರ 331
72. ಎಕ, Vol - IX, Ht, 103 (ಎ) 101; ರಂಗಾಚಾರಿ ವಿ. : "The History of the Naik Kingdom of Madura IA, XL III, ಪು. 135-6
73. ಮಹಾಲಿಂಗಮ್ ಟಿ.ವಿ. : Adminstration, ಭಾಗ II, 2ನೇ ಆವೃತ್ತಿ (ಮದ್ರಾಸ್ 1975) ಪು. 29
74. ಡೇಮ್ಸ್ : Barbosa, I, ಪು. 230
75. ಸೆವೆಲ್ ಆರ್ : A Forgotton Empire, ಪು. 241
76. Kennethhurry : A brief history of India, PP. 114, 2003
77. Pran Nath Chopra; A comprehensive history of ancient India, pp. 202, sterling publication, 2003
78. Edgar thurston : caster and tribes of southern India, pp. 223, 224
79. Ibid.
80. ಅದೇ, ಪು. 255

81. ಡೇಮ್ಸ್ Barbosa: I, ಪು. 230-31
82. ಹಯವದನರಾವ್ ಸಿ. : MG, Vol. I, ಪು. 228
83. ವೆಂಕಟರತ್ನಂ ಎ.ವಿ. : ಪೂರ್ವೋಕ್ತ, ಪು. 23
84. ಕೆ.ಎಸ್. ಶಿವಣ್ಣ : ಕರ್ನಾಟಕ ಚರಿತ್ರೆ, ಪು. 164-65
85. ಅದೇ, ಪು. 196-197
86. ಅದೇ, ಪು. 35
87. ಎಕ, Vol - IX Ht. 103 (ಕ್ರಿ.ಶ. 1369)
88. ಹಯವದನರಾವ್. ಸಿ : MG. Vol. I, (1927) ಪು. 178
89. ಮಹಾಲಿಂಗಮ್ ಟಿ.ವಿ. : ಪೂರ್ವೋಕ್ತ, ಭಾಗ II, ಪು. 25
90. ಹಯವದನರಾವ್ ಸಿ. : MG, Vol. I, ಪು. 178
91. Taylor : Catalogure Raisonne of Oriental manuscripts (Madras, 1857-62), III, ಪು. 7
92. 1918ರ 92; 1917ರ 216; ARSIE 1914, ಪ್ಯಾರಾ 44
93. Russell. lai. R.V : RBH (1995). The tribes and caster of the central provinces of India, Vol - I, page 343-45
94. Indian Journal of Human genetics, 2002
95. Mystical eroticism by ventantra
96. Bharat Gupt : Dombii as scavenger woman pp. 14271, 2000
97. Stephen Hodge : dombi as scavenger woman, pp - 17425, 1948
98. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಪು. 252-253
99. 1954ರ 308
100. ಅದೇ ಪು. 175-180
101. ವಿಜಯನಗರದ ಇಮ್ಮಡಿ ದೇವರಾಯ, ಪು. 195-198
102. ಸೆವೆಲ್. ಆರ್. A Forgotton Empire, ಪು. 376
103. Akshaya Kumar : Philosophy of goraknath
104. William crook : tribes and castes of North western provinces and oudh, Vol - III
105. EC, Vol - IIV
106. ಅದೇ, ಪು. 196-197
107. ಸುಬ್ರಹ್ಮಣ್ಯ ಎನ್ : - The age of Devaraya Karnataka through the ages, ಪು. 544-45
108. ನೀಲಕಂಠಶಾಸ್ತ್ರಿ ಕೆ.ಎ. ಪೂರ್ವೋಕ್ತ, ಪು. 482
109. ಅದೇ, ಪು. 484
110. Sii, Vol - III, ಸಂ. 153ಪು 160
111. ಎಕ, Vol - II SB 156
112. MER 1939-40ರ 390 ಅನುಬಂಧ ಬಿ
113. ಅದೇ, 1937-38ರ 80 ಅದೇ ಪು 17
114. ಅದೇ, 1937-38ರ 82 ಅಲ್ಲೇ
115. ಅದೇ, 1937ರ 3ರ 75 ಅಲ್ಲೇ
116. ಎಕ, Vol -X Mulbagal, 1996
117. ಅದೇ,ಪು 97
118. MER 1907; ಸಂ 496
119. ಸೆವೆಲ್ ಆರ್ A Forgotton Empire, ಪು. 86
120. ನೀಲಕಂಠಶಾಸ್ತ್ರಿ ಕೆ.ಎ. ಮತ್ತು ವೆಂಕಟರಮಣಯ್ಯ : Further sources
121. The book of durate barbosa, Vol. 2, London (1918)
122. Eliots History of India as told by its own historians vol (iv)

# ಅಧ್ಯಾಯ 3

# ವಿಜಯನಗರ ಕಾಲದ ಅರ್ಥವ್ಯವಸ್ಥೆ ಹಾಗೂ ವೃತ್ತಿ ಆಧಾರಿತ ಜಾತಿಗಳು

ವಿಜಯನಗರದ ಅರಸರು ಸದಾ ಯುದ್ಧಗಳಲ್ಲಿ ತೊಡಗಬೇಕಾಗಿದ್ದುದರಿಂದ ಹೆಚ್ಚು ಆದಾಯದ ಅನಿವಾರ್ಯತೆ ಇತ್ತು. ಅದಕ್ಕಾಗಿ ವಿಜಯನಗರದ ಅರಸರು ಕೃಷಿಕರಿಗೆ ಕೊಟ್ಟ ಸೌಲಭ್ಯಗಳಿಂದಾಗಿ ಹೆಚ್ಚು ವೃತ್ತಿಗಳು ಹುಟ್ಟಿಕೊಳ್ಳಲು ಅನುಕೂಲವಾಯಿತು. ರೈತನ ಸಹಾಯಕರಾಗಿ ವಿವಿಧ ಕಸುಬುಗಳ ಜನರು ತಮ್ಮ ವೃತ್ತಿಗಳಿಂದಾಗಿ ಸಂತೃಪ್ತರಾದುದಲ್ಲದೆ ಅನುವಂಶಿಕವಾಗಿ ಅದೇ ವೃತ್ತಿಗಳನ್ನು ಮುಂದುವರಿಸಿಕೊಂಡು ಹೋದರು. ಅವು ಮುಂದೆ ವಿವಿಧ ಜಾತಿಗಳಾಗಿ ರೂಪುಗೊಂಡವು.

ವಿಜಯನಗರ ಸಾಮ್ರಾಜ್ಯವು ಮುಖ್ಯವಾಗಿ ಕೃಷಿ ಪ್ರಧಾನ ಸಾಮ್ರಾಜ್ಯವಾಗಿತ್ತು. ಹಳ್ಳಿಗಳೇ ಇಲ್ಲಿಯ ಐಶ್ವರ್ಯದ ಪ್ರಮುಖ ಆಧಾರಗಳಾಗಿದ್ದವು. ರೈತನೇ ಹಳ್ಳಿಗಳ ಹಾಗೂ ಸಾಮ್ರಾಜ್ಯದ ತಳಹದಿಯಾಗಿದ್ದನೆಂದು ಹೇಳಬಹುದು. ಅವನ ಸಂಪತ್ತೇ ದೇಶದ ಸಂಪತ್ತು. ಅವನ ಭಾಗ್ಯವೇ ದೇಶದ ಭಾಗ್ಯ. ರೈತರ ಉದ್ಧಾರವೇ ದೇಶೋದ್ಧಾರ ಎಂದು ನಂಬಿ ರೈತನಲ್ಲಿ ಸುಖ, ಸಂಪತ್ತು, ಸಮೃದ್ಧಿಯಾಗಿದ್ದರೆ ದೇಶದಲ್ಲಿ ನೆಲವೂ, ಬಲವೂ, ಸಂಪತ್ತೂ ನದಿಯಂತೆ ಲೀಲಾಜಾಲವಾಗಿ ಹರಿಯುತ್ತದೆ ಎಂದು ನಂಬಿದವರಾಗಿದ್ದರು ಅಂದಿನ ಜನ. ಇದನ್ನು ಗಮನಿಸಿದರೆ ಅಂದು ರೈತರಿಗೆ ಅಂದರೆ ಕೃಷಿಯನ್ನೆ ಅವಲಂಬಿಸಿಕೊಂಡಿದ್ದವರಿಗೆ ಸಾಮ್ರಾಜ್ಯದಲ್ಲಿ ಉತ್ತಮ ಸ್ಥಾನಮಾನವಿದ್ದಿತ್ತೆಂದು ಕಂಡುಬರುತ್ತದೆ.[1]

ಅಂದಿನ ಕೃಷಿಯು ಮಳೆಯೊಂದಿಗೆ ಜೂಜಾಟವಾಡುವುದರಲ್ಲಿಯೇ ಕಾಲ ಕಳೆಯುತ್ತಿದ್ದಿತು. ಅಂದಿನ ರೈತರು ಸಾಮ್ರಾಜ್ಯದ ಅಡಿಗಲ್ಲುಗಳಾಗಿದ್ದರೂ ಸಹ ಅವರು ಅನುಸರಿಸುತ್ತಿದ್ದ ವ್ಯವಸಾಯದ ರೀತಿಗಳು ಉತ್ತಮವಾಗಿಲ್ಲದ ಕಾರಣ ಹೆಚ್ಚು ಹೆಚ್ಚು ಫಸಲನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಅವರಲ್ಲಿ ಅಜ್ಞಾನ ಕೆಳಮಟ್ಟದ ಶ್ರದ್ಧೆ ಹೆಚ್ಚುತ್ತಿದ್ದಿತು. ಏಕಾಗ್ರತೆ, ಜಾಗರೂಕತೆ, ಪ್ರಾಮಾಣಿಕತೆಗಳು ಮಾಯವಾಗಿದ್ದವೆಂದು ಹೇಳಬಹುದು. ಇದಕ್ಕೆಲ್ಲ ಪ್ರಮುಖ ಕಾರಣವೆಂದರೆ ಬಡತನ ಹಾಗೂ ಅಜ್ಞಾನ. ವಿಜಯನಗರದ ರೈತರು ಸಾಮಾನ್ಯವಾಗಿ ಒಂದೇ ರೀತಿಯ ಬೆಳೆಯನ್ನು ಪ್ರತಿವರ್ಷವೂ ಬೆಳೇಯುತ್ತಿದ್ದರೆಂದು ಕೆಲವು ಆಧಾರಗಳಿಂದಲೂ ತಿಳಿಯಬಹುದು.[2]

ವಿದೇಶಿಯರಾದ ಬಾರ್ಬೋಸ, ಪಾಯಸ್, ನ್ಯೂನಿಜ್‌ರವರು ವಿಜಯನಗರ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲೆಲ್ಲಾ ಸಂಚರಿಸಿ ಕೃಷಿ ಭೂಮಿ, ಭೂಮಿಯ ಫಲವತ್ತತೆ, ಬೆಳೆಗಳು ಹಾಗೂ ಸಾಕುಪ್ರಾಣಿಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತಾರೆ. ಇವರ ಪ್ರಕಾರ ಸಾಮ್ರಾಜ್ಯವು ತನ್ನ ಪಶ್ಚಿಮದ ಕಡೆಯಿದ್ದ ಕರಾವಳಿ ಪ್ರದೇಶವನ್ನು ಅತ್ಯಂತ ಫಲವತ್ತಾದ ಭೂಮಿ ಎಂದು ಪರಿಗಣಿಸಿ ಅಲ್ಲಿ ಉತ್ತಮವಾದ ಭತ್ತವನ್ನು

ಬೆಳೆದು, ಅಕ್ಕಿಯನ್ನು ಮಲಬಾರ್ ಮತ್ತು ಅರ್‌ಮಜ್‌ಗೆ ರಫ್ತು ಮಾಡುತ್ತಿದ್ದರೆಂದು ಹೇಳಿದ್ದಾರೆ. ಪಾಯಸನು ಭಟ್ಕಳದಿಂದ ವಿಜಯನಗರದವರೆಗಿನ ಮಾರ್ಗವನ್ನು ಹಾಗೂ ಮಧ್ಯ ಕರ್ನಾಟಕದ ಕೃಷಿ ಭೂಮಿಯನ್ನು ವರ್ಣಿಸಿ ಉದ್ದಕ್ಕೂ ಫಲವತ್ತಾದ ಕೃಷಿ ಭೂಮಿಯನ್ನು ಹೊಂದಿತ್ತೆಂದು ಹೇಳುತ್ತಾನೆ. ಹತ್ತಿ, ಗೋಧಿ, ಭತ್ತಗಳನ್ನು ಹೆಚ್ಚಾಗಿ ಈ ಪ್ರದೇಶದಲ್ಲಿ ಬೆಳೆಯುತ್ತಿದ್ದರೆಂದು ತಿಳಿಸುತ್ತಾನೆ. ಈಗಿನ ಧಾರವಾಡ ಜಿಲ್ಲೆಯಲ್ಲಿರುವ ಬಂಕಾಪುರ ಮತ್ತು ಸುತ್ತಮುತ್ತಲಿನ ಪ್ರದೇಶವು ವಿಜಯನಗರದ ಕಾಲದಲ್ಲಿ ಕೃಷಿಯು ಬೀಜೋತ್ಪಾದನಾ ಹಾಗೂ ಪಶುಸಂಗೋಪನ ಕ್ಷೇತ್ರಗಳಿಂದ ಸಮೃದ್ಧಿಯಾಗಿತ್ತೆಂದು ನ್ಯೂನಿಜ್ ಹೇಳುತ್ತಾನೆ.[3]

## 3.1. ಕೃಷಿ

ವಿಜಯನಗರದ ಕಾಲದ ರೈತರು ಕಾಲಕಾಲಕ್ಕೆ ಬದಲಾಗುವ ಋತು ಆಧಾರಿತ ವ್ಯವಸಾಯದ ವಿಭಜನೆಯನ್ನು ಉತ್ತಮ ರೀತಿಯಲ್ಲಿಯೇ ಅನುಸರಿಸಿಕೊಂಡಿದ್ದರು. ಆ ಕಾಲದ ಶಾಸನಗಳು ಕಾರ್ತಿಕ ಮತ್ತು ವೈಶಾಖದ ಬೆಳೆಗಳನ್ನು ಉಲ್ಲೇಖಿಸುತ್ತವೆ. ಕಾರ್ತಿಕ ಬೆಳೆಯು ಸಾಮಾನ್ಯವಾಗಿ ನವೆಂಬರ್‌ನಿಂದ ಜನವರಿ ಅವಧಿಯದಾಗಿರುತ್ತಿತ್ತು. ವೈಶಾಖದ ಬೆಳೆಯು ಏಪ್ರಿಲ್ ಮೇ ತಿಂಗಳಿನಲ್ಲಿ ಕೊಯ್ಲಿಗೆ ಬರುತ್ತಿತ್ತು. ಗ್ರಾಮೀಣ ಪ್ರದೇಶದ ಜನರು ಇವುಗಳನ್ನು ಕಾರ್ ಪಸಲು ಹಾಗೂ ಹೈನ್ ಫಸಲು ಎಂಬ ಪದಗಳಿಂದ ಕರೆಯುತ್ತಿದ್ದದು ಕಂಡುಬರುತ್ತದೆ. ಮೇಲಿನ ರೀತಿಯಲ್ಲಿ ಅಂದಿನ ಕೃಷಿಯು ೧. ಜೂನ್‌ನಿಂದ ಅಕ್ಟೋಬರ್‌ವರೆಗೆ ನೈಋತ್ಯ ಮುಂಗಾರು ಮಳೆಗೆ ಹೊಂದಿಕೊಳ್ಳುವ ಅವಧಿ. ೨. ಜನವರಿ ಫೆಬ್ರವರಿ ತಿಂಗಳ ಚಳಿ ಹವೆಯ ಫಸಲು ಎಂದು ವಿಭಾಗಿಸಿಕೊಂಡು ವ್ಯವಸಾಯ ಮಾಡಿಕೊಂಡು ಬರುತ್ತಿದ್ದರು.[4]

ಕಣಿವೆಯ ಕೆಳಭಾಗದಲ್ಲಿದ್ದ ನದಿಗಳು ಹಾಗೂ ಕಾಲುವೆಗಳ ಮೂಲಕ ನೀರನ್ನು ಪಡೆಯುತ್ತಿದ್ದ ಜಮೀನುಗಳಿಗೆ ಬೈಲು ಭೂಮಿ ಅಥವಾ ಗದ್ದೆ ಸೀಮೆ ಎಂದೂ, ಸಂಪೂರ್ಣ ಮಳೆಯನ್ನು ಅವಲಂಬಿಸಿರುವ ಭೂಮಿಯನ್ನು ಹೊಲಗಾಡು ಅಥವಾ ಮಳೆಗಾಡು ಎಂದು ಕರೆಯುತ್ತಿದ್ದರು. ಅಂದಿನ ರಾಜರುಗಳು ನೀರಾವರಿಗೆ ಹೆಚ್ಚಿನ ಆದ್ಯತೆ ನೀಡಿದ್ದರು. ಕೃಷಿಯ ಅಭಿವೃದ್ಧಿಗೆ ನೀರಾವರಿ ಸೌಕರ್ಯವು ಅತಿ ಮುಖ್ಯವಾದದು, ಇದರಿಂದ ಭೂಮಿಯ ಉತ್ಪತ್ತಿಯನ್ನು ಹೆಚ್ಚಿಸುವುದಕ್ಕೆ ಹೆಚ್ಚಿನ ಅವಕಾಶವಾಗುವುದಲ್ಲದೆ ವ್ಯವಸಾಯಕ್ಕೆ ಅರ್ಹವಾದ ಬಂಜರು ಭೂಮಿಯನ್ನು ಕೃಷಿ ಮಾಡಿ ಉತ್ತಮ ಬೆಳೆಯನ್ನು ಬೆಳೆಯಬಹುದೆಂದು ಬಾದಿಸಿ ವಿಜಯನಗರದ ಅರಸರು ನೀರಾವರಿಗೆ ಹಾಗೂ ಅದರ ಅಭಿವೃದ್ಧಿಗೆ ಹೆಚ್ಚಿನ ಗಮನ ನೀಡಿ ನಾಡಿನಾದ್ಯಂತ ಕೆರೆ, ಕಟ್ಟೆ, ಬಾವಿಗಳನ್ನು ನಿರ್ಮಿಸಿ ಜನರು ಸ್ವಾವಲಂಬಿಗಳಾಗಲು ಶ್ರಮಿಸಿದರು.[5]

ನೀರಾವರಿ ಪದ್ಧತಿಯಲ್ಲಿ ವ್ಯವಸಾಯ ಮಾಡುತ್ತಿದ್ದ ಭೂಮಿಯಲ್ಲಿ ಭತ್ತ, ಕಬ್ಬು, ಗೋಧಿ, ಜೋಳ, ಹೊಗೆಸೊಪ್ಪು, ಹತ್ತಿ, ದ್ವಿದಳ ಕಾಳುಗಳು, ಮುಂತಾದವು ಬೆಳೆಯಲಾಗುತ್ತಿದ್ದರೆ ಮಳೆಯೊಡನೆ ಜೂಜಾಟವಾಡುತ್ತಿದ್ದ ಹೊಲದಲ್ಲಿ ಹುಣಸೇಹಣ್ಣು, ಬೇಳೆಕಾಳು (ತೊಗರಿ), ತೆಂಗು, ಖರ್ಜೂರ, ಜೀರಿಗೆ,

ಈರುಳ್ಳಿ, ಬೆಳ್ಳುಳ್ಳಿ, ಅರಿಶಿನ, ಅಡಿಕೆ ಮತ್ತು ಮೆಣಸು, ಹಣ್ಣಿನ ಗಿಡಗಳು, ಮುಸುಕಿನ ಜೋಳ ಮುಂತಾದವನ್ನು ಬೆಳೆಯಲಾಗುತ್ತಿದ್ದಿತು. ನೀರಾವರಿ ಹೆಚ್ಚಾಗಿ ಕೆರೆಗಳೇ ಆಶ್ರಯವಾಗಿದ್ದವು.[6] ತೋಟಗಾರಿಕೆ ಬೆಳೆಯೂ ಸಹ ಹೆಚ್ಚಿನ ರೀತಿಯಲ್ಲಿ ಕಂಡು ಬರುತ್ತದೆ. ತೆಂಗು, ಅಡಿಕೆ, ಗೋಡಂಬಿ, ಮೆಣಸು, ಬಾಳೆ ಹಾಗೂ ಎಲ್ಲಾ ರೀತಿಯ ಹಣ್ಣುಗಳೂ ಸಹ ತೋಟಗಾರಿಕೆಯಲ್ಲಿ ಬೆಳೆಯಲಾಗುತ್ತಿತ್ತು. ಮಳೆ ಆಶ್ರಿತ ಪ್ರದೇಶದಲ್ಲಿಯೇ ಮಳೆಯ ಕಾಲದಲ್ಲಿ ಬಿತ್ತನೆ ಮಾಡಿ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಿದ್ದರು.[7] ಹೆಸರುಕಾಳು, ಅಲಸಂದೆ, ಹುರುಳಿಕಾಳು, ಕಡ್ಲೆಕಾಳು, ಅವರೇಕಾಳು ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಿದ್ದರು. ಕೆರೆಗಳು ಮತ್ತು ಕಾಲುವೆಗಳ ಕೆಳಗಡೆ ತೋಟದ ಬೆಳೆಗಳನ್ನು ಬೆಳೆಯುತ್ತಿದ್ದರು.[8] ಏಕೆಂದರೆ ನೀರು ಸುಲಭವಾಗಿ ಸಿಗುವುದರಿಂದ ಇಲ್ಲಿ ೩೦೦೦ದಿಂದ ೪೦೦೦ರಷ್ಟು ಉತ್ತಮ ಜಾತಿಯ ಮರ, ಗಿಡ, ಫಸಲನ್ನು ಬೆಳೆಯುತ್ತಿದ್ದರೆಂದು ಶಾಸನವು ತಿಳಿಸುತ್ತದೆ.[9]

ವಿಜಯನಗರದ ಕಾಲದ ಬೆಳೆಗಳನ್ನು ಕುರಿತು ಶಾಸನಗಳು (ಎ.ಕೆ. ೧೨, ಎಂ.ಎಲ್.೨೦[10] ಅದೇ ಟಿ.ಎಂ. ೪೮[11] ಎಂ.ಎ.ಆರ್. ೧೯೨೩-ಪು. ೧೨೨)[12] ಈ ಕೆಳಗಿನ ರೀತಿಯಲ್ಲಿ ವಿವರಿಸುತ್ತವೆ.

೧. ದ್ವಿದಳ ಧಾನ್ಯಗಳು : ಅವರೆ, ಉದ್ದು, ಗೋಧಿ, ಹೆಸರು, ಹುರುಳಿ, ಕಡ್ಲೆಕಾಳು, ಅಲಸಂದೆ.

೨. ಸಾಂಬಾರ ವಸ್ತುಗಳು : ಮೆಣಸು, ಅಡಕೆ, ಸಾಸುವೆ, ಮೆಂತ್ಯ, ಜೀರಿಗೆ, ಸಬ್ಬಸಿಗೆ, ಧನಿಯ ಮತ್ತು ಅರಿಸಿನ.

೩. ತೋಟದ ಬೆಳೆ : ತೆಂಗು, ಹಣ್ಣು ಹಂಪಲುಗಳು, ತರಕಾರಿಗಳು.

೪. ನೀರಾವರಿ ಬೆಳೆ : ಭತ್ತ, ರಾಗಿ, ಜೋಳ, ಗೋಧಿ, ನವಣೆ, ಮುಸುಕಿನ ಜೋಳ, ಹತ್ತಿ, ಸೆಣಬು, ಹಾಗೂ ದನಕರುಗಳಿಗೆ ಹುಲ್ಲು ಎಂದು ಸಂಕ್ಷಿಪ್ತವಾಗಿ ವಿವರಿಸಿರುವುದು ಕಂಡು ಬರುತ್ತದೆ. ಕಬ್ಬಿನ ಉತ್ಪನ್ನಗಳಾದ ಸಕ್ಕರೆ ಮತ್ತು ಬೆಲ್ಲ ಹೇರಳವಾಗಿ ಉತ್ಪಾದನೆಯಾಗುತ್ತಿದ್ದು, ಸಾಮ್ರಾಜ್ಯವು ಈ ವಸ್ತುಗಳ ಉತ್ಪಾದನೆಯಲ್ಲಿ ಸ್ವಯಂಪೂರ್ಣವಾಗಿತ್ತೆಂದು ಫಾಹಿಯಾನ್ ಹೇಳುತ್ತಾನೆ. ಬಾರ್ಬೋಸನ ಪ್ರಕಾರ ಸಾಮ್ರಾಜ್ಯದಲ್ಲಿ ತಯಾರಾಗುತ್ತಿದ್ದ ಸಕ್ಕರೆಯು ಹುಡಿಯಾಗಿರುತ್ತಿತ್ತೆಂದು ಹೇಳಿದ್ದಾನೆ. ಮತ್ತೊಬ್ಬ ಪ್ರವಾಸಿಯಾದ ವರ್ತಮೊ ಭಟ್ಕಳದಲ್ಲಿ ಸಕ್ಕರೆಯು ಹೇರಳವಾಗಿದ್ದುದ್ದನ್ನು ನೋಡಿದನು ಮತ್ತು ನಮ್ಮಲ್ಲಿ ಅದನ್ನು ಗಟ್ಟಿಗೊಳಿಸಲಾಗಿತ್ತು ಎಂದು ಹೇಳಿದ್ದಾನೆ.[13] ಕಬ್ಬನ್ನು ಗದ್ದೆಯಲ್ಲಿಯೂ ಅಥವಾ ಹೆಚ್ಚಾಗಿ ನೀರು ಲಭ್ಯವಿರುವ ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಗಾಣಗಳಿಂದ ಕಬ್ಬಿನ ರಸ ತೆಗೆಯಲಾಗುತ್ತಿತ್ತು.[14] ತೆಂಗಿನ ಕಾಯಿ ಹಾಗೂ ಅದರ ಉತ್ಪನ್ನಗಳಾದ ಎಣ್ಣೆ, ಎಳೆನೀರು, ನಾರುಗಳ ವರ್ಣನೆಯು ಶಾಸನಗಳಿಂದ ತಿಳಿದು ಬರುತ್ತದೆ.[15] ತೆಂಗಿನ ಎಣ್ಣೆಯನ್ನು ಸಹ ಗಾಣಗಳಿಂದ ತೆಗೆಯಲಾಗುತ್ತಿತ್ತು. ಗಾಣಗಳನ್ನು ಮರದಿಂದ ಅಥವಾ ಕಲ್ಲಿನಿಂದ ಮಾಡಿ ಜೋಡಿ ಎತ್ತುಗಳ ಸಹಾಯದಿಂದ ಅದನ್ನು ತಿರುಗಿಸಿ ಅರೆದು ಎಣ್ಣೆ ಉತ್ಪಾದಿಸುತ್ತಿದ್ದರು.

ಅಂದಿನ ಕಾಲದ ಸಾಹಿತ್ಯಾಧಾರಗಳು ಮೇಲೆ ಸೂಚಿಸಿರುವ ಬೆಳೆಗಳ ವರ್ಣನೆಯನ್ನು ಕೊಡುತ್ತದೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ 'ರಾಮಧಾನ್ಯ ಚರಿತೆ'. ಇಲ್ಲಿ ಎಲ್ಲಾ ಧಾನ್ಯಗಳ ವರ್ಣನೆಯು ಇದ್ದರೂ

ಸಹ ರಾಗಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಸಾಮ್ರಾಜ್ಯದಲ್ಲಿ ಕೆರೆ, ನಾಲೆಗಳು ಹಾಗೂ ಬಾವಿಗಳನ್ನು ನಿರ್ಮಿಸುವುದರ ಹೆಚ್ಚಿನ ಜವಾಬ್ದಾರಿಯನ್ನು ದೇವಾಲಯಗಳಿಗೆ, ಗ್ರಾಮಸಭೆಗಳು ಹಾಗೂ ಖಾಸಗಿ ವ್ಯಕ್ತಿಗಳಿಗೂ ವಹಿಸಿಕೊಡಲಾಗುತ್ತಿತ್ತು. ಅವರು ಈ ಕೆಲಸವನ್ನು ಧರ್ಮಕಾರ್ಯವೆಂದು ಪರಿಗಣಿಸಬೇಕಾಗಿದ್ದಿತ್ತು.[16] ನೀರಾವರಿ ಕೃಷಿಯಿಂದ ಸರ್ಕಾರಕ್ಕೆ ಆದಾಯ ಅಧಿಕವಾಗಿ ಬರುತ್ತಿತ್ತೆಂದು ಹೇಳಬಹುದು. ಕೆರೆ, ನಾಲೆ ಹಾಗೂ ಬಾವಿಗಳನ್ನು ನಿರ್ಮಿಸುವ ಜವಾಬ್ದಾರಿಯನ್ನು ದೇವಾಲಯ ಹಾಗೂ ಶ್ರೀಮಂತರುಗಳಿಗೆ ವಹಿಸುತ್ತಿದ್ದುದರಿಂದ ಇವರುಗಳು ಸಾಮಾನ್ಯ ಜನತೆಯ ಹೆಚ್ಚಿನ ಶ್ರಮವನ್ನು ಇದಕ್ಕೆ ಬಳಸಿಕೊಳ್ಳುತ್ತಿದ್ದರು. ಇಂತಹ ಸಮಯದಲ್ಲಿ ಸಾಮಾನ್ಯರ ಜೀವನ ಚಿಂತಾಜನಕವಾಗಿರುತ್ತಿತ್ತೆಂದು ಹೇಳಬಹುದು. ಕೆರೆ ನಿರ್ಮಿಸಿದ ಅಥವಾ ಕೆರೆಯನ್ನು ನೋಡಿಕೊಳ್ಳುತ್ತಿದ್ದವರಿಗೆ ತೆರಿಗೆ ಹಾಗೂ ಇನ್ನಿತರ ಸನ್ನಿವೇಶದಲ್ಲಿ ಸಂಪೂರ್ಣ ವಿನಾಯಿತಿ ಇದ್ದಿತ್ತು. ಆದರೆ ಶ್ರಮಿಕರನ್ನು ಬಲಾತ್ಕಾರದಿಂದ ದುಡಿಸಿಕೊಂಡು ಇದನ್ನು ಅವರು ದೇವರಿಗೆ ಸ್ಲಲಿಸಿದ ಸೇವೆ ಅಥವಾ ದಾನವೆಂದು ಪರಿಗಣಿಸಿ ಅವರ ಬೆವರಿನ ಹನಿಗಳ ಮೇಲೆ ಮಹಲುಗಳನ್ನು ನಿರ್ಮಿಸುತ್ತಿದ್ದರು. ಇದಕ್ಕೆ ಸಂಬಂಧಿಸಿದ ಅನೇಕ ಶಾಸನಗಳು ಸಿಗುತ್ತವೆ. ಇವುಗಳನ್ನು "ಕಡ್ಡಾಯ ಮತ್ತು ಬಿಟ್ಟಿ" ಎಂದು ಶಾಸನಗಳಲ್ಲಿ ಕರೆಯಲಾಗಿದೆ.

ಕೆರೆಗಳನ್ನು ಕಾಲಕಾಲಕ್ಕೆ ದುರಸ್ತಿ ಮಾಡಿಸಲಾಗುತ್ತಿತ್ತು. ದುರಸ್ತಿ ಎಂದರೆ ಸಾಮಾನ್ಯವಾಗಿ ಹೂಳು ತೆಗೆಯುವುದು, ಏರಿಗಳಲ್ಲಿ ಬಿರುಕು ಉಂಟಾದರೆ ಸರಿಪಡಿಸುವುದು, ಕೆರೆಯ ಕೋಳವೆಯಲ್ಲಿ ದೋಷವಿದ್ದರೆ ಸರಿಪಡಿಸುವುದು. ಇವು ಕೆರೆಗೆ ತೊಂದರೆ ನೀಡುತ್ತವೆ, ಆದ್ದರಿಂದ ಕಾಲಕಾಲಕ್ಕೆ ಇವನ್ನು ಸರಿಪಡಿಸಲು ವಿಶೇಷ ಹಣವನ್ನು ಮೀಸಲಿಡಲಾಗುತ್ತಿತ್ತು. ಪ್ರತಿವರ್ಷವೂ ಕೆರೆಯಿಂದ ಹೊಲಸನ್ನು ತೆಗೆದು ಸ್ವಚ್ಛಗೊಳಿಸುವ ವ್ಯಕ್ತಿಗಳಿಗೆ ಭೂಮಿಯನ್ನು ಕೊಡುಗೆಯಾಗಿ ನೀಡಲಾಗುತ್ತಿತ್ತು.[17] ನೀರಾವರಿಯ ಹಕ್ಕುಗಳ ಕುರಿತು ಹಳ್ಳಿಹಳ್ಳಿಗಳ ನಡುವೆ ವಿರಸವುಂಟಾದರೆ ಪಂಚಾಯಿತಿಯ ಮೂಲಕ ಅದನ್ನು ಪರಿಹರಿಸಲಾಗುತ್ತಿತ್ತು. ಹಂಪಿ ಹಾಗೂ ಅದರ ಸುತ್ತಗಲಕ್ಕೂ ಸಾವಿರಾರು ಕೆರೆಗಳು ವಿಜಯನಗರದ ಅರಸರ ಕಾಲದವೆಂದು ಶಾಸನಗಳಿಂದ ಕಂಡು ಬರುವುದರಿಂದ ರಾಜರು ನೀರಾವರಿಗೆ ಯಾವ ರೀತಿಯ ಪ್ರೋತ್ಸಾಹ ನೀಡುತ್ತಿದ್ದರೆಂಬುವುದು ಕಂಡುಬರುತ್ತದೆ.[18] ಕೆರೆಯ ಉಪಯೋಗ ಕೇವಲ ವ್ಯವಸಾಯಕ್ಕಾಗಿಯೇ ಮೀಸಲಾಗಿರಲಿಲ್ಲ. ಮನುಷ್ಯನ ಬದುಕಿಗೆ ಪ್ರಮುಖವಾದ ಒಂದು ಅಂಗವಾಗಿದ್ದಿತ್ತೆನ್ನಬಹುದು. ವಿಜಯನಗರದ ಅರಸರ ರಾಣಿಯರೂ ಅವರ ಹೆಸರಿನಲ್ಲಿ ಕೆರೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.[19] ಕೃಷ್ಣದೇವರಾಯನನ್ನು ತನ್ನ ಆಮುಕ್ತಮಾಲ್ಯದಲ್ಲಿ "ರಾಜನು ಕೆರೆಗಳನ್ನು ನಿರ್ಮಿಸಿ, ನಾಲೆಗಳನ್ನು ತೋಡಿಸಿ, ನೀರಾವರಿ ಸೌಲಭ್ಯವನ್ನು ಸಾಮಾನ್ಯ ಜನತೆಗೂ ಒದಗಿಸಬೇಕು" ಎಂದು ಹೇಳುತ್ತಾನೆ.[20] ಕರ್ನಾಟಕದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಕಂಡುಬರುವ ಅನೇಕ ನೀರಾವರಿ ಕಾರ್ಯಗಳನ್ನು ಅವನ ಕಾಲದಲ್ಲಿ ಮಾಡಿಸಿದನೆಂಬುದಕ್ಕೆ ಆಧಾರಗಳಿವೆ.[21]

ಮೇಲಿನ ರೀತಿಯಲ್ಲಿ ನೀರಾವರಿ ವ್ಯವಸ್ಥೆಯು ಇದ್ದರೂ ಹೆಚ್ಚಿನ ನೀರಾವರಿ ಮೂಲ ಮಳೆಯೇ ಆಗಿರುತ್ತಿತ್ತು. ಮಳೆಯು ಸಕಾಲಕ್ಕೆ ಬಾರದಿದ್ದರೆ ಸಾಮ್ರಾಜ್ಯದಲ್ಲಿ ಕ್ಷಾಮ, ಬರಗಾಲ, ನೆರೆ, ಬೆಳೆಯ ವಿಫಲತೆ,

ಪ್ಲೇಗು ಮೊದಲಾದ ರೋಗಗಳು ಬಂದು ಬರಸಿಡಿಲಿನಂತೆ ಬಡಿಯುತ್ತಿದ್ದವು. ಕೆರೆಯು ಎರಡೊ ಮೂರೋ ಸಾರಿ ಒಡೆದು ಹೋದರೆ ಬ್ರಾಹ್ಮಣರು ದೇವರ ಪೂಜೆ ಮಾಡಿ ಕೆರೆಗೆ ಮನುಷ್ಯ ಅಥವಾ ಪ್ರಾಣಿ ಬಲಿ ಕೊಡಲು ಹೇಳುತ್ತಿದ್ದರು. (ಮನುಷ್ಯರಾದರೆ ಮುತ್ತೈದೆಯಾಗಿರುವ ಹೆಂಗಸೇ ಆಗಿರಬೇಕಿತ್ತು) ಅದರಂತೆ ನಡೆಸಲಾಗುತ್ತಿತ್ತೆಂದು ಪೇಸ್ ಹೇಳಿರುತ್ತಾನೆ. ನರಬಲಿಗೆ ಅಸ್ಪೃಶ್ಯರನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಶ್ರೀಮಂತ ಸಾಮ್ರಾಜ್ಯವೆಂದು ಹೇಳಿಕೊಳ್ಳುತ್ತಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಅಸ್ಪೃಶ್ಯರ ಸ್ಥಿತಿ ಚಿಂತಾಜನಕವಾಗಿತ್ತು.

ಕೃಷಿಯು ಅಂದು ಭೂಮಾಲಿಕರ ಸ್ವತ್ತಾಗಿದ್ದಿತು. ಭೂಮಿಯಲ್ಲಿ ಕೆಲಸ ಮಾಡಲು ಕೂಲಿಕೆಲಸಕಾರರನ್ನು, ಜೀತದಾಳುಗಳನ್ನು ನೇಮಿಸಿಕೊಳ್ಳಲಾಗುತ್ತಿದ್ದಿತು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗಳಿಗೆ ಸೇರಿದವರಾಗಿದ್ದರು. ಶಾಸನಗಳಲ್ಲಿ ಇವರನ್ನು ಸ್ಪಷ್ಟವಾಗಿ ಹೊಲೆಯಲು ಮತ್ತು ಮುಲದ್ಲು ಎಂದು ಕರೆದಿರುವುದು ಕಂಡು ಬರುತ್ತದೆ. ಇವರೆಲ್ಲರೂ ಸಹ ಅಸ್ಪೃಶ್ಯ ಜಾತಿಗೆ ಸೇರಿದವರಾಗಿರುತ್ತಿದ್ದರು. ಅಂದು ಇವರನ್ನು ಚಂಡಾಲರು, ಸಂಭೋಳಿಗಳು ಹಾಗೂ ಪಂಚಮರೆಂದು ಹೆಚ್ಚಾಗಿ ಕರೆಯಲಾಗುತ್ತಿತ್ತು.

ಶಾಸನಗಳಲ್ಲಿ ಕಂಡುಬರುವಂತೆ ಶೂದ್ರರು, ಗೌಡರು ಅಥವಾ ಒಕ್ಕಲಿಗರು, ಹೊಲೆಯರು, ಮಾದಿಗರು, ಮೇಲು ಮತ್ತು ಕೆಳ ಜಾತಿಗಳೆಂಬ ಉಪವಿಧಾನಗಳು ಹಲವಿದ್ದವು. ಇವರೆಲ್ಲರ ಪ್ರಧಾನ ವೃತ್ತಿಯೇ ಕೃಷಿಯಾಗಿದ್ದಿತ್ತು. ಒಕ್ಕಲಿಗರು ಅಥವಾ ಗೌಡರು ನೆಲವನ್ನು ಉಳುಮೆ ಮಾಡಿಸುವವರಾಗಿದ್ದರು. ಅಂದಿನ ಕೃಷಿಯುವ ಇವರ ಆರ್ಥಿಕ ವ್ಯವಸ್ಥೆಯ ಮೇಲೆ ನಿಂತಿತ್ತೆಂದು ಹೇಳಬಹುದು. ಹೊಲೆಯರು ಕೃಷಿ ಕಾರ್ಮಿಕರಲ್ಲಿ ಪ್ರಮುಖರಾದವರಾಗಿದ್ದರು. ಇವರ ಹುಟ್ಟು, ಸಾವುಗಳೆರಡೂ ಮಣ್ಣಿನೊಂದಿಗೆ ನಿಕಟ ಸಂಪರ್ಕ ಹೊಂದಿತ್ತು.[22] ಕೃಷಿಯ ಹಿಡಿತವು ಸಹಾ ಬ್ರಾಹ್ಮಣರ ಕಪಿಮುಷ್ಟಿಯಲ್ಲಿತ್ತು. ಭೂ ಒಡೆಯನು ಜಾತಿನಿಂದನೆ, ಭ್ರಷ್ಟನಾದರೆ, ಅಂಥವನ ಭೂಮಿಯನ್ನು ಮುಟ್ಟುಗೋಲು ಹಾಕಿಕೊಂಡು ಸರ್ಕಾರವೇ ಎಲ್ಲಾ ಜವಾಬ್ದಾರಿಗಳನ್ನು ನೋಡಿಕೊಳ್ಳುತ್ತಿತ್ತು.

ವಿಜಯನಗರ ಸಾಮ್ರಾಜ್ಯದ ಭೂಕಂದಾಯ ವ್ಯವಸ್ಥೆಯಲ್ಲೂ ಎರಡು ರೀತಿಯ ಪದ್ಧತಿಗಳಿದ್ದವು. ೧. ಕಂದಾಯ ನಿಗದಿ, ೨. ಕಂದಾಯ ವಸೂಲಿ. ಭೂಕಂದಾಯ ನಿಗದಿಯ ಯಾವುದೇ ಪದ್ಧತಿಯಲ್ಲಿ ಮೊದಲನೆಯ ತತ್ವವನ್ನು, ಕೃಷಿಕನು ಕೊಡಬೇಕಾಗಿದ್ದ ತೆರಿಗೆಯನ್ನು ಮುಖ್ಯವಾಗಿ ಮಣ್ಣಿನ ವರ್ಗ ಮತ್ತು ಬೇಸಾಯದ ಪರಿಸ್ಥಿತಿಗಳನ್ನು ಆಧಾರವಾಗಿಟ್ಟುಕೊಂಡು ನಿರ್ಧರಿಸಲಾಗುತ್ತಿತ್ತು. ಇದಕ್ಕಾಗಿಯೇ ಬೇಸಾಯದ ಭೂಮಿಯನ್ನು ಈ ಕೆಳಕಂಡಂತೆ ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿತ್ತು.

ಅ. ಕಡಾರಂಬ (ಒಣ ಬೇಸಾಯ)

ಆ. ನೀರಾರಂಬ (ಗದ್ದೆ ಬೇಸಾಯ)

ಇ. ತೋಟಾರಂಬ (ತೋಟದ ಬೇಸಾಯ)

ಈ. ಕುಮರಿ (ಸ್ಥಳವನ್ನು ವರ್ಗಾಯಿಸುವ ಬೇಸಾಯ)

ಶಾಸನಗಳಲ್ಲಿ ಇವುಗಳನ್ನು ಬೇರೆ ಬೇರೆಯಾಗಿ ಉಲ್ಲೇಖಿಸಿರುವುದರಿಂದ ಅವಕ್ಕೆ ಬೇರೆ ಬೇರೆ ದರಗಳಲ್ಲಿ ಕಂದಾಯ ನಿಗದಿ ಮಾಡಲಾಗುತ್ತಿತ್ತೆಂದು ಕಂಡುಬರುತ್ತದೆ.[23]

## 3.2. ನೀರಾವರಿ :

ವಿಜಯನಗರ ಕಾಲದಲ್ಲಿ ನೀರಾವರಿ ಚಟುವಟಿಕೆಗಳು ಸಾಕಷ್ಟು ಪ್ರಗತಿದಾಯಕವಾಗಿದ್ದವು. ಈ ಕಾಲಕ್ಕೆ ಕೃಷ್ಣಾ, ತುಂಗಭದ್ರಾ ಮತ್ತು ಕಾವೇರಿ ನದಿ ಪ್ರದೇಶಗಳಲ್ಲಿ ಕೃಷಿ, ನೀರಾವರಿ ಅಭಿವೃದ್ಧಿಗೊಂಡಿದ್ದಿತು. ರೈತರು ಸಾಗುವಳಿ ಜಮೀನಿಗಾಗಿ ಕಡಪಾ ಅನಂತಪುರಗಳಲ್ಲಿ ಅರಣ್ಯವನ್ನು ಕಡಿದರು. ಭಾಸ್ಕರ ಎಂಬ ಸಂಗಮದ ರಾಜ ಪ್ರತಿನಿಧಿ ದೊಡ್ಡ ಗಾತ್ರದ ಪೊರುಮಾಯಿಳ್ಳ ಎಂಬ ಕೆರೆಯನ್ನು ಕಡಪಾ ಜಿಲ್ಲೆಯ ಬದ್ವಾಲ್‌ನಲ್ಲಿ ಕಟ್ಟಿಸಿರುತ್ತಾನೆ. ೧ನೇ ಬುಕ್ಕರಾಯ ತನ್ನ ಸಹಸ್ರಾರು ಕೆಲಸಗಾರರಿಂದ ಕೆರೆಗಳನ್ನು ಕಟ್ಟಿಸುತ್ತಿದ್ದನು. ಇವನು ಕಡಪದ ಕಲುಚಪಲ್ಲಿ ಹತ್ತಿರ ತನ್ನಿಬ್ಬರ ಅಧಿಕಾರಿಗಳ ಮೂಲಕ ಕೆರೆಗಳನ್ನು ನಿರ್ಮಿಸುತ್ತಾನೆ. ಕೃಷಿಗೆ, ಕುಡಿಯಲು, ಮನುಷ್ಯ ಹಾಗೂ ಪ್ರಾಣಿಗಳಿಗೆ ಅನುಕೂಲವಾಗಲೆಂದು ಈ ಬಗೆಯ ನೀರಾವರಿ ಕಾರ್ಯಗಳನ್ನು ಕೈಗೊಂಡಿದ್ದು ಶ್ಲಾಘನೀಯ. ಎರಡನೇ ಬುಕ್ಕ ಮತ್ತು ಒಂದನೇ ದೇವರಾಯನ ಕಾಲದಲ್ಲಿ ವಿಜಯನಗರ ಪಟ್ಟಣದಲ್ಲಿ ದೊಡ್ಡ ಜಲಾಶಯವನ್ನು ತುಂಗಭದ್ರಾ ನದಿಗೆ ಕಟ್ಟಿದ್ದರು. ಇಂದಿಗೂ ಆ ಕಾಲದ ಕಾಲುವೆಗಳಿವೆ. ನ್ಯೂನಿಜ್‌ನು ತುಂಗಭದ್ರಾ ನದಿಯಿಂದ ೫ ಸಣ್ಣ ಕಾಲುವೆಗಳ ಮೂಲಕ ಹರಿದು ಹೋಗುವ ನೀರಿನ ಬಗ್ಗೆ ತಿಳಿಸುತ್ತಾ, ತುರ್ತು ಕಾಲುವೆ ೧೧ ಮೈಲು ನೀರಾವರಿ ಪ್ರದೇಶಕ್ಕೆ ನೀರುಣಿಸುತ್ತಿದ್ದ ಬಗ್ಗೆ ಉಲ್ಲೇಖಿಸಲಾಗಿದೆ. ಎರಡನೆಯ ಬುಕ್ಕನ ಕಾಲದ ಜಲಸೂತ್ರಧಾರಿ ಸಿಂಗೆಯ ಭಟ್ಟನು ಪ್ರತಾಪ ಬುಕ್ಕರಾಯನ ಆಜ್ಞೆಯಂತೆ ಕಾಲುವೆ ನಿರ್ಮಿಸುತ್ತಾನೆ. ಅವನು ಮಂಡಲ, ಪೆನುಗೊಂಡ, ಸಿರುವಾರ ಕೆರೆಗಳಿಂದ ಕಾಲುವೆಗಳನ್ನು ನಿರ್ಮಿಸಿರುವುದು ಗಮನಾರ್ಹ. ಈ ಭಾಗದ ಕೃಷಿ ಚಟುವಟಿಕೆಗಳಿಗೆ ಇವರು ಮಾಡಿದ ಕಾರ್ಯಗಳು ಶ್ಲಾಘನೀಯವಾದವು.[24]

ಪ್ರೌಢ ಪ್ರತಾಪರಾಯನ (೧೪೦೬-೧೪೨೨) ಮಂತ್ರಿ ಲಕ್ಷ್ಮೀಧರನು ಮಗುವಾಗಿದ್ದ ಅವಧಿಯಲ್ಲಿ ತಾಯಿ ಹಾಲೆರೆಯುವಾಗ ಹಾಡಿದ ನೀತಿ ಪಾಠ ಹೀಗಿದೆ:

**ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ**
**ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ**
**ಗ್ರ್ಗೆರೆವೆಟ್ಟಾಗಿರು ಶಿಷ್ಯರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ()**
**ಯೆರದಳ್ವಾಲೆರೆವಂದು ತೊಟ್ಟು ಕಿವಿಯೊಳು ಲಕ್ಷ್ಮೀಧರಾಮಾತ್ಯನಾ ||**

ಎಂಬ ಆದರ್ಶ ನೀತಿಪಾಠ ತಿಳಿದು ಬರುತ್ತದೆ.

ದಾವಣಗೆರೆ ಜಿಲ್ಲೆ ಹರಿಹರದ ಹತ್ತಿರ ಹರಿದ್ರಾನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಿದ ಪ್ರಜೆಗಳ ಔದಾರ್ಯಕ್ಕೆ ೧ನೇ ದೇವರಾಯ (೧೪೧೦) ಅವರ ನೀರಾವರಿ ಜಮೀನುಗಳಿಗೆ ಕಂದಾಯದಲ್ಲಿ ರಿಯಾಯಿತಿ

ತೋರಿಸಿದನು. ಕ್ರಿ.ಶ. ೧೪೨೪ರಲ್ಲಿ ಈ ಅಣೆಕಟ್ಟು ಕೊಚ್ಚಿ ಹೋದಾಗ ಎರಡನೇ ದೇವರಾಯನು ಅದರ ದುರಸ್ತಿಗೆ ಉದಾರವಾಗಿ ಹಣ ವ್ಯಯ ಮಾಡಿದ. ತನ್ನ ರಾಣಿ ಕಾಮಲಾದೇವಿ ಸ್ಮರಣೆಯ ಹೆಸರಿಂದ ಕಾಮಲಾಪುರದ ಕೆರೆ ಮತ್ತು ಗ್ರಾಮವನ್ನು ನಿರ್ಮಿಸುತ್ತಾನೆ. ಬುಕ್ಕರಾಯ ಕೋಲಾರ ಜಿಲ್ಲೆಯಲ್ಲಿ ಹನ್ನೆ (ಪೆನ್ನಾರ್-ಪಿನಾಕಿನಿ) ನದಿಯ ನೀರನ್ನು ತಿರುಗಿಸಿ ಕಾಲುವೆ ಮೂಲಕ ಪೆನುಗೊಂಡೆಗೆ ನೀರು ಬರುವಂತೆ ಸಾಹಸ ಮಾಡಿದ್ದನು. ಇದಕ್ಕೆ ಮಂಡಲದ ಕಾಲುವೆ ಎಂದು ಹೆಸರು.[25]

ಕ್ರಿ.ಶ. ೧೪೮೯ರಲ್ಲಿ ಸಾಳುವ ನರಸಿಂಹರಾಯ ಅನಂತಪುರದ ಹತ್ತಿರ ಕಣಿವೆಯಲ್ಲಿ ನರಸಿಂಭುದಿ ಕೆರೆಯನ್ನು ಕಟ್ಟಿಸಿದನು. ಶ್ರೀಕೃಷ್ಣದೇವರಾಯನ ಕಾಲದಲ್ಲಿ ಅನೇಕ ಕೆರೆ, ಕಟ್ಟೆ, ಅಣೆಕಟ್ಟೆಗಳು ನಿರ್ಮಾಣವಾಗಿದ್ದವು. ಹೊಸಪೇಟೆ ಸಮೀಪದ ಕಣಿವೆ ವೀರಭದ್ರ ದೇವಾಲಯದ ಇಳಿಜಾರಿನಲ್ಲಿ ಎರಡು ಗುಡ್ಡಗಳ ನಡುವೆ ಕಣಿವೆಗೆ ರಾಯರ ಕೆರೆಯನ್ನು ನಿರ್ಮಿಸಿದ್ದಾರೆ. ಇದರ ಬಗ್ಗೆ ನ್ಯೂನಿಜ್, ಡೊಮಿಂಗೊಪಾಯಿಸ್ ಇತರರು ಉಲ್ಲೇಖಿಸಿರುತ್ತಾರೆ. ತುರ್ತು ಕಾಲುವೆ ಅಣೆಕಟ್ಟನ್ನು ಚಿಂತಾಯಕದೇವಣ್ಣನು ಮತ್ತು ಬೊಮ್ಮೋಜನು ಕಟ್ಟಿಸಿದ. ಹಿರಿಯ ಕಾಲುವೆಯನ್ನು (ತುರ್ತು) ಹೆಗಡೆ (ರಾಯರ ಕಾಲುವೆ, ಬಸವಣ್ಣನ ಕಾಲುವೆ) ಹಿತಲ ಬಾಗಿಲ ಬಸವಣ್ಣನು ಅರಸ ವಿರೂಪಾಕ್ಷನ ಆಜ್ಞೆಯ ಮೇರೆಗೆ ಕಟ್ಟಿಸಿದ. ಇನ್ನೊಂದು ಕಾಲುವೆಯನ್ನು ಅವಿಕಥ ವಿಪ್ಪರಸನು ಬುಕ್ಕಸಾಗರದಲ್ಲಿ ಕಟ್ಟಿಸಿದನು. (ಬುಕ್ಕಸಾಗರ, ವೆಂಕಟಾಪುರ, ರಾಮಸಾಗರಗಳು ಹಂಪಿ ಪರಿಸರ ಮತ್ತು ತುಂಗಭದ್ರ ನದಿ ಇಕ್ಕೆಲಗಳಲ್ಲಿವೆ). ಕೃಷ್ಣದೇವರಾಯ ನಾಗಾಂಬಿಕಾ ಸಮುದ್ರವೆಂಬ ಕೆರೆಯನ್ನು ಕ್ರಿ.ಶ. ೧೫೧೮ರಲ್ಲಿ ನಾಗೇನಹಳ್ಳಿಯನ್ನು ತಾಯಿಯ ಸ್ಮರಣೆಗಾಗಿ ನಿರ್ಮಿಸುತ್ತಾನೆ. ಇಂಥ ಕೆರೆಗಳು ಮಧ್ಯ ಕರ್ನಾಟಕದಲ್ಲಿ ಕಂಡುಬರುತ್ತವೆ. ಮತ್ತೊಂದು ಕೆರೆಯನ್ನು ೧೫೩೯ರಲ್ಲಿ ಸೀತಾರಾಮತಾಂಡ ಹತ್ತಿರ ಕಟ್ಟಲಾಗಿದೆ. ವಿಜಯನಗರದ ಅರಸರು ಸು. ೧೦೦ಕ್ಕೂ ಹೆಚ್ಚು ಕೆರೆಗಳನ್ನು ಹೊಸಪೇಟೆ ಪರಿಸರದಲ್ಲಿ ನಿರ್ಮಿಸಿರುವುದು ಗಮನಾರ್ಹ. ಉದಾ - ಬುಕ್ಕಪಟ್ಟಣ, ದರೋಜಿ, ಕಾಮಲಾಪುರ, ದಣ್ಣಾಯಕನ ಕೆರೆ, ರಾಯರ ಕೆರೆ ಮೊದಲಾದವುಗಳನ್ನು ಹೆಸರಿಸಬಹುದು. ಕ್ರಿ.ಶ. ೧೫೩೩ರಲ್ಲಿ ಅಚ್ಯುತದೇವರಾಯ ಅರ್ಕಾವತಿ ನದಿಗೆ ದೊಡ್ಡ ಕೆರೆಯನ್ನು ಕಟ್ಟಿಸುತ್ತಾನೆ. ವಿಜಯನಗರದ ಕಾಲಕ್ಕಾಗಲೇ ಬೆಂಗಳೂರು ನಗರಕ್ಕೆ ನೀರು ಸರಬರಾಜು ಮಾಡುವ ಕಾಲುವೆಗಳಿದ್ದವು.[26]

ಕೆರೆಗಳ ನಿರ್ಮಾಣ ಜನಹಿತ ಕಾರ್ಯವಾಗಿತ್ತು. ಮಧ್ಯಕಾಲೀನ ಚರಿತ್ರೆಯಲ್ಲಿ ಕೆರೆಗಳ ನಿರ್ಮಾಣದ ಕ್ರಾಂತಿ ನಡೆದದ್ದು ವಿಜಯನಗರದ ಸಾಧನೆಯ ಮೈಲಿಗಲ್ಲು.

ವಿಜಯನಗರ ಕಾಲಕ್ಕೆ ಕಾಡನ್ನು ಕಡಿದು, ಕೆರೆ ನಿರ್ಮಿಸಿ ಕೃಷಿಯೋಗ್ಯ ಭೂಮಿಯನ್ನು ಮಾಡಿಕೊಳ್ಳುತ್ತಿದ್ದರು. ಆದ್ದರಿಂದ ಕೃಷಿ ಭೂಮಿ ಹೆಚ್ಚಿನ ಪ್ರಮಾಣದಲ್ಲಿ ಉಳುಮೆಗೆ ಸಿಗುತ್ತಿತ್ತು. ನೀರಾವರಿ ಸೌಲಭ್ಯವನ್ನು ಹೆಚ್ಚಿನದಾಗಿ ಮಾಡಿಕೊಂಡಿದ್ದರು. ವಿಜಯನಗರ ಕಾಲದ ಕೃಷಿ ಬಗ್ಗೆ ಬೆಳಕು ಚೆಲ್ಲುವ 'ರಟ್ಟಮತಂ' ಎಂಬ ಗ್ರಂಥದಲ್ಲಿ ಕೆರೆ, ತೊರೆ (ಹೊಳೆ), ಬಾವಿ ಮತ್ತು ಕೊಳ ಇವುಗಳು ನೀರಾವರಿ ಮೂಲಗಳಾಗಿದ್ದವು ಎಂದು ಹೇಳಿದೆ. ಸಂಸಾರ, ಕೆರೆ, ರಾಜ್ಯ, ದೇವಾಲಯಗಳ ಬಗ್ಗೆ ಒಳ್ಳೆಯ ಕೆಲಸ ಮಾಡಿದರೆ

ಪುಣ್ಯ ಬರುವ ಬಗ್ಗೆ ಮನೋಭಾವ ತಾಳಿದ್ದರು. ಕೆರೆಗಳನ್ನು ಕೃಷಿ ನೀರಾವರಿಗೆ ಹೆಚ್ಚಾಗಿ ಬಳಸಿದರೆ, ಕಟ್ಟೆಗಳನ್ನು ಗೋವುಗಳಿಗೆ ನೀರಿಗೆಂದು (ಗೋಕಟ್ಟೆ) ನಿರ್ಮಿಸುತ್ತಿದ್ದರು. ಕೆರೆ ದೊಡ್ಡದು ಕಟ್ಟೆ ಸಣ್ಣದು. ರಾಜನ ಅಧೀನದಲ್ಲಿದ್ದ ಸಾಮಂತರು ರಾಜನ ಹೆಸರಲ್ಲಿ ಕೆರೆ, ಕಟ್ಟೆ, ಕಾಲುವೆಗಳನ್ನು ನಿರ್ಮಿಸಿರುವುದು ಗಮನಾರ್ಹ. ಹಳ್ಳಿಗಳಿಗೆ ಅಡ್ಡಲಾಗಿ, ಎರಡು ಬೆಟ್ಟಗಳ, ಗುಡ್ಡಗಳ, ದಿಣ್ಣೆಗಳ ನಡುವೆ ಇಳಿಜಾರಿನ ಪ್ರದೇಶದಲ್ಲಿ ನೀರಿಗೆ ಅಡ್ಡಲಾಗಿ ಕೆರೆಕಟ್ಟೆಗಳ ನಿರ್ಮಾಣ ಆಗುತ್ತಿತ್ತು. ಕೆಲವು ಹಳೆಯ ಕೆರೆಗಳನ್ನು ದುರಸ್ತಿ ಮಾಡಿ ಜೀರ್ಣೋದ್ಧಾರ ಮಾಡುತ್ತಿದ್ದರು. ಕೆರೆಯಲ್ಲಿ ಹೂಳನ್ನು ತೆಗೆಯುತ್ತಿದ್ದರು. ಕೊಳ, ಪುಷ್ಕರಣಿ, ಹೊಂಡಗಳಲ್ಲಿ ಸ್ವಚ್ಚತಾ ಕಾರ್ಯಗಳನ್ನು ಮಾಡುತ್ತಿದ್ದರು. ಕೆರೆಗಳ ನಿರ್ಮಾಣದಲ್ಲಿ ಬೋವಿ, ವಡ್ಡರಿಗೆ ಕೋಣಗಳನ್ನು, ಹಣವನ್ನು ದಾನ ಮಾಡುತ್ತಿದ್ದರು. ನಾಲ್ಕು ಕೋಣಗಳನ್ನು ಕೆರೆಯಿಂದ ಹೂಳು ತೆಗೆದ ಕಾರಣ ಯಲಹಂಕದ ಮುಮ್ಮಡಿ ಕೆಂಪೇಗೌಡ ದಾನ ನೀಡಿದ್ದನು. ಬಂಡಿಗಳನ್ನು ಸಿದ್ಧಪಡಿಸಲು ಎಮ್ಮೆಗಳನ್ನು ಸಲಹುವವನಿಗೆ, ಬಂಡಿಯ ಚಕ್ರಕ್ಕೆ ಹಾಕುವ ಕೀಲೆಣ್ಣೆಗೆ, ಹಾರೆ, ಗುದ್ದಲಿ, ಪಿಕಾಸಿಗಳಿಗೆ ಇತರ ವಸ್ತುಗಳಿಗೆ ಸುಂಕದ ಮೇಲಿನ ತೆರಿಗೆಯಲ್ಲಿ ವಿನಾಯಿತಿ ಇತ್ತು.

**ನೀರಾವರಿ ಕೃಷಿ ಬಗೆಗಿನ ಲಕ್ಷಣಗಳು :** ವಿರೂಪಾಕ್ಷ ಪೂಜರಾಳ್ಳಿಯವರು ವಿಜಯನಗರ ಕಾಲದ ನೀರಾವರಿ ವ್ಯವಸ್ಥೆಯನ್ನು ಕುರಿತಂತೆ ಆಳವಾಗಿ ಅಧ್ಯಯನ ಮಾಡಿದ್ದು ವಿಜಯನಗರ ಅರಸರು ನೀರಾವರಿಗೆ ಕೊಟ್ಟ ಪ್ರಾಮುಖ್ಯತೆ ಕುರಿತಂತೆ ಈ ಕೆಳಕಂಡಂತೆ ಒಂದು ವಿವರಣೆಯನ್ನು ನೀಡುತ್ತಾರೆ.

೧. ನೀರಾವರಿ ಕ್ಷೇತ್ರದಲ್ಲಿ ದುರಸ್ತಿ ಮತ್ತು ಪಾಲನೆಗೆ ದೇವಾಲಯ ಮತ್ತು ಬ್ರಾಹ್ಮಣರು ಕೆರೆ, ಬಾವಿಗಳ ಕಾಮಗಾರಿ ವಾರ್ಷಿಕ ವೆಚ್ಚವನ್ನು ಕೊಡಬೇಕಾಗಿತ್ತು.

೨. ನೀರಾವರಿ ಹಕ್ಕು-ಬಾದ್ಯತೆಗಳಲ್ಲಿ ಕುಂದುಂಟಾದರೆ ಆಯಾ ಹಳ್ಳಿಗಳ ಜನರೇ ಪಂಚಾಯ್ತಿ ಮೂಲಕ ಸಮಸ್ಯೆ ಬಗೆಹರಿಸಿಕೊಳ್ಳುತ್ತಿದ್ದರು.

೩. ಪ್ರತಿ ಕೆರೆಗೆ ಹಳ್ಳಿಯ ಜನರ ಮತ್ತು ರಾಜ್ಯದ ಅರಸನ ಸಹಕಾರ ಇದ್ದೇ ಇರುತ್ತಿತ್ತು.

೪. ಕೆರೆ ತೂಬಿನ ಬಳಿ ಬಿರುಕು ಬಿಟ್ಟಾಗ ರಿಪೇರಿ ಮಾಡಲು ಬೊಕ್ಕಸದಲ್ಲಿ (ಕ್ರಿ.ಶ. ೧೩೮೪) ಹಣ ಇರಲಿಲ್ಲ. ಆಗ ದೇವಾಲಯದ ಅಧಿಕಾರಿಗಳು ದೇವಾಲಯದ ಭೂಮಿ ಮಾರಿ ಸರಿ ಮಾಡಿದರು.

೫. ಈ ಸಾಮ್ರಾಜ್ಯದ ರಾಜ-ರಾಣಿಯರು, ಮಂತ್ರಿ-ಸಾಮಂತರು, ನೀರಾವರಿ ಬಳಕೆ, ಅವಶ್ಯಕತೆಯನ್ನು ಮನಗಂಡು ಆತ್ಮೀಯವಾಗಿ ಸಹಕರಿಸುತ್ತಿದ್ದರು.

೬. ಖ್ಯಾತ ವರ್ತಕರು ಇಲ್ಲಿ ನೀರಾವರಿ ಕಾರ್ಯಗಳನ್ನು ಲೋಕೋಪಯೋಗಿ ಕೆಲಸಗಳನ್ನು ಮಾಡಿದ್ದು ಶ್ಲಾಘನೀಯ. (ವಡ್ಡ ವ್ಯವಹಾರಿ, ನಾನಾ ದೇಶಿಗಳು)

೭. ಆಯಾ ಗ್ರಾಮದ ಶ್ರೀಮಂತ ವ್ಯಕ್ತಿ ಕೆರೆಯನ್ನು ಕಟ್ಟಿಸಿದರೆ, ರಿಪೇರಿ ಮಾಡಿಸಿದರೆ ಗ್ರಾಮಸ್ಥರು ಅವನಿಗೆ ಇಂತಿಷ್ಟು ಭೂಮಿಯನ್ನು ಬಿಟ್ಟುಕೊಡುತ್ತಿದ್ದರು.

೮. ಕೆರೆ, ಕಾಲುವೆ, ತೋಟಗಳನ್ನು ನಿರ್ಮಾಣ ಮಾಡಿದ್ದಕ್ಕೆ ಬಾಚೆಯಪ್ಪನಿಗೆ ರಾಜ ಸನ್ಮಾನಿಸಿದನು.

೯. ನೀರಾವರಿ ಕಾರ್ಯಗಳು ಸಂಪೂರ್ಣ ಕೃಷಿಗೆ, ಕುಡಿಯಲು ಮತ್ತು ಬಳಕೆಗೆ ಮೀಸಲಾಗಿದ್ದವು.

೧೦. ಎರಡನೇ ಹರಿಹರ ಎರಡನೇ ಬುಕ್ಕರಾಯರುಗಳು ಕೆರೆಗಳನ್ನು ಕಟ್ಟಿಸಿ, ಪ್ರಜೆಗಳನ್ನು (ತುಂಗಭದ್ರಾ ನದಿ ಅಡ್ಡಲಾಗಿ) ತಮ್ಮ ಮಕ್ಕಳಂತೆ ಕಂಡರೆಂದು ಹೇಳಲಾಗಿದೆ.

೧೧. ಎರಡನೇ ದೇವರಾಯ ಹರಿದ್ರಾ ನದಿಗೆ ಅಣೆಕಟ್ಟು ನಿರ್ಮಿಸಿ, ದಾವಣಗೆರೆ ಹರಿಹರ ಭಾಗದಲ್ಲಿ ನೀರಾವರಿ ಸೌಲಭ್ಯವನ್ನು ಒದಗಿಸುತ್ತಾನೆ.

೧೨. ಶ್ರೀಕೃಷ್ಣದೇವರಾಯ 'ಆಮುಕ್ತಮಾಲ್ಯ'ದಲ್ಲಿ ರಾಜ್ಯವು ಕೆರೆಗಳನ್ನು ನಿರ್ಮಿಸಿ, ನಾಲೆಗಳನ್ನು ತೋಡಿಸಿ, ನೀರಾವರಿ ಸೌಲಭ್ಯಗಳನ್ನು ಒದಗಿಸಬೇಕು ಎಂದಿದ್ದಾನೆ.

೧೩. ದೊಡ್ಡಗಾತ್ರದ ಕೆರೆಗಳನ್ನು ಕೃಷ್ಣದೇವರಾಯ ಕಟ್ಟಿಸಿರುವುದು ಬಳ್ಳಾರಿ, ಗದಗ, ಧಾರವಾಡ ಜಿಲ್ಲೆಗಳಲ್ಲಿ ಕಂಡುಬರುತ್ತವೆ.

೧೪. ಕೆರೆಕಟ್ಟೆಗಳಲ್ಲದೆ ಬಾವಿಗಳ ನೆರವಿನಿಂದ 'ಕಪಿಲೆ' ಹೊಡೆಯುವ ಮೂಲಕ ನೀರಾವರಿ ಸೌಲಭ್ಯ ಪಡೆಯುತ್ತಿದ್ದರು. ಎಂಥ ಒಣ ಭೂಮಿಯು ನೀರುಂಡು ತೋಟ, ಗದ್ದೆ, ಬೆಳೆಯುವಂತಾದವು.

೧೫. ಕ್ರಿ.ಶ. ೧೪೮೧ರ ಶಾಸನ ಬಳ್ಳಾರಿ ಜಿಲ್ಲೆ ಹಡಗಲಿ ಭಾಗದಲ್ಲಿ ಏತ ನೀರಾವರಿಗೆ ಕಬ್ಬಿಣದ ಬಕೆಟ್ಟನ್ನು ಬಳಸಿದ್ದ ಬಗ್ಗೆ ವಿವರಣೆಯನ್ನು ನೀಡುತ್ತದೆ.

೧೬. ಬಂಜರು ಭೂಮಿಯನ್ನು ಸಾಗುವಳಿ ಮಾಡಲು, ಸರ್ಕಾರೇತರ ಸಂಘಟನೆಗಳು ಉತ್ಸುಕವಾಗಿದ್ದವು.

೧೭. ಕೃಷಿಯಲ್ಲಿ ಶ್ರಮಿಸಿದ ವರ್ಗಕ್ಕೆ ರೈತರು, ಒಕ್ಕಲಿಗ, ಗೌಡರು, ಕಾಪುರಲು ಎಂದು ಕರೆದರು.

೧೮. ಸ್ಥಳೀಯರು ಕಾಡನ್ನು ಕಡಿದು ನೆಲವನ್ನು ಸ್ವಚ್ಛಗೊಳಿಸಿ ಉಳುಮೆಗೆ ಸಿದ್ಧಪಡಿಸುವುದು, ನೀರಾವರಿ ಕೆರೆಯನ್ನು ಕಟ್ಟಿಸುವುದು, ದೇವಾಲಯವನ್ನು ಕಟ್ಟಿಸುವುದು, ಆರ್ಯೀಕರಣದ ಸಂಪ್ರದಾಯಗಳನ್ನು ಆಚರಿಸುವುದುಂಟು.

೧೯. ಇಷ್ಟೆಲ್ಲಾ ಕೆರೆ, ಕಟ್ಟೆ ಮತ್ತು ಬಾವಿಗಳಿದ್ದರೂ ಮಳೆಯಾಶ್ರಿತ ಕೃಷಿಯೇ ಹೆಚ್ಚಾಗಿತ್ತು. ಸುಖ-ಸಮೃದ್ಧಿಗೆ ಬರಗಾಲ-ಕ್ಷಾಮಕ್ಕೆ ಈ ವಿಧಾನ ಕಾರಣವಾಗಿತ್ತು.

೨೦. ಜೀತಗಾರಿಕೆ ಚಾಲ್ತಿಯಲ್ಲಿದ್ದು, ಗ್ರಾಮ, ಭೂಮಿಯನ್ನು, ಉಂಬಳಿಕೊಡಗಿ, ಮಾನ್ಯ, ಸರ್ವಮಾನ್ಯ ಅಗ್ರಹಾರ, ಬ್ರಹ್ಮದಾಯ, ದೇವದಾಯ ಮತ್ತು ಮಾಥಾಪುರ ಎಂದು ವರ್ಗೀಕರಿಸಿದ್ದರು.

೨೧. ಕೃಷಿಯಲ್ಲಿ ನಿರತವಾಗಿದ್ದ ಬಹುತೇಕ ಸಮುದಾಯಗಳು ಶೂದ್ರವರ್ಗಕ್ಕೆ ಸೇರಿದ್ದವು. ಬೇಡ, ಗೌಡ, ಒಕ್ಕಲಿಗ, ಹೊಲೆಯ ಇತ್ಯಾದಿ ಕೆಳವರ್ಗಗಳಿಗೆ ಪ್ರಧಾನ ವೃತ್ತಿಯೇ ಕೃಷಿಯಾಗಿತ್ತು. ಕರ್ನಾಟಕದ ಅನೇಕ ಪಾಳೆಯಪಟ್ಟುಗಳ ಸ್ಥಾಪಕರು ಬೇಟೆ, ಪಶುಪಾಲನೆ ಮತ್ತು ಕೃಷಿ ಮಾಡುವವರೇ ಆಗಿದ್ದರು.

೨೨. ರಾಜನೇ ನೆಲದ ಒಡೆಯನಾದರೂ, ರಾಜನಿಗೆಂದೇ ಪ್ರತ್ಯೇಕ ಭೂಮಿ ಇರಲಿಲ್ಲ. ಅದು ಪ್ರಜೆಗಳಿಗೆ ಸೇರಿತ್ತು. ದಾನ ಮಾಡುವಾಗ ಪ್ರಜೆಗಳಿಂದ ಖರೀದಿಸಿ ಪರಭಾರೆ ಮಾಡುತ್ತಿದ್ದರು. ಹೀಗೆ ಕೃಷಿ ವ್ಯವಸ್ಥೆ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಸ್ಥಿತಿ-ಗತಿಗೆ ಆಧಾರಸ್ತಂಭವಾಗಿತ್ತು.[27]

ತೂಕ ಮತ್ತು ಅಳತೆಗಳೆರಡೂ ಸಹ ಒಂದೇ ಅರ್ಥವನ್ನು ಸೂಚಿಸುವಂತಿವೆ. ಬೆಳೆಗಳನ್ನು ರೈತರು ಬೆಳೆದಾದ ಮೇಲೆ ಫಸಲನ್ನು ಅಳತೆ ಮಾಡುವುದು ಒಂದು ಪ್ರಮುಖವಾದ ಕೆಲಸವೆ. ಈ ಇಳುವರಿಯ ಆಧಾರದ ಮೇಲೆಯೇ ಭೂಮಿಯ ಫಲವತ್ತತೆಯನ್ನು ಗುರುತಿಸಲಾಗುತ್ತಿತ್ತು. ಹಾಗೂ ಗದ್ದೆಗಳ ವಿಸ್ತಾರವನ್ನು ಸೂಚಿಸಲೂ ಸಹ ಸಾಧನಗಳಾಗಿದ್ದವು. ವಿಜಯನಗರದ ಕಾಲದಲ್ಲಿ ಪ್ರಮುಖವಾಗಿ ಬಳಕೆಯಲ್ಲಿದ್ದ ಅಳತೆ ಮತ್ತು ತೂಕದ ವ್ಯವಸ್ಥೆ ಸಾಮಾನ್ಯ ಜನತೆಯಿಂದ ಪ್ರಾರಂಭವಾಗಿ ರಾಜಾಸ್ಥಾನದವರೆಗೆ ಏಕರೀತಿಯಲ್ಲಿತ್ತು. ಅಂದು ಕಂಡುಬರುತ್ತಿದ್ದ ಅಳತೆಯ ವಿಧಾನಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.[28]

ಅವುಗಳೆಂದರೆ ಅರ್ಕಾಲು (ಒಂದು ಪಾವಿನ ಅರ್ಧಭಾಗ೧೦೩), ಅಗ್ರ (ದಾನ ಕೊಡುವಾಗ ನೀಡುವ ಆಹಾರದ ಒಂದು ಅಳತೆ), ಅಗ್ರ (ಒಂದು ಪಲ್ಲದ ತೂಕ), ಅಚ್ಚು (ಎಂಬತ್ತು ಗುಲಗಂಜಿಯ ತೂಕ), ಅಟವಿ (ಅರ್ಧ ಸೇರಿನ ಅಳತೆ), ಅಡ್ಡಿ (ಧಾನ್ಯಗಳಲ್ಲಿ ಅಳೆಯುವ ಮಾಪನ), ಆಳ್ಮೊಟ್ಟೆ (ಒಬ್ಬ ವ್ಯಕ್ತಿಯು ಹೊರಬಹುದಾದಷ್ಟು ಅಳತೆಯ ಚೀಲ), ಐಗಳ (ಕಾಳು ತುಂಬಿದ ಐದು ಕೊಳಗಗಳ ಮಾಪನ), ಕಂಡುಗ (ಇಪ್ಪತ್ತು ಕೊಳಗ ಧಾನ್ಯದ ಮಾಪನ), ಕಂಡಿ (ಹತ್ತು ಮಣದ ಅಳತೆ), ಕಮ್ಮಿ (ಭೂಮಿಯನ್ನು ಅಳತೆ ಮಾಡುವ ಒಂದು ಪ್ರಮಾಣ), ಕವಳಿಗೆ (ವೀಳೆದೆಲೆ ಲೆಕ್ಕ ಹಾಕಲು ಬಳಸುತ್ತಿದ್ದ ಮಾಪನ), ಕಳರುಗುಣಿಗೆ (ಭೂಮಿಯನ್ನು ಅಳೆಯಲು ಬಳಸುತ್ತಿದ್ದ ಒಂದು ಅಳತೆಯ ಕೋಲು), ಕಾಡಿ (ಭತ್ತದ ಅಳತೆಯ ಪ್ರಮಾಣ), ಕುಂಟೆ (ಒಂದು ಎಕರೆ ಜಮೀನಿನ ನಲವತ್ತನೇ ಒಂದು ಭಾಗ), ಕುಳ (ನಾಲ್ಕು ಬಳ್ಳಗಳ ಒಂದು ಅಳತೆ), ತೊಂಬ (ಸುಮಾರು ಇಪ್ಪತ್ತು ಚೀಲ ಕಾಳು ಹಿಡಿಯುವ ಬಿದಿರಿನಿಂದ ತಯಾರಿಸಿದ ಅಳತೆಯ ಪ್ರಮಾಣ), ಕೈ (ನೂರು ವೀಳೆದೆಲೆಗಳ ಕಟ್ಟು), ಕೊಟ್ಟ (ಇಪ್ಪತ್ತೊಂದು ಕೊಳಗ), ಕೊರೆ (ಅರ್ಧ ತುಂಬಿದ ದವಸದ ಚೀಲ ಅಥವಾ ಬಿದಿರಿನ ವಸ್ತುಗಳು), ಕೊಳಗ (ಧಾನ್ಯವನ್ನು ಅಳೆಯುವ ಒಂದು ಪ್ರಮಾಣದ ಸಾಧನ), ಗಜ (ಭೂಮಿಯನ್ನು ಅಳೆಯುವಾಗ ಬಳಸುವ ಅಳತೆ ಪದ್ಧತಿ), ಗಳಿಗಿ (ಧಾನ್ಯ ಸಂಗ್ರಹಿಸಲು ಈಚಲು ಬರಲಿನಿಂದ ತಯಾರಿಸಿದ್ದ ಒಂದು ಸಾಧನ), ಗಾತ್ರ (ಒಂದು ಸಾವಿರ ವೀಳೆದೆಲೆಯ ಕಟ್ಟು), ಗುಲಿಕಲ್ಲು (ಜಮೀನುಗಳನ್ನು ಅಳತೆ ಮಾಡಿ ಎಲ್ಲೆಯನ್ನು ಸೂಚಿಸಲು ನೆಡುತ್ತಿದ್ದ ಕಲ್ಲು), ಗುಮ್ಮಿ (ಏಳರಿಂದ ಎಂಟು ಚೀಲ ಧಾನ್ಯ ಸಂಗ್ರಹಿಸುತ್ತಿದ್ದ ಮರದ ಪಾತ್ರೆ), ಬಿಟ್ಟಿ (ಒಂದು ನೂರು ವೀಳೆದೆಲೆಯ ಕಟ್ಟು), ಚಾರಿ (ಅಳತೆಯ ಗಡಿಗೆ), ಚಿಂಚಾಲು (ವಸ್ತುಗಳನ್ನು ತೂಕ ಮಾಡಲು ಬಳಸುತ್ತಿದ್ದ ತಕ್ಕಡಿ), ಚೀರಿ (ನೀರಾವರಿ ಭೂಮಿಯನ್ನು ಅಳೆಯಲು ಬಳಸುತ್ತಿದ್ದ ತಕ್ಕಡಿ), ನಗ (ಹತ್ತಿಯ ಗಾತ್ರವನ್ನು ಅಳೆಯುವ ಒಂದು ಮಾನದಂಡ), ಪಡ್ಲ (ರಾಶಿಯ ಗಾತ್ರವನ್ನು ಹೇಳಲು ಬಳಸುವ ಮಾಪನ), ಪತ್ತಾರಿ (ತೆರಿಗೆ ಹಣವನ್ನು ಪಡೆಯುವವನು ಹಾಗೂ ಸಾರ್ವಜನಿಕ

ದವಸಗಳನ್ನು ಅಳತೆ ಮಾಡುವವನು), ಪಲ್ಲ (ನೂರು ಸೇರು ಅಳತೆಯ ಪ್ರಮಾಣ), ಪಾವು (ಅಳತೆಯ ಸೇರಿನ ನಾಲ್ಕನೆಯ ಒಂದು ಭಾಗ), ಅರೆ ಪಾವು (ಸೇರಿನ ಎಂಟನೆಯ ಒಂದು ಭಾಗ), ಬಕ್ಕ (ನಲವತ್ತೆಂಟು ಸೇರಿನ ಅಳತೆಯ ಪ್ರಮಾಣ), ಬಳ್ಳ (ಎರಡು ಸೇರು ಅಳತೆ), ಮಣ (ತೂಕದ ಒಂದು ಪ್ರಮಾಣ ಸಾಮಾನ್ಯವಾಗಿ ಕಟ್ಟಿಗೆ ತೂಗಲು ಈ ಪದ ಬಳಸುತ್ತಿದ್ದರು), ಮಕ್ಕರಿ (ಹತ್ತು ಹನ್ನೆರಡು ಸೇರು ಹಿಡಿಸುವಷ್ಟು ದೊಡ್ಡದಾದ ಬಿದಿರಿನ ಪುಟ್ಟಿ), ಮಾನ (ಎಣ್ಣೆಯನ್ನು ಅಳೆಯುತ್ತಿದ್ದ ಅಳತೆಯ ಮಾಪನ), ಮಾರು (ಮನುಷ್ಯ ತನ್ನ ಎರಡು ಕೈಗಳನ್ನು ಚಾಚಿದಾಗ ಅವನ ಎರಡು ಕೈ ಬೆರಳುಗಳವರೆಗಿನ ಅಂತರ, ಇದನ್ನು ಹೂವಿನ ವ್ಯಾಪಾರಿಗಳು ಹೆಚ್ಚಾಗಿ ಬಳಸುತ್ತಿದ್ದರು), ಮೊಳ (ಮೊಣಕೈ ಗಂಟಿನಿಂದ ನಡುಬೆರಳಿನ ತುದಿಯವರೆಗೆ ಅಳತೆ), ಲಿಂಗಮುದ್ರೆ ಕಲ್ಲು (ಹೊಲದ ಸೀಮೆಯನ್ನು ಗುರುತಿಸಲು ನೆಡುತ್ತಿದ್ದ ಕಲ್ಲು), ಸೇರು (ಕೊಳಗದ ನಾಲ್ಕನೇ ಒಂದು ಭಾಗ), ಸೊಲ್ಗೆ (ಅರ್ಧಸೇರಿನ ಅಳತೆ), ಹೆಡಿಗೆ (ಬಿದಿರಿನಿಂದ ಹೆಣೆದ ಅಳತೆಯ ಸಾಧನ)[29] ಇವು ಅಳತೆಯ ಸಾಧನಗಳು.

## 3.3. ಕೃಷಿಯ ಉಪಕರಣಗಳು :

ವಿಜಯನಗರದ ಜನರು ತಾವು ಜೀವನದ ಆಧಾರವನ್ನಾಗಿ ನಂಬಿದ್ದ ಕೃಷಿಯನ್ನು ಕೈಗೊಳ್ಳಲು ವಿಧವಿಧವಾದ ಉಪಕರಣಗಳನ್ನು ಬಳಸುತ್ತಿದ್ದರು. ಈ ಉಪಕರಣಗಳನ್ನು ಮನುಷ್ಯನು ತನ್ನ ಕೈಗಳ ಮುಂದುವರಿಕೆಯಾಗಿ ನಿರ್ಮಿಸಿಕೊಂಡವು ಎಂದು ಕರೆಯಬಹುದು. ಕೃಷಿಯ ತಂತ್ರಜ್ಞಾನದ ಮುಖ್ಯ ನೆಲೆಗಲು ಈ ಉಪಕರಣಗಳ ವಿನ್ಯಾಸದಲ್ಲಿ, ಸಿದ್ಧಗೊಳಿಸುವ ವಸ್ತುಗಳ ಬಳಕೆಯಲ್ಲಿ, ಮೊದಲು ಕಂಡುಬಂದಿತ್ತೆಂದೂ ಅನಂತರ ಕುಯ್ಯುವ ಚಿಕ್ಕ ಕುಡುಗೋಲಿನಿಂದ ಹಿಡಿದು ಹಲವಾರು ಸಂಕೀರ್ಣ ಅಂಶಗಳಿರುವ ನೇಗಿಲು, ಗಾಡಿ (ಬಂಡಿ)ಗಳವರೆಗೆ ವ್ಯಾಪಿಸಿಕೊಂಡಿವೆ. ವಿಜಯನಗರದ ಜನರು ದಿನನಿತ್ಯದ ಬಳಕೆಗೆ ಬಳಸುತ್ತಿದ್ದ ಹಾಗೂ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದ ಉಪಕರಣಗಳು ಇಂತಿವೆ. ಇವುಗಳನ್ನು ತಿಳಿಯಲು ಶಾಸನಗಳು ಪ್ರಮುಖ ಆಧಾರ. ಜೊತೆಗೆ ದೇಶೀ ಹಾಗೂ ವಿದೇಶೀ ಸಾಹಿತ್ಯಗಳೂ ನೆರವಾಗುತ್ತವೆ. ಅಂದು ಬಳಕೆಯಲ್ಲಿದ್ದ ವಸ್ತುಗಳು ಇಂದಿಗೂ ನಮ್ಮ ಹಳ್ಳಿಗಳಲ್ಲಿ ಕಾಣಬಹುದು. (ಇಂದು ಆಧುನಿಕ ಕೃಷಿ ಪದ್ಧತಿಯಿಂದಾಗಿ ಇವು ಮರೆಯಾಗುತ್ತಿವೆ) ವಿಜಯನಗರಕ್ಕಿಂತಲೂ ಹಿಂದೆಯೇ ಈ ಉಪಕರಣಗಳಿದ್ದವೆಂದು ಕುಮಾರ ವಾಲ್ಮೀಕಿಯಲ್ಲಿ ಕಂಡುಬರುತ್ತದೆ. ಕನಕದಾಸರು ತಮ್ಮದೊಂದು ಕೀರ್ತನೆಯಲ್ಲಿ "ಹೃದಯ ಹೊಲವನು ಮಾಡಿ, ತನುವ ನೇಗಿಲ ಮಾಡಿ... ಎರಡೆತ್ತಿ ಹೂಡಿ... ಮಿಣಿಯ ಕಣ್ಣಿ ಹಗ್ಗವ ಮಾಡಿ, ಧಾನ್ಯವ ನೋಡಿ ಬಿತ್ತಿರಯ್ಯ...." ಎಂಬ ಸಾಲುಗಳು ಅಂದಿನ ಉಪಕರಣಗಳ ಬಗ್ಗೆ ಬೆಳಕನ್ನು ಚೆಲ್ಲುತ್ತದೆ.(ಕನಕದಾಸರ ಕೀರ್ತನೆಗಳು)

ಅಂದಿನ ಪ್ರಮುಖ ಕೃಷಿ ಉಪಕರಣಗಳೆಂದರೆ ಕುಂಟೆ (ಫಸಲಿನ ಮಧ್ಯೆ ಇರುವ ಕಳೆಯನ್ನು ತೆಗೆಯುವ ಉಪಕರಣ. ಇದರಲ್ಲಿ ಐದ್ಗೇಣಿನ ಗುಂಟಿ, ಕಿರಿಗುಂಟೆ, ಕೈಗುಂಟೆ, ತಲೆಗುಂಟೆ, ಬಾರುಗುಂಟೆ ಎಂದು

ಕರೆಸಿಕೊಳ್ಳುತ್ತಿದ್ದ ವಿವಿಧ ರೀತಿಯ ಕುಂಟೆಗಳಿದ್ದವು), ಕುಡ (ಕುಂಟೆಗೆ ಜೋಡಿಸುವ ಕಬ್ಬಿಣದ ಪಟ್ಟಿ), ಕುಡುಗೋಲು (ಬಾಗಿದ, ಒಳ ಅಂಚಿನಲ್ಲಿ ಹರಿತವುಳ್ಳ ಕತ್ತಿ), ಕುದ್ರಕೆಳಿ (ನೇಗಿಲ ಉದ್ದ ಪಟ್ಟಿ ಮತ್ತು ನೇಗಿಲನ್ನು ಜೋಡಿಸುವ ಕೀಲು), ಕುಪ್ಪೆಚಕ್ಕೆ (ಹುಲ್ಲಿನ ಮೆದೆಯನ್ನು ತಟ್ಟುವುದಕ್ಕೆ ಬಳಸುವ ಮರದ ಸಾಧನ), ಕುಮ್ಮು (ಎತ್ತಿನ ಗಾಡಿಯ ಚಕ್ರದ ಮಧ್ಯಭಾಗದಲ್ಲಿರುವ ಗುಂಭ), ಕುರಡಿ (ಕೊಡಲಿ), ಕುರಪಿ (ಕಸ ಕೀಳಲು ಬಳಸುತ್ತಿದ್ದ ಚಿಕ್ಕ ಕತ್ತಿ), ಕುರ್ಗೊಂಬು (ಗೊಬ್ಬರ ತುಂಬಡುತ್ತಿದ್ದ ಒಂದು ಸಾಧನ), ಕೈತಲೆ (ತೆಂಗಿನ ಮರ ಹತ್ತಲು ಕೈಗಳಿಗೆ ಹಾಕಿಕೊಳ್ಳುತ್ತಿದ್ದ ಹಗ್ಗದ ಸಾಧನ), ಕೊಂಗ್ಣಿ (ತೆಂಗಿನಕಾಯಿ ಕೀಳಲು ಬಳಸುವ ಉಪಕರಣಕ್ಕೆ ಜೋಡಿಸುವ ಕಬ್ಬಿಣದ ತುದಿ), ಕೊಂಗ್ಣಿಕಟ್ಗೆ (ಕಣದಲ್ಲಿ ತೆನೆ ತಿರುವಿ ಹಾಕಲು ಬಳಸುವ ಸಾಧನ), ಕೊಟ್ಟ (ದನಗಳಿಗೆ ಔಷಧಿ ಕುಡಿಸಲು ಬಳಸುತ್ತಿದ್ದ ಸಾಧನ), ಕೊಡ್ಡ (ನೆಲಸಮ ಮಾಡಲು ಬಳಸುವ ಹಲಗೆ), ಕೊಡ್ಲಿ (ಸೌದೆ ಸೀಳುವುದಕ್ಕೆ ಬಳಸುವ ಕಬ್ಬಿಣದ ಸಾಧನ ಇದನ್ನು ಕೊಡ್ಳಿ, ಗೊಡ್ಲಿ, ಕ್ವಡ್ಲಿ, ಚಿಕ್ಕದಾದುದಕ್ಕೆ ಪಿಚ್ಗೊಡ್ಲಿ, ಬಾಯಿಕೊಡ್ಲಿ, ಕೈಕೊಡಲಿ ಎಂದು ಅದರ ಆಕಾರಕ್ಕೆ ಅನುಗುಣವಾಗಿ ಕರೆಯುತ್ತಿದ್ದರು.)[30] ಅರ್ಗತ್ತಿ (ಬಿದಿರಿನಿಂದ ನಿರ್ಮಿಸಿದ್ದ ತೊಲೆ), ಅಟ್ಣೆ (ಬೆಳೆಯನ್ನು ಕಾಪಾಡಲು ಬೆಳೆಯ ಮಧ್ಯ ಹಾಕಿಕೊಳ್ಳುತ್ತಿದ್ದ ಮಂಚ), ಅಡ್ಡೆ (ಬೆಳೆಯನ್ನು ಕಾಪಾಡಲು ಬೆಳೆಯ ಮಧ್ಯೆ ಹಾಕಿಕೊಳ್ಳುತ್ತಿದ್ದ ಮಂಚ), ಅಡ್ಡೆ (ನೀರು ಹಾಗೂ ಇನ್ನಿತರ ವಸ್ತುಗಳನ್ನು ತರಲು ಬಳಸುತ್ತಿದ್ದ ಉಪಕರಣ), ಅರ (ಕುಡುಗೋಲು ಮತ್ತಿತರ ವಸ್ತುಗಳನ್ನು ಮಸೆಯಲು ಬಳಸುವ ಉಪಕರಣ), ಉತ್ತರಾಣಿ ಕಟ್ಗೆ (ಕಣದಲ್ಲಿ ಧಾನ್ಯವನ್ನು ಸ್ವಚ್ಛ ಮಾಡಲು ಬಳಸುತ್ತಿದ್ದ ಕಡ್ಡಿ), ಉದ್ದಿಗಿ (ಕುಂಟೆ ಎಳೆಯಲು ಸಹಾಯವಾಗುವಂತೆ ಕುಂಟೆಗೆ ಜೋಡಿಸಿರುವ ಉದ್ದನೆಯ ಬೊಂಬಿನ ಕಟ್ಟಿಗೆ), ಉಪ್ಪಮಣೆ (ಭತ್ತದ ರಾಶಿ ಮಾಡಲು ಬಳಸುತ್ತಿದ್ದ ಸಾಧನ), ಉಳಿ (ಕಳೆತೆಗೆಯುವ ಸಾಧನ), ಉಳ್ಳ (ಹಂದಿಯನ್ನು ಹಿಡಿಯಲು ಬಳಸುವ ಸಾಧನ), ಎಣೆ (ಭತ್ತದ ಹುಲ್ಲು ತುಳಿಸಿ ಹುಲ್ಲನ್ನು ಮುರಿಯಲು ಹಸುಗಳಿಂದ ಜೋಡಿಸಲ್ಪಟ್ಟ ಒಂದು ಸನ್ನಿವೇಶ), ಏಣಿ (ಎತ್ತರದ ಭಾಗಕ್ಕೆ ಹತ್ತಲು ಬಿದಿರಿನಿಂದ ನಿರ್ಮಿಸಿಕೊಂಡ ಸಾಧನ), ಏತ (ಬಾವಿಯಿಂದ ನೀರನ್ನು ಮೇಲೆತ್ತುವ ಸಾಧನ), ಒನ್ಕೆ (ತೆನೆ ಬಡಿಯಲು ಹಾಗೂ ಭತ್ತ, ರಾಗಿಗಳನ್ನು ಕುಟ್ಟಲು ಬಳಸುತ್ತಿದ್ದ ಪ್ರಮುಖ ಸಾಧನ), ಕವಣೆ (ಕಲ್ಲನ್ನು ಇಟ್ಟು ತಿರುಗಿಸಿ ಬೀಸಿ ಹಕ್ಕಿ, ಕೋತಿ ಹೊಡೆಯುವುದಕ್ಕಾಗಿ ಮಾಡಿಕೊಂಡಿದ್ದ ಸಾಧನ), ಕೊಪ್ಪರಿಗೆ (ಮಣ್ಣೇರಿಸಲು ಬಳಸುತ್ತಿದ್ದ ಒಂದು ಉಪಕರಣ), ಕೊಂಬು (ಧಾನ್ಯ ಸಂಗ್ರಹಿಸಲು ಬಳಸುವ ಸಾಧನ), ಕೊಳಗ (ಧಾನ್ಯ ಶೇಖರಿಸಿಡಲು ಬಳಸುವ ಕಡಾಯಿ ಪಾತ್ರೆ), ಕೊರೆ (ಹಾರೆ), ಕೊರಂಗೆ (ತಾಳೆ ಮರದ ನೀರು ಹಾಯಿಸುವ ಒಂದು ಸಾಧನ), ಕೊಳ್ವೆ (ಬೆಂಕಿ ಊದಲು ಉಪಯೋಗಿಸುವ ಉದ್ದನೆಯ ಕಬ್ಬಿಣದ ಸಾಧನ), ಗಡೆ (ಬಾವಿಯ ರಾಟೆ, ಗಾಲಿ), ಗಡಾರಿ (ಗಟ್ಟಿ ನೆಲವನ್ನು ಅಗೆಯಲು ಬಳಸುವ ಉಪಕರಣವೆಂದು ಹೇಳಬಹುದು), ಗರಗಸ (ಮರ ಕೊಯ್ಯಲು ಬಳಸಲಾಗುತ್ತಿದ್ದ ಹಲ್ಲುಗಳುಳ್ಳ ಒಂದು ಬಗೆಯ ಆಯುಧ), ಗಾಣ (ಎಣ್ಣೆಯನ್ನು ಅಥವಾ ರಸವನ್ನು ತೆಗೆಯುವ ಸಾಧನ), ಗಾದಿಗೆ (ಈರುಳ್ಳಿ ಸಂಗ್ರಹಣೆಗಾಗಿ ಮಾಡುವ ಗೂಡಾಗಿದ್ದಿತು), ಗಾಡಿ (ಅಂದಿನ ಕಾಲದ

ಸಾರಿಗೆಯ ಪ್ರಮುಖ ಮಾರ್ಗ ಹಾಗೂ ಕೃಷಿಯ ಸಾಧನಗಳಲ್ಲಿ ಪ್ರಮುಖವಾದ ಸಾಧನ, ಇದನ್ನು ಎತ್ತು, ಕೋಣಗಳನ್ನು ಕಟ್ಟಿಕೊಂಡು ಎಳೆಸುತ್ತಿದ್ದರು), ಗುದ್ದಲಿ (ನೆಲ ಅಗೆಯಲು ಬಳಸುವ ಉಪಕರಣ, ಗುದ್ದಲಿ, ಕೋಲ್ಗುದ್ಲಿ, ಕೈಗುದ್ಲಿ, ದೊಡ್ಡಗುದ್ಲಿ, ಬಾಯ್ಗುದ್ಲಿ, ಶಿಗುದ್ಲು ಎಂದು ತನ್ನ ಆಕಾರಕ್ಕೆ ಹಾಗೂ ಉಪಯೋಗಕ್ಕೆ ತಕ್ಕಂತೆ ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದ್ದ ಒಂದು ಕೃಷಿ ಸಾಧನ), ಗುಮ್ಮಿ (ಗುಡಾಣ ಅಥವಾ ಧಾನ್ಯ ತುಂಬಿಡಲು ಬಳಸುವ ಉಪಕರಣ), ಚನಾ (ಕಲ್ಲು ಒಡೆಯಲು ಬಳಸುವ ಸಾಧನ), ಜಿಗ್ಗೆ (ಮೊಳೆ), ದೋಟಿ (ಎತ್ತರದ ಮರಗಳಿಂದ ಕಾಯಿ, ಹಣ್ಣು, ಸೊಪ್ಪನ್ನು ಕೊಯ್ಯಲು ಉಪಯೋಗಿಸುವ ಸಾಧನ), ನೇಗಿಲು (ನೆಲವನ್ನು ಊಳಲು ಬಳಸುತ್ತಿದ್ದ ಪ್ರಮುಖ ಸಾಧನ), ನೇಗ್ಲು, ನೇಗಿಲ ಕಟ್ಟಿಗೆ, ನೇಗ್ಲ ತೋಟಿ, ನೇಗ್ಲಾಮಣಿ, ನೇಗ್ಲಾಮೊನೆ ಎಂದು ಪ್ರತಿಯೊಂದು ವಸ್ತುಗಳಿಗೂ ವಿವಿಧ ಹೆಸರುಗಳಿರುತ್ತವೆ.) ಬಲೆ (ಕಾಡು ಪ್ರಾಣಿಗಳನ್ನು ಹಿಡಿಯಲು ಉಪಯೋಗಿಸುತ್ತಿದ್ದ ಬಲೆ), ಬಾಚಿ (ನೇಗಿಲು, ಗಾಡಿ ಮತ್ತಿತರ ಮಂದ ವಸ್ತುಗಳನ್ನು ತಯಾರಿಸಲು ಬಳಸುವ ಸಾಧನ), ಮೆರೆ (ಹುಲ್ಲನ್ನು ಸರಿಸಲು ಬಳಸುವ ಉಪಕರಣ), ಮಟ್ಟಿಗೋಲು (ಹೆಂಟೆಯನ್ನು ಬಡಿಯಲು ಬಳಸುವ ಉಪಕರಣ), ಮೇಟಿ (ಕಣದ ಮಧ್ಯೆ ನೆಡುವ ಕಂಬ), ಮೊರ (ಧಾನ್ಯಗಳನ್ನು ತೂರಲು ಹಾಗೂ ಮನೆಯಲ್ಲಿ ಬಳಸುವ ಬಿದಿರು ಸಾಧನ), ಕೊಂಗ (ಇದು ಧಾನ್ಯವನ್ನು ತೂರಲು ಹೆಚ್ಚಾಗಿ ಬಳಸುತ್ತಿದ್ದ ಸಾಧನ), ಶಿಂಬೆ (ಬುಟ್ಟಿ, ಪಾತ್ರೆ ಮುಂತಾದವುಗಳ ತಳಕ್ಕೆ ಇಡುವ ಬಿದಿರಿನ ಅಥವಾ ಬಟ್ಟೆಯ ಸುರುಳಿ), ಹಗ್ಗ (ನೂಲಿನಿಂದ ಹೊಸೆದು ತಯಾರಿಸಿದ ಹುರಿ.)[31]

ಮೇಲಿನ ಕೃಷಿಗೆ ಅವಶ್ಯಕವಾದ ಎಲ್ಲಾ ಉಪಕರಣಗಳು ಅಂದಿನ ಸಂಸ್ಕೃತಿಯಲ್ಲಿ ಸೇರಿಹೋಗಿದ್ದವು. ಅಂದಿನ ಮಣ್ಣಿನ ಮಕ್ಕಳಿಗೆ ಈ ಉಪಕರಣಗಳು ಪ್ರಮುಖ ಆಧಾರವಾಗಿದ್ದವೆಂದು ಹೇಳಬಹುದು. ಈ ಉಪಕರಣಗಳನ್ನು ರಾಷ್ಟ್ರೀಯ ಹಬ್ಬಗಳಾಗಿದ್ದ ಮಹಾನವಮಿ, ದೀಪಾವಳಿ, ಯುಗಾದಿ ಹಬ್ಬಗಳಂದು ತೊಳೆದು ಪೂಜಿಸುವ ಪರಿಪಾಠ ಇದ್ದಿತು. ಇಂದಿಗೂ ಸಹ ಹಳ್ಳಿಯಲ್ಲಿ ಈ ಸಂಸ್ಕೃತಿಯನ್ನು ಗಮನಿಸಬಹುದಾಗಿದೆ. ಇಷ್ಟು ವೈವಿಧ್ಯಮಯವಾದ ಉಪಕರಣಗಳನ್ನು ತಯಾರಿಸುತ್ತಿದ್ದವರು ವೃತ್ತಿ ಕಸಬುದಾರರೇ ಆಗಿದ್ದರು.

**(ಅ) ಸಾಗುವಳಿಯ ವಿಧಾನ :** 'ರೂಢಿಗಳು ಸುಲಭವಾಗಿ ನಶಿಸುವುದಿಲ್ಲ' ಎನ್ನುವ ಲೋಕೋಕ್ತಿಯಂತೆ ಸಾಗುವಳಿಯ ವಿಧಾನವು ವಿಜಯನಗರ ಕಾಲದಲ್ಲಿ ಹೊಸದಕ್ಕೆ ಅವಕಾಶ ಮಾಡಿಕೊಡುವ ಹಾಗೇನೂ ಬದಲಾಗಲಿಲ್ಲ. ಬತ್ತದ ಸಾಗುವಳಿಯ ವಿಧಾನದ ಬಗ್ಗೆ ಸಮಕಾಲೀನ ಚಿತ್ರವೊಂದನ್ನು ಬಾರ್ಬೊಸ ನೀಡುತ್ತಾನೆ. "ನೀರಿನಿಂದ ಆವೃತವಾದ ಕಣಿವೆ ಹಾಗೂ ಮಟ್ಟಸ ಪ್ರದೇಶಗಳಲ್ಲಿ ಎಲ್ಲೆಡೆ ಅವರು ಅದನ್ನು (ಬತ್ತವನ್ನು) ಬಿತ್ತುತ್ತಾರೆ. ನಾವು ಮಾಡುವ ಹಾಗೆಯೇ ಅಥವಾ ಎಮ್ಮೆ ಜೊತೆಯನ್ನು ನೇಗಿಲಿಗೆ ಕಟ್ಟಿ ಅವರು ನೆಲವನ್ನು ಉಳುತ್ತಾರೆ; ನೇಗಿಲಗುಳದಲ್ಲಿ ಕುಳಿಯೊಂದಿದ್ದು ಅದರಲ್ಲಿ ಬತ್ತವನ್ನು ಇರಿಸಲಾಗಿರುತ್ತದೆ; ಭೂಮಿ ನೀರಿನಿಂದ ತುಂಬಿದಾಗ ಗುಳ ಉಳುತ್ತ ಹೋದಂತೆ ಬತ್ತದ ಕಾಳೂ ನೀರಿನೊಳಗೆ ಮತ್ತು ನೆಲದೊಳಗೆ ಸೇರುತ್ತದೆ. ಭೂಮಿ ಒಣಭೂಮಿಯಲ್ಲಿ ಅವರು ಅದನ್ನು ಕೈಯಿಂದಲೆ ಬಿತ್ತುತ್ತಾರೆ" ಎಂದು ಆತ ಹೇಳುತ್ತಾನೆ.[32] ರೈತಾಪಿ

ಜನರು ಬಳಸುತ್ತಿದ್ದ ಉಪಕರಣಗಳ ಬಗ್ಗೆ ನಮಗೆ ಮಾಹಿತಿ ದೊರೆಯುವುದಿಲ್ಲ; ಆದರೆ ಅವು ನಮ್ಮ ಕಾಲದಲ್ಲಿರುವ ಉಪಕರಣಗಳಿಂದ ಭಿನ್ನವಾಗೇನೂ ಇರಲಿಲ್ಲವೆಂದು ಊಹಿಸಬಹುದು. "ಹಲವು ಶಾಸನಗಳಲ್ಲಿ ಸೂಚಿತವಾಗಿರುವಂತೆ ನೇಗಿಲಂತೂ ಖಚಿತವಾಗಿ ಬಳಕೆಯಲ್ಲಿತ್ತು; ಉಳುಮೆ ಮಾಡಲು ಬೇಕಾದ ನೇಗಿಲುಗಳ ಸಂಖ್ಯೆಯಲ್ಲಿ ಭೂಮಿಯನ್ನು ಅಳೆಯುತ್ತಿದ್ದುದನ್ನು ಅವು ಉಲ್ಲೇಖಿಸುತ್ತವೆ."[33] ಬಾವಿ ನೀರಾವರಿಯಲ್ಲಿ ಏತಗಳನ್ನು ಸಾಮಾನ್ಯವಾಗಿ ಬಳಸಲಾಗುತ್ತಿತ್ತು. ಬಂಡಿಗೆ ನೊಗ ಹೂಡಲು ಮತ್ತು ನೇಗಿಲುಗಳನ್ನು ಎಳೆಯಲು ಕಟ್ಟುತ್ತಿದ್ದ ಕೆಲವು ತಳಿಗಳ ಎತ್ತುಗಳ ಉತ್ತಮ ವರ್ಣನೆಯನ್ನು ವಿದೇಶೀ ಪ್ರವಾಸಿಗರು ನೀಡುತ್ತಾರೆ. ಸಾಗುವಳಿಯ ಉದ್ದೇಶಗಳಿಗಾಗಿ ನೇಗಿಲು ಬಳಕೆಯ ಮೇಲಿಂದ ಮೇಲಿನ ಉಲ್ಲೇಖವು ಸ್ವಾಭಾವಿಕವಾಗಿಯೆ ದೇಶದಲ್ಲಿ ದೊರೆಯುತ್ತಿದ್ದ ಹೇರಳ ಜೀವರಾಶಿಯನ್ನು ನಾವು ಊಹಿಸುವಂತೆ ಮಾಡುತ್ತದೆ. ಒಂದು ನಿರ್ದಿಷ್ಟ ಪ್ರದೇಶದಲ್ಲಿ ಬೆಳೆಯುತ್ತಿದ್ದ ಬೆಳೆಗಳ ವೈವಿಧ್ಯ ಹಾಗೂ ಸಂಖ್ಯೆಗಳು ಮಣ್ಣಿನ ಗುಣ, ನೀರಿನ ಸೌಕರ್ಯ ಹಾಗೂ ಮುಂಗಾರಿನ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತಿದ್ದವು.

**(ಆ) ವ್ಯವಸಾಯದ ಕೆಲಸ :** ಬೇರೆ ಬೇರೆ ಪ್ರದೇಶಗಳ ಗ್ರಾಮೀಣ ಜನಸಂಖ್ಯೆ ಸಾಗುವಳಿಗೆ ಒಳಪಟ್ಟ ಪ್ರದೇಶವನ್ನು ಆಧರಿಸಿ ಬದಲಾಗುತ್ತಿತ್ತು. ಗ್ರಾಮಗಳು ಕೃಷಿಕ ವರ್ಗದಿಂದ ತುಂಬಿರುತ್ತಿದ್ದವು. ಈ ಕೃಷಿಕ ವರ್ಗದ ಸದಸ್ಯರು ಭೂಮಾಲೀಕರು ಅಥವಾ ಕೆಲಸಗಾರರಾಗಿರುತ್ತಿದ್ದರು. ಜಮೀನುದಾರರು ಮತ್ತು ದೇವಾಲಯ ಹಾಗೂ ಮಠಗಳಂಥ ಭೂಮಿ ಹೊಂದಿದ ಸಂಸ್ಥೆಗಳು ಭೂಮಿ ದಣಿಗಳಾಗಿದ್ದರೆ ಕೆಲಸಗಾರರು ಆ ಭೂಮಿಯಲ್ಲಿ ಕೆಲಸ ಮಾಡಿ ಸಂಪಾದಿಸಿ ತಮ್ಮ ಜೀವನ ಸಾಗಿಸುತ್ತಿದ್ದವರಾಗಿದ್ದರು. ಕೆಲಸಗಾರರಲ್ಲಿ ಕೂಲಿ ಕೆಲಸಕಾರರು ಹಾಗೂ ಜೀತದಾಳುಗಳೆಂಬ ವರ್ಗಗಳಿದ್ದವು.

ಕೂಲಿ ಕೆಲಸಕಾರರ ದಿನಗೂಲಿಯ ಪದಾರ್ಥ ಅಥವಾ ನಗದಿನ ರೂಪದಲ್ಲಿ ಸಂದಾಯವಾಗುತ್ತಿತ್ತು. ಅವರನ್ನು ಬಿತ್ತನೆ ಅಥವಾ ಸುಗ್ಗಿಯಂಥ ಕಾಲಕಾಲದ ಕೆಲಸಕ್ಕೆ ನೇಮಿಸಿಕೊಳ್ಳಲಾಗುತ್ತಿತ್ತು.[34] ಈ ಭೂರಹಿತ ಕೆಲಸಗಾರರು ಗ್ರಾಮೀಣ ಜನಸಂಖ್ಯೆಯ ಬಹುಭಾಗವನ್ನು ರೂಪಿಸುತ್ತಿದ್ದರು. ಜೀತದಾಳುಗಳು ಸಾಮಾನ್ಯವಾಗಿ ಗ್ರಾಮದ ಸ್ಥಳವಂದಿಗರಾಗಿದ್ದು ಭೂಸಾಗುವಳಿ ಮಾಡಲು ಶಾಶ್ವತವಾದ ಮತ್ತು ಪರಭಾರೆ ಮಾಡಲಾಗದ ಹಕ್ಕುಳ್ಳವರಾಗಿದ್ದರು.[35] ಕೆಲವು ಸಂದರ್ಭಗಳಲ್ಲಿ ಅವರು ಇತರ ಗ್ರಾಮಗಳ ನಿವಾಸಿಗಳಾಗಿದ್ದು, ಅವರನ್ನು ಗ್ರಾಮದಲ್ಲಿ ನೆಲೆ ನಿಲ್ಲುವಂತೆ ಮತ್ತು ಅಲ್ಲಿನ ಶಾಶ್ವತ ಹಕ್ಕಿನ ವಿನಾಯಿತಿಯಿಂದಾಗಿ ಭೂಮಿಯನ್ನು ಸಾಗುವಳಿ ಮಾಡಲು ಒಪ್ಪಿಸಿ ಕರೆತರಲಾಗಿರುತ್ತಿತ್ತು. ಅವರಿಗೆ ಮನೆ ಕಟ್ಟಿಕೊಳ್ಳಲು ಉಚಿತ ನಿವೇಶನಗಳನ್ನು ನೀಡಲಾಗುತ್ತಿತ್ತು. ಕೆಲವು ದೃಷ್ಟಾಂತಗಳಲ್ಲಿ ಅವರು ಗ್ರಾಮದ ನಿವಾಸಿಗಳೆ ಆಗಿದ್ದು ಅವರನ್ನು ಸಾಗುವಳಿ ಕೆಲಸ ಕಾರ್ಯಗಳಿಗೆ ಕರೆತರಲು ಉತ್ತೇಜನವಾಗಿ ಅಲ್ಲಿಯವರೆಗೆ ಸಾಗುವಳಿಗೆ ಒಳಪಡದ ಭೂಮಿಗೆ ಸಂಬಂಧಿಸಿದಂತೆ ಅದೇ ತೆರನ ಹಕ್ಕನ್ನು ಅವರಿಗೆ ನೀಡಲಾಗುತ್ತಿತ್ತು; ಮತ್ತೆ ಕೆಲವು ನಿದರ್ಶನಗಳಲ್ಲಿ ಗೇಣಿದಾರರು ಪ್ರತಿಫಲವಾಗಿ ಧನವನ್ನು ಸಂದಾಯ ಮಾಡಿ ಅಂಥ ಹಕ್ಕನ್ನು ಕೊಂಡುಕೊಳ್ಳುತ್ತಿದ್ದರು.[36] ವಂಶಪಾರಂಪರ್ಯ

ವಾದ ಜೀತದಾಳುಗಳು ಪಿತ್ರಾರ್ಜಿತ ಸ್ಥಿರಸ್ವತ್ತಿನ ನಿಯಮಗಳಿಗೆ ಅಧೀನರಾಗುತ್ತಿದ್ದರು.[37] ವಿಜಯನಗರ ಕಾಲದ ಜೀತದಾಳುಗಳು ಆಧುನಿಕ ಗೇಣಿದಾರನ ಸ್ಥಾನಮಾನಕ್ಕೆ ಸದೃಶವಾದ ಸ್ಥಾನಮಾನವನ್ನು ಹೊಂದಿದ್ದರು.

ಜಮೀನುದಾರನು ಭೂಮಿಯ ಮೇಲೆ ಪ್ರಭುತ್ವದ ಹಕ್ಕನ್ನಷ್ಟೇ ಅನುಭೋಗಿಸುತ್ತಿದ್ದನು. ಮಣ್ಣಿನ ಗುಣ ಮತ್ತು ಅಲ್ಲಿ ಬೆಳೆಯುವ ಪೈರಿನ ಬಗೆಗಳನ್ನು ಸೂಕ್ತವಾಗಿ ಪರಿಗಣಿಸಿದ ತರುವಾಯ ಮಾಡಿಕೊಳ್ಳುತ್ತಿದ್ದ ಒಪ್ಪಂದವನ್ನು ಆಧರಿಸಿ ಆದಾಯ ಬಹುಭಾಗವನ್ನು ಗೇಣಿದಾರನು ಆತನಿಗೆ ಸಲ್ಲಿಸುತ್ತಿದ್ದನು. ತೆಲುಗಿನಲ್ಲಿ 'ವಾರಂ' ಎಂಬ ಹೆಸರಿನಲ್ಲಿ ಪ್ರಚಲಿತವಿದ್ದ ವ್ಯವಸ್ಥೆಯಡಿ ಭೂಮಿಯ ಆದಾಯವನ್ನು ಜಮೀನುದಾರ ಮತ್ತು ಗೇಣಿದಾರರು ಹಂಚಿಕೊಳ್ಳುತ್ತಿದ್ದರು.[38] ಸಾಮ್ರಾಜ್ಯದ ಕನ್ನಡ ಪ್ರದೇಶಗಳಲ್ಲಿ ಈ ವ್ಯವಸ್ಥೆಯನ್ನು 'ವಾರ' ಎಂದು ಕರೆಯಲಾಗುತ್ತಿತ್ತು.

**(ಇ) ಕೃಷಿಯ ಉಪಕರಣಗಳ ತಯಾರಕರು :** ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಉದ್ಯಮಗಳಿಗೆ ಸಂಬಂಧಿಸಿದಂತೆ ಸ್ವಯಂಪೂರ್ಣತೆಯನ್ನು ಸಾಧಿಸಿತ್ತು ಮತ್ತು ಅದು ಹೆಚ್ಚಾಗಿ ಆಮದನ್ನು ಅವಲಂಬಿಸಿರಲಿಲ್ಲ. ಗೃಹೋಪಕರಣಗಳು, ಬಟ್ಟೆಯ ವಸ್ತುಗಳು ಮತ್ತು ರೇಷ್ಮೆಗಳಂಥ ಪದಾರ್ಥಗಳನ್ನು ಕಚ್ಚಾ ಸಾಮಗ್ರಿ ಲಭ್ಯವಿದ್ದ ಕಡೆಗಳಲ್ಲೆಲ್ಲ ತಯಾರಿಸಲಾಗುತ್ತಿತ್ತು. ಕಲ್ಲಿಕೋಟೆಗೆ 167 ಮೈಲು ದೂರದ ಕಣ್‌ಪಾಮೈ (ಕೊಯಮತ್ತೂರೆಂದು ಇದನ್ನು ಗುರುತಿಸಲಾಗಿದೆ) ಹತ್ತಿ ಮತ್ತು ರೇಷ್ಮೆ ತಯಾರಿಕೆಯ ದೊಡ್ಡ ಕೇಂದ್ರವಾಗಿತ್ತು.[39] ವಿಜಯನಗರ ಕಾಲದಲ್ಲಿ ಯಾವುದೇ ವ್ಯವಸ್ಥಿತ ಹಿಟ್ಟಿನ ಗಿರಣಿ ಉದ್ಯಮವಿರಲಿಲ್ಲ; ಅಕ್ಕಿ, ರಾಗಿ, ಗೋಧಿ ಮತ್ತು ಇತರ ಕಾಳುಗಳನ್ನು ಸಾಮಾನ್ಯವಾಗಿ ಮನೆಯಲ್ಲಿಯೆ ಹಿಟ್ಟು ಮಾಡಿಕೊಳ್ಳಲಾಗುತ್ತಿತ್ತು; ಇದಕ್ಕಾಗಿ ಬೀಸುಕಲ್ಲುಗಳನ್ನು ಬಳಸಿಕೊಳ್ಳಲಾಗುತ್ತಿತ್ತು. ಅತಿಪ್ರಮುಖ ತಯಾರಿಕೆ ಎಂದರೆ ಸಕ್ಕರೆಯದು; ಅದು ಹೆಚ್ಚಾಗಿ ಪುಡಿ ರೂಪದಲ್ಲಿರುತ್ತಿತ್ತು" ಅದು ಪುಡಿಯಾಗಿರುತ್ತಿದ್ದುದರಿಂದ ಅದನ್ನು ಚಿಕ್ಕ ಪೊಟ್ಟಣಗಳಲ್ಲಿ ಅವರು ಸುತ್ತಿಡುತ್ತಿದ್ದರು.[40] ಕೆಲವು ಸ್ಥಳಗಳಲ್ಲಿ ತಾಳೆ ಬೆಲ್ಲ ಅಥವಾ ಬೆಲ್ಲವನ್ನು ತಯಾರಿಸಲಾಗುತ್ತಿತ್ತು; ಅದರ ಸಿಹಿಯಿಂದಾಗಿ ಅದಕ್ಕೆ ದೇಶದಲ್ಲಿ ತುಂಬ ಬೇಡಿಕೆ ಇತ್ತು.[41] ಸಾಮ್ರಾಜ್ಯದ ಕೆಲವು ಭಾಗಗಳಲ್ಲಿ ಗಾಣಗಳಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತವೆ.[42] ಗಾಣಿಗರೆಂದು ಕರೆಯಲಾದ ಜಾತಿಯವರ ಕೈಯಲ್ಲಿ ಎಣ್ಣೆ ಹಿಂಡಿ ತೆಗೆಯುವ ಉದ್ಯಮವಿತ್ತು. ಎಣ್ಣೆ ಹಿಂಡುವ ಯಂತ್ರ ಅಥವಾ ಗಾಣವು ಸಾಮಾನ್ಯವಾಗಿ ಮರ ಇಲ್ಲವೇ ಕಲ್ಲಿನಿಂದ ತಯಾರಾಗುತ್ತಿತ್ತು ಮತ್ತು ಎರಡು ಎತ್ತುಗಳಿಂದ ಕೆಲಸ ನಿರ್ವಹಿಸುತ್ತಿತ್ತು. ತಾಳೆಯ ಸಾರ ಹೀರಿ ತಯಾರಿಸಿದ ಸೇಂದಿ ದೊರೆಯುತ್ತಿತ್ತು. ದೇಶದ ಮದ್ಯವಾದ ಇದಕ್ಕೆ ಭಾರಿ ಬೇಡಿಕೆ ಇತ್ತು.[43] ತಾಳೆಯ ಎಲೆಗಳನ್ನು ಬರೆಯಲು ಉಪಯೋಗಿಸಲಾಗುತ್ತಿತ್ತು. ಬಣ್ಣಗಳಲ್ಲಿ ಅತಿಮುಖ್ಯವಾದದ್ದು ನೀಲಿ; ಅದು ಪಶ್ಚಿಮ ಕರಾವಳಿಯಲ್ಲಿ, ಅದರಲ್ಲಿಯೂ ವಿಶೇಷವಾಗಿ ಚಾಲ್ ಸುತ್ತಮುತ್ತಲಿನ ಪ್ರದೇಶದಲ್ಲಿ ಇದು, ದೊರೆಯುತ್ತಿತ್ತು.[44]

## 3.4. ಗಣಿಗಾರಿಕೆಯ ಮತ್ತು ಕೈಗಾರಿಕಾ ಉತ್ಪನ್ನಗಳು :

**(ಅ) ಗಣಿಗಾರಿಕೆ :** ವಿಜಯನಗರದ ಕಾಲದಲ್ಲಿ ಪ್ರಶಸ್ತ ಶಿಲೆಗಳು, ಮುತ್ತು ಮತ್ತು ಬಂಗಾರ ಹೇರಳವಾಗಿದ್ದವೆಂದು ಪ್ರವಾಸಿಗರ ಕಥನಗಳಿಂದ ನಮಗೆ ತಿಳಿದುಬರುತ್ತದೆ. ಸಾಮಾನ್ಯ ಜನರೂ ಚಿನ್ನಾಭರಣಗಳನ್ನು ಧರಿಸದೆ ಹೊರಡುತ್ತಿರಲಿಲ್ಲ; ರಾಜಧಾನಿಯ ನರ್ತಕಿಯರು ಮತ್ತು ವಾರಾಂಗನೆಯರು ತಮ್ಮ ಮೈತುಂಬ ವಿವಿಧ ಬಗೆಯ ಒಡವೆಗಳನ್ನು ಧರಿಸುತ್ತಿದ್ದರು.[45] ವಜ್ರಗಳನ್ನು ಭೂಮಿಯಿಂದ ಅಗೆದು ತೆಗೆಯಲಾಗುತ್ತಿತ್ತು; ಅವುಗಳಲ್ಲಿ ಬಹುಪಾಲು ಗೂಟಿಗೆ ನೈಋತ್ಯದಲ್ಲಿ ಸುಮಾರು ಇಪ್ಪತ್ತು ಮೈಲು ದೂರದಲ್ಲಿದ್ದ ವಜ್ರಕರೂರಿನಿಂದ ವಿಜಯನಗರಕ್ಕೆ ಬರುತ್ತಿತ್ತು. ನ್ಯೂನಿಜ್ ಪ್ರಕಾರ ಗೂಟಿಯ ರಾಜ್ಯಪಾಲನು ರಾಜನಿಗೆ 20 'ಮ್ಯಾಂಗೆಲಿನ್'ಗಳಿಗಿಂತ ಹೆಚ್ಚು ತೂಗುತ್ತಿದ್ದ ವಜ್ರಗಳನ್ನೆಲ್ಲ ಕೊಟ್ಟುಬಿಟ್ಟನು.[46] ಒಂದು 'ಮ್ಯಾಂಗೆಲಿನ್'ಗೆ ನಾಲ್ಕು ಗುಂಜಿಗಳ ತೂಕ. ಕೃತಕ ವಜ್ರಗಳು, ಪದ್ಮರಾಗಗಳು, ಗೋಮೇದಿಕಗಳು ಹಾಗೂ ಬಿಳಿ ನೀಲ ಮಣಿಗಳನ್ನು ತಯಾರಿಸಲಾಗುತ್ತಿತ್ತು ಮತ್ತು ಅವು ನೈಜ ರತ್ನಗಳ ಉತ್ತಮ ಅನುಕರಣೆಗಳಾಗಿದ್ದವು.[47] ಸರ್ಕಾರವು ವಜ್ರಗಳನ್ನು ಸಂಗ್ರಹಿಸಿಡುವುದಕ್ಕಾಗಿಯೇ ಪ್ರತ್ಯೇಕ ವಜ್ರಭಂಡಾರವನ್ನು ರೂಪಿಸಿ ನಿರ್ವಹಿಸುವಷ್ಟು ಅಪಾರ ಪ್ರಮಾಣದಲ್ಲಿ ರತ್ನರಾಶಿಯನ್ನು ಹೊಂದಿತ್ತು.

ವಿಜಯನಗರದಲ್ಲಿ ಮೆತು ಮತ್ತು ಮೆತುವಲ್ಲದ ಲೋಹಗಳು ಪಾದರಸ ಹಾಗೂ ತಾಮ್ರ ಹೇರಳವಾಗಿ ದೊರೆಯುತ್ತಿದ್ದವು.[48] ಸಾಮ್ರಾಜ್ಯದ ಪೂರ್ವದ ಭಾಗವು ಕಬ್ಬಿಣದ ಅದಿರಿನಲ್ಲಿ ಶ್ರೀಮಂತವಾಗಿತ್ತು. ಮತ್ತು ಭಟ್ಕಳದಿಂದ ಕಬ್ಬಿಣದ ಹೇರುಗಳು ರಫ್ತಾಗುತ್ತಿದ್ದವು.[49] ರತ್ನಾಭರಣಗಳು, ಯುದ್ಧದ ಶಸ್ತ್ರಾಸ್ತ್ರಗಳು ಮತ್ತು ಗೃಹೋಪಯೋಗಿ ವಸ್ತುಗಳ ತಯಾರಿಕೆ ಇವು ಕರ್ನಾಟಕದ ಈಗಿನ ಕೋಲಾರ ಜಿಲ್ಲೆಯಿಂದ ಹೈದರಾಬಾದ್ ಪ್ರದೇಶದವರೆಗೆ - ದಕ್ಷಿಣದಿಂದ ಉತ್ತರಕ್ಕೆ - ಚಿನ್ನವಿರುವ ಬೆಣಚುಕಲ್ಲಿನ ಪಟ್ಟೆಯೊಂದು ಸಾಗಿದ್ದು ಅದನ್ನು ವ್ಯಾಪಕವಾಗಿ ಕೊರೆದಿರಬೇಕು.[50] ಸಾಮ್ರಾಜ್ಯದಲ್ಲಿ ತಯಾರಾದ ಲೋಹ ವಸ್ತುಗಳು ತಮ್ಮ ಕಲಾತ್ಮಕ ಕೌಶಲಕ್ಕೆ ಪ್ರಸಿದ್ಧವಾಗಿರುವ ಹಾಗೂ ವಿವಿಧ ತೆರನ ಲೋಹಕರ್ಮಿಗಳು ತಮ್ಮ ಕೆಲಸದಲ್ಲಿ ನೈಪುಣ್ಯ ಸಾಧಿಸಿದವರಾಗಿದ್ದರು. ರತ್ನಾಭರಣ ತಯಾರಕರ ಕುಶಲತೆಯ ಬಗ್ಗೆ ಅಬ್ದುಲ್ ರಜಾಕನು ತಿಳಿಸುತ್ತ ಇಮ್ಮಡಿ ದೇವರಾಯನು "ತನ್ನ ಕತ್ತಿನ ಸುತ್ತ ರಾಜಶ್ರೇಷ್ಠ ಶುದ್ಧ ಮುತ್ತುಗಳಿಂದ ರಚಿತವಾದ ಕಂಠಾಭರಣವನ್ನು ಧರಿಸಿದ್ದು ಅದರ ಬೆಲೆಯನ್ನು ಲೆಕ್ಕಹಾಕುವುದು ರತ್ನಾಭರಣಕಾರನಿಗೂ ಕಷ್ಟಕರವಾಗಿ ತೋರುತ್ತಿತ್ತು" ಎಂದು ಹೇಳುತ್ತಾನೆ.[51]

ಸಾಮ್ರಾಜ್ಯದಲ್ಲಿ ಉತ್ಪಾದಿತವಾಗುತ್ತಿದ್ದ ಕಬ್ಬಿಣವು ತನ್ನ ಆಂತರಿಕ ಮತ್ತು ಬಾಹ್ಯ ಬೇಡಿಕೆಗಳೆರಡನ್ನೂ ಈಡೇರಿಸಿಕೊಳ್ಳಲು ಸಾಕಾಗುವಷ್ಟು ಪ್ರಮಾಣದ್ದಾಗಿತ್ತು. ಹಾಗೂ ಭಾರತದ ಸಮುದ್ರ ತೀರಗಳಿಂದ ಕಬ್ಬಿಣ ತುಂಬಿದ ಅನೇಕ ಹಡಗುಗಳು ಹೊರಡುತ್ತಿದ್ದವು. ಆದರೆ ಅನಂತರದ ದಿನಗಳಲ್ಲಿ ಪೋರ್ಚುಗೀಸರು ಪಶ್ಚಿಮ ಕರಾವಳಿಯಿಂದ ಉಕ್ಕು, ಕಬ್ಬಿಣ ಮತ್ತು ಸತುಗಳ ರಫ್ತಿನ ಮೇಲೆ ನಿರ್ಬಂಧ ಹೇರಿದರು.[52] ಉಪ್ಪಿನ ಉತ್ಪಾದನೆ ಒಂದು ಪ್ರಧಾನ ಉದ್ಯಮವಾಗಿತ್ತು.[53] ಉಪ್ಪಿನ ತಯಾರಿಕೆಯ ವಿಧಾನಕ್ಕೆ ಸಂಬಂಧಿಸಿದಂತೆ ಮಹಾಲಿಂಗಂ

ಅವರು "ಉಪ್ಪಿನ ತೊಟ್ಟಿಗಳ ಮೇಲ್ಮೈ ಮೇಲೆ ಮಣ್ಣನ್ನು ಹರಡಲಾಗುತ್ತಿತ್ತು; ಅವುಗಳಿಗೆ ನೀರನ್ನು ಹಾಯಿಸಲಾಗುತ್ತಿತ್ತು; ಕ್ರಮೇಣ ನೀರು ಆವಿಯಾಗಲು ಅವಕಾಶ ಕೊಡಲಾಗುತ್ತಿತ್ತು ಹಾಗೂ ಎಲ್ಲ ನೀರೂ ಸಂಪೂರ್ಣ ಆವಿಯಾದ ತರುವಾಯ ತೊಟ್ಟಿಗಳಲ್ಲಿ ಉಪ್ಪು ಹರಳುಗಳ ರೂಪದಲ್ಲಿ ಉಳಿಯುತ್ತಿತ್ತು. ಅದನ್ನು ಶೇಖರಿಸಿ ಪೇಟೆಯಲ್ಲಿ ಮಾರಲಾಗುತ್ತಿತ್ತು" ಎಂದು ಹೇಳುತ್ತಾರೆ.[54]

**(ಆ) ಯುದ್ಧದ ಶಸ್ತ್ರಾಸ್ತ್ರಗಳು :** ಸೈನ್ಯವು ಯುದ್ಧದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾಗಿತ್ತು. ಸೈನಿಕರು, ಕುದುರೆ ಹಾಗೂ ಆನೆಗಳನ್ನು ದುಬಾರಿ ಬೆಲೆಯ ಆಭರಣಗಳಿಂದ ಅಲಂಕರಿಸಲಾಗುತ್ತಿತ್ತು. ಖಡ್ಗಗಳು, ಬಿಲ್ಲುಬಾಣಗಳು, ಕಠಾರಿಗಳು, ದಂಡಸಹಿತವಾದ ಗಂಡುಗೊಡಲಿಗಳು ಮತ್ತು ಭಲ್ಲೆಗಳನ್ನು ತಯಾರಿಸಲಾಗುತ್ತಿತ್ತು. ಬಿಲ್ಲುಗಳು ಚಿನ್ನ ಮತ್ತು ಬೆಳ್ಳಿ ತಗಡು ಹೊದಿಕೆಯಿಂದ ಹಾಗೂ ಬಾಣಗಳು ಗರಿಗಳಿಂದ ಕೂಡಿದ್ದವು.[55] ಅರಸ ಮತ್ತು ಆತನ ಅಧಿಕಾರಿಗಳ ಖಡ್ಗಗಳ ಹಿಡಿಕೆಯಲ್ಲಿ ಅಮೂಲ್ಯ ರತ್ನಾಭರಣಗಳನ್ನು ಹುದುಗಿಸಿ ಅಲಂಕರಿಸಲಾಗುತ್ತಿತ್ತು. ಲೋಹ ಹಾಗೂ ಚರ್ಮದ ಗುರಾಣಿಗಳು ಬಳಕೆಯಲ್ಲಿದ್ದವು. ಲೋಹ ಕರ್ಮಿಗಳು ಸಂಪೂರ್ಣವಾಗಿ ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿ ನಿರತರಾಗಿರುತ್ತಿದ್ದರು.

**(ಇ) ಗೃಹೋಪಯೋಗಿ ವಸ್ತುಗಳು :** ಗೃಹೋಪಯೋಗಿ ವಸ್ತುಗಳಲ್ಲಿ ವಿವಿಧ ಬಗೆಯ ಪಾತ್ರೆಪರಟೆಗಳು ಸೇರಿದ್ದುವು; ಇವು ಸಾಮಾನ್ಯವಾಗಿ ತಾಮ್ರದಿಂದ ತಯಾರಾದವಾಗಿದ್ದವು.[56] ಲೋಹದ ಪಾತ್ರೆಗಳನ್ನು ಅಡಿಗೆಯ ಉದ್ದೇಶಗಳಿಗೆ ಬಳಸಲಾಗುತ್ತಿತ್ತು. ಬೋಗುಣಿ ಬಟ್ಟಲುಗಳಂತ ಪಾತ್ರೆಗಳು ಮತ್ತು ಚಿನ್ನ ಹಾಗೂ ಬೆಳ್ಳಿಯಲ್ಲಿ ತಯಾರಿಸಿದ ಪೀಠೋಪಕರಣಗಳನ್ನು ಅರಮನೆಯಲ್ಲಿ ಉಪಯೋಗಿಸಲಾಗುತ್ತಿತ್ತು; ಅಲ್ಲಿನ ಕೋಣೆಗಳು ಬೆಳ್ಳಿ ಮತ್ತು ಚಿನ್ನದ ತಗಡಿನ ಹೊದಿಕೆಗಳಿಂದ ಕೂಡಿದ್ದವು. ಅರಮನೆಯಲ್ಲಿ ಉಪಯೋಗಿಸುತ್ತಿದ್ದ ಪಲ್ಲಂಗಗಳು ದಂತದಿಂದ ತಯಾರಾದವಾಗಿದ್ದವು.[57] ದೇವರ ಪೂಜೆ ಪುನಸ್ಕಾರಗಳಿಗೆ ಬೆಲೆಬಾಳುವ ಪಾತ್ರೆಗಳನ್ನು ಬಳಸಲಾಗುತ್ತಿತ್ತು.

**(ಈ) ಸುಗಂಧ ದ್ರವ್ಯಗಳ ತಯಾರಿಕೆ :** ವಿಜಯನಗರ ಕಾಲದ ಜನರು ತಮ್ಮ ಆರೋಗ್ಯದ ಬಗ್ಗೆ ವಿಶೇಷ ಆಸ್ಥೆ ವಹಿಸಿದ್ದರು. ಅವರು ಪ್ರತಿದಿನ ಸ್ನಾನ ಮಾಡುತ್ತಿದ್ದರು ಹಾಗೂ ಸುಗಂಧ ದ್ರವ್ಯಗಳನ್ನು ತಮ್ಮ ಶರೀರಗಳಿಗೆ ಲೇಪಿಸಿಕೊಳ್ಳುತ್ತಿದ್ದರು. ಅದರಿಂದಾಗಿ ಸುಗಂಧ ದ್ರವ್ಯಗಳಿಗೆ ಭಾರೀ ಬೇಡಿಕೆ ಇತ್ತು; ಅದರ ಉತ್ಪಾದನೆ ಸಣ್ಣ ಉದ್ದಿಮೆಗಳಲ್ಲೊಂದು ಮುಖ್ಯ ಉದ್ದಿಮೆಯಾಗಿ ರೂಪುಗೊಂಡಿತ್ತು. ಜನರ ಸುಗಂಧ ದ್ರವ್ಯಗಳ ಬಳಕೆಯ ಬಗ್ಗೆ ಬಾರ್ಬೋಸ ಹೇಳುವುದು ಹೀಗೆ: "ಅವರು ಯಾವಾಗಲೂ ಪೂಸಿಕೊಳ್ಳುತ್ತಿದ್ದ ದ್ರವ್ಯಗಳೆಂದರೆ ಚಂದನ ಸುಗಂಧ ಸಸ್ಯ, ಕಸ್ತೂರಿ ಮತ್ತು ಕೇಸರಿ, ಎಲ್ಲವೂ ನುಣ್ಣಗೆ ಅರೆದು ಪನ್ನೀರಿನಲ್ಲಿ ಕಲಸಿದವು. ಅವರೇ ಸ್ನಾನವಾದ ತರುವಾಯ ಇವನ್ನು ಹಚ್ಚಿಕೊಳ್ಳುತ್ತಿದ್ದರು; ಆದ್ದರಿಂದ ಅವರು ಯಾವಾಗಲು ಪರಿಮಳಭರಿತರಾಗಿರುತ್ತಿದ್ದರು"[58] ಪನ್ನೀರು, ಕರ್ಪೂರ, ಕಸ್ತೂರಿ ಮತ್ತು ಸುಗಂಧ ದ್ರವ್ಯಗಳು ವಿಜಯನಗರದಲ್ಲಿ ದೊರೆಯುತ್ತಿದ್ದವು.[59]

**ಉ) ಕರಕುಶಲ ವಸ್ತುಗಳು :** ಸಮಾಜಕ್ಕೆ ಉಪಯುಕ್ತವಾದ ಪ್ರಾಚೀನ ಕಲಾಕೌಶಲವು ಈ ಅವಧಿಯಲ್ಲಿಯೂ ಮುಂದುವರಿಯಿತು ಹಾಗೂ ಅಕ್ಕಸಾಲಿಗ, ಬಡಗಿ, ಕಲ್ಲುಕುಟಿಗ, ಕಮ್ಮಾರ ಮತ್ತು ಕುಂಬಾರರಂಥ ಕುಶಲ ಕೆಲಸಗಾರರು ತಮಗೆ ಪರಂಪರೆಯಿಂದ ಬಂದ ಶ್ರೇಷ್ಠತಮ ಪರಿಣತಿ ಮತ್ತು ಕಲಾತಂತ್ರದಿಂದ ವಸ್ತುಗಳನ್ನು ತಯಾರಿಸುತ್ತಿದ್ದರು. ಬಡಗಿಯ ಕೌಶಲ್ಯ ಪರಿಚಿತವಾಗಿತ್ತು. ಆತನೊಬ್ಬ ತುಂಬ ಬೇಡಿಕೆಯುಳ್ಳ ಕರ್ಮಿಯಾಗಿದ್ದನು. ಮನೆಗಳ ನಿರ್ಮಾಣ ಕಾರ್ಯದಲ್ಲಿನ ಮರದ ಕೆಲಸವನ್ನು ಆತ ಮಾಡುತ್ತಿದ್ದ; ಬಂಡಿ, ಪಲ್ಲಕ್ಕಿ ಹಾಗೂ ಪೀಠೋಪಕರಣಗಳನ್ನು ತಯಾರಿಸುತ್ತಿದ್ದ. ಮನೆಗಳು ಪೀಠೋಪಕರಣಗಳಿಂದ ಸುಸಜ್ಜಿತವಾಗಿದ್ದು, ಮುಂಭಾಗದ ಕೋಣೆಯಲ್ಲಿ ಹಲವು ಕಪಾಟುಗಳಿರುತ್ತಿದ್ದವೆಂದು ಬಾರ್ಬೋಸ ತಿಳಿಸುತ್ತಾನೆ.[60] ಮಹಾಲಿಂಗಂ ಅವರು "ದೇಶದಲ್ಲಿ ಹೇರಳವಾಗಿ ಮರ ಲಭ್ಯವಿದ್ದರೂ ಜನರು ಹೆಚ್ಚು ಪೀಠೋಪಕರಣಗಳನ್ನು ಉಪಯೋಗಿಸುತ್ತಿದ್ದರೆಂದು ನಾವು ಖಚಿತವಾಗಿ ಹೇಳಲಾಗುವುದಿಲ್ಲ" ಎಂದು ಹೇಳುತ್ತಾರೆ.[61] ರಾಜರು ಕೂಡ ಪೀಠೋಪಕರಣಗಳಿಗೆ ಬದಲಾಗಿ ತಮ್ಮ ಆಸ್ಥಾನಗಳಲ್ಲಿ ದಿಂಬು ಮತ್ತು ರತ್ನಗಂಬಳಿಗಳನ್ನು ಮಾತ್ರವೇ ಬಳಸುತ್ತಿದ್ದಂತೆ ತೋರುತ್ತದೆ.[62] ಎತ್ತುಗಳು ಎಳೆಯುವ ಬಂಡಿಗಳು ವಿಜಯನಗರದಲ್ಲಿ ಬಳಕೆಯಲ್ಲಿದ್ದವು.[63] ರಾಜಧಾನಿಯಲ್ಲಿನ ಒಂದು ರಸ್ತೆಯ ಬಗ್ಗೆ ತಿಳಿಸುತ್ತ ಪೇಯಿಸ್ "ದಾಸ್ತಾನುಗಳನ್ನು ಮತ್ತು ಬೇರೆ ಪ್ರತಿಯೊಂದನ್ನೂ ಸಾಗಿಸುವ ಎಲ್ಲ ಬಂಡಿ ಹಾಗೂ ವಾಹನಗಳು"[64] ಅದರ ಮುಖಾಂತರವೇ ಹಾದುಹೋಗುತ್ತಿದ್ದವೆಂದು ತಿಳಿಸುತ್ತಾನೆ. ಗಣ್ಯರು ಹಾಗೂ ರಾಜಕುಟುಂಬದ ಸದಸ್ಯರ ಉಪಯೋಗಕ್ಕಾಗಿ ಬಡಗಿಗಳು ಪಲ್ಲಕ್ಕಿಗಳನ್ನು ತಯಾರಿಸುತ್ತಿದ್ದರು. ನ್ಯೂನಿಜ್ "ರಾಜನಿರುವ ಆಸ್ಥಾನದಲ್ಲಿ ಯಾವಾಗಲೂ ಇಪ್ಪತ್ತು ಸಾವಿರ ಮೇನೆಗಳು ಮತ್ತು ಪಲ್ಲಕ್ಕಿಗಳು ಇರುತ್ತವೆ"[65] ಎಂದು ಹೇಳುತ್ತಾನೆ. ವಿಜಯನಗರವೊಂದು ಸಮುದ್ರಸಂಚಾರಕ್ಕೆ ಅವಕಾಶವಿರುವ ಸಾಮ್ರಾಜ್ಯವಾಗಿತ್ತು. ಹಾಗೂ ಹಲವು ಬಂದರುಗಳನ್ನು ಅದು ಹೊಂದಿತ್ತು. ಸಮುದ್ರಯಾನಕ್ಕಾಗಿ ಹಡಗುಗಳ ನಿರ್ಮಾಣವು ಚೆನ್ನಾಗಿ ಬೆಳವಣಿಗೆ ಹೊಂದಿದ ಉದ್ಯಮ ಶಾಖೆಯಾಗಿತ್ತು. ಪಾದರಕ್ಷೆಗಳ ಬಳಕೆ ಈ ಕಾಲದಲ್ಲಿ ಪರಿಚಿತವಾಗಿತ್ತು. ಮೋಚಿಗಳು ಅಥವಾ ಚಮ್ಮಾರರು ವೈವಿಧ್ಯಮಯ ಪಾದರಕ್ಷೆಗಳನ್ನು ತಯಾರಿಸಿದರು. ನಿಕೊಲೊ ಕೊಂಟಿಯ ಪ್ರಕಾರ ಜನರು ನೇರಳೆ ಮತ್ತು ಚಿನ್ನದ ಬಣ್ಣದ ಪಟ್ಟಿಗಳನ್ನು ಹೊಂದಿದ ಚಪ್ಪಲಿಗಳನ್ನು ಧರಿಸುತ್ತಿದ್ದರು.[66] ಜನರು ಒರಟು ಬೂಟುಗಳನ್ನು ಧರಿಸುತ್ತಿದ್ದುದನ್ನು ಬಾರ್ಬೋಸ ಗಮನಿಸಿದ್ದನು.[67] "ಪಾದರಕ್ಷೆಗಳಿಗೆ ಪ್ರಾಚೀನ ಶೈಲಿಯಂತೆ ಚೂಪು ತುದಿಗಳಿವೆ ಮತ್ತು ಅಟ್ಟೆಗಳನ್ನು ಬಿಟ್ಟು ಬೇರೇನೂ ಇರದೆ ಮೇಲ್ಗಡೆ ಅವುಗಳನ್ನು ಕಾಲಲ್ಲಿರಿಸಿಕೊಳ್ಳಲು ಸಹಾಯಕವಾಗುವಂತೆ ಕೆಲವು ಪಟ್ಟಿಗಳಿರುವ ಇತರ ಪಾದರಕ್ಷೆಗಳೂ ಇವೆ. ಇಟಲಿಯಿಂದ ಬರುವ ಕೆಲವು ಕಾಗದಗಳು ಅಥವಾ ಅವಶೇಷಗಳಲ್ಲಿ ನೀವು ಕಾಣುವಂಥ ಪ್ರಾಚೀನ ಕಾಲದಲ್ಲಿ ರೋಮನರು ರೂಢಿಗತವಾಗಿ ಧರಿಸುತ್ತಿದ್ದಂತಹ ಪಾದರಕ್ಷೆಗಳಂತೆ ಅವನ್ನು ಮಾಡಲಾಗಿದೆ"[68] ಎಂದು ಪೇಯಿಸ್ ಹೇಳುತ್ತಾನೆ. ಸಿರಿವಂತರಷ್ಟೇ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಿದ್ದುದನ್ನು ಹಾಗೂ "ಬಹುಪಾಲು ಜನರು ಅಥವಾ ಹೆಚ್ಚು

ಕಡಿಮೆ ಎಲ್ಲ ಜನರೂ ಬರಿಗಾಲಿನಲ್ಲಿಯೇ ನಾಡಿನಲ್ಲೆಲ್ಲ ನಡೆದಾಡುತ್ತಿದ್ದುದನ್ನು"[69] ಪೇಯಿಸ್ ಗಮನಿಸಿದ್ದಾನೆ. ಕುಂಬಾರ ಕೆಲಸವು ಬಹುಮಟ್ಟಿಗೆ ಒಂದು ಗ್ರಾಮೋದ್ಯಮವಾಗಿತ್ತು. ಕುಂಬಾರರು ತಯಾರಿಸುತ್ತಿದ್ದ ಮಣ್ಣಿನ ಪಾತ್ರೆಗಳು ಮತ್ತು ನಾಡಹೆಂಚುಗಳಿಗೆ ಸಾಮ್ರಾಜ್ಯದಲ್ಲೆಲ್ಲ ಬೇಡಿಕೆ ಇತ್ತು. ಮಧ್ಯಯುಗೀನ ವಿಜಯನಗರದಲ್ಲಿ ಪಿಂಗಾಣಿ ಪದಾರ್ಥಗಳು ಪರಿಚಿತವಾಗಿದ್ದರೂ ಅದನ್ನು ಚೀನಾದಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು.

ದೇವಾಲಯ ಮತ್ತು ಭವನಗಳ ನಿರ್ಮಾಣ ಕಾರ್ಯದಲ್ಲಿ ನಿರತರಾದ ಅನೇಕ ಕುಶಲಕೆಲಸಗಾರರಿದ್ದರು. ದೇವಾಲಯದ ಗೋಪುರಗಳು ಮತ್ತು ದೇವಾಲಯ ನಿರ್ಮಾಣದಲ್ಲಿ ಕಾಣುವ ಕಲೆಗಳಿಂದ ವಿಜಯನಗರದ ಕಲ್ಲುಕುಟಿಗರು, ಶಿಲ್ಪಿಗಳು ಹಾಗೂ ಕಲಾಕಾರರು ಸಾಧಿಸಿದ ಉನ್ನತಮಟ್ಟ ಗೋಚರವಾಗುತ್ತದೆ.

**(ಊ) ಜವಳಿ ಉದ್ಯಮಗಳು :** ವಿಜಯನಗರ ಸಾಮ್ರಾಜ್ಯದ ಉತ್ತರ ಹಾಗೂ ಪಶ್ಚಿಮ ಭಾಗಗಳಲ್ಲಿ ಹತ್ತಿಯನ್ನು ಬೃಹತ್ ಪ್ರಮಾಣದಲ್ಲಿ ಬೆಳೆಯಲಾಗುತ್ತಿದ್ದರೆ, ದಕ್ಷಿಣದ ಕಣ್‌ಪಾಮಿ (ಈಗಿನ ಕೊಯಮತ್ತೂರು) ಎಂಬಲ್ಲಿ ಹತ್ತಿಯನ್ನು ಬೆಳೆಯುತ್ತಿದ್ದುದಷ್ಟೇ ಅಲ್ಲ 'ಚಿತ್-ಲಿ' (ಚಿಹ್-ಲಿ-ಪು) ಎಂದು ಕರೆಯಲಾದ ಒಂದು ಬಗೆಯ ಹತ್ತಿಬಟ್ಟೆಯನ್ನೂ ತಯಾರಿಸಲಾಗುತ್ತಿತ್ತು. ಹತ್ತಿಬಟ್ಟೆಯ ಉತ್ಪಾದನೆಯಲ್ಲದೆ, ಮಗ್ಗಕ್ಕಾಗಿ ಬೇರೆ ಬೇರೆ ಬಣ್ಣ ಹಾಕಿದ ಕಚ್ಚಾರೇಷ್ಮೆ ಮತ್ತು ವಿವಿಧ ಪುಷ್ಪವಿನ್ಯಾಸಗಳನ್ನು ನೆಯ್ದು ವಸ್ತ್ರಗಳನ್ನು ಸಿದ್ಧಪಡಿಸಲಾಗುತ್ತಿತ್ತು. ಅವನ್ನು ನಾಲ್ಕೈದು ಅಡಿ ಅಗಲ ಮತ್ತು ಹನ್ನೆರಡು-ಹದಿಮೂರು ಅಡಿ ಉದ್ದದ ತುಂಡುಗಳನ್ನಾಗಿ ಮಾಡಲಾಗುತ್ತಿತ್ತು. ಅಂಥ ಪ್ರತಿಯೊಂದು ಬಟ್ಟೆಯೂ ಒಂದು ನೂರು ಚಿನ್ನದ ನಾಣ್ಯಗಳಿಗೆ ಮಾರಾಟವಾಗುತ್ತಿತ್ತು.[70] ಇದು ಭಾರತೀಯ ಸೀರೆಯ ವರ್ಣನೆ ಎನ್ನುವುದು ಸ್ಪಷ್ಟ. ಬಟ್ಟೆಯಲ್ಲದೆ, ಜಮಖಾನಗಳು, ರಜಾಯಿಗಳು, ಹಗ್ಗ, ಹಾಸಿಗೆ, ಪಟ್ಟೆಗಳು ಮತ್ತು ಇತರ ಉಪಯುಕ್ತ ವಸ್ತುಗಳನ್ನು ಹತ್ತಿಯಿಂದ ತಯಾರಿಸಲಾಗುತ್ತಿತ್ತು.

ವಿಜಯನಗರ ಸಾಮ್ರಾಜ್ಯವು ಪೂರ್ವ ಪಶ್ಚಿಮಗಳೆರಡೂ ಕಡೆ ಕರಾವಳಿಯನ್ನು ಹೊಂದಿತ್ತು. ಬೆಸ್ತ ಸಮುದಾಯಕ್ಕೆ ಸೇರಿದ ಬಹುಪಾಲು ಜನರಿಗೆ ಮೀನುಗಾರಿಕೆ ಉತ್ತಮ ಉದ್ಯೋಗವಾಗಿತ್ತು. ಕರಾವಳಿ ಹಾಗೂ ಒಳನಾಡುಗಳೆರಡೂ ಕಡೆ ಮೀನುಗಾರಿಕೆ ಅಭಿವೃದ್ಧಿ ಹೊಂದಿತ್ತು. ವಿಜಯನಗರ ಪಟ್ಟಣವು ನದಿಗಳಿಂದ ಬೃಹತ್ ಪ್ರಮಾಣದಲ್ಲಿ ಮೀನುಗಳನ್ನು ಪಡೆಯುತ್ತಿತ್ತು.[71] ಕೆರೆಕಟ್ಟೆಗಳಲ್ಲಿ ಮೀನು ಹಿಡಿಯುವ ಹಕ್ಕುಗಳನ್ನು ವ್ಯಕ್ತಿಗಳಿಗೆ ಗುತ್ತಿಗೆ ನೀಡುವ ಮೂಲಕ ಸರಕಾರಕ್ಕೆ ಆದಾಯವಿದ್ದಿತು.

## 3.5. ಉತ್ಪಾದನೆಯ ವಿಧಾನ ಮತ್ತು ಸಂದಾಯದ ವ್ಯವಸ್ಥೆ

ಪರಂಪರೆಯಿಂದ ತಮಗೆ ಬಂದ ವೃತ್ತಿ ಕೆಲಸಕಾರ್ಯಗಳಲ್ಲಿ ವೃತ್ತಿಪರ ಜಾತಿಯವರು ನಿರತರಾಗಿರುತ್ತಿದ್ದರು. ಕುಂಬಾರಿಕೆಯಾಗಲಿ ಅಥವಾ ಮರಕೆಲಸವಾಗಲಿ, ಕಲ್ಲು ಕೆಲಸವಾಗಲಿ ಅಥವಾ ಶಿಲ್ಪವಾಗಲಿ, ಮೀನುಗಾರಿಕೆಯಲಿ, ಉಪ್ಪು ತಯಾರಿಕೆಯಲಿ - ವೃತ್ತಿಯ ತಂತ್ರವಿಧಾನಗಳನ್ನು ತಂದೆಯು

ಮಗನಿಗೆ ಕಲಿಸಿಕೊಡುತ್ತಿದ್ದನು. ಕರಕುಶಲ ವೃತ್ತಿ ಸಂಘಗಳಲ್ಲಿ ಕಲಿಯುವವನು ತಾನು ಕಲೆಯನ್ನು ಕರಗತ ಮಾಡಿಕೊಂಡು ಸ್ವತಂತ್ರವಾಗಿ ವೃತ್ತಿಯಲ್ಲಿ ನೆಲೆಗೊಳ್ಳುವವರೆಗೆ ತನ್ನ ಶಿಕ್ಷಕ ಕೆಲಸಗಾರನಿಗೆ ಅಭ್ಯಾಸಿಯಾಗಿ ಕೆಲಸ ಮಾಡುತ್ತಿದ್ದನು. ಮಧ್ಯಯುಗಕ್ಕೆ ಯಂತ್ರಗಳು ಅಪರಿಚಿತವಾಗಿದ್ದುದರಿಂದ ಆ ಕಾಲದ ಉದ್ಯಮಗಳು ಅವಲಂಬಿಸಿದುದು ವೃತ್ತಿನಿರತ ವ್ಯಕ್ತಿಗಳ ಕೌಶಲವನ್ನೇ ಎಂದು ಹೇಳಬಹುದು. ಉದ್ಯಮದ ಘಟಕವು ಕುಟುಂಬವಾಗಿತ್ತು. ಕುಶಲಕೆಲಸಗಾರರು ಅಥವಾ ಕರ್ಮಿಗಳನ್ನು ಅಲ್ಪಸಂಖ್ಯೆಯಲ್ಲಿ ನೇಮಿಸಿಕೊಳ್ಳಲಾಗುತ್ತಿತ್ತು. ಹಾಗೂ ಉತ್ಪಾದನೆಯು ಸಣ್ಣ ಪ್ರಮಾಣದ್ದಾಗಿತ್ತು. ಕೆಲಸಗಾರರು ತಾವು ವಾಸಿಸುತ್ತಿದ್ದ ಪ್ರದೇಶದಲ್ಲಿ ಕಚ್ಚಾ ಸಾಮಗ್ರಿಯನ್ನು ಪಡೆದುಕೊಳ್ಳಲು ಸಾಧ್ಯವಿತ್ತು. ತುಂಬ ಅಪರೂಪವಾಗಿ ಅವರು ದೂರದ ಸ್ಥಳಗಳಿಂದ ಅವನ್ನು ಆಮದು ಮಾಡಿಕೊಳ್ಳುತ್ತಿದ್ದರು.

ಕೆಲಸಗಾರರು ಮತ್ತು ಕೂಲಿಕಾರರಿಗೆ ನಗದು ಇಲ್ಲವೇ ಪದಾರ್ಥದ ರೂಪದಲ್ಲಿ ಪಾವತಿಯನ್ನು ಮಾಡಲಾಗುತ್ತಿತ್ತು. ವ್ಯವಸಾಯದ ಕೆಲಸಕಾರ್ಯಗಳಿಗೆ ಸಂಬಂಧಿಸಿದಂತೆ ಕೂಲಿಕಾರ ತನ್ನ ಕೆಲಸಕ್ಕೆ ಪದ್ಧತಿ ನಿರ್ಧರಿಸಿದಂತೆ ಪದಾರ್ಥಗಳನ್ನು ಪಡೆಯುತ್ತಿದ್ದ ಹಾಗೂ ಅವು ಆತ ಹಾಗೂ ಆತನ ಕುಟುಂಬದ ಜೀವನ ನಿರ್ವಹಣೆಗೆ ಸಾಕಾಗುತ್ತಿದ್ದವು. ರಾಜ್ಯಾಶ್ರಯವನ್ನು ಅವಲಂಬಿಸಿದ ಕೆಲಸಗಾರರು ಹೆಚ್ಚಿನ ಸಂಖ್ಯೆಯಲ್ಲಿದ್ದು ದಿನಗೂಲಿಯನ್ನು ಪಡೆಯುತ್ತಿದ್ದರು. ಅರಸನಿಗೆ "ಕುದುರೆಗಳನ್ನು ನೋಡಿಕೊಳ್ಳುವ 1600 ಆಳುಗಳು ಮತ್ತು 300 ಕುದುರೆ ತರಬೇತಿದಾರರು ಹಾಗೂ 2000 ಕುಶಲಕರ್ಮಿಗಳು ಎಂದರೆ ಕಮ್ಮಾರರು, ಕಲ್ಲುಕುಟಿಗರು ಮತ್ತು ಬಡಗಿಗಳು ಹಾಗೂ ಬಟ್ಟೆ ತೊಳೆಯುವ ಅಗಸರು ಇದ್ದಾರೆ. ಅವನಲ್ಲಿರುವ ಮತ್ತು ಪ್ರತಿದಿನ ಕೂಲಿಪಡೆಯುವ ಜನರೆಂದರೆ ಇವರೇ; ಆತ ಅವರಿಗೆ ಅರಮನೆಯ ದ್ವಾರದಲ್ಲಿ ಅವರಿಗೆ ಕೂಲಿ ಕೊಡುತ್ತಾನೆ"[72] ಎಂದು ನ್ಯೂನಿಜ್ ತಿಳಿಸುತ್ತಾನೆ.

ವಿಜಯನಗರ ಸಾಮ್ರಾಜ್ಯದ ಆರ್ಥಿಕ ಅಭಿವೃದ್ಧಿಯು ಹೆಚ್ಚಾಗಿ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳನ್ನು ಆಧರಿಸಿತ್ತು. ರಾಜಧಾನಿಯು ವಾಣಿಜ್ಯದ ಕೇಂದ್ರವಾಗಿದ್ದು ಅಲ್ಲಿ ವಿದೇಶಗಳಿಂದ ಬಂದ ವ್ಯಾಪಾರಿಗಳು ಮತ್ತು ಸಾಮ್ರಾಜ್ಯದ ವರ್ತಕರು ಒಳ್ಳೆಯ ವ್ಯವಹಾರ ಹೊಂದಿದ್ದರು. ವಿಜಯನಗರಕ್ಕೆ ಬಾರದ ಮತ್ತು ಅರಸ ಹಾಗೂ ಆತನ ಆಸ್ಥಾನಗಳಿಂದ ಗಣ್ಯರ ಗಮನ ಸೆಳೆಯದ ಅಪರೂಪದ ಪದಾರ್ಥ ಯಾವುದೂ ಇರಲಿಲ್ಲ. ಸಾಮ್ರಾಜ್ಯದ ಉತ್ಕರ್ಷದ ದಿನಗಳಲ್ಲಿ ರಾಜಧಾನಿಗೆ ಭೇಟಿ ನೀಡಿದ ಪ್ರವಾಸಿಗಳಿಂದ ವಿಜಯನಗರದ ಸಮೃದ್ಧಿ ವೈಭವಗಳ ಲೇಖನ - ಚಿತ್ರಣ ನಮಗೆ ದೊರೆಯುತ್ತದೆಯಾದರೂ ಈ ಕಾಲಕ್ಕೆ ಸೇರಿದ ದೇಶೀಯ ಸಾಹಿತ್ಯ ಮತ್ತು ಅಸಂಖ್ಯಾತ ಶಾಸನಗಳು ದಕ್ಷಿಣ ಭಾರತದಲ್ಲಿನ ವಾಣಿಜ್ಯ ವ್ಯವಹಾರಗಳ ಬಗ್ಗೆ ವಿವರಗಳನ್ನು ನೀಡುವುದಿಲ್ಲ. ಮಾರುಕಟ್ಟೆಗೆ ತೆಗೆದುಕೊಂಡು ಹೋದ ವ್ಯಾಪಾರದ ಕೆಲವು ಪದಾರ್ಥಗಳನ್ನು ಮತ್ತು ಅವುಗಳ ಮೇಲೆ ವಿಧಿಸಿದ ಸುಂಕಗಳನ್ನು ಶಾಸನಗಳು ಉಲ್ಲೇಖಿಸುತ್ತವೆ; ಆದರೆ ವ್ಯಾಪಾರದ ವಿಧಾನಕ್ಕೆ ಸಂಬಂಧಿಸಿದ

ವಿಷಯ ಮತ್ತು ಇತರ ಅಂಶಗಳನ್ನು ಅವು ಉಲ್ಲೇಖಿಸುವುದಿಲ್ಲ. ನಾಡಿನ ಆರ್ಥಿಕ ಸ್ಥಿತಿಗತಿಗಳನ್ನು ಶ್ರೀನಾಥ ಕವಿಯು ವಿವರಿಸುತ್ತಾನೆ. ಈ ಕವಿಯು ಇಮ್ಮಡಿ ದೇವರಾಯನಿಂದ ಪೋಷಿತನಾಗಿದ್ದ ಹಾಗೂ ಅರಸನಿದ ಕನಕಾಭಿಷೇಕ ಮಾಡಿಸಿಕೊಂಡು 'ಕವಿಸಾರ್ವಭೌಮ'ನೆಂಬ ಬಿರುದಿನ ಗೌರವಕ್ಕೆ ಪಾತ್ರನಾಗಿದ್ದ.[73] ಸಂಸ್ಕೃತ, ಪ್ರಾಕೃತ ಮತ್ತು ತೆಲುಗುಗಳಲ್ಲಿ ಪ್ರಖ್ಯಾತ ವಿದ್ವಾಂಸನಾಗಿದ್ದ ಶ್ರೀನಾಥನು ರೆಡ್ಡಿ ರಾಜನಾದ ವೇಮನ ಆಶ್ರಯದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದ.[74] ಶ್ರೀನಾಥನು ತನ್ನ 'ಹರಿವಿಲಾಸಮು' ಎಂಬ ಕೃತಿಯಲ್ಲಿ ತನ್ನ ಆಶ್ರಯದಾತನು ಆ ಕಾಲದ ಆಳುವ ಅಧಿಪತಿಗೆ ಸರಬರಾಜು ಮಾಡುವುದಕ್ಕಾಗಿ ಭೂ ಮತ್ತು ಜಲಮಾರ್ಗಗಳ ಮೂಲಕ ಆಮದುಮಾಡಿಕೊಳ್ಳುತ್ತಿದ್ದ ಅಮೂಲ್ಯ ವಸ್ತುಗಳನ್ನು ಉಲ್ಲೇಖಿಸುತ್ತಾನೆ.[75] ಆತನ ಆಶ್ರಯದಾತ ವೈಶ್ಯನೆಂಬುದು ಸ್ಪಷ್ಟ.

ಮಧ್ಯಕಾಲೀನ ಯುರೋಪಿನಲ್ಲಿದ್ದಂತೆ ನಾಡಿನ ವ್ಯಾಪಾರವು ವಾಣಿಜ್ಯ ಮತ್ತು ವರ್ತಕ ಸಂಘಗಳಿಂದ ಬಹುಮಟ್ಟಿಗೆ ಪ್ರಭಾವಿತವಾಗಿತ್ತು. ಈ ವಿಷಯದ ಬಗ್ಗೆ ವೆಂಕಟರತ್ನಂ ಅವರು ಹೆಚ್ಚು ಬೆಳಕು ಬೀರುತ್ತಾರೆ.[76] "ವೃತ್ತಿಸಂಘವೊಂದರ ಗುರುತು ಮುದ್ರೆ ಎಂದರೆ ವೃತ್ತಿಯ ಏಕರೀತಿ ಹಾಗೂ ಸದಸ್ಯತ್ವದ ಸ್ವತಂತ್ರ ಆಯ್ಕೆ. ವಾಸ್ತವ ಆಚರಣೆಯಲ್ಲಿ ವೃತ್ತಿಸಂಘದ ಬಹುಪಾಲು ಸದಸ್ಯರು ಒಂದೇ ಜಾತಿ ಅಥವಾ ಉಪಜಾತಿಗೆ ಸೇರಿದವರು."[77] ಕಸಬುಗಾರರಂತೆಯೆ ವರ್ತಕರೂ ತಮ್ಮದೇ ಆದ ವೃತ್ತಿಸಂಘಗಳನ್ನು ರೂಪಿಸಿಕೊಂಡಿದ್ದರು. ವರ್ತಕ ಸಂಘವು ಸಾರಭೂತವಾಗಿ ವರ್ತಕರ ಒಂದು ಕೂಟ. ಪ್ರತಿ ಪ್ರತ್ಯೇಕ ಸಂಘದ ವ್ಯಾಪಾರಗಾರರೂ ಒಬ್ಬರ ಅಂಗಡಿಗೆ ನಿಕಟವಾಗಿ ಮತ್ತೊಬ್ಬರು ಅಂಗಡಿಗಳನ್ನು ಹೊಂದಿದ್ದರು ಹಾಗೂ ರತ್ನಾಭರಣ ವ್ಯಾಪಾರಿಗಳು ಪೇಟೆಗಳಲ್ಲಿ ಬಹಿರಂಗವಾಗಿ ಮುತ್ತು, ಮಾಣಿಕ್ಯ ಮತ್ತು ವಜ್ರ ವೈಢೂರ್ಯಗಳನ್ನು ಮಾರುತ್ತಿದ್ದರೆಂದು ಅಬ್ದುಲ್ ರಜಾಕ್ ತಿಳಿಸುತ್ತಾರೆ. ವಿಜಯನಗರದ ನಾಣ್ಯ ಚರಿತ್ರೆಯು ಕರ್ನಾಟಕದ ಇತಿಹಾಸದಲ್ಲಿಯೇ ಮುಖ್ಯವಾದ ಸ್ಥಾನ ಹೊಂದಿದೆ.

ವಿಜಯನಗರ ಸಾಮ್ರಾಜ್ಯವು ದಖನ್ನಿನ ಸಮಸ್ತ ಪ್ರಾಚೀನ ಸಾಮ್ರಾಜ್ಯಗಳ ಪರಂಪರೆಯನ್ನು ಪ್ರತಿನಿಧಿಸುವಂತಿತ್ತು. ವಿಜಯನಗರದ ರಾಜ್ಯ ಲಾಂಛನವು ವರಾಹವಾಗಿದ್ದರೂ ನಾಣ್ಯಗಳ ಮೇಲೆ ಹನುಮಾನ್, ಗರುಡ ಮತ್ತು ಆನೆಗಳ ಲಾಂಛನವನ್ನು ಮುದ್ರಿಸಿ ಚಲಾವಣೆಗೆ ತಂದಿದ್ದದು ಕಂಡುಬರುತ್ತದೆ. ಒಂದನೇ ಹರಿಹರನ ಕಾಲದ ನಾಣ್ಯಗಳ ಮೇಲೆ ಗರುಡ, ಹನುಮಾನ್‌ಗಳ ಚಿತ್ರಗಳಿರುವುದಲ್ಲದೆ ಕನ್ನಡ ಹಾಗೂ ದೇವನಾಗರಿ ಲಿಪಿಯಲ್ಲಿ 'ಶ್ರೀ ವಿರಹರಿಹರ' ಎಂಬ ಅಂಕಿತವೂ ಕಂಡುಬರುತ್ತದೆ. ಮೊದಲನೆ ಬುಕ್ಕನ ಕಾಲದ ನಾಣ್ಯಗಳ ಮೇಲೆ 'ಶ್ರೀ ವೀರ ಬುಕ್ಕರಾಯ', 'ಶ್ರೀ ವೀರ ಭೂಪತಿ ರಾಯ' ಎಂಬ ಲಿಖಿತವಿದೆ. ಎರಡನೇ ಹರಿಹರನ ಕಾಲದ ಚಿನ್ನದ ಅರ್ಧವರಹಗಳು, ೨೬-೪ ಗ್ರೆಯ್ನ್ ತೂಕದವಾಗಿವೆ. ನಾಣ್ಯದ ಮೇಲ್ಮುಖದಲ್ಲಿ ಶಿವ, ಪಾರ್ವತಿ, ಲಕ್ಷ್ಮೀ, ನಾರಾಯಣ, ಸರಸ್ವತೀ, ಬ್ರಹ್ಮ ಮತ್ತು ಲಕ್ಷ್ಮೀ ನರಸಿಂಹ, ಇವರ ಚಿತ್ರಗಳಿರುವುದು

ಕಂಡುಬರುತ್ತದೆ. ಇದರ ಇನ್ನೊಂದು ಮುಖದ ಮೇಲೆ 'ಶ್ರೀ ಪ್ರತಾಪ ಹರಿಹರ' ಎಂದು ನಾಗರಿ ಲಿಪಿಯಲ್ಲಿ ಕೆತ್ತಲಾಗಿರುವುದು ಕಂಡುಬರುತ್ತದೆ. ತಾಮ್ರದ ನಾಣ್ಯವು ೮/೧ ವರಹವು ತೂಕದಲ್ಲಿ ೬ ಗ್ರೆಯ್ನ್ ಇದ್ದು ಅದರ ಮೇಲೆ ನಂದಿಶೂಲಗಳ ಚಿತ್ರವಿದ್ದು, 'ಪ್ರತಾಪ ಹರಿಹರ' ಎಂಬ ಅಂಕಿತವಿದೆ. ಅವುಗಳ ಮೇಲೆ ಹಿಂದೂ ಧರ್ಮದ ದೇವತೆಗಳಾದ ವಿಷ್ಣು-ಲಕ್ಷ್ಮೀ ಚಿತ್ರಗಳು ಮತ್ತು ನಾಗರಿ ಲಿಪಿಯಲ್ಲಿ ಶ್ರೀ ಪ್ರತಾಪ ದೇವರಾಯ ಎಂಬ ಅಂಕಿತ ಇರುವುದು ಕಂಡುಬರುತ್ತದೆ.[78]

ಎರಡನೆ ದೇವರಾಯನ ಕಾಲದಲ್ಲಿ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಅಬ್ದುಲ್ ರಜಾಕ್‌ನು ಈ ಸಾಮ್ರಾಜ್ಯದಲ್ಲಿ ಮೂರು ತರಹದ ನಾಣ್ಯಗಳಿವೆ ಎಂದು ವಿವರಿಸಿದ್ದಾನೆ. ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು. (ಪಗೋಡಾ, ಕಾರ ಮತ್ತು ಜಿತಲ್) ರಜಾಕ್ ಇನ್ನೂ ಮುಂದುವರೆದು ನಾಣ್ಯಗಳನ್ನು ತಯಾರಿಸಲು ಚಿನ್ನ, ಬೆಳ್ಳಿ, ತಾಮ್ರವನ್ನು ಒಟ್ಟಿಗೆ ಬೆರೆಸಿ ತಯಾರಿಸುತ್ತಿದ್ದರೆಂದೂ ಹೇಳುತ್ತಾನೆ. ಸಾಹಿತ್ಯ ಕೃತಿಗಳಲ್ಲಿ ಗದ್ಯಾಣ[79], ಪಣ[80], ಹಾಗ[81], ವೀಸ[82], ಅಡ್ಡ[83], ದುಡ್ಡು ಮೊದಲಾದ ನಾಣ್ಯಗಳ ಹೆಸರುಗಳು ಕಂಡುಬರುತ್ತವೆ.

ಸಾಳುವರ ಕಾಲದ ನಾಣ್ಯಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಕೃಷ್ಣದೇವರಾಯನ ಕಾಲದ ಚಿನ್ನದ ವರಹಗಳು ೫೨ ಗ್ರೇನ್ ತೂಕವಿದ್ದು ನಂದಿ, ದುರ್ಗಾ, ವರಾಹ, ಶಂಖ ಮತ್ತು ಚಕ್ರಗಳ ಚಿತ್ರಗಳನ್ನು ಮುದ್ರಿಸಲಾಗುತ್ತಿತ್ತೆಂದು ಕಂಡುಬರುತ್ತದೆ. ನಾಗರಿ ಲಿಪಿಯಲ್ಲಿ "ಶ್ರೀ ಪ್ರತಾಪಕೃಷ್ಣರಾಯ" ಎಂಬ ಲಿಖಿತವನ್ನು ಹೊಂದಿರುವುದಲ್ಲದೆ ಅರ್ಧ ಮತ್ತು ಕಾಲುವರಹಗಳ ಮೇಲೆ ಬಾಲಕೃಷ್ಣನ ಚಿತ್ರವಿದೆ.[84] ಚಿನ್ನದ ನಾಣ್ಯಗಳ ಕುರಿತು ಸಾಹಿತ್ಯ ಕೃತಿಗಳಲ್ಲೂ ಪ್ರಸ್ತಾಪ ಮಾಡಿರುವುದು ಕಂಡುಬರುತ್ತದೆ. ರಾಜಧಾನಿ ಮಾರುಕಟ್ಟೆಗಳಲ್ಲಿ ನಡೆಯುತ್ತಿದ್ದ ವ್ಯಾಪಾರದ ವಿಧಿ ವಿಧಾನಗಳನ್ನು ವರ್ಣಿಸುವ ಸಂದರ್ಭದಲ್ಲಿ ಕನಕದಾಸರು "ಚಪ್ಪನ್ನ ದೇಶದ ನಾಣೆಯಂಗಳ ನೋಟ ತಪ್ಪದ ಚಪಲ ಸೆಟ್ಟಿಗಳು ಬಪ್ಪವಡೆದು ಕುಳಿತಿರ್ದರು ಹಣ ಹೊನ್ನಕುಪ್ಪೆಯ ಮುಂದಿಟ್ಟುಕೊಂಡು" ಎಂಬ ಮಾತಿನ ಅರ್ಥವನ್ನು ಇಲ್ಲಿ ಸ್ಮರಿಸಬಹುದು.[85] ವಿದೇಶಿ ಪ್ರವಾಸಿಗರು ಹಾಗೂ ದೇಶಿಯ ಆಧಾರಗಳು ತಿಳಿಸುವ ಹಾಗೆ ಹಣದ ಹೊನ್ನರಾಶಿಯನ್ನು ಸುರಿದುಕೊಂಡು ಮಾರುಕಟ್ಟೆಗಳಲ್ಲಿ ವ್ಯಾಪಾರಿಗಳು ಕುಳಿತಿದ್ದರೆಂದು ಹೇಳಿರುವುದರಿಂದ ಅಂದಿನ ಚಿನ್ನದ ನಾಣ್ಯಗಳ ಚಲಾವಣೆಯು ಯಾವ ಪ್ರಮಾಣದಲ್ಲಿತ್ತೆಂಬುದನ್ನು ಊಹಿಸಬಹುದಾಗಿದೆ.

## 3.6. ಕೈಗಾರಿಕೆಗಳು ಹಾಗೂ ಕರಕುಶಲ ಕಸುಬುಗಳು

ಸಾಂಪ್ರದಾಯಿಕ ಕೈಗಾರಿಕೆಗಳು ಮತ್ತು ಬೃಹತ್ ಕೈಗಾರಿಕೆಗಳು

ವಿಜಯನಗರ ಕಾಲದಲ್ಲಿನ ಕೈಗಾರಿಕೆಗಳ ಬೆಳವಣಿಗೆಯ ಪರ್ವ ಕಾಲವೆಂದರೆ ತಪ್ಪಾಗಲಾರದು. ಕನ್ನಡಿಗರ ಹೃದಯದಂತಿದ್ದ ಈ ಸಾಮ್ರಾಜ್ಯವು ಸಾಮಾಜಿಕ, ಸಾಂಪ್ರದಾಯಿಕ ಬದುಕಿನಿಂದ ಎಲ್ಲಾ ರಂಗಗಳಲ್ಲೂ ಉತ್ತಮ ರೀತಿಯಲ್ಲಿಯೇ ಸಾಗಿ ಹೊಸ ಹೊಸ ವಸ್ತುಗಳನ್ನು ಉತ್ಪಾದಿಸುವ ಯೋಗದ ಕಾಲವಾಗಿತ್ತು. ಪೋರ್ಚುಗೀಸರ

ನಿಕಟ ಸಂಪರ್ಕವೂ ಈ ಕಾಲದಲ್ಲಿ ಉಂಟಾಯಿತು. ವಿಜಯನಗರದ ಕೈಗಾರಿಕೆಗಳು ಮಾನವ ಸಂಸ್ಕೃತಿಯ ಹಾಗೂ ವಾಣಿಜ್ಯ ವ್ಯಾಪಾರಗಳ ಅನೇಕ ಬದಲಾವಣೆಗಳಿಗೆ ಅಂದಿನಿಂದಲೇ ಎಡೆಮಾಡಿಕೊಟ್ಟಿತ್ತೆಂದು ಹೇಳಬಹುದಾಗಿದೆ.

ಭೂಕಂದಾಯದ ನಂತರ ಸಾಮ್ರಾಜ್ಯದಲ್ಲಿ ಬೊಕ್ಕಸಕ್ಕೆ ಎರಡು ಆಕರಗಳಿಂದ ಹೆಚ್ಚಿನ ಆದಾಯ ಬರುತ್ತಿತ್ತು. ೧. ಗೃಹ ಕೈಗಾರಿಕೆ ಮತ್ತು ಕೈಕಸಬುಗಳ ಮೇಲೆ ಹಾಕುತ್ತಿದ್ದ ತೆರಿಗೆ, ೨. ವ್ಯಾಪಾರ ನಾಣ್ಯಗಳ ಮೇಲೆ ಹಾಕುತ್ತಿದ್ದ ತೆರಿಗೆ, ಹಾಗೂ ಆಮದು ರಫ್ತು ಸುಂಕ. ಮೇಲಿನದನ್ನು ಗಮನಿಸಿದರೆ ವಿಜಯನಗರ ಸಾಮ್ರಾಜ್ಯವು ಕೃಷಿಯ ಜೊತೆಗೆ ಕೈಗಾರಿಕೆ ಹಾಗೂ ವ್ಯಾಪಾರವನ್ನು ಎಷ್ಟರ ಮಟ್ಟಿಗೆ ಅವಲಂಬಿತವಾಗಿತ್ತೆಂಬುದನ್ನು ತಿಳಿಸುತ್ತದೆ.

ಯಾವುದೇ ಕೈಗಾರಿಕೆಯ ಬೆಳವಣಿಗೆಯಾಗಬೇಕಾದರೆ ಪ್ರಮುಖವಾಗಿ ಕಚ್ಚಾ ವಸ್ತುಗಳು ಅತ್ಯಗತ್ಯ. ಈ ದೃಷ್ಟಿಯಲ್ಲಿ ಸಾಮ್ರಾಜ್ಯದ ಕೈಗಾರಿಕೆಗಳು ಬೆಳೆಯಲು ಸಹಾಯಕವಾಗುವ ಹೆಚ್ಚು ಕಡಿಮೆ ಎಲ್ಲಾ ಉತ್ಪನ್ನಗಳು ದೊರೆಯುತ್ತಿದ್ದವು ಎಂದು ಕಂಡುಬರುತ್ತದೆ. ಪ್ರತಿ ವರ್ಷವೂ ಸಾಮ್ರಾಜ್ಯದಲ್ಲಿ ಸಾಕಷ್ಟು ಮೌಲ್ಯದ ಕೃಷಿ ಮೂಲದ ಕಚ್ಚಾ ವಸ್ತುಗಳು ಉತ್ಪನ್ನವಾಗುತ್ತಿದ್ದವು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಹತ್ತಿ, ಎಣ್ಣೆ ಬೀಜಗಳು, ಹಿಪ್ಪುನೇರಳೆ, ಕಬ್ಬು ಇತ್ಯಾದಿಗಳಾಗಿದ್ದವು. ಇವುಗಳಲ್ಲಿ ಹತ್ತಿ, ಉಣ್ಣೆ, ರೇಷ್ಮೆ ಮತ್ತು ಇತರ ದಾರಗಳು ಬಟ್ಟೆ ತಯಾರಿಸುವ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳಾಗಿದ್ದವು. ಹೆಚ್ಚು ಮೌಲ್ಯವುಳ್ಳ ಅರಣ್ಯದ ಉತ್ಪನ್ನಗಳೂ ಸಹ ದೊರೆಯುತ್ತಿದ್ದವು. ಮೈಸೂರು ಪ್ರಾಂತ್ಯದ ಶ್ರೀಗಂಧ ವಿಶ್ವವಿಖ್ಯಾತವಾಗಿದ್ದಿತು. ಹೊನ್ನೆ, ಬೀಟೆ ಮತ್ತು ತೇಗದ ಮರಗಳು ಮರಗೆಲಸಕ್ಕೆ ಉಪಯೋಗವಾಗುತ್ತಿದ್ದವು. ಚರ್ಮವನ್ನು ಹದಮಾಡುವ ತೊಗಟೆಯನ್ನು ಕಾಡಿನಿಂದಲೇ ತರುತ್ತಿದ್ದರು. ಅಂಟು, ಸೀಗೆ, ಬೊಂಬುಗಳು ಕಾಡಿನ ಉತ್ಪನ್ನಗಳಾಗಿದ್ದು, ಕೈಗಾರಿಕೆ ಹಾಗೂ ವ್ಯಾಪಾರಗಳಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿದ್ದವು. ಸಾಮ್ರಾಜ್ಯದಾದ್ಯಂತ ಅದರಲ್ಲಿಯೂ ರಾಜಧಾನಿಯ ಸುತ್ತಮುತ್ತಲು ಹೆಚ್ಚಿನ ಕಬ್ಬಿಣದ ಅದಿರು ದೊರೆಯುವ ನಿಕ್ಷೇಪಗಳಿದ್ದವು.

ಸಾಮ್ರಾಜ್ಯದ ಪ್ರಮುಖ ಕೈಗಾರಿಕೆ ಎಂದರೆ ಕೈಮಗ್ಗದಿಂದ ಬಟ್ಟೆ ತಯಾರಿಸುವುದೇ ಆಗಿತ್ತು. ಇದನ್ನು ಬಿಟ್ಟರೆ ರೇಷ್ಮೆದಾರದ ಉತ್ಪನ್ನ, ಲೋಹದ ವಸ್ತುಗಳ ತಯಾರಿಕೆ, ಮಡಿಕೆ ಕುಡಿಕೆ ತಯಾರಿಕೆ, ಬಡಗಿ ಕೆಲಸ, ಚರ್ಮ ಹದ ಮಾಡುವ ಕೈಗಾರಿಕೆ, ಬೆಲ್ಲದ ತಯಾರಿಕೆ, ಎಣ್ಣೆ ತಯಾರಿಕೆ, ಉಪ್ಪನ್ನು ತಯಾರಿಸುವುದು ಮೊದಲಾದವುಗಳು ಸಾಮ್ರಾಜ್ಯದ ಎಲ್ಲಾ ಕಡೆ ಸಾಮಾನ್ಯವಾಗಿ ಹರಡಿಕೊಂಡಿದ್ದ ಕರಕುಶಲ ಕಸುಬುಗಳಾಗಿದ್ದವು. ಇವುಗಳಲ್ಲಿ ಅನೇಕ ಸಣ್ಣ ಪುಟ್ಟ ಕೈಗಾರಿಕೆಗಳು ಪ್ರಮುಖ ದ್ರವ್ಯಗಳ ತಯಾರಿಕೆ, ಕರಕುಶಲ ಕಲೆಗಳ ತಯಾರಿಕೆಯಲ್ಲಿ ಪ್ರಸಿದ್ಧವಾಗಿದ್ದವು.[86]

ಅಂದು ಕೃಷಿಯನ್ನು ಬಿಟ್ಟರೆ ಕೈಮಗ್ಗದಿಂದ ಬಟ್ಟೆಯನ್ನು ತಯಾರಿಸುವುದು ಪ್ರಮುಖ ಕೈಗಾರಿಕೆಯಾಗಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಸ್ತ್ರೀಯರು ಈ ಕೈಗಾರಿಕೆಯಲ್ಲಿ ತೊಡಗಿರುತ್ತಿದ್ದರು. ಚರಕಕ್ಕೆ

ದಾರ ಸಿದ್ಧವಾಗುವುದಕ್ಕಿಂತ ಮುಂಚೆ ಹತ್ತಿಯನ್ನು ಶುದ್ಧಗೊಳಿಸುವ ಮತ್ತು ಬೀಜ ತೆಗೆಯುವ ಕೆಲಸ ನಡೆಯಬೇಕಿತ್ತು. ಇದಕ್ಕೋಸ್ಕರ 'ಧುನ್' (ಬಿಲ್ಲಿನಾಕಾರದ ಸಾಧನ) ಎನ್ನುವ ಒಂದು ಸಾಧನವನ್ನು ಬಳಸುತ್ತಿದ್ದರು. ಅರಳೆಯನ್ನು ಶುದ್ಧಗೊಳಿಸಿದ ನಂತರ ಅವುಗಳನ್ನು ಕೈಗಾತ್ರದ ಉಂಡೆಗಳನ್ನಾಗಿ ಮಾಡಿಕೊಂಡು ನಂತರ ಚರಕಕ್ಕೆ ಸಿದ್ಧವಾಗುತ್ತಿದ್ದರು. ಕೈಮಗ್ಗಗಳಿಂದ ತಯಾರಾದ ಬಟ್ಟೆಗಳನ್ನು ಸೀರೆ, ಕಿರಿಗೆ, ಕಣ ಎಂದು ಕರೆಯುತ್ತಿದ್ದರು.[87]

ವಿದೇಶಿ ಸಾಹಿತಿಗಳು ಅಂದಿನ ಬಟ್ಟೆ ಕೈಗಾರಿಕೆಯ ಬಗ್ಗೆ ಹೇಳುವ ಮಾತೆಂದರೆ "ಸಾಮ್ರಾಜ್ಯದಲ್ಲಿ ನೇಕಾರರು ತಯಾರಿಸಿದ ಬಟ್ಟೆಗಳು ಸ್ಥಳೀಯ ಬೇಡಿಕೆಯನ್ನು ಪೂರೈಸುವುದರ ಜೊತೆಗೆ ದೇಶ ವಿದೇಶಗಳ ಮಾರುಕಟ್ಟೆಯ ಬೇಡಿಕೆಗಳನ್ನು ಪೂರೈಸುತ್ತಿದ್ದರು. ಸ್ಥಳೀಯರಿಗಾಗಿ ಅವರು ಒರಟು ಬಟ್ಟೆಗಳನ್ನು ತಯಾರಿಸಿ ಅವುಗಳನ್ನು ಸಂತೆ ಹಾಗೂ ಜಾತ್ರೆಗಳಲ್ಲಿ ಮಾರಾಟ ಮಾಡುತ್ತಿದ್ದರು. ಉತ್ತಮ ಮಟ್ಟದ ನಯವಾದ ಬಟ್ಟೆಗಳನ್ನು ವ್ಯಾಪಾರಿಗಳು ಸಂತೆಗಳಲ್ಲೆ ಕೊಂಡುಕೊಂಡು ರಫ್ತು ಮಾಡುತ್ತಿದ್ದರು. ಬಟ್ಟೆಯನ್ನು ತಯಾರಿಸಲು ಬೇಕಾದ ದಾರವನ್ನು ಖರೀದಿಸಲು ವರ್ತಕರು ನೇಕಾರರಿಗೆ ಮುಂಗಡ ಹಣವನ್ನು ಕೊಡುತ್ತಿದ್ದರು." ಎಂದು ಸುದೀರ್ಘವಾಗಿ ವಿವರಿಸಿರುವುದು ಅಂದಿನ ಕೈಮಗ್ಗದ ಅಭಿವೃದ್ಧಿಯನ್ನು ಸೂಚಿಸುತ್ತದೆ. ಅಂದು ಹತ್ತಿಯನ್ನು ಹೆಚ್ಚಾಗಿ ರಾಯಚೂರು ಮತ್ತು ಬಳ್ಳಾರಿಯಲ್ಲಿ ಬೆಳೆಯಲಾಗುತ್ತಿತ್ತು.

ಉಣ್ಣೆ ಬಟ್ಟೆ ತಯಾರಿಕೆ : ವಿಜಯನಗರದ ಅರಸರ ಕಾಲದಲ್ಲಿ ಉಣ್ಣೆ ತಯಾರಿಕೆಯು ಒಂದು ಪ್ರಧಾನ ಉದ್ದಿಮೆಯಾಗಿತ್ತು. ಸಾಮ್ರಾಜ್ಯದ ಎಲ್ಲಾ ಕೇಂದ್ರಗಳಲ್ಲಿಯೂ ಈ ಉದ್ದಿಮೆಗಳು ಇದ್ದದು ಕಂಡುಬರುತ್ತದೆ. ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಕೋಲಾರ ವಿಭಾಗಗಳು ಹೆಚ್ಚಾಗಿ ಉಣ್ಣೆ ತಯಾರಿಸುವ ಕೇಂದ್ರಗಳಾಗಿದ್ದವು. ವರ್ಷಕ್ಕೆ ಎರಡು ಬಾರಿ ಕುರಿಯಿಂದ ಉಣ್ಣೆಯನ್ನು ಕತ್ತರಿಸುತ್ತಿದ್ದರು. ಚಳಿಗಾಲಕ್ಕೆ ಕೀಳುವ ಉಣ್ಣಗೆ "ಮಗೆಕೊಣ್ಣೆ" ಎಂದು ಮಳೆಗಾಲಕ್ಕೆ ಮುಂಚೆ ಕೀಳುವ ಉಣ್ಣೆಗೆ "ಕರೆಕೊಣ್ಣೆ" ಎಂತಲೂ ಕರೆಯಲಾಗುತ್ತಿದ್ದಿತು. ಉಣ್ಣೆ ಕೀಳುವುದಕ್ಕಿಂತ ಮುಂಚೆ ಕುರಿಯನ್ನು ಚೆನ್ನಾಗಿ ಉಜ್ಜಿ, ತೊಳೆಯುತ್ತಿದ್ದರು. ಕತ್ತರಿಸಿದ ಉಣ್ಣೆಯನ್ನು ಕೈ ಬೆರಳುಗಳಿಂದ ಬಿಡಿಸಿ ಅನಂತರ ಬಡಿದು ಬಿಸಿಲಿನಲ್ಲಿ ಹರಡುತ್ತಿದ್ದರು. ಅನಂತರ ಹೆಣೆಯಲು ಅನುಕೂಲವಾಗುವಂತೆ ಸಣ್ಣ ಸಣ್ಣ ಕೈ ಉಂಡೆಗಳನ್ನಾಗಿ ಮಾಡುತ್ತಿದ್ದರು. ಈ ಕೆಲಸಗಳನ್ನೆಲ್ಲಾ ಸಾಮಾನ್ಯವಾಗಿ ಸ್ತ್ರೀಯರು ಹೆಚ್ಚಾಗಿ ಮಾಡುತ್ತಿದ್ದರು. ಉಣ್ಣೆಯಿಂದ ತಯಾರಿಸುತ್ತಿದ್ದ ವಸ್ತುಗಳಲ್ಲಿ ಕಂಬಳಿಗಳು ಮುಖ್ಯವಾಗಿದ್ದವು. ಮೈಸೂರು, ಮಂಡ್ಯ, ಹುಣಸೂರು, ಕೊಪ್ಪಳ, ಬಳ್ಳಾರಿ, ಸಿಂಧನೂರು, ಸಿರಗುಪ್ಪ, ರಾಯಚೂರು ಕಂಬಳಿಗಳನ್ನು ತಯಾರಿಸುವ ಕೇಂದ್ರಗಳಾಗಿದ್ದವು. ಅಂದಿನ ಕಾಲದಲ್ಲಿ ಜನಸಾಮಾನ್ಯರ ಪ್ರಮುಖವಾದ ವಸ್ತ್ರ ಇದಾಗಿತ್ತು.[88]

**(ಅ) ಲೋಹ ವಸ್ತುಗಳ ಕೈಗಾರಿಕೆ :** ಸಾಮ್ರಾಜ್ಯದ ಮತ್ತೊಂದು ಪ್ರಸಿದ್ಧವಾದ ಲೋಹ, ಮರ ಮತ್ತು ಶಿಲ್ಪ ವಸ್ತುಗಳ ತಯಾರಿಕೆಯ ವಿಚಾರವನ್ನು ಪರಿಶೀಲಿಸುವುದಾದರೆ, ಅಂದು ಬಟ್ಟೆ ತಯಾರಿಸುವ ಕೈಗಾರಿಕೆಗಳನ್ನು

ಬಿಟ್ಟರೆ ಇದು ಎರಡನೆಯ ಪ್ರಧಾನ ಸ್ಥಾನವನ್ನು ಹೊಂದಿತ್ತು. ಸಾಮ್ರಾಜ್ಯದ ಪ್ರತಿಯೊಂದು ದೊಡ್ಡ ಗ್ರಾಮ ಹಾಗೂ ಪಟ್ಟಣಗಳಲ್ಲಿಯೂ ಸ್ಥಳೀಯರೇ ಆಗಿದ್ದ ಚಿನಿವಾರರು ಮತ್ತು ಕಮ್ಮಾರರು ಇರುತ್ತಿದ್ದರು.[89] ಎಷ್ಟು ಜನ ಈ ಕೈಗಾರಿಕೆಗಳಲ್ಲಿ ನಿರತರಾಗಿದ್ದರು ಮತ್ತು ಇವರು ತಯಾರಿಸುತ್ತಿದ್ದ ವಸ್ತುಗಳ ಒಟ್ಟು ಮೌಲ್ಯವೆಷ್ಟು ಎಂಬ ಬಗೆಗೆ ಖಚಿತವಾಗಿ ಹೇಳಲು ಆಧಾರಗಳು ದೊರೆತಿಲ್ಲ. ಹೆಚ್ಚಾಗಿ ಕುಶಲ ಕರ್ಮಿಗಳು ಚಿನ್ನ ಮತ್ತು ಬೆಳ್ಳಿಯನ್ನು ಆಭರಣಗಳ ತಯಾರಿಕೆಯಲ್ಲಿ ಬಳಸುತ್ತಿದ್ದರು. ಅಂದು ಸಮಾಜದ ಎಲ್ಲ ವರ್ಗಗಳಿಂದಲೂ ಚಿನ್ನ, ಬೆಳ್ಳಿ ಆಭರಣಗಳಿಗೆ ಅಪಾರವಾದ ಬೇಡಿಕೆ ಇತ್ತು. ಪೇಟೆಗಳಲ್ಲಿಯೂ ಚಿನ್ನ ಮತ್ತು ಬೆಳ್ಳಿ ಗಟ್ಟಿಗಳ ವ್ಯಾಪಾರವಿದ್ದಿತು.

ಚಿನಿವಾರರು ಸಾಮಾನ್ಯವಾಗಿ ಬಡವರಾಗಿರುತ್ತಿದ್ದರು. ಚಿನ್ನವನ್ನು ಕರಗಿಸಲು ಸುತ್ತಿಗೆ, ಊದು ಕೊಳವೆ, ಚಿಮುಟ ಮತ್ತು ಮುದ್ರೆಗಳು, ಮೂಸೆ, ಕತ್ತರಿ, ತಕ್ಕಡಿ, ಬ್ರಷ್ ಮೊದಲಾದ ಉಪಕರಣಗಳನ್ನು ಉಪಯೋಗಿಸುತ್ತಿದ್ದರು. ಅಂದು ತಯಾರಾಗುತ್ತಿದ್ದ ಚಿನ್ನ ಹಾಗೂ ಬೆಳ್ಳಿಯ ಆಭರಣಗಳೆಂದರೆ,

ಅ. ರಾಗಟೆ - ಉರುಟಾದ ಆಭರಣ - ಸ್ತ್ರೀಯರು ತಲೆಯಲ್ಲಿ ಧರಿಸುತ್ತಿದ್ದರು.

ಆ. ಕ್ಯಾದಿಗೆ - ಅರ್ಧಚಂದ್ರಾಕಾರದ್ದು - ತಲೆಯ ಹಿಂದೆ ಧರಿಸುತ್ತಿದ್ದರು.

ಇ. ಜೆಡೆಬಿಲ್ಲೆ - ಚಿಕ್ಕ ಪ್ರಮಾಣದ ಜಡೆಯಲ್ಲಿ ಧರಿಸುತ್ತಿದ್ದರು.

ಈ. ಚೌರಿಕುಪ್ಪ - ಅಲಂಕೃತವಾದ ತಲೆ ಪಿನ್ನುಗಳು.

ಉ. ಓಲೆ - ಕಿವಿ ಆಭರಣ

ಊ. ಬಾವಲಿ - ಕಿವಿ ಆಭರಣ

ಋ. ಅಡ್ಡಿಕೆ - ಕತ್ತಿನ ಸರ

ೠ. ಕಂಕಣ - ಬಳೆಗಳು

ಎ. ಪದಕ - ಹಣೆಯ ಮೇಲೆ ಧರಿಸುವ ಆಭರಣ

ಏ. ವಂಕಿ - ತೋಳು ತಾಯಿತಿ, ಬಂದಿ, ಮೊಣಕೈ ಮೇಲೆ ಧರಿಸುತ್ತಿದ್ದ ಆಭರಣ

ಐ. ಬಾಬು ಬಂದಿ - ತೋಳಿನ ಆಭರಣ

ಒ. ಡಾಬು - ಸೊಂಟಕ್ಕೆ ಧರಿಸುತ್ತಿದ್ದ ಆಭರಣ

ಓ. ಕಾಲುಗೆಜ್ಜೆ - ಕಾಲಿಗೆ ಹಾಕಿಕೊಳ್ಳುತ್ತಿದ್ದ ಆಭರಣ

ಔ. ಪಿಲ್ಲಿ - ಬೆಳ್ಳಿಯ ಕಾಲುಂಗುರ

ಅಂ. ಉಡುದಾರ - ಪುರುಷರು ಸೊಂಟಕ್ಕೆ ಹಾಕಿಕೊಳ್ಳುವ ಬೆಳ್ಳಿ ಹಾಗೂ ಚಿನ್ನದ ಆಭರಣ

ಅಃ. ತಾಯಿತ - ಬೆಳ್ಳಿಯ ಸಣ್ಣ ಪೆಟ್ಟಿಗೆ, ಕತ್ತು ಅಥವಾ ಸೊಂಟಕ್ಕೆ ಹಾಕಿಕೊಳ್ಳುತ್ತಿದ್ದ ಆಭರಣ, ಮೇಲಿನ ಎಲ್ಲ ಆಭರಣಗಳನ್ನು ಒಬ್ಬ ಸ್ತ್ರೀಯು ಹೊಂದಿರುವ ಶಿಲ್ಪಗಳು ಹಂಪಿಯ ಹಜಾರರಾಮ ದೇವಾಲಯದ ಗೋಡೆಯ ಮೇಲಿನ ಉಬ್ಬು ಚಿತ್ರಗಳಲ್ಲಿ ಕಾಣಬಹುದಾಗಿದೆ.[90]

ವಿಜಯನಗರದ ರಾಜಧಾನಿಯ ಸುತ್ತಮುತ್ತ ಕಬ್ಬಿಣದ ಅದಿರು ಸಿಗುತ್ತಿತ್ತು. ಅಂದಿನ ಎಲ್ಲಾ ಬೇಡಿಕೆಗಳನ್ನು ಪೂರೈಸಲು ಇದು ಸಾಕಾಗುವಷ್ಟಿತ್ತೆನ್ನಬಹುದು. ಹಿಂದಿನಿಂದಲೂ ಕಬ್ಬಿಣದ ಅದಿರನ್ನು ಕರಗಿಸಿ ಕಬ್ಬಿಣ ತಯಾರಿಸುವ ಕೈಗಾರಿಕೆಗಳು ಸ್ಥಾಪನೆಯಾಗಿದ್ದವು. ಇದಕ್ಕಾಗಿಯೇ ಸ್ಥಳೀಯರಲ್ಲಿ ಸ್ಥಳೀಯವಾದ ಪದ್ಧತಿಯು ರೂಪುಗೊಂಡಿತ್ತು. ಈ ವೃತ್ತಿಯಲ್ಲಿ ತೊಡಗಿಸಿಕೊಂಡವರನ್ನು ಕಮ್ಮಾರರೆನ್ನುತ್ತಿದ್ದರು.[91]

ಪ್ರತಿಯೊಂದು ಹಳ್ಳಿಯಲ್ಲಿಯೂ ಒಬ್ಬ ಕಮ್ಮಾರನಿರುತ್ತಿದ್ದ, ಇವನು ಸಾಮಾನ್ಯವಾಗಿ ತನ್ನ ಮನೆಯಲ್ಲಿ ಅಥವಾ ಮನೆಯ ಹತ್ತಿರವೇ ಕಬ್ಬಿಣದ ಕೆಲಸವನ್ನು ನಿರ್ವಹಿಸುತ್ತಿದ್ದ. ಹೆಚ್ಚಾಗಿ ಕಮ್ಮಾರರು ಕೃಷಿಯ ಉತ್ಪನ್ನಗಳಾಗಿದ್ದ ನೇಗಿಲು, ಕುಡುಗೋಲು, ಕೊಡಲಿ ಮತ್ತು ಗಾಡಿಯ ಉಪಕರಣಗಳನ್ನು ಸಿದ್ಧಪಡಿಸುತ್ತಿದ್ದರು. ಅದೇ ರೀತಿ ಗೃಹೋಪಯೋಗಿ ವಸ್ತುಗಳಾದ ಬಾಣಲೆ, ಸೌಟುಗಳು, ಕೊಡಗಳು, ಪಾತ್ರೆಗಳನ್ನು ತಯಾರಿಸುತ್ತಿದ್ದರು. ಸಾಮಾನ್ಯವಾಗಿ ಹಿತ್ತಾಳೆ ಮತ್ತು ತಾಮ್ರವನ್ನು ಅಡಿಗೆ ಪಾತ್ರೆಗಳನ್ನು ಮತ್ತು ಕುಡಿಯುವ ನೀರಿನ ಪಾತ್ರೆಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದರು. ಈ ಲೋಹಗಳನ್ನು ಬಳಸಿ ವಸ್ತುಗಳನ್ನು ತಯಾರಿಸುವ ಕುಶಲ ಕರ್ಮಿಗಳನ್ನು ಹಾಗೂ ಮನೆಯಲ್ಲಿ ಉಪಯೋಗಿಸುವ ಜನರುಗಳನ್ನು ಶ್ರೀಮಂತರೆಂದು ಕರೆಯುತ್ತಿದ್ದರು. ಸಾಮಾನ್ಯ ಜನರು ಪ್ರತಿಯೊಂದಕ್ಕೂ ಮಣ್ಣಿನ ಕುಡಿಕೆ ಇನ್ನಿತರ ವಸ್ತುಗಳನ್ನೇ ಬಳಸುತ್ತಿದ್ದದ್ದು ಕಂಡುಬರುತ್ತದೆ.[92]

ಮರಗೆಲಸ ಮಾಡುವವರನ್ನು ಬಡಗಿಗಳೆಂದು ಕರೆಯುತ್ತಿದ್ದರು. ಇವರು ಕೃಷಿಗೆ ಅವಶ್ಯಕವಾದ, ರೈತರು ಜೀವನಕ್ಕೆ ಆಧಾರವಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಇದರ ಜೊತೆಗೆ ಕಟ್ಟಡಗಳ ರಚನೆಗೆ ಬೇಕಾಗುವ ಸಾಮಗ್ರಿಗಳು, ಅರಮನೆ, ಗುರುಮನೆಗೆ ಸುಂದರವಾದ ಕೆತ್ತನೆಯ ಮರಗೆಲಸವನ್ನು ಒದಗಿಸುತ್ತಿದ್ದರು. ಎತ್ತಿನಗಾಡಿಗಳ ತಯಾರಿಕೆಯಲ್ಲಿ ಹೆಚ್ಚಾಗಿ ತೊಡಗಿರುತ್ತಿದ್ದರು. ನೇಗಿಲು, ಗುದ್ದಲಿಗಳ ತಯಾರಿಕೆಯು ಇವರ ಪ್ರಮುಖ ಕೆಲಸಗಳಾಗಿದ್ದವು.

ಮರಗೆಲಸದ ಕುಸುರಿ ಕೆಲಸಕ್ಕೆ ಹೆಚ್ಚಿನ ಮಹತ್ವ ನೀಡಲಾಗಿತ್ತು. ಮೈಸೂರು ಪ್ರಾಂತ್ಯದಲ್ಲಿ ಹೇರಳವಾಗಿ ಸಿಗುತ್ತಿದ್ದ ಶ್ರೀಗಂಧದ ಮರದಲ್ಲಿ ಸುಂದರವಾದ ದೇವತೆಯರ ಕೆತ್ತನೆ ನಡೆಯುತ್ತಿತ್ತು. ಮರದಲ್ಲಿಯೇ ಅನೇಕ ಪ್ರಾಣಿ, ಪಕ್ಷಿಗಳ ಚಿತ್ರವನ್ನು ಕೆತ್ತಿರುವುದು ಕಂಡುಬರುತ್ತದೆ. ಒಟ್ಟಾಗಿ ನೋಡಿದರೆ ಇಂತಹ ವಸ್ತುಗಳಲ್ಲಿ ಒಂದು ರೀತಿಯ ಸಮನ್ವಯ ಸಮಂಜಸತೆ ಮತ್ತು ಉಲ್ಲಾಸಕರ ಸೌಂದರ್ಯಪ್ರಜ್ಞೆ ಎದ್ದು ಕಾಣುತ್ತದೆ.

**(ಆ) ಎಣ್ಣೆ ತಯಾರಿಕೆ :** ವಿಜಯನಗರ ಪೂರ್ವದಿಂದಲೂ ಎಣ್ಣೆ ಬೀಜಗಳಿಂದ ಎಣ್ಣೆ ತಯಾರಿಸುವ ಕೈಗಾರಿಕೆಯು ಕಂಡುಬರುತ್ತದೆ. ಆದರೆ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಇದು ಪ್ರಮುಖ ಕಸುಬುಗಳಲ್ಲಿ ಒಂದಾಗಿತ್ತು. ಸಾಮಾನ್ಯವಾಗಿ ಸಾಮ್ರಾಜ್ಯದಾದ್ಯಂತ ಎಲ್ಲಾ ಜಿಲ್ಲಾ ಕೇಂದ್ರಗಳು ಹಾಗೂ ಹೋಬಳಿ ಕೇಂದ್ರಗಳಲ್ಲಿಯೂ ಈ ಎಣ್ಣೆ ಕೈಗಾರಿಕೆಗಳು ಇರುತ್ತಿದ್ದವು. ಈ ಕಾರ್ಯದಲ್ಲಿ ನಿರತರಾಗಿದ್ದವರನ್ನು ಗಾಣಿಗರೆಂದು ಕರೆಯಲಾಗುತ್ತಿತ್ತು. ಅಂದು ಅವರನ್ನು ಅವರು ಉತ್ಪಾದಿಸುವ ಮಾದರಿ ಹಾಗೂ ಬಳಸುವ ಸಾಧನೆಗಳಿಗೆ ಅನುಗುಣವಾಗಿ ಬೇರೆ ಬೇರೆ ಹೆಸರುಗಳಿಂದಲೂ ಕರೆಯಲಾಗುತ್ತಿತ್ತೆಂಬುದಕ್ಕೆ ಆಧಾರಗಳಿವೆ.

ಉದಾಹರಣೆಗೆ : ಹೆಗ್ಗಾಣಿಗಳು - ಎರಡು ಎತ್ತುಗಳನ್ನು ಕಲ್ಲಿನ ಗಾಣಕ್ಕೆ ಕಟ್ಟಿ ಎಣ್ಣೆ ತೆಗೆಯುವವರನ್ನು ಹೆಗ್ಗಾಣಿಗರೆಂದು,ಮರದ ಗಾಣದಲ್ಲಿ ಎಣ್ಣೆ ತೆಗೆಯುವವರನ್ನು ಒಂಟೆತ್ತು ಗಾಣಿಗರೆಂದು ಕರೆಯುತ್ತಿದ್ದರು. ಒಟ್ಟಾಗಿ ಇವರನ್ನೆಲ್ಲಾ ಜ್ಯೋತಿಪಣ ಅಥವಾ ಜೋತಿನಗರ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಅಂದರೆ ಬೆಳಕನ್ನು ನೀಡುವ ಬಣದವರೆಂದು ಅರ್ಥ.[93]

ಗಾಣಗಳನ್ನು ೧. ಮರಗಾಣ, ೨. ಕಲ್ಲುಗಾಣಗಳೆಂದು ವರ್ಗೀಕರಿಸಿಕೊಳ್ಳಲಾಗಿತ್ತು. ಇವುಗಳಲ್ಲಿ ಹುಚ್ಚೆಳ್ಳು, ಹುಲ್ಲೆಳ್ಳು, ಅರಳು, ಕೊಬ್ಬರಿ, ಹಿಪ್ಪೆ ಮತ್ತು ಹೊಂಗೆಯಿಂದ ಎಣ್ಣೆಯನ್ನು ತೆಗೆಯುತ್ತಿದ್ದರು. ಸರ್ಕಾರ ಇವುಗಳ ಮೇಲೆ ತೆರಿಗೆ ಹಾಕಿ ವಸೂಲು ಮಾಡುತ್ತಿತ್ತು.

**(ಇ) ಕಬ್ಬು ಮತ್ತು ಬೆಲ್ಲ ತಯಾರಿಕೆ :** ಕಬ್ಬನ್ನು ನೀರಾವರಿಯ ವ್ಯವಸ್ಥೆ ಇದ್ದ ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಸಾಮಾನ್ಯವಾಗಿ ಸಾಮ್ರಾಜ್ಯದಾದ್ಯಂತ ಕಂಡುಬರುವ ಕೆರೆಗಳ ಆಶ್ರಯಿತ ನೀರಾವರಿ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತಿತ್ತು. ಕಬ್ಬಿನಿಂದ ಬೆಲ್ಲ, ಸಕ್ಕರೆಯನ್ನು ತಯಾರಿಸುತ್ತಿದ್ದರು. ಇವುಗಳನ್ನು ತಯಾರಿಸುವ ಸ್ಥಳವನ್ನು "ಆಲೆಮನೆ" ಎಂದು ಕರೆಯಲಾಗುತ್ತಿತ್ತು. ಆಲೆಮನೆಯಲ್ಲಿ ಕೂಲಿ ಮಾಡುವವರೆಲ್ಲರೂ ಅಸ್ಪೃಶ್ಯರಾಗಿರುತ್ತಿದ್ದರು.[94]

**(ಈ) ಉಪ್ಪಾರರು :** 'ಲವಣವಿಲ್ಲದ ಊಟ ಊಟವೇ ಅಲ್ಲ', 'ಉಪ್ಪು ತಿಂದ ಮನೆಗೆ ಎರಡು ಬಗೆಯಬೇಡ' ಅಥವಾ 'ಉಪ್ಪಿನ ಋಣ ತೀರಿಸಬೇಕು' ಎಂಬ ನಾಣ್ಣುಡಿಯಂತೆ ಉಪ್ಪಿಗೆ ಸಮಾಜದಲ್ಲಿ ಪ್ರಥಮ ಸ್ಥಾನವಿತ್ತು. ವಿಜಯನಗರದಲ್ಲಿಯೂ ಸಮುದ್ರ ಪ್ರದೇಶದಲ್ಲಿ ಹಾಗೂ ಒಳಪ್ರದೇಶದಲ್ಲಿಯೂ ಉಪ್ಪನ್ನು ತಯಾರಿಸಲಾಗುತ್ತಿತ್ತು. ಉಪ್ಪಾರರ ಇತರ ಹೆಸರುಗಳೆಂದರೆ ಮೇಲು ಸಕ್ಕರೆಯವರು, ಸಾಗರ ವಂಶದವರು, ಕೆರೆ ಬಂದಿಯವರು, ಎಂದು ಗುರ್ತಿಸಿಕೊಳ್ಳುತ್ತಿದ್ದರು. ಇವರು ತಮ್ಮ ಹೆಸರುಗಳೊಂದಿಗೆ ಶೆಟ್ಟಿ, ಗೌಡ, ಅಪ್ಪ, ಅಯ್ಯ, ಅಣ್ಣ ಎಂದು ಸೇರಿಸಿಕೊಳ್ಳುತ್ತಿದ್ದರು. ಅಂದು ಉಪ್ಪನ್ನು ತಯಾರಿಸುವುದೇ ಇವರ ಪ್ರಮುಖ ಕಸುಬಾಗಿತ್ತು. ವಿಜಯನಗರದ ಕಾಲದಲ್ಲಿ ಉಪ್ಪಿನ ತಯಾರಕರ ಮೇಲೆ ಸ್ಥಳದಿಂದ ಸ್ಥಳಕ್ಕೆ ಬೇರೆ ಬೇರೆ ರೀತಿಯಲ್ಲಿ ತೆರಿಗೆ ವಿಧಿಸಲಾಗುತ್ತಿತ್ತು.

**(ಉ) ಮೋಚಿಗಳು :** ಚರ್ಮದ ವಸ್ತುಗಳನ್ನು ತಯಾರಿಸುವವರು ಮೋಚಿಗಳು. ವಿಜಯನಗರದ ಅರಸರ ಕಾಲದಲ್ಲಿ ಚರ್ಮದ ಬಳಕೆಯು ಹೆಚ್ಚಾಗಿತ್ತೆಂದು ಹೇಳಬಹುದು. ಮೋಚಿಗಳು ಮುಖ್ಯವಾಗಿ ಚಪ್ಪಲಿ ಹೊಲಿಯುವುದನ್ನು ಕಸುಬಾಗಿ ಮಾಡಿಕೊಂಡಿದ್ದರು. ಇದರ ಜೊತೆಗೆ ಇತರ ಸಣ್ಣ ಪುಟ್ಟ ಕೃಷಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಿದ್ದರು. ಚಪ್ಪಲಿಯ ಜೊತೆಗೆ ಕುದುರೆಗೆ ಬೇಕಾದ ಜೀನುಗಳು, ಚಾವಟಿ, ಚರ್ಮದ ಹಗ್ಗ, ಚೀಲಗಳು, ಗೃಹ ಬಳಕೆಯ ವಸ್ತುಗಳು ಹಾಗೂ ಸಂಗೀತ ಅವಶ್ಯಕ ವಸ್ತುಗಳನ್ನು ತಯಾರಿಸುತ್ತಿದ್ದರು. ಚರ್ಮವನ್ನು ಮೋಚಿಗಳೇ ಹದಮಾಡಿಕೊಳ್ಳುತ್ತಿದ್ದರು.[95]

**(ಊ) ಮೇದರು :** ಇವರುಗಳು ಬಿದಿರಿನಿಂದ ಬುಟ್ಟಿಗಳನ್ನು, ಚಾಪೆಗಳನ್ನು ತಯಾರಿಸುತ್ತಿದ್ದರು. ಇದೊಂದು ಪ್ರಮುಕ ಗುಡಿಕೆಗಾರಿಕೆಯಾಗಿತ್ತು. ಈ ಕೆಲಸದಲ್ಲಿ ತೊಡಗಿದ್ದವರನ್ನು ಮೇದರೆಂದು ಕರೆಯಲಾಗುತ್ತಿತ್ತು. ತಯಾರಿಸಿದ ವಸ್ತುಗಳನ್ನು ಅವರೆ ಮಾರುತ್ತಿದ್ದರು. ಸಂತೆಗಳಲ್ಲಿಯೇ ಅಲ್ಲದೆ ಹಳ್ಳಿಹಳ್ಳಿಗಳಿಗೆ ಕೊಂಡೊಯ್ದು ಮಾರಾಟ ಮಾಡುತ್ತಿದ್ದರು. ಇವರನ್ನು ಒಂದೊಂದು ಪ್ರದೇಶದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ಉದಾ: ಗವರಿಗರು, ಗೌರಿಮಕ್ಕಳು. ಬೆತ್ತವನ್ನು ಸೀಳಿ ಚೆಕ್ಕೆಗಳನ್ನಾಗಿ ಮಾಡಿಕೊಂಡು ಬುಟ್ಟಿ, ಚಾಪೆ, ಮೊರ, ಕೊಂಗ, ತೊಂಬ ಮುಂತಾದ ಕೃಷಿಗೆ ಅವಶ್ಯವಾದ ವಸ್ತುಗಳನ್ನು ತಯಾರಿಸುತ್ತಿದ್ದರು.

**(ಋ) ಮಡಿಕೆ ತಯಾರಿಕೆ :** ವಿಜಯನಗರದ ಕಾಲದಲ್ಲಿ ಕುಂಬಾರರು ಪ್ರಮುಖರಾಗಿದ್ದರು. ಪ್ರತಿಯೊಂದು ಗ್ರಾಮದಲ್ಲಿಯೂ ಒಬ್ಬ ಕುಂಬಾರನಿರುತ್ತಿದ್ದನೆಂದು ಹೇಳಬಹುದು.[96] ಈ ಕೈಗಾರಿಕೆಯು ಸ್ಥಳೀಯವಾಗಿ ಹೆಚ್ಚು ಪ್ರವರ್ಧಮಾನಕ್ಕೆ ಬರಲು ಪ್ರಮುಖ ಕಾರಣವೆಂದರೆ, ಮಣ್ಣಿನಿಂದ ತಯಾರಾದ ಮಡಿಕೆ, ಕುಡಿಕೆ, ಅರಿವಿಗಳು ಒಡೆದುಹೋಗುವ ಸಂದರ್ಭ ಹೆಚ್ಚಾಗಿದ್ದು ಹಾಗೂ ದೂರದ ಮಾರುಕಟ್ಟೆಗಳಿಗೆ ಕೊಂಡೊಯ್ಯಲು ಸರಿಯಾದ ಸಾರಿಗೆ ವ್ಯವಸ್ಥೆ ಇಲ್ಲದಿರುವುದಾಗಿದ್ದಿತ್ತು. ಮಣ್ಣಿನಿಂದ ಪದಾರ್ಥಗಳನ್ನು ತಯಾರಿಸಲು ಕುಂಬಾರರು ಚಕ್ರ, ಕಲ್ಲು ಮತ್ತು ಕೋಲನ್ನು ಬಳಸುತ್ತಿದ್ದರು. ಇವರು ಈ ವಸ್ತುಗಳನ್ನು ತಯಾರಿಸಲು ಅಗತ್ಯವಾದ ಮಣ್ಣಿಗಾಗಿ ಕೆರೆಗಳು, ನದಿಗಳು ಮತ್ತು ನಾಲೆಗಳ ತಳವನ್ನು ಶೋಧಿಸುತ್ತಿದ್ದರು. ಕುಂಬಾರರು ಮಣ್ಣಿನ ತಟ್ಟೆಗಳು, ಊಟದ ಪಾತ್ರೆ, ಎಲೆ, ಹೂವಿನ ಕುಂಡ, ಬಾನಿ, ಹೊಗೆಬತ್ತಿಸೇದುವ ಪೈಪು ಹಾಗೂ ಗೌರಿ ಗಣೇಶರ ಪ್ರತಿಮೆಗಳನ್ನು ಪ್ರಮುಖವಾಗಿ ಮನೆಯ ಮೇಲೆ ಛಾವಣಿಗೆ ಹೊದಿಸಲು ನಾಡ ಹೆಂಚುಗಳನ್ನು, ಗ್ರಾಮೀಣ ಪ್ರದೇಶದಲ್ಲಿ ಧಾನ್ಯವನ್ನು ಶೇಖರಿಸಿಕೊಳ್ಳಲು ದೊಡ್ಡ ದೊಡ್ಡ ಮಣ್ಣಿನ ಪಾತ್ರೆಗಳನ್ನು ತಯಾರಿಸುತ್ತಿದ್ದರು. ಇವುಗಳನ್ನು ಗುಡಾಣಗಳೆಂದು ಕರೆಯಲಾಗುತ್ತಿತ್ತು. ಹೀಗೆ ಸಾಮ್ರಾಜ್ಯದಲ್ಲಿ ಆರ್ಥಿಕ ಪರಿಸ್ಥಿತಿಯು ತನ್ನದೆ ಆದ ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿಕೊಂಡು ಬರಲು ಇಂಥ ವಿವಿಧ ಕಸಬುದಾರರ ಶ್ರಮವೇ ಮುಖ್ಯ ಕಾರಣವಾಗಿತ್ತು.[97]

**ಅಡಿಟಿಪ್ಪಣಿಗಳು**

1. ಎಂ.ಎ.ಆರ್ 1927, ಪು. 79; ಎ.ಕ. 11, 395 ಮತ್ತು 403; ಅದೇ, 225, 229 ಮತ್ತು 340, ಎಂ.ಎ.ಆರ್. 1933, ಪು. 46; ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್, ಸಂ 3-1, ನಂ. 9; ಎಂ.ಎ.ಆರ್. 1027, ಪು. 79; ಅದೇ 1923 ಪು. 44.
2. ವಿಲ್ಸನ್ : ಗ್ಲಾಸರಿ, ಪು. 265
3. ಎ. ಫರ್‌ಗಾಟನ್ ಎಂಪೈರ್, ಪು. 237
4. ಎ.ಕ. 9, ಎಚ್.ಕೆ. 105, ಪಠ್ಯ, ಪು. 222; ಎ.ಕ. 10, ಕೋಲಾರ 207, ಪದ್ಯ ಭಾಗ - 2, ಪು. 48, ಅದೇ, 539

5. ರಟ್ಟಕವಿ : ರಟ್ಟಮತ್ತಂ (ಸಂ.) ಶೇಷ್ಯಂಗಾರ್, ಮದರಾಸು 1929, ಧ್ಯಾಯ 9, ಪು. 7
6. ಎ.ಕ. 12, ಗುಬ್ಬಿ 28, ಕ್ರಿ.ಶ. 1696
7. ಎಕ-12, ಟಿ.ಎಂ. 24, ಕ್ರಿ.ಶ. 1720, ಸಿವೆಲ್: ಪೂರ್ವೋಕ್ತ ಪು. 301-302, ಎಕ. III, ಎಂ.ಕೆ. 6, ಎ.ಕ. 5, ಎಚ್.ಎನ್. 52, ರಾಜಾವಳೀ ಕಥೆ (ಹಸ್ತಪ್ರತಿ) ಪು. 86
8. ಎ.ಕ.12, ವಿ.ಜಿ. 12; 3, ಎಸ್.ಐ.ಐ.ಸಂ. 7, ಪು. 124
9. ಎ.ಕ.9, ಕೆ.ಎನ್.19
10. ಎ.ಕೆ.12, ಎಂ.ಎಲ್. 20
11. ಅದೇ ಟಿ.ಎಂ. 48
12. ಎಂ.ಎ.ಆರ್. 1923 ಪು. 122
13. ಎಂ.ಎ.ಆರ್. 1927, ನಂ. 2; ಎಂ.ಎ.ಆರ್. 1914-15, ನಂ. 110
14. ಬಾರ್ಬೋಸ, Vol 1, ಪು. 185; ಅದೇ 2, ಪು. 191
15. ಎ.ಕ.3, ಎಂ.ಎಲ್. 65, ಎ.ಕ.2, ಕೆ.ವಿ. 21; ಅದೇ 22 ಎಂ.ಎ.ಆರ್. 1927, ನಂ. 2; ಅದೇ 1914-15, ನಂ. 110
16. ವಿರೂಪಾಕ್ಷ ಪಂಡಿತ; ಚನ್ನಬಸವಪುರಾಣ, ಪು. 119, ಪದ್ಯ 11
17. ಎ.ಕ.Vol III, ಎಂ.ಎಲ್.22
18. ಬುಕ್ಕರಾಯಚರಿತ್ರ (ಹಸ್ತಪ್ರತಿ), ಪು. 1
19. ಎ.ಕ. Vol II. ಡಿ.ಜಿ. 29
20. ಎ.ಕ. Vol X, ಜಿ.ಡಿ. 6; ಅದೇ, ಬಾಗೆಪಲ್ಲಿ 10
21. ಎ.ಕ.Vol XII. ಟಿ.ಎಂ. 24, ಕ್ರಿ.ಶ. 1720, ಸಿವೆಲ್ : ಪೂರ್ವೋಕ್ತ ಪು. 301-302
22. ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್, ಸಂ. 3-1, 6 ಪು. 10,11 ಮತ್ತು 12; ಎ.ಕ. 4, ಕೆ.ಎ. 51
23. ಎ.ಕ.10, ಎಂ ಬಿ. 142, ಪಠ್ಯ ಭಾಗ 2, ಪು. 112; ಎ.ಎಸ್.ಐ. 1914-15, ಭಾಗ 1. ಪು. 30, ರೈಸ್: ಮೈಸೂರು ಗೆಜೆಟಿಯರ್, ಸಂ. 1, ಪು. 577
24. ಎ.ಕ.Vol V, ನಿ.ಎನ್. 257; ಎ.ಕ.5, ಬಿ.ಎಲ್.75
25. ರಾಬರ್ಟ್ ಸಿವಲ್ : ಎ ಫರ್‌ಗಾಟನ್ ಎಂಪೈರ್, ಪು. 301-302
26. ವಿಜಯನಗರ ಕಾಲದ ಸಂಸ್ಕೃತಿ, ಪು. 122
27. ವಿಜಯನಗರ ಕಾಲದ ಸಂಸ್ಕೃತಿ; ಪು. 123-24
28. ಸಾಮ್ರಾಜ್ಯ ಮತ್ತು ಸಂಸ್ಥಾನ; ಪು. 116
29. ಅದೇ, ಪು. 117
30. ಸಾಮ್ರಾಜ್ಯ ಮತ್ತು ಸಂಸ್ಥಾನ, ಪು. 118
31. ಕೃಷಿ ಪದಕೋಶ, ಪು. 1-71
32. ಡೇಮ್ಸ್ - Barbosa : Vol.I, ಪು. 192
33. ಮಹಾಲಿಂಗಮ್.ಟಿ.ವಿ : Economic life in the Vijayanagara Empire, ಪು. 61
34. 1893ರ 581
35. MPS : Vol. I, ಪು. 136
36. ಸುಂದರ್‌ರಾಜ್ ಐಯ್ಯಂಗಾರ್ : Land Tenures in the Madras presidency. ಪು. 55-56
37. ಮೋರ್‌ಲ್ಯಾಂಡ್, ಡಬ್ಲ್ಯು.ಎಂ. India at the Death of Akbar, ಪು. 113
38. 1918ರ 96
39. ಫಿಲಿಪ್ಸ್ ಜಿಯೊ : Mahuan's Account of Cochin, Calicut and Aden, JRAS, 1896, ಪು. 345
40. ಡೇಮ್ಸ್ : Barbosa. Vol. I, ಪು. 189
41. ಅದೇ, ಪು. 185, Vol. I, ಪು. 91
42. ಎಕ. II, SB. 65, EC, VI, KP. 21 ಮತ್ತು 22
43. ಡೇಮ್ಸ್ : Barbosa. Vol. II, ಪು. 91

44. ಅದೇ, Vol. I, ಪು. 161
45. ಸೆವೆಲ್. ಆರ್ : A Forgotton Empire, ಪು. 260
46. ಅದೇ, ಪು. 377
47. ಡೇಮ್ಸ್ - Barbosa, Vol. I, ಪು. 226, ಅಡಿಟಿಪ್ಪಣಿ
48. ಅದೇ, ಪು. 203
49. ಅದೇ, ಪು. 189
50. ಗ್ರಿಬ್ಲ್ ಜೆ.ಡಿ. ಪಿ. ಪೂರ್ವೋಕ್ತ, Vol. I, ಪು. 187
51. ಎಲಿಯೆಟ್ - History of India, Vol. IV, ಪು. 113
52. ಹೆರಾಸ್, ಹೆನ್ರಿ - Aravidu: Dynasty of Vijayanagara, hg. 62-63
53. 1919ರ 41 ಮತ್ತು 46 :EC XI. MK 8 ಮತ್ತು 9
54. ಮಹಾಲಿಂಗಮ್. ಟಿ.ವಿ - Economic life in Vijayanagara Empire ಪು. 98
55. ಸೇವೆಲ್ ಆರ್. : A Forgotton Empire, ಪು. 266-67 ಮತ್ತು ಪು. 313
56. ಡೇಮ್ಸ್ - Barbosa, Vol. I, ಪು. 204
57. ಸೆವೆಲ್. ಆರ್. : A Forgotton Empire ಪು, 275-276
58. ಡೇಮ್ಸ್ - Barbosa, Vol. I, ಪು. 205
59. ಅದೇ, ಪು. 203
60. ಅದೇ, ಪು. 147-148
61. ಮಹಾಲಿಂಗಮ್. ಟಿ.ವಿ - Economic life in the Vijayanagar empire, ಪು. 101-102
62. ಎಲಿಯೆಟ್ - History of India, Vol IV, ಪು. 120
63. ಎಕ, Vol IV, yl 27; EC VII, SK 118
64. ಸೆವೆಲ್ ಆರ್. - A Forgotton empire ಪು. 244 ಮತ್ತು 246
65. ಅದೇ, ಪು. 370
66. ಮೇಜರ್ - ಪೂರ್ವೋಕ್ತ ಪು. 22
67. ಡೇಮ್ಸ್ - Barbosa, Vol. I, ಪು. 205
68. ಸೆವೆಲ್ ಆರ್. FE, ಪು. 243
69. ಅದೇ, ಪು. 243
70. ಮಿಲ್ಸ್ ಜೆವಿಜಿ - Mahuan, Ying-Ying Shend - Lan the overali survey of the Ocean's shtore (ಕೇಂಬ್ರಿಡ್ಜ್ 1970); ಫಿಲಿಪ್ಸ್ ಜಿಯೊ - Mahuans Account of Cochin, Calicut and Adcn JRAS, 1896, ಪು. 345
71. ಸೆವೆಲ್ ಆರ್. - A Forgotton empire, ಪು. 356
72. ಅದೇ, ಪು. 361-62
73. ಈಶ್ವರದತ್. ಕೆ - Telugu literature under Vijayanagara Empire, Vij Comn., Vol. ಪು. 54
74. ಸೀತಾಪತಿ ಜಿ.ವಿ. - History of Telugu literatue, ಪು. 18, (New Delhi, 1968),
75. ಐಯಂಗಾರ್.ಎಸ್.ಕೆ. - Sources, ಪು. 57
76. ವೆಂಕಟರತ್ನಂ ಎ.ವಿ. - Local self government in Vijayanagara empire, ಪು. 109-111
77. ಅದೇ, ಪು. 109
78. ಭವ್ಯ ; ಪು. 24-46
79. MAR; p. 1914-15, p. 59
80. ಭವ್ಯ; ಪು. 20, 49, 51
81. ಪ್ರವಾಸಿ ಕಂಡ ಇಂಡಿಯಾ; ಪು. 76
82. ಭವ್ಯ; ಪು. 20-58
83. ವಿಜಯನಗರ ಕಾಲದ ನಾಣ್ಯಗಳ ಪದ್ಧತಿ; ಪು. 55-75

84. ಮೋಹನ ತರಂಗಿಣಿ, ಪು. 19-20
85. ಸಾಮ್ರಾಜ್ಯ ಮತ್ತು ಸಂಸ್ಥಾನ; ಡಾ.ಎನ್.ಚನ್ನಸ್ವಾಮಿ ಸೋಸಲೆ, ಪು. 123
86. ಬಾರ್ಬೋಸಾ ೧, ಪು. 226
87. ಅದೇ, ಪು. 221
88. ಅದೇ 2, ಪು. 132
89. ಅದೇ, ೧, ಪು. 189
90. ಸಾಮ್ರಾಜ್ಯ ಮತ್ತು ಸಂಸ್ಥಾನ, ಪು. 126
91. 1924ರ 150 ಹಾಗೂ 1922ರ 180
92. ಸೆವೆಲ್. ಆರ್ : A Forgotton empire, 276 ಮತ್ತು 277
93. ಬಾರ್ಬೋಸಾ, 2, ಪು. 123
94. ಅದೇ, 2, ಪು. 124
95. ಎಕ, Vol - IX, Ht, 103 (ಎ) 101; ರಂಗಾಚಾರಿ ವಿ : The History of the Naik Kingdom of Madura IA, XLIII, ಪು. 135-6
96. ಮಹಾಲಿಂಗಮ್ ಟಿ.ವಿ. : Administration, ಭಾಗ II, 2ನೇ ಆವೃತ್ತಿ, (ಮದ್ರಾಸ್, 1975), ಪು. 29
97. ಸಾಮ್ರಾಜ್ಯ ಮತ್ತು ಸಂಸ್ಥಾನ; ಪು. 129

# ಅಧ್ಯಾಯ 4

# ವಿಜಯನಗರ ಕಾಲದ ಸಾಂಸ್ಕೃತಿಕ ವೈವಿಧ್ಯತೆ

ವಿಜಯನಗರ ಸಾಮ್ರಾಜ್ಯ ಸಾಂಸ್ಕೃತಿಕವಾಗಿ ಹಿಂದಿಗಿಂತಲೂ ಹೆಚ್ಚು ಸಂಪದ್ಭರಿತವಾಗಿತ್ತು. ವಿಜಯನಗರ ಸ್ಥಾಪನೆಯ ಆರಂಭ ಕಾಲದಿಂದಲೂ ನಾವು ಅದನ್ನು ಗುರುತಿಸಬಹುದು. ಶಿಲ್ಪಕಲೆ, ಚಿತ್ರಕಲೆ, ಸಂಗೀತ, ನೃತ್ಯ, ಯುದ್ಧಕಲೆ ಹೀಗೆ ವಿವಿಧ ಆಯಾಮಗಳಲ್ಲಿ ವಿಜಯನಗರ ಕಾಲ ಸಾಂಸ್ಕೃತಿಕವಾಗಿ ಶ್ರೀಮಂತವಾಗಿತ್ತು. ವಿವಿಧ ಸಮುದಾಯದ ಜನರನ್ನು ಪ್ರೋತ್ಸಾಹಿಸುವುದರ ಮೂಲಕ ವಿಜಯನಗರದ ಅರಸರು ಅನೇಕ ಕಲೆಗಳನ್ನು ಬೆಳಕಿಗೆ ತಂದರು. ವಿಜಯನಗರಕ್ಕೆ ನಾಯಿಂದರು, ಮುಸ್ಲಿಂ ಧರ್ಮೀಯರು, ಕ್ರೈಸ್ತ ಮಿಷನರಿಗಳು ನೀಡಿದ ಸಾಂಸ್ಕೃತಿಕ ಕೊಡುಗೆ ಅಪಾರವಾದುದು. ಈ ವಿಚಾರಗಳನ್ನು ಕುರಿತಂತೆ ಈ ಅಧ್ಯಾಯದಲ್ಲಿ ಕೂಲಂಕುಶವಾಗಿ ಚರ್ಚಿಸಲಾಗಿದೆ.

ಸಾಮಾನ್ಯವಾಗಿ ಯಾವುದೇ ಹೊಸ ಸಾಮ್ರಾಜ್ಯವಾಗಲಿ ಅಥವಾ ಸಂಸ್ಥಾನವಾಗಲಿ ಸ್ಥಾಪನೆಯಾದ ಮೇಲೆ ಮೊದಲು ಕೈಗೊಳ್ಳುತ್ತಿದ್ದ ಕಾರ್ಯವೆಂದರೆ ದೇವಾಲಯಗಳ ನಿರ್ಮಾಣ. ವಿಜಯನಗರದ ಅರಸರು ಆಗಲೇ ಅಸ್ಥಿತ್ವದಲ್ಲಿದ್ದ ದೇವಾಲಯಗಳಿಗೆ ದತ್ತಿಗಳನ್ನು ಕೊಡುವುದು, ಇಲ್ಲವೆ ಜೀರ್ಣೋದ್ಧಾರ ಮಾಡಿಸುವ ಕಾರ್ಯದಲ್ಲಿ ತೊಡಗುತ್ತಿದ್ದರು. ಏಕೆಂದರೆ ಹೊಸ ಅರಸರಿಗೆ ಇದರಿಂದ ಸಾಮಾನ್ಯ ಜನತೆಯು ಉತ್ತಮ ಬೆಂಬಲ ನೀಡಲೆಂದು ಕೈಗೊಳ್ಳುತ್ತಿದ್ದ ತಂತ್ರವಿದು. ಇದರ ಜೊತೆಗೆ ತಮ್ಮ ರಾಜಕೀಯ ಚಟುವಟಿಕೆಗಳಿಗೆ ಜನಸಾಮಾನ್ಯರ ಬೆಂಬಲ ಪಡೆಯಲು ಮಾಡುತ್ತಿದ್ದ ಯುಕ್ತಿಯಾಗಿರಬಹುದು. ಈ ತಂತ್ರಕ್ಕೆ ವಿಜಯನಗರದರಸರು ಹೊರತಾಗಿರಲಿಲ್ಲ. ಸಾಮ್ರಾಜ್ಯದ ಪ್ರಾರಂಭದ ವಂಶದವರಾದ ಸಂಗಮರು ಈ ತಂತ್ರ ಹಾಗೂ ಉಪಯೋಗವನ್ನು ಹೆಚ್ಚಿನ ಪ್ರಮಾಣದಲ್ಲಿಯೇ ಪಡೆದರನ್ನೆಬಹುದು. ಮೊದಲಿಗೆ ಇವರು ಈಗಾಗಲೇ ರಾಜ್ಯದಾದ್ಯಂತ ವಿಶಾಲವಾಗಿ ತನ್ನದೇಯಾದ ಶೈಲಿಯಲ್ಲಿ ಅವರದೇ ಆದ ಸಂಸ್ಕೃತಿಯ ಧಾರೆ ಹರಿಸಿದರು. ಇದರಿಂದಾಗಿ ಇವರೆಲ್ಲರಿಗಿಂತಲೂ ಭಿನ್ನವಾದ, ವಿಶೇಷವಾದ ಶೈಲಿಯ ಹುಡುಕಾಟದಲ್ಲಿ ವಿಜಯನಗರದರಸರು ತೊಡಗಿದರು. ಹೊಯ್ಸಳರು ತಮ್ಮ ದೇವಾಲಯಗಳನ್ನು ಬಳಪದ ಕಲ್ಲಿನಿಂದ ನಿರ್ಮಿಸಿದ್ದರು. ಈ ಕಲ್ಲು ಸ್ವಲ್ಪ ಮೃದುವಾದುದರಿಂದ ಸೂಕ್ಷ್ಮ ಕೆತ್ತನೆಗೆ ಹೆಚ್ಚಿನ ಅನುಕೂಲಕರವಾಗಿದ್ದಿತು. ಅಂದರೆ ಈ ಬಳಪದ ಕಲ್ಲು ದಕ್ಷಿಣ ಕರ್ನಾಟಕದಲ್ಲಿ ಮಾತ್ರ ಹೇರಳವಾಗಿ ದೊರಕುತ್ತಿತ್ತು. ವಿಜಯನಗರ ರಾಜಧಾನಿಯ ಸುತ್ತಲೂ ಸುಲಭವಾಗಿ ದೊರಕುತ್ತಿದ್ದದ್ದು ಒರಟು ಕಲ್ಲುಗಳು ಅಥವಾ ಬೆಣಚು ಕಲ್ಲು. ಇದರಿಂದಾಗಿ ಇವರು ಸುಮಾರು ವರ್ಷಗಳು ಯಾವ ತರಹದ ಕಲ್ಲಿನಿಂದ ದೇವಾಲಯಗಳನ್ನು ಕಟ್ಟಿಸಬೇಕೆನ್ನುವ ಪ್ರಶ್ನೆಯನ್ನು ಎದುರಿಸಬೇಕಾಯಿತು. ಕೊನೆಗೆ ದಕ್ಷಿಣ ಕರ್ನಾಟಕದಿಂದ ಬಳಪದ ಕಲ್ಲನ್ನು ಹಂಪಿಯವರೆಗೆ ಸಾಗಿಸುವುದು

ಕಷ್ಟಕರವಾದ ಕೆಲಸವಾದುದರಿಂದ ನೈಸರ್ಗಿಕವಾಗಿಯೇ ತನ್ನ ಸುತ್ತಮುತ್ತ ಹೇರಳವಾಗಿ ದೊರಕುತ್ತಿದ್ದ ಬೆಣಚು ಕಲ್ಲುಗಳನ್ನೇ ದೇವಾಲಯದ ನಿರ್ಮಾಣದ ಕಾರ್ಯಕ್ಕೆ ಉಪಯೋಗಿಸಲು ನಿರ್ಧರಿಸಲಾಯಿತು. ಈ ನಿರ್ಧಾರದಿಂದಾಗಿಯೇ ಇಂದಿಗೂ ನಾವು ನೋಡುತ್ತಿರುವ, ನೋಡಲೇಬೇಕಾದ ಬೃಹತ್ ದೇವಾಲಯಗಳು ಹಂಪಿಯಲ್ಲಿ ನಿರ್ಮಾಣವಾದದ್ದು.

ಡಾ.ಎಸ್. ರಾಜಶೇಖರ್‌ರವರು ಹೇಳುವ ಹಾಗೆ, ವಿಜಯನಗರದರಸರಿಗಿಂತಲೂ ಹಿಂದೆಯೇ ಹಂಪಿಯ ಹೇಮಕೂಟ ಬೆಟ್ಟದ ಮೇಲೆ ಅನೇಕ ಬೆಣಚು ಕಲ್ಲಿನ ದೇವಾಲಯಗಳು ನಿರ್ಮಾಣವಾಗಿದ್ದವು. ಏಕೆಂದರೆ ವಿಜಯನಗರ ಸ್ಥಾಪನೆಯ ಕೆಲವೇ ಕೆಲವು ವರ್ಷಗಳ ಹಿಂದೆಯಷ್ಟೆ ಹೇಮಕೂಟದಲ್ಲಿಯೇ ವೀರ ಕಂಪಿಲರಾಯನು ತ್ರಿಕೂಟ ದೇವಾಲಯವೊಂದನ್ನು ನಿರ್ಮಿಸಿದ್ದನ್ನು ಎಂಬುದಕ್ಕೆ ಶಾಸನಾಧಾರಗಳಿವೆ ಎಂದು ಅವರು ವಿವರಿಸುತ್ತಾರೆ. ಅವರೇ ಹೇಳುವ ಹಾಗೆ ಪ್ರಾರಂಭದಲ್ಲಿ ವಿಜಯನಗರದ ಅರಸರು ಸಾಮ್ರಾಜ್ಯದ ವಿಸ್ತರಣೆಯಲ್ಲಿ ತೊಡಗಬೇಕಾಯಿತು. ಉತ್ತರದಿಂದ ಮುಸಲ್ಮಾನರು, ಸುತ್ತಮುತ್ತಲಿನ ಸಂಸ್ಥಾನಗಳ, ಪಾಳೇಗಾರರನ್ನು ಸೋಲಿಸುವ ಸಲುವಾಗಿ ಅಪಾರವಾದ ಹಣದ ಅವಶ್ಯಕತೆ ಇದ್ದಿತೆಂದು ಆದ್ದರಿಂದ ಕಡಿಮೆ ಖರ್ಚಿನಲ್ಲಿ ಉತ್ತಮವಾಗಿ ಬಾಳಿಕೆ ಬರುವ ಬೆಣಚು ಕಲ್ಲಿನ ದೇವಾಲಯಗಳು, ಹಾಗೂ ಸ್ಮಾರಕಗಳ ನಿರ್ಮಾಣವೇ ಸರಿ ಎಂದು ನಿರ್ಧರಿಸಿ ಸಾಧ್ಯವಾಗಿಸಿದಂತೆ ಕಂಡುಬರುತ್ತದೆ. ಈ ನಡುವೆ ಕ್ರಿ.ಶ. ೧೩೪೮ರ ತರುವಾಯದಿಂದಲೇ ವಿಜಯನಗರದರಸರು ತಮಿಳು ಪ್ರದೇಶಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರೆಂದು ಹೇಳಬಹುದು. ಕ್ರಿ.ಶ. ೧೩೬೩ರಲ್ಲಿ ವೀರ ಕಂಪಣ್ಣನು ಸಂಭುವರಾಯ ಅರಸ ರಾಜಾನಾರಾಯಣನನ್ನು ಸೋಲಿಸಿ ಮಧುರೈಯನ್ನು ವಶಪಡಿಸಿಕೊಂಡನು. (ಇದರ ಬಗ್ಗೆ ಅವನ ಪತ್ನಿಯೇ ರಚಿಸಿರುವ ಸಂಸ್ಕೃತ ಭಾಷೆಯ ವೀರ ಕಂಪಣ್ಣರಾಯಚರಿತಂ ಮಧುರ ವಿಜಯಂ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ). ಇದರಿಂದಾಗಿ ಸುಮಾರು ಕ್ರಿ.ಶ. ೧೩೭೧ರ ಹೊತ್ತಿಗೆ ದಕ್ಷಿಣ ಭಾರತದ ಅದರಲ್ಲಿಯೂ ತಮಿಳು ಪ್ರದೇಶಗಳು ವಿಜಯನಗರದರಸರ ಆಳ್ವಿಕೆಗೆ ಒಳಪಟ್ಟವು. ಅಲ್ಲಿ ಮೊದಲಿಗೆ ತಮಿಳುನಾಡಿನ ಅನೇಕ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸುವ ಕಾರ್ಯವನ್ನು ಕೈಗೊಂಡು ಜನರ ಪ್ರೀತಿ ಹಾಗೂ ಸಹಾನುಭೂತಿಯನ್ನು ಸಂಪಾದಿಸಲು ಪ್ರಾರಂಭಿಸಿದರು. ಹಿಂದೆ ಇದ್ದ ತಮಿಳು ನಾಡಿನ ದೇವಾಲಯಗಳು ಚೋಳರ ಹಾಗೂ ಪಾಂಡ್ಯರಿಂದ ನಿರ್ಮಾಣವಾಗಿದ್ದವು. ಅವು ಸಹ ಬಹುತೇಕ ಬೆಣಚುಕಲ್ಲಿನಿಂದ ನಿರ್ಮಿತವಾಗಿದ್ದವು. ಈ ದೇವಾಲಯಗಳ ಸೌಂದರ್ಯ, ವಿನ್ಯಾಸ ಮತ್ತು ವಿಶಿಷ್ಟ ಶೈಲಿಯಿಂದ ವಿಜಯನಗರದರಸರು, ಸಾಮಂತರು, ದಂಡನಾಯಕರುಗಳು ಆಕರ್ಷಿತರಾದರು. ಅದರಿಂದಾಗಿಯೇ ವಿಜಯನಗರದ ಅರಸರು ಬೆಣಚು ಕಲ್ಲಿನ ದೇವಾಲಯಗಳ ನಿರ್ಮಾಣಕ್ಕೆ ನಿರ್ಧರಿಸಿದಾಗ ಸಹಜವಾಗಿಯೇ ತಮ್ಮ ದೇವಾಲಯಗಳನ್ನು ತಮಿಳು ವಾಸ್ತುಶೈಲಿ, ಎಂದರೆ ದ್ರಾವಿಡ ಶೈಲಿಯಲ್ಲಿ ಕಟ್ಟಲು ನಿರ್ಧರಿಸಿದರು. ರಾಜಧಾನಿ ಹಂಪಿಯಲ್ಲಿ ಈ ಶೈಲಿಯ ದೇವಾಲಯಗಳನ್ನು ನಿರ್ಮಿಸಲು ತಮಿಳುನಾಡಿನಿಂದಲೇ ಶಿಲ್ಪಿಗಳನ್ನು ಕರೆತಂದಿರಬಹುದೆಂದು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಮೇಲೆ ತಿಳಿಸಿದಂತೆ ವಿಜಯನಗರದ ಅರಸರ ಕಾಲದಲ್ಲಿಯೇ ಕನ್ನಡ ನಾಡಿನಲ್ಲಿ ದ್ರಾವಿಡ ಶೈಲಿಯ ದೇವಾಲಯಗಳು ನಿರ್ಮಾಣವಾಗಿರಲಿಲ್ಲ. ಅವರಿಗಿಂತಲೂ ಪೂರ್ವದಲ್ಲಿಯೇ ಅಂದರೆ ಹೊಯ್ಸಳರು, ನೊಳಂಬರು, ಚೋಳರು ಕರ್ನಾಟಕದ ಪ್ರದೇಶಗಳನ್ನು ಆಳುವಾಗ ಮೇಲ್ಕಂಡ ಶೈಲಿಯಲ್ಲಿ ಅನೇಕ ದೇವಾಲಯಗಳನ್ನು ನಿರ್ಮಾಣಗೊಳಿಸಿದ್ದಾರೆ. ಉದಾ: ಕೋಲಾರದ ಕೋಲಾರಮ್ಮ ದೇವಸ್ಥಾನ; ತಲಕಾಡಿನ ಕೀರ್ತಿ ನಾರಾಯಣ ದೇವಾಲಯ. (ಕ್ರಿ.ಶ. ೧೧೧೭); (ತಲಕಾಡಿನ ಈ ದೇವಾಲಯವೂ ಬೆಣಚುಕಲ್ಲಿನಿಂದಲೇ ನಿರ್ಮಿತವಾಗಿದೆ;) ಕಂಬದಹಳ್ಳಿಯ ಪಂಚಕೂಟ ಬಸದಿಗಳು; ಆವನಿಯ ಲಕ್ಷ್ಮಣೇಶ್ವರ, ರಾಮೇಶ್ವರದ ದೇವಾಲಯಗಳು ದ್ರಾವಿಡ ಶೈಲಿಯಲ್ಲಿಯೇ ಇರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೆ ಕ್ರಿ.ಶ. ೧೦೩೫ರಲ್ಲಿ ಚೋಳ ಅರಸ ರಾಜೇಂದ್ರ ಚೋಳನ ದಂಡನಾಯಕನೊಬ್ಬನಿಂದ ಜೀರ್ಣೋದ್ಧಾರಗೊಂಡ ಕೋಲಾರದ ಕೋಲಾರಮ್ಮ ದೇವಾಲಯ, ಮಾಲೂರು ಪಟ್ಟಣದಲ್ಲಿರುವ ನಾರಾಯಣ ದೇವಾಲಯ; ತಲಕಾಡಿನ ರಾಜರಾಜೇಶ್ವರಿ ದೇವಾಲಯ; ಮಾರೆಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ ಮತ್ತು ಪುಂಗನೂರಿನ ಗೋಪಿಕೃಷ್ಣ ದೇವಾಲಯ; ತಿಪಟೂರಿನಲ್ಲಿರುವ ರಾಜಾಧಿರಾಜನ ಕಾಲದಲ್ಲಿ ಕಟ್ಟಿರಬಹುದಾದ ಚೋಳೇಶ್ವರ ದೇವಾಲಯ; ಮೊದಲನೆಯ ಕುಲೋತ್ತುಂಗನ ಕಾಲದಲ್ಲಿ ನಿರ್ಮಿಸಿದ್ದ ಕಣ್ಣಂಬಾಡಿಯ ಕಲ್ಲೇಶ್ವರ ದೇವಾಲಯ; ಯಳಂದೂರಿನ ಸೋಮೇಶ್ವರ ದೇವಾಲಯ; ಎಡತೊರೆಯ ಅರಿಕೇಶ್ವರ ಮತ್ತು ವಿಘ್ನೇಶ್ವರ ದೇವಾಲಯ; ಉತ್ತನೂರಿನ ವರದರಾಜ ದೇವಾಲಯ; ತಿರುಮಕೂಡಲು ನರಸೀಪುರದ ಅಗಸ್ತ್ಯೇಶ್ವರ ದೇವಾಲಯ; ಸೋಸಲೆಯ ಹೊನ್ನದೇವಿ ದೇವಾಲಯಗಳೆಲ್ಲವೂ ಸಹ ದ್ರಾವಿಡ ಶೈಲಿಯ ದೇವಾಲಯಗಳೇ ಆಗಿವೆ.

ದೇವಾಲಯಗಳ ನಿರ್ಮಾಣದಲ್ಲಿ ಹಿಂದಿನ ಕಾಲದಿಂದಲೂ ಅನುಸರಿಸಿಕೊಂಡು ಬಂದಿರುವ ಶೈಲಿಯನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು.

**೧. ನಾಗರ ಶೈಲಿ :** ಅಂದರೆ ಬುಡದಿಂದ ತುದಿಯವರೆವಿಗೂ ಚೌಕೋನವಾಗಿರುವುದು. (ಕೆಳಗಿನಿಂದ ಮೇಲಿನವರೆವಿಗೂ)

**೨. ದ್ರಾವಿಡ ಶೈಲಿ :** 'ಗ್ರೀವ'ದಿಂದ ಮೇಲಕ್ಕೆ ಆರು ಅಥವಾ ಎಂಟು ಮುಖಗಳಿರುವುದು. (ಗರ್ಭಗುಡಿಯ ಮೇಲಿನ ಕಟ್ಟಡದಿಂದ)

**೩. ವೇಸರ ಶೈಲಿ :** ದೇವಾಲಯದ ಶೈಲಿಯೇ ವೃತ್ತಾಕಾರವಾಗಿರುವುದು. ('ಗ್ರೀವ'ದಿಂದ ಮೇಲೆ ವೃತ್ತಾಯತ, ಅರ್ಧವೃತ್ತ, ಗಜಪೃಷ್ಠ, ದ್ವಾಶ್ರವೃತ್ತ) ಈ ರೀತಿಯ ಎಲ್ಲಾ ದೇವಾಲಯಗಳನ್ನು ವೇಸರ ಶೈಲಿ ಎಂದು ಕರೆಯುತ್ತಾರೆ.

ವಿಜಯನಗರದ ಅರಸರು ದ್ರಾವಿಡ ಶೈಲಿಯನ್ನು ಅನುಸರಿಸಿಕೊಂಡು ಬೃಹತ್ ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿದರು. ಹಾಗೆಯೇ ಹಿಂದೆ ಇದ್ದ ಹಳೇ ದೇವಾಲಯಗಳ ಜೀರ್ಣೋದ್ಧಾರದ ಕಾರ್ಯವೂ ಪ್ರಾರಂಭವಾಯಿತು. ವಿಜಯನಗರದ ಅರಸರು ದೇವಾಲಯಗಳನ್ನು ವಿಶಾಲವಾದ ಜಾಗದಲ್ಲಿ ವಿಸ್ತಾರವಾಗಿ

ನಿರ್ಮಿಸುತ್ತಿದ್ದರು. ಕಾರಣವೆಂದರೆ ಅಂದು ಪ್ರತಿಯೊಂದು ಧಾರ್ಮಿಕ ಕಾರ್ಯಾಚರಣೆಗಳು, ರಾಜ, ಯುವರಾಜರ ಪಟ್ಟಾಭಿಷೇಕಗಳು, ರಾಜ ಪರಿವಾರದವರ ಮದುವೆ, ಸಮಾರಂಭಗಳು, ನಾಡಹಬ್ಬಗಳು, ಸಂಗೀತ, ನಾಟ್ಯ ಪ್ರದರ್ಶನಗಳೆಲ್ಲವೂ ಈ ದೇವಾಲಯಗಳಲ್ಲಿಯೇ ನಡೆಸಲಾಗುತ್ತಿದ್ದುದರಿಂದ ಚಿಕ್ಕದೇವಾಲಯಗಳು ಸಾಲದಾಗುತ್ತಿತ್ತು. ಆದ್ದರಿಂದ ವಿಜಯನಗರದ ಅರಸರು ಬೃಹತ್ ದೇವಾಲಯಗಳನ್ನು ನಿರ್ಮಿಸಲು ಎಡೆ ಮಾಡಿದರು.

## 4.1. ಸಾಂಸ್ಕೃತಿಕ ಶೈಲಿಯ ವಾಸ್ತು ಶಿಲ್ಪ :

ಶತಮಾನಗಳಿಂದಲೂ ಕರ್ನಾಟಕದಲ್ಲಿ ಅಲ್ಲದೆ ಭಾರತ ದೇಶದಲ್ಲಿಯೇ ದೇವಾಲಯವು ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದು ಬಂದಿದೆ. ಏಕೆಂದರೆ ದೇವಾಲಯವೇ ಅಂದು ವಿದ್ಯಾಕೇಂದ್ರ, ಧಾರ್ಮಿಕ ಕೇಂದ್ರ ಹಾಗೂ ಸಂಗೀತ ಮುಂತಾದ ಲಲಿತಕಲೆಗಳಿಗೆ ಆಶ್ರಯ ನೀಡುವ ತಾಣವಾಗಿದ್ದಿತು. ಇದಕ್ಕಾಗಿಯೇ ಇವುಗಳಿಗೆ ಹೆಚ್ಚಿನ ಮಹತ್ವ ಕೊಡಲಾಗಿತ್ತು. ಜೀವನಕ್ಕೆ ಅವಲಂಬಿಸಿರುವ ಮನೆಗಳಲ್ಲಿ, ರಾಜಧಾನಿಯಲ್ಲಿ ಅರಮನೆಗಳು ಶಾಶ್ವತವಾಗಿ ಉಳಿಯಬಹುದಾದ ಕಲ್ಲಿನ ಕಟ್ಟಡಗಳಾಗಿರಲಿಲ್ಲ. ಆದರೆ ದೇವಾಲಯಗಳನ್ನು ಮಾತ್ರ ಶಾಶ್ವತವಾಗಿ ಉಳಿಯಲು ಕಲ್ಲಿನಿಂದ ಕಟ್ಟಿಸಿದರು. ಇದಕ್ಕೆ ವಿಜಯನಗರ ಸಾಮ್ರಾಜ್ಯದ ಹಂಪಿಯಲ್ಲಿ ಕಂಡುಬರುವ ದೇವಾಲಯಗಳೇ ಸಾಕ್ಷಿ.

ದೇವಾಲಯವನ್ನು ನಮ್ಮ ದೇಹಕ್ಕೆ ಹೋಲಿಸಬಹುದು. ಪಾದ, ಚರಣ, ಅಂಘ್ರಿ, ಜಂಘ, ಕಟಿ, ಕುಕ್ಷಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕಗ, ಮುಖ, ವಕ್ತ್ರ, ನಾಸಿಕ ಇತ್ಯಾದಿ ಹೆಸರುಗಳನ್ನು ಕೊಟ್ಟಿರುವುದು ಕಂಡುಬರುತ್ತದೆ. ಈ ಮೇಲಿನ ಹೆಸರುಗಳನ್ನು ಗುರ್ತಿಸುವುದಕ್ಕೂ ಮೊದಲು ಅಸ್ತಿತ್ವಕ್ಕೆ ಬಂದುದು ಕೇವಲ ಗರ್ಭಗೃಹ ಮಾತ್ರ. ದೇವರನ್ನು ಈ ಸಣ್ಣ ಕೋಣೆಯಲ್ಲಿ ಇಟ್ಟು ಪೂಜಿಸುತ್ತಿದ್ದರು. ಈ ಗರ್ಭಗೃಹದ ಮೇಲೆಯೇ ಒಂದು ಶಿಖರವನ್ನು ಎತ್ತರಿಸಿ ಕಟ್ಟುತ್ತಿದ್ದರು. ಇದಕ್ಕೆ ವಿಮಾನ ಎಂದು ಹೆಸರು. ಕಟ್ಟಡದ ತಳಹದಿಯಿಂದ ಪ್ರಾರಂಭವಾಗಿ ಭಿತ್ತಿ (ಗೋಡೆ), ಪದ (ಕಂಭ), ಬೋದಿಗೆ (ಪ್ರಸ್ತರ), ಕಂಠ (ಗ್ರೀವ) ಮತ್ತು ಶಿಖರಗಳನ್ನೊಳಗೊಂಡ ಎಲ್ಲ ಭಾಗಗಳಿಗೂ ವಿಮಾನವೆಂದು ಹೆಸರಿದೆ. ಶಿಖರದ ಮೇಲೆ ಸ್ತೂಪ ಇರುತ್ತದೆ. ಇದು ಕವುಚಿದ ಬೋಗುಣಿ ಅಥವಾ ಗಂಟೆಯಾಕಾರದಲ್ಲಿದ್ದು ಮೇಲುಗಡೆ ಒಂದು ಕಳಶವಿರುತ್ತದೆ. ಶಿಖರದ ಬುಡದಲ್ಲಿ ಮುಂದಕ್ಕೆ ಚಾಚಿದ ಭಾಗವಿದ್ದು ಅದರ ಮೇಲೆ ತೆರೆದ ಬಾಯಿ ನರಸಿಂಹ ಮುಖದ ಆಕೃತಿ ಇರುತ್ತದೆ. ಇದಕ್ಕೆ ಕೀರ್ತಿಮುಖ ಎಂದು ಕರೆಯಲಾಗಿದ್ದು, ಈ ಕೀರ್ತಿ ಮುಖದ ಮಧ್ಯೆ ಒಮ್ಮೊಮ್ಮೆ ಶಿಲ್ಪಗಳನ್ನು ಕೆತ್ತಿರುವುದು ಕಂಡುಬರುತ್ತದೆ. ಗರ್ಭಗೃಹದ ಮುಂದಕ್ಕೆ ಹೊಂದಿಕೊಂಡಂತಿರುವುದು ಅಂತರಾಳ. ಇದು ಸಾಮಾನ್ಯವಾಗಿ ಆಯತಾಕಾರವಾಗಿರುತ್ತದೆ. ಇದನ್ನೇ ಸುಕನಾಸಿಯೆಂದೂ, ಅರ್ಧಮಂಪಟವೆಂದೂ ಕರೆಯುತ್ತಾರೆ. ನವರಂಗ ಎಂಬುದು ಈ ಅಂತರಾಳದ ಮುಂದುಗಡೆಗೆ ಸೇರಿಸಲಾದ ಭಾಗ. ಮೇಲೆ ವರ್ಣಿಸಿರುವ ಎಲ್ಲಾ

ರೀತಿಯ ದೇವಾಲಯಗಳು ವಿಜಯನಗರದ ಹಿಂದಿನ ಕಾಲದ ವಾಸ್ತುಶಿಲ್ಪದ ಕೆಲವು ಪ್ರಮುಖ ಲಕ್ಷಣಗಳೆಂದು ಹೇಳಬಹುದು.

ವಿಜಯನಗರದರಸರ ಕಾಲದಲ್ಲಿ ಇವುಗಳಲ್ಲಿ ಕೆಲವು ಬದಲಾವಣೆಗಳಾದುವಲ್ಲದೆ, ಹಲವಾರು ಹೊಸ ಹೊಸ ಅಂಶಗಳೂ ಸೇರಿಕೊಂಡು "ವಿಜಯನಗರ ಶೈಲಿ" ಎಂಬ ಹೊಸ ಶೈಲಿಯನ್ನೇ ಹುಟ್ಟು ಹಾಕಿತು. ಹಿಂದೂ ಸಂಸ್ಕೃತಿಯ ಎಲ್ಲ ವೈಶಿಷ್ಟ್ಯಗಳನ್ನೂ ಸಂರಕ್ಷಿಸಿ, ಪುನಃಶ್ಚೇತನಗೊಳಿಸಿ ವೈಭವೋಪೇತವಾಗಿ ಮಾಡುವುದು ಅಂದಿನ ಅರಸರ ಪ್ರಮುಖ ಕರ್ತವ್ಯವಾಗಿತ್ತು. ಅದಕ್ಕಾಗಿಯೇ ಸಂಗೀತ, ಲಲಿತಕಲೆ ಮುಂತಾದವುಗಳಿಗೆ ವಿಶೇಷವಾದ ಪ್ರೋತ್ಸಾಹ ನೀಡಲಾಯಿತ್ತೆನ್ನಬಹುದು. ದೇವಾಲಯದಲ್ಲಿ ದುಃಖ ಮತ್ತು ರೌದ್ರಕರವಾದ ಪ್ರಸಂಗಗಳನ್ನು ಚಿತ್ರಿಸಬಾರದೆಂದು, ನಮ್ಮ ಹಿರಿಯರ ದೃಷ್ಟಿಯಲ್ಲಿ ದೇವಾಲಯಗಳು ಸಕಲ ಕಲಾಪ್ರದರ್ಶನ ಶಾಲೆಗಳಾದುದರಿಂದ ಅಲ್ಲಿ ಕಾಮ (ಮಿಥುನ ಶಿಲ್ಪ) ಕಲಾ ಪ್ರದರ್ಶನಕ್ಕೂ ವಿಜಯನಗರದ ಅರಸರು ಅವಕಾಶ ಕಲ್ಪಿಸಿದ್ದರು. ಉತ್ಕೃಷ್ಟವಾದ ಕಲೆಯಲ್ಲಿಯೇ ನಿಜವಾದ ದೇವಾಂಶವಿದೆ ಅದು ಎಂದೆಂದಿಗೂ ಆನಂದದಾಯಕವಾದದ್ದು ನಿಷ್ಠೆಗೆ ಪ್ರಮುಖ ಸಾಧನವಾದುದು. ಇದಕ್ಕೆ ಸಾಕ್ಷಿಯೆಂಬಂತೆ ಇಂದಿಗೂ ಹಂಪಿಯ ದೇವಾಲಯಗಳಲ್ಲಿ ಶಿಲ್ಪ, ಚಿತ್ರ, ನೃತ್ಯ, ನಾಟ್ಯಗಳು ಅವ್ಯಕ್ತ ಸೌಂದರ್ಯವನ್ನು ವ್ಯಕ್ತಗೊಳಿಸುತ್ತಾ ನಿಂತಿರುವುದೆ ಆಗಿದೆ.

ಇಂಥಹ ದೇವಾಲಯಗಳನ್ನು ನಿರ್ಮಿಸಲು, ದೇವಾನುದೇವತೆಯರನ್ನು ಕಲ್ಲಿನಲ್ಲಿ ಕಡೆದು ಸುಂದರ ರೂಪ ನೀಡಲು, ಹಾಗೂ ದೇವಾಲಯದ ಪ್ರತಿಯೊಂದು ಹಂತವನ್ನು ಸುಂದರವಾದ ಕೆತ್ತನೆಯಿಂದ ನಿರ್ಮಿಸಬೇಕಾದರೆ ಶಿಲ್ಪಿಯು ವಿವಿಧ ಶಾಸ್ತ್ರಗಳ ಪ್ರವೀಣನಾಗಿರಲೇಬೇಕಾಗುತ್ತದೆ. ಉದಾಹರಣೆಗೆ :

೧. ಭಾರತೀಯ ಶಿಲ್ಪಿಯು ಒಬ್ಬ ಯೋಗಿಯಾಗಿ, ಶಾಂತಿಯನ್ನು ನೀಡುವ, ಆನಂದಕರವಾದ ದೃಶ್ಯವು ಆ ಶಿಲೆಯಲ್ಲಿ ಕೆತ್ತಿ ಮೂಡಿಸುವ ಹಾಗೆ ಪರಿವರ್ತಿಸುವಲ್ಲಿ ಶಿಲ್ಪಿಯು ಸಹ ಒಬ್ಬನಾಗಿರುತ್ತಾನೆ. ಅವನು ಎಲ್ಲೂ ತನ್ನ ಬಾಹ್ಯ ಸೌಂದರ್ಯವನ್ನು ಪ್ರಕಟಿಸಲು ಪ್ರಯತ್ನಿಸಬಾರದು. ಉದಾ: ಬುದ್ಧನ, ಶಿವನ, ಧ್ಯಾನಮಗ್ನ ಶಿಲ್ಪಗಳನ್ನು ನಿರ್ಮಿಸುವಾಗ ಈ ಭಾವನೆಗಳು ಮೂಡುವುದು ಸಹಜವಾಗಿ ವ್ಯಕ್ತವಾಗುತ್ತದೆ.

೨. ಶಿಲ್ಪಿಯು ಒಬ್ಬ ಭೂಗರ್ಭಶಾಸ್ತ್ರಜ್ಞನಾಗಿರುತ್ತಾನೆ : ತಾನು ನಿರ್ಮಿಸುತ್ತಿರುವ ಶಿಲ್ಪಕ್ಕೆ (ಅದು ದೇವತಾಮೂರ್ತಿಯಾಗಿರಲಿ ಅಥವಾ ದೇವಾಲಯದ ಕಂಬಗಳಾಗಿರಲಿ) ಈ ಶಿಲೆಯು ಯೋಗ್ಯವಾದುದೆಂದು ಗುರ್ತಿಸುವಲ್ಲಿನ ಸನ್ನಿವೇಶದಲ್ಲಿ ಅವನು ಭೂಗರ್ಭಶಾಸ್ತ್ರದಲ್ಲಿ ಪ್ರವೀಣನಾಗಿರಲೇಬೇಕು. ಉದಾ: ವಿಠಲಸ್ವಾಮಿ ದೇವಾಲಯದ ಕಂಬಗಳು ಸಪ್ತಸ್ವರಗಳ ನಾದವನ್ನು ಮೀಟುವ ಹಾಗೆ ಮಾಡುವಲ್ಲಿ ಶಿಲ್ಪಿಯ ಜಾಣ್ಮೆ ಮುಖ್ಯವಾಗುತ್ತದೆ.

೩. ಶಿಲ್ಪಿಯು ಒಬ್ಬ ಕವಿಯಾಗಿಯೂ ಕೆಲಸ ಮಾಡುತ್ತಾನೆ. ಹಾಗೂ ಸೌಂದರ್ಯವನ್ನು ಪ್ರೀತಿಸುವವನಾಗಿರುತ್ತಾನೆ.

೪. ಶಿಲ್ಪಿಯು ಒಬ್ಬ ದಾರ್ಶನಿಕನಾಗಿ, ವಾಗ್ಮಿಯಾಗಿ, ಚಿಂತಕನಾಗಿಯೂ ಕಂಡುಬರುತ್ತಾನೆ. ಉದಾ : ಹಜಾರರಾಮ ದೇವಾಲಯದ ಗೋಡೆಯ ಮೇಲೆ ರಾಮಾಯಣ, ಮಹಾಭಾರತ, ಭಗವದ್ಗೀತೆಗಳ ಸುಂದರ ಚಿತ್ರಣವನ್ನು ಶಿಲ್ಪಿಯು ನಿರ್ಮಿಸುವಾಗ ಮೇಲಿನವೆಲ್ಲವೂ ಆಗಿರಲೇಬೇಕು.

೫. ಶಿಲ್ಪಿಯು ವಾಸ್ತುಶಾಸ್ತ್ರಜ್ಞನಾಗಿರುವುದೂ ಮುಖ್ಯವಾಗಿರುತ್ತದೆ. ದೇವಾಲಯದ ನಿರ್ಮಾಣ ಹಾಗೂ ವಿವಿಧ ರೂಪಗಳು ಎಲ್ಲೆಲ್ಲಿ ಕಂಡುಬರಬೇಕೆಂದು ನಿರ್ಧರಿಸುವ ಸನ್ನಿವೇಶದಲ್ಲಿ ಅವನು ವಾಸ್ತುಶಾಸ್ತ್ರಜ್ಞನಾಗಿರುತ್ತಾನೆ ಎಂಬುದು ಸತ್ಯ.

ನಮ್ಮ ಕಲೆಯೂ ಸಂಸ್ಕೃತಿಯೂ ತತ್ವ ಪ್ರಧಾನವಾದುವುಗಳು ಎಂದು ಹೇಳುತ್ತಾರೆ. ಆದರೆ ಇದನ್ನು ಒಪ್ಪಲು ಸಾಧ್ಯವಾಗದು. ಏಕೆಂದರೆ ಒಂದು ದೃಷ್ಟಿಯಲ್ಲಿ ಈ ಬೃಹತ್ ದೇವಾಲಯಗಳಲ್ಲಿ ಕೆಲವೇ ಕೆಲವು ವರ್ಗದವರಿಗೆ ಮಾತ್ರ ಪ್ರವೇಶ ಹಾಗೂ ಕಾರ್ಯಕ್ರಮಗಳನ್ನು ನೆರವೇರಿಸಲು ಅವಕಾಶವಿದ್ದಿತ್ತು. ಶೂದ್ರರು ಹಾಗೂ ಪಂಚಮರು (ದಲಿತರು) ದೇವಾಲಯಗಳ ಬಳಿಯೂ ಸುಳಿದಾಡುವ ಹಾಗಿರಲಿಲ್ಲ. ಈ ದೇವಾಲಯಗಳನ್ನು ನಿರ್ಮಿಸಲು ಮೇಲಿನವರ ಪೂರ್ಣಪ್ರಮಾಣದ ಶ್ರಮವು ಅತ್ಯಾವಶ್ಯಕವಾಗಿ ಬಳಕೆಯಾಗುತ್ತಿದ್ದಿತ್ತು. ಆದರೆ ಅವರ ಆರ್ಥಿಕ ಹಾಗೂ ಸಾಮಾಜಿಕ ಜೀವನ ಹೇಳತೀರದ್ದಾಗಿದ್ದಿತ್ತು. ಹಂಪಿಯಲ್ಲಿರುವ ಸುಂದರವಾದ ಬೃಹತ್ ದೇವಾಲಯಗಳನ್ನು ಸಾವಿರಾರು ಶಿಲ್ಪಿಗಳು ಶ್ರಮಿಕರ ಸಹಾಯದಿಂದ ನಿರ್ಮಿಸಿದರೇನೋ ಅಷ್ಟೇ. ಅನಂತರ ಅವರಿಗೂ ಸಹ ದೇವಾಲಯದ ಒಳಗಡೆ ಪ್ರವೇಶವನ್ನು ನಿಷೇಧಿಸಲ್ಪಡುತ್ತಿತ್ತು. ಇಂಥಹ ಬೃಹತ್ ಸುಂದರ ದೇವಾಲಯಗಳನ್ನು ನಿರ್ಮಿಸಿದ್ದ ಶಿಲ್ಪಿಗಳ ಜೀವನವೂ ಸಹ ಚಿಂತಾಜನಕವಾಗಿದ್ದಿತ್ತು. ಒಂದು ದೃಷ್ಟಿಯಲ್ಲಿ ಅಂದಿನ ಶಿಲ್ಪಿಗಳು ಪ್ರೀತಿ, ವಿಶ್ವಾಸದಿಂದ ಸುಂದರ ಶಿಲ್ಪಗಳನ್ನು ನಿರ್ಮಾಣ ಮಾಡದೆ, ರಾಜ ಹಾಗೂ ಬ್ರಾಹ್ಮಣರ ಭಯ ಭೀತಿಯಿಂದ ಕೆಲಸ ಮಾಡುವ ಪರಿಸ್ಥಿತಿ ಉದ್ಭವವಾಗಿತ್ತೆಂದು ಹೇಳಬಹುದು. ಏಕೆಂದರೆ ಈ ಬೃಹತ್ ದೇವಾಲಯಗಳನ್ನು ನಿರ್ಮಿಸಿದ್ದರೂ ಸಹ (ಒಂದೆರಡು ದೇವಾಲಯವನ್ನು ಹೊರತುಪಡಿಸಿ) ಶಿಲ್ಪಿಗಳ ಹೆಸರುಗಳು ಎಲ್ಲೂ ಕಂಡುಬರುವುದಿಲ್ಲ, ಕೇವಲ ದೇವಾಲಯ ಕಟ್ಟಿಸಿದ ರಾಜ, ರಾಣಿ, ಪುರೋಹಿತರ ಹೆಸರುಗಳು ಮಾತ್ರ ರಾರಾಜಿಸುತ್ತವೆ. ವಿಜಯನಗರದ ಚರಿತ್ರೆಯನ್ನು, ಸಂಸ್ಕೃತಿಯನ್ನು ಅಧ್ಯಯನ ಮಾಡಿದಾಗ ತಕ್ಷಣ ಮೂಡುವ ಪ್ರಶ್ನೆ ಅಥವಾ ಸಂದೇಹವೆಂದರೆ "ವಿಜಯನಗರ ಸಾಮ್ರಾಜ್ಯವು ಸಾಮ್ರಾಜ್ಯದ ವಿಸ್ತರಣೆಯಲ್ಲಿ, ದೇವಾಲಯಗಳ ನಿರ್ಮಾಣದಲ್ಲಿ ಬೃಹತ್ ಸಾಮ್ರಾಜ್ಯವೆಂದು ಗುರುತಿಸಿಕೊಂಡಿತ್ತು. ಆದರೆ ಸಾಮಾಜಿಕವಾಗಿ ಇದೊಂದು ಪುಟ್ಟ ಸಂಸ್ಥಾನದಂತಿತ್ತೆಂದು" ಹೇಳುವ ಸಂದೇಹಗಳು ಸಹಜವಾಗಿಯೇ ಮೂಡುತ್ತವೆ.

"ಶಿಲ್ಪವು ಹೇಗೆ ರೂಪಬ್ರಹ್ಮನ ಸ್ವರೂಪವೋ ಹಾಗೆಯೇ ಸಂಗೀತವು ನಾದಬ್ರಹ್ಮನ ಸ್ವರೂಪವಾಗಿರುತ್ತದೆ" ಎಂಬ ಕವಿವಾಣಿಯು ವಿಜಯನಗರದರಸರ ಕಾಲದಲ್ಲಿ ಸತ್ಯವಾಗಿತ್ತು. ಹಿಂದಿನ ಸಂಗೀತ, ನಾಟ್ಯಗಳು ವಿಜಯನಗರದ ಸಾಮ್ರಾಜ್ಯಕ್ಕೆ ಅಲ್ಲದೆ ದೇಶ ವಿದೇಶಗಳಲ್ಲಿಯೂ ತನ್ನ ಕಂಪನ್ನು ಚೆಲ್ಲಿ ಅದರ ವೈಭವವನ್ನು ಸಾರಿದೆ.

**ಅ. ಸಂಗೀತ :** ವಿಜಯನಗರದ ಅರಸರು ಸಂಗೀತಕ್ಕೆ ಹಾಗೂ ನಾಟ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಪ್ರಾರಂಭದಲ್ಲಿ ಚತುರ ಕಲ್ಲಿನಾಥನಿಗೆ (ಇವನಿಗೆ ಕಲಿಮಾತ್ಯ, ಕೊಲ್ಲಿರಸನೆಂಬ ಹೆಸರುಗಳೂ ಇದ್ದವು.) ಕೊಡಲಾಗಿದ್ದ ಹೆಚ್ಚಿನ ಪ್ರೋತ್ಸಾಹದಿಂದಾಗಿ ಸಂಗೀತಕ್ಕೆ (ಕ್ರಿ.ಶ. ೧೪೫೦ರಲ್ಲಿ) ಒಂದು ವಿಶಿಷ್ಟ ರೀತಿಯ ಟೀಕೆಯು ಬಂದಿತ್ತೆಂದು ಹೇಳಬಹುದು. ಅನಂತರ ಈ ಟೀಕೆಯೇ ಹೊಸ ವಿಧಾನವನ್ನು ಪಡೆದು ಹೊಸ ಹೊಸ ರಾಗಗಳಾಗಿ ಹೊರಹೊಮ್ಮಿ ತಮ್ಮದೇ ಆದ ವಿಧಾನದಲ್ಲಿ ವಿವಿಧ ವರ್ಗಗಳಿಗೆ ಸೇರಿಸಲಾಗಿ ಮೇಳ ಪದ್ಧತಿಯು ಹುಟ್ಟಿಕೊಂಡಿತೆಂದು ತಿಳಿದುಬರುತ್ತದೆ.

ಅಂದಿನ ಕಾಲದ ಸಂಗೀತ ಹಾಗೂ ನಾಟ್ಯಗಳನ್ನು ಪುಂಡರೀಕ ವಿಠಲರು ರಚಿಸಿರುವ 'ಸದ್ರಾಗ ಚಂದ್ರೋದಯ', 'ರಾಗಮಂಜರಿ', 'ರಾಗಮಾಲೆ', 'ನಟನ ನಿರ್ಣಯ' ಎಂಬ ಗ್ರಂಥಗಳಿಂದ ತಿಳಿಯಬಹುದಾಗಿದೆ. ಪುಂಡರೀಕರು ಕಲ್ಲಿನಾಥನ ಸೂತ್ರಗಳನ್ನು ಅನುಸರಿಸಿಕೊಂಡೇ ಮೇಳಗೀತೆಗಳನ್ನು ಪ್ರಸ್ಥಾಪಿಸಿರುವುದು ಕಂಡುಬರುತ್ತದೆ. ಇವರುಗಳಿಗೆ ವಿಜಯನಗರದಲ್ಲಿ ಯಾವುದೇ ರೀತಿಯ ಗೌರವವೂ, ಸ್ಥಾನಮಾನವೂ ಇರಲಿಲ್ಲ. ಏಕೆಂದರೆ ಇವರು ಮೇಳಶಾಸ್ತ್ರಕ್ಕೆ ಒಲವು ತೋರಿಸಿದ್ದುದು ತಪ್ಪಾಗಿದ್ದಿತು. ಅಂದು ಮೇಳ ಶಾಸ್ತ್ರವು ಬ್ರಾಹ್ಮಣೇತರ ಸಾಂಸ್ಕೃತಿಕ ಮೇಳವಾಗಿದ್ದುದು ಕಂಡುಬರುತ್ತದೆ.

ವಿಜಯನಗರದಲ್ಲಿ ನೃತ್ಯ ಸಹಿತವಾದ ಸಂಗೀತಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದ್ದಿತು. ಕಾರಣವೆಂದರೆ ಈ ಎರಡು ಸಂಗಮವಾಗಿರುವ ಸಂಗೀತವು ಭಕ್ತಿಮಾರ್ಗದಿಂದ ಮುಕ್ತಿಗೆ ಕರೆದೊಯ್ಯುತ್ತದೆ ಎಂಬ ಭಾವನೆಯು ಅವರಲ್ಲಿ ಮನೆಮಾಡಿತ್ತೆನ್ನಬಹುದು. ಸಂಗೀತದ ಅಡಿಪಾಯಗಳಾಗಿರುವ ಸಪ್ತಸ್ವರಗಳಾದ ಸ-ರಿ-ಗ-ಮ-ಪ-ದ-ನಿಗಳು ಆಧ್ಯಾತ್ಮಿಕ ರೀತಿಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರುವುದು ಕಂಡುಬರುತ್ತದೆ. ಸಂಗೀತಶಾಸ್ತ್ರದಲ್ಲಿ ಇವುಗಳ ಅರ್ಥವನ್ನು ಈ ಕೆಳಕಂಡಂತೆ ವಿಶ್ಲೇಷಿಸಿರುವುದು ಕಾಣಬಹುದು.

**ಸ : ತ್ರಿಗುಣಾತ್ಮಿಕೆ :** ತ್ರಿಕುಂತಲಿಸಹಿತೆ, ಹತ್ತು ಕೋಟಿ ಮಿಂಚುಗಳ ಪ್ರಕಾಶವುಳ್ಳವಳು, ಪಂಚಭೂತಸ್ವರೂಪಿಣಿ, ಶ್ವೇತವರ್ಣೆ, ಶ್ವೇತಾಂಬರಧಾರಿಣಿ, ರಕ್ತ ನಯನೆ, ಶ್ವೇತಚಂದ ನಾನುಲಿಪ್ತೆ, ಮುತ್ತಿನ ಹಾರವನ್ನು ಧರಿಸಿರುವವಳು, ಪ್ರಶಾಂತವದನೆ, ಸತ್ಯಸ್ವರೂಪಿಣಿ ಎಂಬರ್ಥವನೂ...

**ರಿ : ದ್ವಿಕುಂಡಲೀಸಹಿತೆ :** ಕೆಂಪುಮಿಂಚಿನ ವರ್ಣದವಳು, ಪಂಚಭೂತ ಸ್ವರೂಪಿಣಿ, ಲೋಲಜಹ್ವೆ, ಭಯಂಕರರೂಪಿಣಿ, ರಕ್ತಾಂಬರಧಾರಿಣಿ, ರಕ್ತ ಪುಷ್ಪ ಭೂಷಣಾಂಬರಧಾರಿಣಿ, ಅಶ್ವ ಸಿದ್ಧಿನಾಯಕೆ, ಬ್ರಹ್ಮ ಸ್ವರೂಪಿಣಿ ಎಂಬರ್ಥವನೂ...

**ಗ : ನಿರ್ಗುಣಾತ್ಮಿಕೆ :** ನಿರ್ಮಲವಾದ ಉದಯಸೂರ್ಯನ ಪ್ರಕಾಶವುಳ್ಳವಳು, ಚೈತನ್ಯ ಸ್ವರೂಪಿಣಿ, ದಾಳಿಯೆಂಬ ಹೂವಿನ ಬಣ್ಣದವಳು, ರಕ್ತವಸ್ತ್ರಾಭರಣಧಾರಿಣಿ, ಬ್ರಹ್ಮ ಸ್ವರೂಪಣಿ ಎಂಬರ್ಥವನೂ....

**ಮ : ಪ್ರಾತಃಕಾಲದ ಸೂರ್ಯನ ಪ್ರಕಾಶವುಳ್ಳವಳು :** ನೀಲವರ್ಣೆ, ದಶಭುಜಾದ್ವಿನಿತೆ, ಭಯಂಕರವಾದ ಬಲವಾದ ಆಕಾರವುಳ್ಳವಳು, ಧರ್ಮಾರ್ಥಕಾಮಮೋಕ್ಷಪ್ರದೆ ಎಂಬರ್ಥವನೂ...,

**ಪ : ವಿವಿಧ ವರ್ಣಧಾರಿಣಿ :** ದ್ವಿಭುಜೆ, ಪದ್ಮಾಕ್ಷಿ, ರಕ್ತಚಂದನ ಚರ್ಚಿತೆ, ಪದ್ಮಮಾಲಿನಿ, ನವರತ್ನ ಶೋಭಿತೆ, ಪ್ರಶಾಂತೆ.

**ದ : ಸತ್ಯಸ್ವರೂಪಿಣಿ :** ಶಕ್ತಿತ್ರಯನ್ವಿತೆ, ಹಳದಿಯ ಮಿಂಚಿನ ಕಾಂತಿಯುಳ್ಳವಳು, ಮನೋಹರೆ, ನಿತ್ಯಮಂಗಳೆ...

**ನಿ : ಹತ್ತು ಕೋಟಿ ಮಿಂಚಿನ ಪ್ರಕಾಶವುಳ್ಳವಳು :** ಚಾರುಲೋಚನೆ, ಲೋಲಜಿಹ್ವೆ, ಚತುರ್ಬಾಹು ಸಮನ್ವಿತೆ, ಸುಗಂಧಾನುಲಿಪ್ತೆ, ನಿತ್ಯಾಮಂಗಲದಾಯಿನಿ. (ಸಾಮ್ರಾಜ್ಯ ಮತ್ತು ಸಂಸ್ಥಾನ ಪು. ೯೦-೯೧)

ಎಂದು ಆಧ್ಯಾತ್ಮಿಕ ಮಾದರಿಯಲ್ಲಿ ಸಂಗೀತ ಶಾಸ್ತ್ರವು ವಿಶ್ಲೇಷಿಸುತ್ತದೆ. ಈ ವಿಶ್ಲೇಷಣೆಗೆ ವಿಜಯನಗರದ ಅರಸರು ಹೆಚ್ಚಿನ ಭಕ್ತಿ ಭಾವಗಳಿಂದ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ. ಕರ್ನಾಟಕ ಸಂಗೀತ ಪಿತಾಮಹನೆಂದು ಕರೆಸಿಕೊಂಡಿರುವ ಪುರಂದರದಾಸರು ವಿಜಯನಗರವು ಉತ್ತುಂಗದ ಶಿಖರದಲ್ಲಿದ್ದಾಗ ಹೊಸ ಹೊಸ ಸಂಗೀತಗಳನ್ನು ಸೃಷ್ಟಿಸಿ, ಕೀರ್ತನೆಗಳ ಮೂಲಕ ಹಾಗೂ ಕೃತಿಗಳ ಮೂಲಕ ಅವುಗಳನ್ನು ಇಂದಿಗೂ ನಮಗೆ ಬಳುವಳಿಯಾಗಿ ಬಿಟ್ಟು ಹೋಗಿದ್ದಾರೆ. ನೂರಾರು ವರ್ಷಗಳು ಕಳೆದಿದ್ದರೂ ಸಹ ಅಂದು ಅವರು ಸೃಷ್ಟಿಸಿರುವ ಸಂಗೀತಗಳು ಇಂದಿಗೂ ಜೀವಂತವಾಗಿವೆ.

**ಆ. ನಾಟ್ಯ :** ವಿಜಯನಗರದ ಅರಸರು ಸಂಗೀತ ಮತ್ತು ನಾಟ್ಯಗಳೆರಡರಲ್ಲಿಯೂ ಪಾಂಡಿತ್ಯವನ್ನು ಪಡೆದಿದ್ದರು. ಆಸ್ಥಾನದಲ್ಲಿ ಸಂಗೀತಗಾರ್ತಿಯರು ಹಾಗೂ ನೃತ್ಯಗಾರ್ತಿಯರು ತುಂಬಿತುಳುಕುತ್ತಿದ್ದರೆಂದು ವಿದೇಶಿ ಪ್ರವಾಸಿಗರು ಹೇಳಿರುವುದು ಗಮನಾರ್ಹವಾಗಿದೆ. ಕೃಷ್ಣದೇವರಾಯನು ನಾಟ್ಯ ಸಂಗೀತಗಳೆರಡನ್ನೂ ರಾಘವೇಂದ್ರ ತೀರ್ಥರ ಪೂರ್ವಿಕನಾದ ಕೃಷ್ಣನಿಂದ ಅಭ್ಯಸಿಸಿದನೆಂದು ಅವನೇ ರಚಿಸಿರುವ ಸಂಸ್ಕೃತ ಗ್ರಂಥವಾಗಿರುವ ಜಾಂಬುವತೀಕಲ್ಯಾಣ ಸಂಗೀತ ಹಾಗೂ ನಾಟ್ಯದ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ. ಸಂಗೀತ ಸೂರ್ಯೋದಯದ ಕರ್ತೃವಾದ ಬಂಧಂ ಲಕ್ಷ್ಮೀನಾರಾಯಣರಿಂದ ಕೃಷ್ಣದೇವರಾಯ ಸಂಗೀತ ಕಲೆಯನ್ನು ಅಭ್ಯಾಸ ಮಾಡಿದನೆಂದು ತಿಳಿದುಬರುತ್ತದೆ. (ಅದೇ ಪು. ೯೦-೯೧)

ಸಂಗೀತ ಮತ್ತು ನೃತ್ಯದಲ್ಲಿ ಅಂದು ಮೊದಲ ಸ್ಥಾನವೆಂದರೆ ದೇವದಾಸಿಯದಾಗಿತ್ತು. ಅಂದಿನ ಕಾಲದಲ್ಲಿ ದೇವದಾಸಿಯರೆಂದರೆ ಸೂಳೆಯರಲ್ಲ ಎಂಬುವುದು ಗಮನಿಸಬೇಕಾದ ಅಂಶ. ಒಳ್ಳೆಯ ವಂಶಕ್ಕೆ ಸೇರಿದ ಗುಣವಂತರೂ ಶೀಲವಂತರೂ ತಮ್ಮ ತಮ್ಮ ಹೆಣ್ಣು ಮಕ್ಕಳನ್ನು ದೇವರ ಸೇವೆಗೆಂದು ನೇಮಿಸುತ್ತಿದ್ದರು. ಅವರ ಮುಖ್ಯ ಕೆಲಸವೆಂದರೆ ದೇವಮಂದಿರ ಹಾಗೂ ದೇವರ ಉತ್ಸವಗಳಲ್ಲಿ ನರ್ತಿಸುವುದು ಹಾಗೂ ಹಾಡುವುದಾಗಿತ್ತೆಂದು ಹೇಳಬಹುದು. (ರಾಜರ ಆಸ್ಥಾನದಲ್ಲಿ ಇದ್ದ ದೇವದಾಸಿಯರಿಗೆ ಮಾತ್ರ ಈ ಗೌರವವಿದ್ದಿತ್ತು). ಬಾರ್ಬೋಸಾ ಇವರ ಬಗ್ಗೆ ಉಲ್ಲೇಖಿಸುತ್ತಾ ಗೃಹಸ್ಥರು ತಮ್ಮ ಹತ್ತು ವರ್ಷದ ಹೆಣ್ಣು ಮಕ್ಕಳನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ದೇವರಿಗೆ ಸಮರ್ಪಿಸಿದ ಮೇಲೆ ಆ ಕನ್ಯೆಯರಿಗೆ ಸಮಾಜದಲ್ಲಿ ಮದುವೆಯಾದವರಿಗೆ (ಮುತ್ತೈದೆಯರಿಗೆ) ಸಲ್ಲುತ್ತಿದ್ದ ಗೌರವಗಳು ಸಲ್ಲುತ್ತಿದ್ದವು. ಅವರು ದೇವದಾಸಿಯರಾಗಿ ಜನರ ಗೌರವಕ್ಕೆ ಪಾತ್ರರಾಗುತ್ತಿದ್ದರು. ಅವರಿಗೆ ಒಳ್ಳೆಯ ವಾಸಸ್ಥಳಗಳು ದೊರಕುತ್ತಿದ್ದವು. ರಾಣಿಯರ

ಅಂತಃಪುರಗಳಿಗೆ ಹೋಗುವುದಕ್ಕೂ, ಅವರೊಡನೆ ಸ್ನೇಹವನ್ನು ಬೆಳೆಸಿ ತಾಂಬೂಲವನ್ನು ಸೇವಿಸುವುದಕ್ಕೂ ಅರ್ಹತೆಯನ್ನು ಪಡೆಯುತ್ತಿದ್ದರು. ಮಹಾನವಮಿ ಉತ್ಸವದಲ್ಲಿ ಇವರು ಇಷ್ಟಪಡುವ ಮೆಟ್ಟಿಲುಗಳನ್ನು ಹತ್ತಿಕೊಂಡು ವೈಭವವನ್ನು ನೋಡುವ ಅವಕಾಶವನ್ನು ಕೃಷ್ಣದೇವರಾಯನು ಕೊಟ್ಟಿದ್ದನು ಎಂದು ವಿದೇಶಿಯರ ಬರೆಹಗಳಿಂದ ತಿಳಿದುಬರುತ್ತದೆ.

ಸಂಗೀತ ಹಾಗೂ ನಾಟ್ಯಗಾರರು, ವಿಧವಿಧವಾದ ಉಡುಪುಗಳನ್ನು ಧರಿಸುತ್ತಿದ್ದರೆಂಬುವುದು ಹಜಾರ ರಾಮಸ್ವಾಮಿ ದೇವಸ್ಥಾನ ಹಾಗೂ ಮಹಾನವಮಿ ದಿಬ್ಬದ ಮೇಲು ಗೋಡೆಗಳ ಮೇಲೆ ಕೆತ್ತಿರುವ ಕೆತ್ತನೆಯಿಂದ ತಿಳಿಯಬಹುದಾಗಿದೆ. ಕೆಲವರಿಗೆ ಕಚ್ಚೆ ಪೈಜಾಮಗಳೂ, ಜುಬ್ಬ-ತಲೆಗೆ ದಪ್ಪನೆಯ ಪೇಟ, ಮಹಿಳೆಯರಿಗೆ ಲಂಗ ಹಾಗೂ ಉತ್ತರೀಯಗಳೂ ಇರುವುದು ಕಂಡುಬರುತ್ತದೆ. ಕೆಲವರು ಹೆಚ್ಚಿನ ಪ್ರಮಾಣದಲ್ಲಿ ಒಡವೆಗಳನ್ನು ಧರಿಸುತ್ತಿದ್ದರು. ಕೆಲವು ನರ್ತಕಿಯರು ಲಂಗಗಳನ್ನು ಮಾತ್ರ ಧರಿಸುತ್ತಿದ್ದದ್ದು ಕಂಡುಬಂದರೆ, ಇನ್ನೂ ಕೆಲವರು ಪೂರ್ಣನಗ್ನರಾಗಿಯೇ ನೃತ್ಯ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಈ ವಿಧವಾದ ನರ್ತಕಿಯರಿಂದ ಭರತನಾಟ್ಯವನ್ನು ಶ್ರೀಮಂತಗೊಳಿಸಲಾಯಿತು. ಮಹಾನವಮಿ ಉತ್ಸವಗಳು, ರಥೋತ್ಸವಗಳು, ದೇವಸ್ಥಾನದಲ್ಲಿ ಪ್ರತಿ ಶನಿವಾರ ನಡೆಯುತ್ತಿದ್ದ ಉತ್ಸವಗಳಲ್ಲಿಯೂ ಇವರು ತಪ್ಪದೆ ನರ್ತಿಸಬೇಕಾಗಿತ್ತು. ಇದಕ್ಕೆ ರಾಜಾಜ್ಞೆಯಾಗಿದ್ದಿತ್ತೆಂದು ಕಂಡುಬರುತ್ತದೆ. ಆದರೆ ಶೂದ್ರರು ಹಾಗೂ ಪಂಚಮರು ನಾಟ್ಯ ಹಾಗೂ ಸಂಗೀತ ಕಲಿಯಬಾರದೆಂದು ಸಹ ರಾಜಾಜ್ಞೆಯಾಗಿದ್ದಿತ್ತು. ಪಾಯೆಸರು ಅಂದಿನ ನಾಟ್ಯದ ಬಗ್ಗೆ ರಾಣಿಯರು ಎಷ್ಟು ತಲ್ಲೀನರಾಗಿದ್ದರೆಂಬುದನ್ನು ವಿವರಿಸುತ್ತಾ ರಾಣಿವಾಸದವರೂ ಸಹ ಬಹಿರಂಗವಾಗಿಯೇ ಮನರಂಜನೆಗಾಗಿ ನಾಟ್ಯವಾಡುತ್ತಿದ್ದರು. ಅವರಿಗೆ ತಕ್ಕ ಶಿಕ್ಷಣವೂ ದೊರಕುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಅವರಿಗೆ ಶಿಕ್ಷಣ ಶಾಲೆಯೂ ಇದ್ದು ಅಲ್ಲಿ ಅವರು ತಪ್ಪುಗಳನ್ನು ತಿದ್ದಿಕೊಳ್ಳಲು ಚಿತ್ರಗಳ ಸಹಾಯವೂ ಇದ್ದಿತ್ತೆಂದೂ ಹೇಳಿದ್ದಾನೆ. ಇದು ಅಂದು ರಾಣಿಯರು ಸಂಗೀತ ಮತ್ತು ನೃತ್ಯಕ್ಕೆ ನೀಡಿದ ಆಸಕ್ತಿಯನ್ನು ಸೂಚಿಸುತ್ತದೆ. ವಿಜಯನಗರ ಕಾಲದ ಸಾಮಾಜಿಕ ಬದುಕನ್ನು ಕೂಲಂಕುಶವಾಗಿ ಅಧ್ಯಯನ ಮಾಡಿದರೆ ವಿಜಯನಗರ ವೈಭವದ ಕಾಲದಲ್ಲಿ ಸಂಗೀತ, ನೃತ್ಯಕಲೆಗಳು ಅರಸರ ಸಂತೋಷಕ್ಕಾಗಿ, ಮನರಂಜನೆಗಾಗಿ ನಡೆಯುತ್ತಿದ್ದುದು ಸಹಜವೇ ಆಗಿತ್ತು. ಆದರೆ ಇಂತಹ ಸಂಗೀತ, ನೃತ್ಯಗಳನ್ನು ವಂಶಪರಂಪರವಾಗಿ ನಡೆಸುತ್ತಿದ್ದವರು ಕೆಳವರ್ಗದವರೆ ಆಗಿದ್ದರೆನಿಸುತ್ತದೆ. ಏಕೆಂದರೆ ವಿಜಯನಗರ ಕಾಲದ ಸಾಂಸ್ಕೃತಿಕ ವೈವಿಧ್ಯತೆಯಲ್ಲಿ ಕೆಳವರ್ಗದವರ ಪಾತ್ರವನ್ನು ಹೆಚ್ಚಾಗಿ ಕಾಣುತ್ತೇವೆ.

## 4.2. ಉಡುಪು (ವಸ್ತ್ರಾಲಂಕಾರ)

'There are three stages in the history of dress, nakedness, covering, clothes; Man naked, man covered, Man clothed - Nature, decency, art-nothing, something, beauty" - Charld cavers[1]

"Dress, ornament, perfume, woman, couch, singing, food and betel were regarded by Indian savants as the eight enjoyments of life."[2]

ಅರವತ್ತನಾಲ್ಕು ಕಲೆಗಳಲ್ಲಿ ಸುಮಾರು ಹನ್ನೆರಡು ದೇಹಾಲಂಕಾರ ಕಲೆಯನ್ನು ಕುರಿತಿವೆ. ಹೀಗೆ ಮಾನವನ ನಾಗರಿಕತೆಯು ಇತಿಹಾಸದಲ್ಲಿ ಉಡುಪು ಮತ್ತು ಅಲಂಕಾರ ಮಹತ್ವದ ಪಾತ್ರವನ್ನು ವಹಿಸಿವೆ. ಕಾಲ ಕಾಲಕ್ಕೆ ಮನುಷ್ಯನ ವಸ್ತ್ರಾಲಂಕಾರದಲ್ಲಿ ಆದ ಬದಲಾವಣೆಗಳೂ ಅಷ್ಟೇ ಕುತೂಹಲಕಾರಿ. ಪ್ರಾಚೀನ ಕಾಲದಿಂದಲೂ ಭರತಖಂಡದಲ್ಲಿ ಬೆಳೆದುಬಂದ ವಸ್ತ್ರಾಲಂಕಾರ ಪದ್ಧತಿಯನ್ನು ಕುರಿತು ಹೇಳುವ ಡಾ. ಶ್ರೀಕಂಠಶಾಸ್ತ್ರಿಗಳ ಈ ಮಾತುಗಳು ಗಮನಾರ್ಹವಾಗಿವೆ: "ಭರತಖಂಡದಲ್ಲಿ ಶಿಲಾಯುಗದಲ್ಲಿಯೇ ಸೂಜಿಗಳೂ ದಾರತೆಗೆಯುವ ತಕಳಿಗಳೂ ಕಂಡುಬಂದರೂ ಹೊಲೆದಬಟ್ಟೆಯು ಕಾಲದೃಷ್ಟಿಯಿಂದಲೂ ಆರೋಗ್ಯದೃಷ್ಟಿಯಿಂದಲೂ ಅನಾದರಣೀಯವೆಂಬ ಭಾವವಿದ್ದುದರಿಂದ ಅಸ್ಯೂತವಸ್ತ್ರಗಳೇ ಪ್ರಶಸ್ತವೆಂದು ಭಾರತೀಯರು ಭಾವಿಸಿದ್ದರು. ಉಣ್ಣೆ, ಹತ್ತಿ, ರೇಷ್ಮೆ, ಕೃಷ್ಣಾಜಿನ ಮತ್ತು ನಾರಿನ ವಸ್ತುಗಳು ಪ್ರಚಾರದಲ್ಲಿದ್ದವು. ಪ್ರಾಚೀನ ಶಿಲ್ಪಗಳಲ್ಲೂ ಚಿತ್ರಗಳಲ್ಲೂ ಕಟ್ಯಧೋಭಾಗದಲ್ಲಿ ಒಂದು ವಸ್ತ್ರವೂ, ಕುಚಬಂಧವೂ ಕಂಡುಬರುವುವು... ಹೊಯ್ಸಳ ಹಾಗೂ ವಿಜಯನಗರದ ಕಾಲದಲ್ಲಿ ಮಹಾಕೂರ್ಪಾಸ (ನಿಲುವಂಗಿ) ಕುಲ್ಲಾವಿ, ಕೋಕು (ರುಮಾಲು), ಪಾದಪರ್ಯಂತ ಚೊಲ್ಲಣ (ಪಾದಯಾಮ - ಪ್ರಾಯಾಮ - ಷರಾಯಿ) ಉತ್ತರೀಯ, ನಡುಕಟ್ಟುಗಳು ರಾಜಸಭೋಚಿತವೇಷವಾಗಿದ್ದವು."[3]

ವಿದೇಶೀ ಪ್ರವಾಸಿಗಳ ವರದಿಗಳೂ, ಸಾಹಿತ್ಯ ಕೃತಿಗಳೂ ಆ ಕಾಲದ ಉಡಿಗೆ ತೊಡಿಗೆಗಳನ್ನು ಕುರಿತು ಹೇಳಿವೆ; ಸಾಮಾನ್ಯವಾಗಿ ಹೆಂಗಸರಲ್ಲಾಗಲಿ, ಗಂಡಸರಲ್ಲಾಗಲಿ ಸೊಂಟದಿಂದ ಮೇಲೆ ಸೊಂಟದಿಂದ ಕೆಳಗೆ ಎಂದು ವಸ್ತ್ರದಲ್ಲಿ ಎರಡು ಭಾಗವಿರುತ್ತದೆ. ಗಂಡಸರಾದರೆ ಸೊಂಟದ ಮೇಲೆ ಅಂಗಿ, ಸೊಂಟದ ಕೆಳಗೆ ಪಂಚೆ ಅಥವಾ ದಟ್ಟಿ (ಧಟ್ಟಿ) ಅಥವಾ ಚಲ್ಲಣ ಇವುಗಳನ್ನು ಉಪಯೋಗಿಸುವರು. ಸೊಂಟದ ಮೇಲೆ ತೊಡುವ ಅಂಗಿಯನ್ನು 'ಸುಕ್ಕುಗುಪ್ಪಸ' ಎಂದೂ, ಕೆಳಗೆ ತೊಡುವ ಚಲ್ಲಣವನ್ನು 'ಕಾಲಕುಪ್ಪಸ' ('ರಾಚ' 18-27) ಎಂದೂ ನಂಜುಂಡಕವಿ ಹೇಳುತ್ತಾನೆ. ಸರ್ವಜ್ಞಕವಿ "ಕಾಲ ಕುಪ್ಪಸದವರು ಮೇಲೆ ಟೊಪ್ಪಿಗೆಯವರು" ಎಂದು ಹೇಳಿರುವುದನ್ನು ಗಮನಿಸಿದರೆ 'ಕಾಲಕುಪ್ಪಸದವರು' ಎಂದರೆ ಇಜಾರದವರು ಎಂದೇ ಅರ್ಥವಾಗುತ್ತದೆ. ಕಿಟ್ಟೆಲ್ ಕಾಲಕುಪ್ಪಸಕ್ಕೆ ಇದೇ ಅರ್ಥವನ್ನು ಹೇಳುವರು. ಪುರಂದರದಾಸರ ಈ ಕೀರ್ತನೆ ಗಂಡಸರ ವಸ್ತ್ರದ ಮತ್ತೊಂದು ಚಿತ್ರವನ್ನು ನೀಡುತ್ತದೆ. "ಹರಿಕರುಣವೆ ಅಂಗಿ, ಗುರುಕರುಣವೇ ಮುಂಡಾಸು, ಹರಿದಾಸರದಯವೆಂಬೊವಲ್ಲಿ" ಅಂಗಿಯನ್ನು ತೊಟ್ಟು ಮೇಲೆ ವಲ್ಲಿಯನ್ನು ಬಿಟ್ಟು - ಅಥವಾ ಹೊದ್ದು ತಲೆಗೆ ಮುಂಡಾಸು (ರುಮಾಲು) ಧರಿಸಿರುವ ಒಬ್ಬನ ಚಿತ್ರ ಇದು. ರುಮಾಲನ್ನು ಮುಂಡಾಸು, ಪಗಡಿ ಎಂದು ಕರೆಯುವರು. ಪುರುಷರ ವಸ್ತ್ರದಲ್ಲಿ ವಲ್ಲಿಯ ಹೆಸರು ಬಹಳ ಹಿಂದಿನಿಂದಲೂ ಕೇಳಿಬರುತ್ತದೆ. ಉದ್ದವಾಗಿರುವ ಈ ವಲ್ಲಿಯನ್ನು ಕೊರಳಸುತ್ತ ಅಥವಾ ಕಂಕುಳು ಸಂದಿನಿಂದ ಭುಜದ ಮೇಲೆ ಬರುವಂತೆ

ಮಡಿಸಿಹಾಕಿಕೊಳ್ಳುವರು ಅಥವಾ ಕೊರಳಸುತ್ತ ಹಾಕಿ ಇಳಿಬಿಡುವರು. ಕೆಲವು ಸಂದರ್ಭಗಳಲ್ಲಿ ಉದ್ದವಾಗಿರುವ ಈ ವಲ್ಲಿಯನ್ನೆ ಸುತ್ತಿ ಮುಂಡಾಸು ಮಾಡುತ್ತಿದ್ದುದೂ ಉಂಟು. ವಲ್ಲಿಯನ್ನು ಉತ್ತರೀಯವೆಂದು ಕರೆಯುತ್ತಾರೆ. ಅವನು ತಾನು ಹೊದ್ದಿದ್ದ ಉತ್ತರೀಯವನ್ನೇ ತೆಗೆದು ಕುದುರೆಯಗಳಕ್ಕೆ ಬಿಗಿದು ಕದಳೀಧ್ರುವಕ್ಕೆ ಕಟ್ಟಿಹಾಕಿದನೆಂದು ಲಕ್ಷ್ಮೀಶನ ಒಂದು ವರ್ಣನೆಯಲ್ಲಿ ಬರುತ್ತದೆ. ಒಟ್ಟಿನಲ್ಲಿ ವಲ್ಲಿಯು ಗಂಡಸರ ವಸ್ತ್ರಾಲಂಕಾರದ ಒಂದು ಮುಖ್ಯ ಭಾಗವಾಗಿ ಬಹಳ ದಿನಗಳಿಂದಲೂ ಬಳಕೆಯಲ್ಲಿದೆ.

ವಿಜಯನಗರ ಸಾಮ್ರಾಜ್ಯದ ಬೇರೆಬೇರೆ ಭಾಗಗಳಲ್ಲಿ ಸಂಬಂಧಪಟ್ಟ ಜನಜೀವನವನ್ನು ಹೇಳುವಾಗ ವಿದೇಶಿಯರು ತಾವು ಕಂಡ ಜನರ ವಿವಿಧ ರೀತಿಯ ಉಡಿಗೆ ತೊಡಿಗೆಗಳನ್ನು ಹೇಳಿದ್ದಾರೆ. ಅದರಲ್ಲಿ ಲಂಗೋಟಿಯೂ ಒಂದು. ವಾರ್ಥಮ ಎಂಬ ಪ್ರವಾಸಿ ಹೊನ್ನಾವರ ಮತ್ತು ಮಂಗಳೂರು ಜನರ ಉಡುಪಿನ ವಿಚಾರವಾಗಿ ಹೇಳುತ್ತಾ "...... as to his dress he goes quite naked with the exception of a cloth about his middle" (Varthema, Qtd., SPL. II, p. 300); 1443ರಲ್ಲಿ ವಿಜಯನಗರಕ್ಕೆ ಭೇಟಿ ಇತ್ತ ಅಬ್ದುರ್ ರಜಾಕನು ಕಲ್ಲಿಕೋಟೆಯ ಜನರ ವಿಚಾರವಾಗಿ ಹೇಳುತ್ತಾ ಅವರ ವಸ್ತ್ರದ ವಿಚಾರವನ್ನು ಪ್ರಸ್ತಾಪಿಸುವನು: "... ಈ ದೇಶದ ಬೆತ್ತಲೆ ಕರಿಯರನ್ನು ಕಂಡೆ. ಇವರು ಲಂಗ್‌ಕೋಟಿ (ಲಂಗೋಟಿ) ಎಂಬ ಎರಡು ಚೂರು ಬಟ್ಟೆಯನ್ನು ಬಿಟ್ಟು ಮತ್ತೆ ಯಾವ ಉಡುಪನ್ನೂ ಧರಿಸುವುದಿಲ್ಲ. ಇದು ಹೊಕ್ಕುಳಿಂದ ಹಿಡಿದು ಮಂಡಿಯವರೆವಿಗೂ ನೇತಾಡುತ್ತಿರುತ್ತದೆ." ಹೀಗೆ ವಿದೇಶೀಯರು ಲಂಗೋಟಿಧಾರಿಗಳ ಬಗೆಗೆ ಅನೇಕ ವಿವರಣೆಗಳನ್ನು ಕೊಟ್ಟಿರುವರು. ಆದರೆ ಈ ಎಲ್ಲ ವಿವರಣೆಗಳಿಗಿಂತ ಪುರಂದರದಾಸರ 'ಲಂಗೋಟಿ ಬಲುವೊಳ್ಳೇದಣ್ಣ' ಎಂಬ ಕೀರ್ತನೆ ವಿಶಿಷ್ಟವಾಗಿದ್ದು ಅದು ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲಲು ಸಹಾಯವಾಗಿದೆ. "ಲಂಗೋಟಿ ಬಲು ವೊಳ್ಳೆದಣ್ಣ ಒಬ್ಬರ್ಹಂಗಿಲ್ಲದೆ ಮಡಿಗೆ ಒದಗುವುದಣ್ಣ. ಬಡವರಿಗಾಧಾರವಣ್ಣ, ಭೈರಾಗಿಗಳ ಭಾಗ್ಯವಣ್ಣ ಕಡುಕಳ್ಳರಿಗೆ ಗಂಡ, ಮಡಿಧೋತ್ರಗಳ ಮಿಂಡ ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ ಜಿತಮನ ಸಂನ್ಯಾಸಿಗಳಿಗಿದೆ ಕೌಪೀನ ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು" "ದುಡ್ಡು ಮುಟ್ಟದಂತೆ ದೊರಕುವ ವಸ್ತುವು, ದೊಡ್ಡ ಅರಣ್ಯದಿ ಭಯವಿಲ್ಲವು ಹೆಡ್ಡರೆಂಬುವರೇನೋ ಲಂಗೋಟಿ ಜನರನ್ನು ದೊಡ್ಡವರೆಂದು ವಂದಿಸುವರು ಯತಿಗಳ ಮೋಕ್ಷಮಾರ್ಗಕ್ಕೆ ಕಲ್ಪವೃಕ್ಷವೀ ಲಂಗೋಟಿ. ಭಿಕ್ಷಗಾರರಿಗೆಲ್ಲ ಅನುಕೂಲವು, ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ, ಪೊಡವಿಯೊಳ್ ಯಾಚಕರಿಗೆ ನೆರವು. ತತ್‌ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನರಕ್ಷಣೆಗೆ ಬಹು ರಮ್ಯವಾಗಿರುವಂಥ..." (ಪುಕೀ, 4-88)

ಬಡವರು, ಭೈರಾಗಿಗಳು, ಬ್ರಹ್ಮಚಾರಿಗಳು (ಮುಂಜಿಯಾದ ವಟು, ಬ್ರಹ್ಮಚಾರಿ ಕೌಪೀನ ಧರಿಸಬೇಕೆಂಬದು ನಿಯಮ), ಲಂಗೋಟಿ ಧರಿಸಿದವರಿಗೆ ಕಳ್ಳರ ಕಾಟವಿಲ್ಲ. ಮಡಿವಾಳರ ಆ ಆಶ್ರಯವಿಲ್ಲ.

ಹೀಗೆ ದಾಸರು ಇದು ಬಹುಪಯೋಗಿ ಎಂದು ಹೇಳಿರುವರಲ್ಲದೆ "ಹೆಡ್ಡರೆಂಬುರೇನೋ ಲಂಗೋಟಿ ಜನರನ್ನು" ಎಂದು ಎಚ್ಚರಿಸಿದ್ದಾರೆ.

ಮಗ್ಗಗಳಲ್ಲಿ ಬಟ್ಟೆಗಳ ತಯಾರಿಕೆ, ಬಟ್ಟೆಗಳನ್ನು ಹೊಲಿದು ಸಿದ್ಧಪಡಿಸುವುದು, ಅವುಗಳ ಮಾರಾಟ, ನಾನಾ ವಿಧವಾದ ಚಿತ್ತಾರದ ಬಟ್ಟೆ ಕೆಲಸಗಳು ಇವೇ ಮುಂತಾದವುಗಳನ್ನು ಕುರಿತ ಕೆಲವು ವಿವರಗಳನ್ನು ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು.

ಜನರು ಬಟ್ಟೆಯನ್ನು ನೆಯ್ದು ಮಾರಿ ಜೀವನ ಹೊರೆಯುತ್ತಿದ್ದರು. ಆ ಹೆಂಗಸರೂ ಗಂಡಸರೂ ಈ ನೆಯ್ಗೆ ಕೆಲಸದಲ್ಲಿ ತೊಡಗಿದ ಸಂದರ್ಭಗಳೂ ಉಂಟು. ಬಟ್ಟೆಗಳಿಗೆ ಬಣ್ಣ ಹಾಕುವವರೂ, ಅಚ್ಚು ಹಾಕುವವರೂ ಇದ್ದು ಅಂತಹ ವೃತ್ತಿಯವರ ಕೇರಿಗಳೇ ಇದ್ದವು. ಜವಳಿ ಅಥವಾ ನೆಯ್ಗೆ ಕಾಯಕದಿಂದ ಜೀವನ ಸಾಗಿಸುತ್ತಿದ್ದಂತೆಯೇ "ಕೌದಿಗಳಂ (ಹೊದಿಯುವ ಹಚ್ಚಡ ?) ಹೊಲಿವ ಕಾಯಕ"ವನ್ನು ಕೈಗೊಂಡು ಅದರ ವಿಕ್ರಯದಿಂದ ಜೀವನ ನಡೆಸುವವರೂ ಇದ್ದರು. ಕನಕದಾಸರು ದ್ವಾರಕಾನಗರಿಯ ವರ್ಣನೆಯಲ್ಲಿ, ಚಿತ್ರಗೆಲಸಿಗಳ (ಬಟ್ಟೆಗಳಿಗೆ ಚಿತ್ರದ ಅಚ್ಚುಗಳನ್ನು ಒತ್ತುವವರು) ಚಿಪ್ಪಿಗರ ಕೇರಿಗಳಿದ್ದವೆಂದು ಹೇಳುವರು.[4]

**ಪಾದರಕ್ಷೆ :** ಪ್ರಾಚೀನ ಭಾರತೀಯರ ವಸ್ತ್ರಗಳನ್ನು ಕುರಿತು ಹೇಳುವಾಗ "... ಪುರುಷರೂ ಚಪ್ಪಲಿ, ವಾಪಾಸು, ಶೀತದೇಶದಲ್ಲಿ ಮೊಳಕಾಲುದ್ದದ ಪಾದರಕ್ಷೆಗಳನ್ನುಪಯೋಗಿಸುತ್ತಿದ್ದರು. ಸಾಮಾನ್ಯ ಜನರು ಬರೀ ಕಾಲಿನಲ್ಲೇ ಇರುತ್ತಿದ್ದರು[5] ಎಂದು ಹೇಳಿದೆ. ಪಾಯೇಸನು "ಜನಗಳು ಸಾಮಾನ್ಯವಾಗಿ ಬರಿಗಾಲಿನಲ್ಲೇ ತಿರುಗುತ್ತಾರೆ" ಎಂದು ಹೇಳಿದರೆ,[6] ಬಾರ್ಬೋಸ "ಗಂಡಸರು ಕಾಲುಚೀಲಹಾಕದೆ ಕಾಲಿಗೆ ಪಾದರಕ್ಷೆ ಧರಿಸುತ್ತಾರೆ" ಎಂದು ಹೇಳುವನು.[7] ಪಾಯೇಸನು ಕೆಲವರು ಹಾಕಿಕೊಳ್ಳುವ ಪಾದರಕ್ಷೆಯ ವಿವರಗಳನ್ನೂ ಬಾರ್ಬೋಸ ಹೆಂಗಸರು ಹಾಕಿಕೊಳ್ಳುವ ಕಸೂತಿ ಹಾಕಿದ ಚರ್ಮದ ಪಾದರಕ್ಷೆಗಳ ವಿವರವನ್ನೂ ಕೊಡುವರು.

ಹಿಂದಿನಿಂದಲೂ ಪಾದರಕ್ಷೆಯ ಬಳಕೆ ಜನರಿಗೆ ಗೊತ್ತಿತ್ತು; ಅದನ್ನು ಮಾಡಿ ಕೊಡುವವರಿಗೆ ಸಮ್ಮಗಾರ[8] (ಸಂ. ಚರ್ಮಕಾರ; ಈಗಿನ 'ಚಮ್ಮಾರ') ಮೊಚ್ಚಿಗಾರ (ಮೋಚಿ) ಎಂಬ ಹೆಸರುಗಳಿದ್ದವು. ಅವರದೇ ಮನೆಗಳು ಒಂದೆಡೆ ಇರುತ್ತಿದ್ದವು; ಅವುಗಳನ್ನು ಮಾಡುವವರು, ಸಾಮಾನ್ಯವಾಗಿ ಊರಿನ ಸತ್ತ ದನ ಮುಂತಾದವುಗಳನ್ನು ಎತ್ತುವ ಹರಿಜನರು.

ಪಾದರಕ್ಷೆಯನ್ನು ಕೆರೆ, ವಾಪಾಸು, ಮೆಟ್ಟು, ಮೊಚ್ಚೆ, ಹಾವುಗೆ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವ ವಾಡಿಕೆ ಇತ್ತು, (ಮೊಚ್ಚೆ, ಹಾವುಗೆಗಳ ಪ್ರಯೋಗ ಬಳಕೆಯಲ್ಲಿ ಅಷ್ಟಾಗಿ ಇದ್ದಂತೆ ಇಲ್ಲ (?) ಪಾದರಕ್ಷೆ ಹೊಸದರಲ್ಲಿ ಕಾಲು ಕಚ್ಚುವುದೆಂದು ಅದರ ಚರ್ಮವನ್ನು ಹದಗೊಳಿಸಲು ತೈಲ ಬಳಿಯುವರು. ಪಾದರಕ್ಷೆಯಲ್ಲೂ ವೈಭವವನ್ನು ಕಾಣಬಹುದು. ರಾಜರು, ರಾಣಿಯರು ಚಿನ್ನ ಬೆಳ್ಳಿಗಳ ಬೆಲೆಬಾಳುವ ಹಾವುಗೆಗಳನ್ನು ಮೆಟ್ಟುತ್ತಿದ್ದರು.[9]

**ಸುಗಂಧ ದ್ರವ್ಯಗಳು :** ಹಿಂದಿನ ಕಾಲದ ಸ್ತ್ರೀ ಪುರುಷರು ಅಲಂಕಾರವನ್ನು ಮೆಚ್ಚಿದವರು. ನಾಡಿನಲ್ಲಿ ಬೇಕಾದಷ್ಟು ಧನವಿತ್ತು ಅದನ್ನು ಅನುಭವಿಸಬೇಕೆಂಬ ಬಯಕೆಯೂ ಇತ್ತು. ಹೆಂಗಸರು ಮಗಮಗಿಸುತ್ತಿರುವ

ಪನ್ನೀರಲ್ಲಿ ಮಿಂದು ಮೆರೆಯುತ್ತಿದ್ದರು. ಗಂಡಸರು ಸ್ತ್ರೀಯರಿಂದ ಕಮ್ಮೆಣ್ಣೆಯನ್ನು ನೆತ್ತಿಗೆ ಒತ್ತಿಸಿಕೊಳ್ಳುತ್ತಿದ್ದರು[10]

"ಪುರುಷರೂ ಸ್ತ್ರೀಯರೂ ಅಲಂಕಾರಪ್ರಿಯರಾಗಿದ್ದರು. ತಲೆ ಕೂದಲಿಗೆ ಸುಗಂಧ ತೈಲಗಳನ್ನು ಹಚ್ಚಿ ಬೈತಲೆ ತೆಗೆದು ಆಭರಣಗಳನ್ನೂ ಹೂಗಳನ್ನೂ ಮುಡಿಸಿಕೊಳ್ಳುತ್ತಿದ್ದರು.... ಹೆಂಗಸರು ಲೋದ್ರದ ಚಕ್ಕೆಯಿಂದ ಮಾಡಿದ ಮುಖಚೂರ್ಣವನ್ನೂ, ತುಟಿಗೆ ಕೆಂಬಣ್ಣವನ್ನೂ, ಕಣ್ಣಿಗೆ ಅಂಜನವನ್ನೂ, ಮೈಗೆ ಸುಗಂಧಗಳನ್ನೂ... ಉಪಯೋಗಿಸುತ್ತಿದ್ದರು.

ಹೀಗೆ ಅಲಂಕಾರದ ಜೊತೆಯಲ್ಲಿ ಸುಗಂಧಲೇಪನವೂ ಒಂದು ಮುಖ್ಯ ಅಂಗವೆಂಬ ಭಾವನೆ ಜನರಲ್ಲಿ ಬಹಳ ಹಿಂದಿನಿಂದಲೂ ಬೆಳೆದುಬಂದಿದೆ, 'ಮೈಗೆ ಸುಗಂಧದ್ರವ್ಯಗಳನ್ನು ಪೂಸಿಕೊಳ್ಳುವುದನ್ನು ನಂಜುಂಡಕವಿ 'ದೇಸಿಯ ಶೃಂಗಾರ'ವೆಂದು ಕರೆದಿದ್ದಾನೆ.[11] "ಹಾಗೆಯೇ ವರನನ್ನು ಸುಮಂಗಲಿಯರು ಸುಗಂಧದ್ರವ್ಯಗಲೊಂದಿಗೆ ಸ್ವಾಗತಿಸುತ್ತಿದ್ದರು.[12] ಜನರು ಅಲಂಕಾರಕ್ಕೂ, ಮಂಗಳಕಾರ್ಯಗಳಿಗೂ ಸುಗಂಧ ದ್ರವ್ಯಗಳನ್ನು ಉಪಯೋಗಿಸುತ್ತಿದ್ದಂತೆಯೇ ದೇವರ ಪೂಜೆಗೂ ಪನ್ನೀರು, ಗೋರೋಚನ, ಶ್ರೀಗಂಧ ಮುಂತಾದವುಗಳನ್ನು ಉಪಯೋಗಿಸುತ್ತಿದ್ದರು.[13]

ಸುಗಂಧ ದ್ರವ್ಯಗಳಲ್ಲಿ ಗಂಧವೂ ಒಂದು. ಚಂದನ, ಅಗರು, ಕಸ್ತೂರಿ, ಕರ್ಪೂರ, ಅ ಕೇಸರ, ಕಚೋರ, ಲಾವಂಚ, ಕೋಷ್ಟ - ಎಂದು ಅಷ್ಟವಿಧ ಗಂಧಗಳನ್ನು ಹೇಳುತ್ತಾರೆ. ಗಂಧವನ್ನು ಶ್ರೀಗಂಧವೆಂದೂ, ಚಂದನಗಂಧವೆಂದೂ ಕರೆಯುತ್ತಿದ್ದರು. ಚಂದನದಿಂದ ತಯಾರಿಸಿದ ಗಂಧವೇ ಚಂದನಗಂಧ ಚಿನ್ನವನ್ನು ಒರೆ ಹಚ್ಚಿ ನೋಡುವಂತೆ ಚಂದನದ ಕೊರಡನ್ನು (ಇದನ್ನು ಗಂಧದ ಕೊರಡು ತುಂಡು ಎಂದು ಕರೆಯುವುದು ವಾಡಿಕೆ) ಸಾಣೆಕಲ್ಲಿನ ಮೇಲೆ ತೆಯಿದು ನೋಡುವರು. ಚಂದನದಿಂದ ವಿಗ್ರಹಗಳನ್ನು ಕೆತ್ತಿ ಆ ಚೆಂದನದ ದೇವರನ್ನು ಪೂಜಿಸಲು ಗಂಧದ ..... (ಸಾಣೆಕಲ್ಲಿನ ಮೇಲೆ ಗಂಧದ ಕೊರಡಿನಿಂದ ತೇಯ್ದು ತೆಗೆದ ಗಂಧ ಪೂಜೆಗೆ ) ಉಪಯೋಗಿಸುವ ಒಂದು ಸೊಗಸಾದ ಹೋಲಿಕೆಯನ್ನು ರನ್ನ ಕೊಡುತ್ತಾನೆ.[14] ಗಂಧದಿಂದ ದೇವರ ವಿಗ್ರಹಗಳನ್ನು ಮಾಡುತ್ತಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಂಗಡಿಗಳಲ್ಲಿ ಮಾರುತ್ತಿದ್ದ ನಾನಾ ವಿಧವಾದ ಸುಗಂಧ ದ್ರವ್ಯಗಳನ್ನು ಕವಿಗಳು ಪುರವರ್ಣನೆಯ ಚಿತ್ರದಲ್ಲಿ ಕೊಟ್ಟಿರುವುದೊಂದೇ ಅಲ್ಲದೆ, ಅಲ್ಲಿ ಚಂದ್ರಕಾಂತರ ಸಾಣೆಕಲ್ಲೊಳು ಚಂದನವ ಮರ್ದಿಸುವ ಘಟ್ಟಿವಳ್ತಿಯರ (ಗಂಧ ತೇಯುವವಳು)[15] ಸುಂದರ ಚಿತ್ರಗಳನ್ನೂ ಕೊಟ್ಟಿದ್ದಾರೆ.[15a]

"ಮೀಸೆ ಇಲ್ಲದೆ ಮೋರೆ ಹೇಸಿ ಕಾಣಯ್ಯ" ಎಂದು ಸರ್ವಜ್ಞ ಮೀಸೆಗೆ ಒಂದು ಸ್ಥಾನವನ್ನು ಕೊಟ್ಟಿದ್ದಾನೆ.

ಕನ್ನಡ ಕವಿಗಳು ಕನ್ನಡಿಗರ ಪೌರುಷ ರಸಿಕತೆಗಳನ್ನು ವ್ಯಕ್ತಿಮಾಡಬೇಕಾದ ಸಂದರ್ಭಗಳಲ್ಲೆಲ್ಲಾ ಮೀಸೆಯ ವರ್ಣನೆಯನ್ನು ಮಾಡುತ್ತಾರೆ" ಮೀಸೆಯನ್ನು ಗಂಡಸರು ತಮ್ಮ ಸೌಂದರ್ಯ ವರ್ಧನೆಯ ಹಾಗೂ ಸೌಂದರ್ಯ ಪ್ರದರ್ಶನದ ಸಾಧನವೆಂದು ಭಾವಿಸಿದ್ದರು.[16] ಅದು ಪೌರುಷದ ಕುರುಹೂ ಹೌದು. ದ್ರುಪದನಿಂದ

ಅವಮಾನಿತನಾದ ದ್ರೋಣನು ಕೋಪಗೊಂಡು ಅಲ್ಲಿಂದ ಹೊರಟು ಬರುವಾಗ "... ಸಭಾವಳಯದೊಳೆನ್ನನೇಱಿಸಿದ ನಿನ್ನ ನಾಕುಳಮೆನ್ನ ಚಟ್ಟರಿಂತಳೆವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆಪೊತ್ತೆನೇ" ಎಂದು ಪ್ರತಿಜ್ಞೆ ಮಾಡುವನು. ದ್ರೋಣನು ಬ್ರಾಹ್ಮಣನೇನೋ ಹೌದು. ಆದರೆ 'ಪಂಪ ಭಾರತ'ದಲ್ಲಿ ಅವನು ಕನ್ನಡದ ಕಲಿ; ಮೀಸೆಪೊತ್ತ ಗಂಡುಗಲಿ[17] ಮಾತಂಗಿಯನ್ನು ಕಾಣಲು ಬಂದ ಕರ್ಣಾಟಕದ ಒದರೆಗಳ ಈ ಅಲಂಕಾರವನ್ನು ನೋಡಿ: "ಕತ್ತರಿಸಿದ ಪನ್ನೆ (ಕೆನ್ನೆ)ಯೊತ್ತಿದ ಕೊನೆಮೀಸೆ ಸುತ್ತಿದ ಚಿಮ್ಮುರಿಕೊರಲ ಕತ್ತುರಿಯಣ್ಪು ಕಣ್ಗೆಸೆಯೆ ಕನ್ನಡಿಗರು... ಕಂಡರೊಸೆದು.[18]

**ವೇಷ ವೈವಿಧ್ಯ :** ಸಮಾಜದಲ್ಲಿ ನಾನಾ ತರಹದ ಜನರಿರುತ್ತಾರೆ. ಅವರ ವೇಷಭೂಷಣಗಳೂ, ಉಡಿಗೆತೊಡಿಗೆಗಳೂ ವಿಚಿತ್ರವಾಗಿರುತ್ತವೆ. ಉದಾಹರಣೆಗೆ ಬುಡುಬುಡಿಕೆಯವರು, ಬೈರಾಗಿಗಳು ಇತ್ಯಾದಿ. ಸಾಹಿತ್ಯ ಕೃತಿಗಳು ಅಲ್ಲಲ್ಲಿ ಇಂತಹ ಚಿತ್ರ ವಿಚಿತ್ರ ಉಡಿಗೆತೊಡಿಗೆಗಳವರ ಚಿತ್ರಗಳನ್ನು ದೊರಕಿಸುತ್ತವೆ. 'ಬಸವಪುರಾಣ'ದಲ್ಲಿ ಬರುವ "ಕಲಕೇತ ಬೊಮ್ಮಯ್ಯ"ನೆಂಬ ಶರಣನ ಚಿತ್ರ ಹೀಗಿದೆ: ಕೆದರಿದ ಮುಂದಲೆಯ ಮುಡಿ, ಹಣೆಯಲ್ಲಿ ಭಸಿತ, ಕಿವಿಯಲ್ಲಿ ಕೆಂಪು ಕಣಗಲ ಹೂವು; ಕಾಗಿನ ಕಪ್ಪಡ ಉಟ್ಟು, ಕಾಲಕಡಗ ತೊಟ್ಟು, ಗಿಲಿಕೆಯನ್ನು ಘುಲುಘುಲಿಸುತ್ತಾ, ಒಂದು ಕಾಲಿನಲ್ಲಿ ಗೆಜ್ಜೆಯನ್ನು ಬಿಗಿದು ಕುಣಿಯುತ್ತಾ, ಟಗರಿನ ಕೊಂಬನ್ನು ಎಡಗೈಯಲ್ಲಿ ಹಿಡಿದು, ಬಲಗೈಯಲ್ಲಿ ಗದೆಯನ್ನು (ಗುದಿಗೆ) ಎತ್ತಿಕೊಂಡು ಕಲಕತ ವೇಷಂದಳೆದು ಬರುತ್ತಾನೆ ('ಬಪು' 29-34)

**ಅಲಂಕಾರ ಆಭರಣಗಳು :** ಮನುಷ್ಯನ ಅಲಂಕರಣ ಸಾಧನೆಗಳಲ್ಲಿ ಉಡುಗೆ ತೊಡುಗೆ ಮತ್ತು ಅಂಗರಾಗಗಳು ಮುಖ್ಯವಾದುವು. ಆಭರಣಗಳ ರಚನೆ ಮತ್ತು ಅವುಗಳ ಧಾರಣೆಯಲ್ಲಿನ ಉದ್ದೇಶ ಸ್ಥೂಲವಾಗಿ ಮೂರು: ಸೌಂದರ್ಯವರ್ಧನೆ, ಸ್ವಪ್ರತಿಷ್ಠೆಯ ಪ್ರದರ್ಶನ ಮತ್ತು ಸಂಪತ್ತಿನ ಸಂಚಯನ, ಆಭರಣಗಳು ಒಂದು ಜನಾಂಗದ ವೈಶಿಷ್ಟ್ಯವನ್ನು ಪ್ರತಿಬಿಂಬಿಸುವ ಪ್ರತೀಕಗಳು.[19] ಕೇವಲ ಒಂದು ಅಲಂಕಾರ ಸಾಧನ ಮಾತ್ರವಲ್ಲ, ಜೀವನ ಮೌಲ್ಯಗಳಿಗೆ ಸಂಕೇತವಾಗಿ ನಿಲ್ಲುವ ವಸ್ತು.

ದೇಹ ಸೌಂದರ್ಯಕ್ಕೆ ವಸ್ತ್ರಾಲಂಕಾರ ಇತ್ಯಾದಿ ಅಲಂಕಾರಗಳು ಪೋಷಕ ಪೂರಕ. ಸ್ತ್ರೀ ಪುರುಷರ ಅಲಂಕಾರ ಸಾಧನಗಳ ಉಲ್ಲೇಖಗಳು ಪ್ರಾಚೀನ ಸಂಸ್ಕೃತ ಕಾವ್ಯಗಳಲ್ಲೂ ಕನ್ನಡ ಕಾವ್ಯಗಳಲ್ಲೂ ಉಲ್ಲೇಖಗೊಂಡಿವೆ. ಶಾಸ್ತ್ರಗ್ರಂಥಗಳಲ್ಲಿ ಇವುಗಳ ಪ್ರಸ್ತಾಪವುಂಟು. ಕರ್ಣಾಟಕದ ಮಟ್ಟಿಗೆ ಹೇಳುವುದಾದರೆ ಅಜಂತ ಚಿತ್ರಗಳು, ದೇವಾಲಯಗಳ ಶಿಲಾಲೋಹ ವಿಗ್ರಹಗಳು ಇವುಗಳಲ್ಲಿ ಗ್ರಂಥೋಕ್ತ ಆಭರಣಗಳನ್ನು ಗುರುತಿಸಬಹುದು. ಈ ಆಭರಣ ವಿಶೇಷಗಳು ಭಾರತಕ್ಕೆಲ್ಲಾ ಸರ್ವೇಸಾಮಾನ್ಯವೆಂದು ಹೇಳಬಹುದಾದರೂ, ಕನ್ನಡಿಗರು ಅನೇಕ ಅಲಂಕರಣ ಸಾಧನಗಳನ್ನು ತಮ್ಮವು ಎಂಬಂತೆ ವ್ಯವಹರಿಸಿರುವುದು ಕಂಡುಬರುತ್ತದೆ. ಸಂಸ್ಕೃತ ಹೆಸರುಗಳ ತದ್ಭವೀಕರಣ ಇದಕ್ಕೆ ಸಾಕ್ಷಿ.

ಭಾರತೀಯರಿಗೆ ವಸ್ತ್ರಗಳಿಗಿಂತ ಆಭರಣಗಳ ಮೇಲೆ ಪ್ರೀತಿ ಹೆಚ್ಚು. ಸ್ತ್ರೀಯರಿಗೆ ಆಭರಣಗಳನ್ನು ಧರಿಸುವುದರಲ್ಲಿ ವಿಶೇಷ ಆಸಕ್ತಿ. "ಕಾಮಿನಿಯರಿಗೆ ಒಡವೆ ವಸ್ತ್ರದ ಚಿಂತೆ"[20] ಎಂದು ದಾಸರು ವಾಸ್ತವ ಸತ್ಯವನ್ನೇ ನುಡಿದಿದ್ದಾರೆ.

ದೇಹದ ಒಂದೊಂದು ಅಂಗಕ್ಕೂ ಒಂದೊಂದು ವಿಶಿಷ್ಟ ಆಭರಣ ಬಳಕೆಯಲ್ಲಿತ್ತು, ವಿಜಯನಗರ ಸಾಮ್ರಾಜ್ಯದ ವೈಭವವನ್ನು ಮುಕ್ತಕಂಠದಿಂದ ಕೊಂಡಾಡಿರುವ ವಿದೇಶಿ ಪ್ರವಾಸಿಗರ ಬರವಣಿಗೆಗಳಲ್ಲಿ ರಾಜರೂ ರಾಜಮನೆತನದವರೂ ಸಾಮಾನ್ಯರೂ ತೊಡುತ್ತಿದ್ದ ಆಭರಣಗಳ ಉಲ್ಲೇಖವಿದೆ. ಆದರೆ ಸಾಹಿತ್ಯ ಕೃತಿಗಳು ಅಲ್ಲಿ ದೊರೆಯುವುದಕ್ಕಿಂತ ಹೆಚ್ಚಿನ ಸಾಮಗ್ರಿಯನ್ನು ಒದಗಿಸುತ್ತಿವೆ.

ಅಬ್ದುಲ್ ರಜಾಕನು ಸಾಮ್ರಾಜ್ಯದ ಸುವರ್ಣ ಸಂಪತ್ತನ್ನು ಕುರಿತು "ರಾಜನ ಅರಮನೆಯ ನೆಲಮಾಳಿಗೆಯಲ್ಲಿ ಚಿನ್ನದ ಗಟ್ಟಿಗಳನ್ನು ರಾಶಿ ಹಾಕಿದ್ದಾರೆ. ಈ ದೇಶದ ಪ್ರತಿಯೊಬ್ಬ ನಿವಾಸಿಯೂ, ಅವನು ಮೇಲ್ತ್ತರಗತಿಯವನಾಗಿರಲಿ ಅಥವಾ ಸಾಮಾನ್ಯನಾಗಿರಲಿ ಕೊನೆಗೆ ಅಂಗಡಿಬೀದಿಯಲ್ಲಿ ಕೆಲಸ ಮಾಡುವವರು ಸಹ ಕೊರಳು, ಕೈ, ತೋಳು ಮತ್ತು ಬೆರಳುಗಳಲ್ಲಿ ಮುತ್ತುಗಳನ್ನೋ ರತ್ನಖಚಿತವಾದ ಬೆಲೆಯುಳ್ಳ ಒಡವೆಗಳನ್ನೋ ಧರಿಸಿರುತ್ತಾರೆ" ಎಂದು ಹೇಳುವನು.

ಎರಡನೆ ದೇವರಾಯನು ವಿದೇಶೀ ರಾಯಭಾರಿಗಳನ್ನು ಸ್ವೀಕರಿಸಲು ಸಿಂಹಾಸನದ ಮೇಲೆ ಕುಳಿತಾಗಿನ ಅಲಂಕಾರವನ್ನು ವರ್ಣಿಸುತ್ತಾ ಅಬ್ದುರ್‌ರಜಾಕ್ "ಅವನ ಕೊರಳ ಸುತ್ತ ಒಳ್ಳೆಯ ಅಚ್ಚಮುತ್ತಿನಹಾರ ಮೆರುಗುತಿತ್ತು. ಅದರ ಬೆಲೆಯನ್ನು ಕಟ್ಟಲು ಸರಾಫರಿಗೂ ಸಾಧ್ಯವಿಲ್ಲವೇನೊ !" ಎಂದು ಹೇಳುತ್ತಾನೆ. ಹಾಗೆಯೇ ಕೃಷ್ಣದೇವರಾಯನು ವಿದೇಶೀ ರಾಯಭಾರಿಗಳನ್ನು ಸ್ವೀಕರಿಸುವಾಗ ಅಮೂಲ್ಯವಾದ ವಜ್ರದ ಆಭರಣವೊಂದು (ಪದಕ) ಅವನ ಕುತ್ತಿಗೆಯಲ್ಲಿ ಶೋಭಿಸುತ್ತಿತ್ತೆಂದು ಪಾಯೇಸನು ಹೇಳುವನು. (With a pateca of diamonds on his neck of very great value). FE., p. 243.

ಇದೇ ಪ್ರವಾಸಿ ವಿಜಯನಗರದ ನವರಾತ್ರಿ ವೈಭವವನ್ನು ವರ್ಣಿಸುವಾಗ ನೃತ್ಯ ನಾರಿಯರ ಉಡಿಗೆ ತೊಡಿಗೆಯನ್ನು ವರ್ಣಿಸುತ್ತ "ಈ ನರ್ತಕಿಯರು ಧರಿಸಿರುವ ಆಭರಣಗಳ ಐಸಿರಿಯನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯ" ಎಂದು ಆ ಅತುಲಾಭರಣಗಳನ್ನು ಕಂಡು ಆಶ್ಚರ್ಯಪಡುತ್ತಾನೆ ! "ವಜ್ರವೈಡೂರ್ಯಗಳ ಮುತ್ತು ಮಾಣಿಕ್ಯಗಳ ಕೊರಳಪಟ್ಟಿ, ತೋಳ್ಬಂದಿ ನಡುಪಟ್ಟಿ, ಕಾಲ್ಕಡಗ ಇವುಗಳನ್ನು ನೋಡಿದರೆ ಆಶ್ಚರ್ಯವಾಗುತ್ತದೆ" ಎಂದು ಹೇಳುತ್ತಾನೆ) ಇದೇ ಸಂದರ್ಭದಲ್ಲಿ ನಡೆಯುವ ಮತ್ತೊಂದು ಮಹಿಳಾ ಪ್ರದರ್ಶನವನ್ನು ವರ್ಣಿಸತ್ತಾ: "... ಇವರು ಕುತ್ತಿಗೆಗೆ ರತ್ನಖಚಿತವಾದ ಪದಕಗಳನ್ನೂ ಭುಜಕ್ಕೆ ಭುಜಕೀರ್ತಿಗಳನ್ನೂ, ಕೈ ಬಳೆಗಳನ್ನೂ, ತೋಳಬಂದಿಗಳನ್ನೂ, ಸೊಂಟಕ್ಕೆ ಒಂದರ ಕೆಳಗೊಂದರಂತೆ ಪಟ್ಟಿಗಳನ್ನೂ, ಕಾಲ್ಕಡಗವನ್ನೂ ಧರಿಸಿ ಚಿನ್ನದ ಗಿಂಡಿ ಹಿಡಿದಿರುತ್ತಾರೆ" ಎಂದು ಹೇಳುವನು.

ಗಂಡಸರೂ ಹಾಗೂ ಹೆಂಗಸರು ಧರಿಸುತ್ತಿದ್ದ ಆಭರಣಗಳನ್ನು ಕುರಿತು ಬಾರ್ಬೋಸ ಕೊಡುವ ವಿವರಣೆ ಗಮನಾರ್ಹವಾಗಿದೆ: ಗಂಡಸರು ಕೊರಳಿಗೆ ಚಿನ್ನದ ಸರ ಮತ್ತು ಮತ್ತಿತರ ಆಭರಣಗಳನ್ನು ಧರಿಸುತ್ತಾರೆ. ತೋಳಿಗೆ ಹರಳಿನ ತೋಳಬಂದಿ ಬೆರಳುಗಳಿಗೆ ಉಂಗುರ, ಕಿವಿಗೆ ಮುತ್ತು ಮತ್ತು ವಜ್ರದೋಲೆಗಳನ್ನು ಧರಿಸುವರು.

"ಹಾಗೆಯೇ ಹೆಂಗಸರು ವಜ್ರವೈಡೂರ್ಯ ಹವಳ ಮುಂತಾದವುಗಳಿಂದ ಮಾಡಿದ (ಕೊರಳ) ಸರ, ಪದಕ, ತೋಳಬಂದಿ, ಕೈಬಳೆಗಳನ್ನು ತೊಡುವರು. ಬೆರಳಿಗೆ ವಜ್ರ ವೈಡೂರ್ಯದ ಉಂಗುರಘಳು, ಸೊಂಟಕ್ಕೆ ಡಾಬು, ಕಾಲಿಗೆ ಚಿನ್ನದ ಬಳೆ, ಕಾಲುಂಗುರವನ್ನು ಹಾಕಿಕೊಳ್ಳುವರು. ಒಟ್ಟಿನಲ್ಲಿ ಇವರು ಬಹು ಶ್ರೀಮಂತ ಒಡವೆ ವಸ್ತುಗಳನ್ನು ಧರಿಸುವವರಾಗಿರುತ್ತಾರೆ.

ನಮ್ಮ ಜನ ಮುಡಿಯಿಂದ ಅಡಿಯವರೆಗೆ ಧರಿಸುತ್ತಿದ್ದ ವಿವಿಧಾಭರಣಗಳ ರೂಪ ರಚನೆ ಹಾಗೂ ಉಪಯೋಗದ ಪರಿಚಯ ಅವರ ಅಲಂಕಾರ ಪ್ರೇಮವನ್ನು ಕಲ್ಪಿಸಿಕೊಳ್ಳಲು ಸಹಾಯಕ; ಅವರ ರಸಿಕತೆಗೂ ಅಳತೆಗೋಲು. ದೇಹದ ಯಾವ ಯಾವ ಭಾಗಗಳನ್ನು ಅಲಂಕರಿಸಿದರೆ, ತುಂಬ ಶೃಂಗಾರವಾಗಿ ಸೊಬಗು ಪಡೆಯುತ್ತದೆ ಎಂಬುದರ ಬಗೆಗೆ ಹಿಂದಿನವರು ವಿಚಾರಮಾಡಿ ಷೋಡಶಾಲಂಕಾರಗಳನ್ನು ಹೇಳಿದ್ದಾರೆ; ಸ್ನಾನ, ವಿಲೇಪನ, ವಸ್ತ್ರ, ಶಿರೋಭೂಷಣ, ತಿಲಕ, ಕಜ್ಜಲ (ಕಾಡಿಗೆ), ನಾಸಾಭೂಷಣ, ಮಕರಪತ್ರ (ಕೆನ್ನೆಗಳ ಮೇಲೆ ಚಿತ್ರಿಸಿಕೊಳ್ಳುವ ವರ್ಣವಿನ್ಯಾಸ), ಕುಂಡಲ, ಹಾರ, ಕೇಯೂರ (ಭುಜಗಳ ತೊಡಿಗೆ), ಮಣಿಭೂಷಣ, ಅಂಗುಲೀಯಕ, ಕಾಂಚೀಧಾಮ (ಒಡ್ಯಾಣ), ನೂಪುರ (ಕಾಲಂದುಗೆ), ಅಲಕ್ತಕ (ಅರಗಿನ ರಸದ ಲೇಪನ) ಷೋಡಶಾಲಂಕಾರಕ್ಕೆ ಸಂಬಂಧಿಸಿದಂತೆ ಕನ್ನಡ ಕಾವ್ಯಗಳಲ್ಲಿ ದೊರೆಯುವ ಕೆಲವು ಸಂಗತಿಗಳ ಒಂದು ಕಿರು ಸಮೀಕ್ಷೆಯನ್ನು ಮುಂದೆ ಕಾಣಬಹುದು.

"ಕೇಶಬಂಧನೆಯೇ ಒಂದು ಕಲೆಯಾಗಿತ್ತು. ಅಜಂತಾ... ಬೇಲೂರು, ಹಳೇಬೀಡು ಮುಂತಾದ ಸ್ಥಳಗಳ ವಾಸ್ತುಶಿಲ್ಪದಿಂದ ಕೇಶಾಲಂಕಾರಗಳ ವೈವಿಧ್ಯವು ತಿಳಿದುಬರುವುದು... ಬಹಳ ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಕೇಶ ವಿನ್ಯಾಸ ಪದ್ಧತಿಗಳು ಅನೇಕವಾಗಿದ್ದವು.[21] ಹಿಂದಿನ ಕಾಲದ ಅರಮನೆಗಳಲ್ಲಿ ಹೆಂಗಸರಿಗೆ ಶೃಂಗಾರ ಮಾಡುವ ದಾದಿಯರಿದ್ದರೆಂದು ತೋರುತ್ತದೆ.[22]

ಕೇವಲ ಹೆಂಗಸರೇ ಅಲ್ಲದೆ ಆಗಿನ ಕಾಲದ ಗಂಡಸರೂ ಕೇಶಾಲಂಕಾರದಲ್ಲಿ ರಸಿಕರಾಗಿದ್ದರು: "ಉದ್ದವಾಗಿ ಕೂದಲನ್ನು ಬೆಳೆಸಿ ಮುಡಿಕಟ್ಟುವರು. ಕೆಲವರು ಮುಡಿಯನ್ನು ಉದ್ದವಾಗಿ ಇಳಿಬಿಡುವರು. ಕೆಲವರು ತುರುಬು ಕಟ್ಟುವುದೂ ಉಂಟು. ಮುಡಿಗೆ ಹೂಮಾಲೆ ಮುಡಿಯುವರು. ಹೆರಳಿನ ಮೇಲೆ ಚಿಮ್ಮುರಿಹಾಕುವರು. ಕನಕದಾಸರ ಈ ವರ್ಣನೆ ಗಂಡಸರ ಕೇಶಾಲಂಕಾರದ ಸೊಗಸಾದ ಚಿತ್ರವನ್ನು ನೀಡುತ್ತದೆ: "ಒಮ್ಮೊರು ಕೇಶಪಾಶವಮಾಡಿ ತ್ರಿಬಾಗೆಯ, ಘಮ್ಮನೆ ನಿಡುಜಡೆವೆಣೆದು, ಕಮ್ಮಲರ್ಗಳ ಸೂಡಿ, ಸಿರಿಮುಡಿಯಲಿ ವೀರಚಿಮ್ಮುರಿಯನು, ಹಾಯ್ಕಿದನು." (ಮೋಹನ ತರಂಗಿಣಿ)

ವಿದೇಶೀ ಪ್ರವಾಸಿಗಳ ವರದಿಗಳಿಂದ ನಮಗೆ ವಿಜಯನಗರ ಕಾಲದ ಜನರ, ರಾಜರ, ಉಡುಪು, ಆಹಾರ ವಸತಿ ಮುಂತಾದುವುಗಳ ಬಗೆಗೆ ಸ್ವಲ್ಪ ತಿಳಿವಳಿಕೆ ದೊರೆಯುತ್ತದೆ. ಕೃಷ್ಣದೇವರಾಯನ ಅರಮನೆಗೆ ಭೇಟಿಯಿತ್ತ ಪಾಯೇಸನು ಅವುಗಳನ್ನು ವಿವರಪೂರ್ಣವಾಗಿ ವರ್ಣಿಸಿದ್ದಾನೆ:[23] ಶಾಸನಗಳಲ್ಲಿ ದೊರೆಯುವ ಕೆಲವು ಹೇಳಿಕೆಗಳು[24] ವಿದೇಶೀ ಪ್ರವಾಸಿಗಳ ಹೇಳಿಕೆಗಳನ್ನು ಪುಷ್ಟೀಕರಿಸಿವೆ. ಆದರೆ, ವಿದೇಶೀಯರು ಜನರ ವಸತಿಯ ವಿಚಾರವಾಗಿ ಹೆಚ್ಚು ವಿವರಗಳನ್ನು ಒದಗಿಸಿದ್ದಾರೆ: "ಸಾಮಾನ್ಯ ಜನತೆಯ ಮನೆಗಳು ಹುಲ್ಲಿನ ಜೋಪಡಿಗಳಾಗಿದ್ದರೂ ಅವು ಅವರವರ ವೃತ್ತಿಗೆ ಅನುಸಾರವಾಗಿ ವಿಂಗಡಣೆಯಾಗಿದ್ದವು.[25] ಬೀದಿಗಳ ಇಕ್ಕೆಲದಲ್ಲೂ ಜೋಪಡಿ ಮನೆಗಳನ್ನು ಕಾಣಬಹುದು" ಎಂದು ಬಾರ್ಬೋಸ[26] ಹೇಳಿದರೆ, "ಹಂಪೆಯ ಪೇಟೆ ಬಹಳ ಸುಂದರವಾದ ಮಹಡಿಗಳಿಂದ, ಕಮಾನಿನಂತಹ ಮೇಲ್ಛಾವಣಿಯಿಂದ ನಿರ್ಮಿತವಾದ ಒಂದಸ್ತಿನ ತಾರಸಿಮನೆಗಳಿಂದ ಕೂಡಿತ್ತು" ಎಂದು ಪಾಯೇಸ್ ಹೇಳುತ್ತಾನೆ.[27] ಹುಲ್ಲಿನ ಜೋಪಡಿ ಮನೆಗಳಲ್ಲದೆ ಹೆಂಚಿನ ಮನೆಗಳೂ[28] ಮಾಳಿಗೆ ಮನೆಗಳೂ[29] ಇದ್ದವು. ಮಾಳಿಗೆ ಮನೆಯನ್ನು ಕುರಿತು ಅನೇಕ ರೀತಿಯ ವಿವರಗಳು ಅಲ್ಲಲ್ಲಿ ದೊರೆಯುತ್ತವೆ.[30]

ಅರಮನೆಗಳು ರಾಜವೈಭವದಿಂದ ಮೆರೆಯುತ್ತಿದ್ದವು. ಕನಕದಾಸರು ದ್ವಾರಕಾ ನಗರಿಯಲ್ಲಿ ಬ್ರಾಹ್ಮಣರ ಮನೆಗಳನ್ನು ವರ್ಣಿಸುತ್ತ "ಅವು ಹೊಂದಗಡಿನ ಹೊದಿಕೆಯ ಮನೆಗಳಾಗಿದದವು" ಎಂದು ಹೇಳುತ್ತಾರೆ.[31] ದಾಸರ ಈ ಹೇಳಿಕೆ ಉತ್ಪ್ರೇಕ್ಷೆ ಎನಿಸಬಹುದಾದರೂ, ವಿದೇಶೀ ಪ್ರವಾಸಿಗಳ ವರದಿಗಳೇ ಸಾಕ್ಷಿ. ಅಬ್ದುಲ್ ರಜಾಕನು ತಾನು ಬೇಟಿ ಇತ್ತ ದೊರೆ 2ನೇ ದೇವರಾಯನ ಅರಮನೆಯನ್ನು ನೋಡಿ ಕೊಟ್ಟಿರುವ ವರ್ಣನೆ ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ: "ರಾಜರ ಅರಮನೆಯ ಮೇಲ್ಛಾವಣಿಯನ್ನೂ ಗೋಡೆಗಳನ್ನು ಚಿನ್ನದ ತಗಡುಗಳಿಂದ ಹೊಂದಿಸಿ ವಜ್ರಗಳಿಂದ ಅಲಂಕರಿಸಿದ್ದರು. ತಗಡು ಕತ್ತಿಯ ಅಲುಗಿನಷ್ಟು ಮಂದವಾಗಿತ್ತು. ಚಿನ್ನದ ಮೊಳೆಗಳನ್ನೇ ಉಪಯೋಗಿಸಿ ತಗಡನ್ನು ಜೋಡಿಸಿದ್ದರು" (ಅದೇ)[31a]

ವಿಜಯನಗರ ಕಾಲದಲ್ಲಿ ವೃತ್ತಿನಿರತ ವಾಸ್ತು ತಜ್ಞರು ಇದ್ದು ಮನೆಗಳನ್ನು ವೈಭವಯುತವಾಗಿಯೂ ಅಂದ ಚಂದವಾಗಿಯೂ ರಾಜಮನೆತನದವರಿಗೆ ಕಟ್ಟಿಸಿಕೊಡುತ್ತಿದ್ದರು. ಆದರೆ ಬಡವರ ಮನೆಗಳು ಮತ್ತೆ ಎಂದಿನಂತೆ ಅತಿ ಸಾಮಾನ್ಯವಾಗಿದ್ದು ವಿಜಯನಗರ ಕಾಲದ ವರ್ಗಕ್ಕಿಂತ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತವೆ.

"ವಿಜನಯಗರ ಸಾಮ್ರಾಜ್ಯವು ದಕ್ಷಿಣ ಭಾರತ ಸಂಸ್ಕೃತಿಯ ರೂಪಕ" ಎಂದು ಬಾರ್ಬೋಸ ಒಂದೆಡೆ ಹೇಳಿದ್ದಾನೆ. ಪುರಾತನ ಸಂಪ್ರದಾಯಗಳ ಪೋಷಕರಂತೆ ವಿಜಯನಗರದ ಅರಸರು ನಡೆದುಕೊಂಡಿದ್ದಾರೆ. ಅವರ ಉದಾರವಾದ ಕೊಡುಗೈ ನೀತಿಯಿಂದ ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ ಮುಂತಾದ ಕಲೆಗಳು ಪುಷ್ಟಿಯಾಗಿ ಬೆಳೆದವು. ಸಂಗೀತ ಕ್ಷೇತ್ರದಲ್ಲಂತೂ ವಿಜಯನಗರ ಸಾಮ್ರಾಜ್ಯವು ಒಂದು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿತು. ಸಂಗೀತಶಾಸ್ತ್ರವನ್ನು ಕುರಿತ ಪ್ರೌಢಗ್ರಂಥಗಳು ರಚನೆಯಾದವು.[32]

"ಧರ್ಮಸಂಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದ ವಿದ್ಯಾರಣ್ಯರು 14ನೇ ಶತಮಾನದಲ್ಲಿ ಸಂಗೀತ ಪುನರುತ್ಥಾನಾಚಾರ್ಯರೂ ಆಗಿದ್ದಾರೆ. ಅವರ 'ಸಂಗೀತಸಾರ'ವೆಂಬ ಮಹಾ ಗ್ರಂಥದಿಂದ ಇತರ ಸಂಗೀತ

ಗ್ರಂಥಕಾರರು ತಮ್ಮ ಗ್ರಂಥದಲ್ಲಿ ಉದ್ಧರಿಸಿದ್ದರೂ, ವಿದ್ಯಾರಣ್ಯರ ಸಂಪೂರ್ಣ ಗ್ರಂಥ ಉಪಲಬ್ಧವಿಲ್ಲ.[33] ವಿದ್ಯಾರಣ್ಯರು 15 ಜನಕರಾಗಗಳನ್ನು ಹೆಸರಿಸಿ ಇಂದಿನ ಜನಕ ಜನ್ಯರಾಗ ಪದ್ಧತಿಗೆ ಮಾರ್ಗದರ್ಶಕರಾಗಿದ್ದಾರೆ"[34] "ಮೇಳಜನ್ಯ ಪದ್ಧತಿಯ ಮೇಲೆ ರಾಗಗಳನ್ನು ವಿಭಜಿಸಲು ಪ್ರಯತ್ನಿಸಿದವರಲ್ಲಿ ವಿದ್ಯಾರಣ್ಯರೇ ಪ್ರಾಚೀನರು. ಹಿಂದೂಸ್ಥಾನಿ ಮತ್ತು ಕರ್ಣಾಟಕ ಸಂಗೀತವೆಂಬ ಸ್ಪಷ್ಟವಿಭೇದ ಇವರ ಕೃತಿಯಲ್ಲಿ ಕಂಡುಬರುತ್ತದೆ. ಕರ್ಣಾಟಕ ಸಂಗೀತದ ಹಿರಿಮೆಯನ್ನು ಅದು ಎತ್ತಿ ತೋರಿಸುತ್ತದೆ."[35]

ವಿಜಯನಗರದ ಇಮ್ಮಡಿ ದೇವರಾಯನಿಂದ ಪ್ರೋತ್ಸಾಹ ಪಡೆದು ಶಾರ್ಙ್ಗದೇವನ 'ಸಂಗೀತರತ್ನಾಕರ'ಕ್ಕೆ ಭಾಷ್ಯವನ್ನು ಬರೆದ ಚತುರ ಕಲ್ಲಿನಾಥನು ಸ್ಮರಣೀಯ. ಈತನ ವ್ಯಾಖ್ಯಾನ ಸಂದಿಗ್ಧ ಸ್ಥಿತಿಯಲ್ಲಿದ್ದ ಅಂದಿನ ಸಂಗೀತದ ಬೆಳವಣಿಗೆಗೆ ಸರಿಯಾದ ಮಾರ್ಗದರ್ಶನ ಮಾಡುವ ಪ್ರಬೋಧ ಶಕ್ತಿಯಾಗಿ ಪರಿಣಮಿಸಿತು.[36] ಸಂಗೀತ ಸಾಹಿತ್ಯ ಮತ್ತು ಧರ್ಮಗಳಲ್ಲಿ ವಿಶೇಷ ಅಭಿರುಚಿಯನ್ನು ಹೊಂದಿ 'ಗಾಂಧರ್ವ ಗಂಭೀರ' ಎಂಬ ಹೆಸರಿನಿಂದ ಪ್ರಸಿದ್ಧನಾ ಸುಸಂಸ್ಕೃತ ದೊರೆ 2ನೆಯ ದೇವರಾಯನ ಆಸ್ಥಾನದಲ್ಲಿದ್ದ ಕಲ್ಲಿನಾಥ ರಾಜನ ಆ ಗುಣಗಳನ್ನು ಅಧಿಕಾರವಾಣಿಯಿಂದ ಶಾಸ್ತ್ರೀಯವಾಗಿ ನಿರೂಪಿಸಿದ ಶಾಸ್ತ್ರಜ್ಞ ಮತ್ತು ಶಾಸ್ತ್ರದಲ್ಲಿ ತಾನು ಪ್ರತಿಪಾದಿಸಿದುದನ್ನು ಸ್ವತಃ ಹಾಡಿ ತೋರಿಸುವ ಪ್ರತಿಭಾವಂತ ಕಲಾವಿದನೂ ಆಗಿದ್ದನು. ಕಲ್ಲಿನಾಥನಂತಹ ಸಂಗೀತಶಾಸ್ತ್ರಜ್ಞನಿಗೆ ಪೋಷಣೆಯನ್ನಿತ್ತುದು ಸಂಗೀತ ಪ್ರಪಂಚದಲ್ಲಿ ಒಂದು ಮಹತ್ವದ ಘಟನೆ. ಇದರಿಂದ ಇಬ್ಬರ ಕೀರ್ತಿಯೂ ಕರ್ನಾಟಕದಲ್ಲಿ ಅಜರಾಮರವಾಯಿತು.[37]

ವಿಜಯನಗರ ಸಂಸ್ಥಾನದ ಆಡಳಿತಕ್ಕೆ ಸೇರಿದ ಚಂದ್ರಗಿರಿಯ ರಾಜನಾದ ಸಾಳ್ವ ನರಸಿಂಹನಿಗೆ ಗುರುಗಳಾಗಿದ್ದವರು ಶ್ರೀಪಾದರಾಯರು. ಮಧ್ವಮತ ಸಂಪನ್ನರಾದ ಶ್ರೀಪಾದರಾಯರು ಸಂಗೀತದಲ್ಲಿ ಮೇಧಾವಿಗಳು 'ರಂಗವಿಠಲ' ಮುದ್ರಿಕೆಯಿಂದ ಕನ್ನಡ ಭಾಷೆಯಲ್ಲಿ ನೂರಾರು ಭಗವದ್ಭಕ್ತಿರಸಭರಿತ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಶಿಷ್ಯರಾದ ವ್ಯಾಸರಾಯರಿಗೂ ಪ್ರಶಿಷ್ಯರಾದ ಪುರಂದರದಾಸರಿಗೂ ಈ ರಚನೆಗಳು ಮಾರ್ಗದರ್ಶನ ಮಾಡಿವೆ.

ವಿಜಯನಗರದ ಕೃಷ್ಣದೇವರಾಯನಿಗೆ ಧರ್ಮಗುರುಗಳಾಗಿದ್ದ ವ್ಯಾಸರಾಯರು, ಸಂಸ್ಕೃತದಲ್ಲಿ ವಿದ್ವತ್ತನ್ನು ಪಡೆದು ಸಂಗೀತದಲ್ಲಿ ಮಹಾಪಂಡಿತರಾಗಿದ್ದರು. ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ರಾಗತಾಳಗಳಲ್ಲಿ ಅನೇಕ ಕನ್ನಡ ಕೀರ್ತನೆಗಳನ್ನೂ ಸುಳಾದಿಗಳನ್ನೂ ವ್ಯಾಸರಾಯರು ರಚಿಸಿದ್ದಾರೆ. ವಿಜಯನಗರದ ಕಾಲದಲ್ಲಿದ್ದು ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದಂತೆ ಗ್ರಂಥ ರಚಿಸಿದ ಮತ್ತೊಬ್ಬ ವ್ಯಕ್ತಿ ರಾಮಾಮಾತ್ಯ. ದೊರೆ ರಾಮರಾಯನ[38] ಮಂತ್ರಿಯಾಗಿದ್ದ ರಾಮಾಮಾತ್ಯನ 'ಸ್ವರಮೇಳ ಕಲಾನಿಧಿ' ಎಂಬುದು ಒಂದು ಗಮನಾರ್ಹ ಸಂಸ್ಕೃತ ಗ್ರಂಥ.[39]

ಸಂಗೀತಶಾಸ್ತ್ರದಲ್ಲೂ ಅಭ್ಯಾಸಕ್ರಮದಲ್ಲೂ ಹೊಸ ಯುಗವನ್ನೇ ಪ್ರಾರಂಭಿಸಿ ಇಂದು ಪ್ರಚಾರದಲ್ಲಿರುವ ಸಂಗೀತ ರೂಪದ ಆದ್ಯಪ್ರವರ್ತಕರು ಪುರಂದರದಾಸರು. ಮಹತ್ತರವಾದ ವೇದಾಂತ ತತ್ವಗಳು ಜನಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುವಂತೆ ತಿಳಿಗನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದರು. ವಿಶ್ವಭಾಷೆಯಾದ ಸಂಗೀತದಲ್ಲಿ

ಸುಪ್ತಶಕ್ತಿಯನ್ನು ಅರಿತ ಪುರಂದರದಾಸರು ಜನತೆಯನ್ನು ಸಂಗೀತದ ಮೂಲಕ ಭಗವಂತನೆಡೆಗೆ ತಿರುಗಿಸುವ ಯತ್ನವನ್ನು ಮಾಡಿದರು.

ದಾಸರ ಕಾಲದಿಂದೀಚೆಗೆ ಕರ್ನಾಟಕ ಸಂಗೀತ ಒಂದು ನಿರ್ದಿಷ್ಟ ರೂಪವನ್ನು ತಳೆಯಿತು. ಪುರಂದರದಾಸರು ಮುಂದಿನ ವಾಗ್ಗೇಯಕಾರರೆಲ್ಲರಿಗೂ ಗುರುಗಳಾಗಿ ಪರಿಣಮಿಸಿದರು. ಕರ್ನಾಟಕ ಸಂಗೀತದ ಸೀಮಾಪುರುಷರಾದ ತ್ಯಾಗರಾಜರೂ ಅವರನ್ನು ಗುರುಗಳೆಂದು ಅಂಗೀಕರಿಸಿ ಸ್ತುತಿಸಿದ್ದಾರೆ ಮತ್ತು ದಾಸರಿಂದ ಪ್ರಭಾವಿತರಾಗಿ ತಾವು ಅನೇಕ ಕೃತಿಗಳನ್ನು ರಚಿಸಿದ್ದಾರೆ.[40]

ಸಂಗೀತಕ್ಕೆ ಮಹೋನ್ನತ ಸೇವೆ ಸಲ್ಲಿಸಿದ ಮಹನೀಯರಲ್ಲಿ ಕ್ರಿ.ಶ. 1500ರಲ್ಲಿದ್ದ ನಿಜಗುಣ ಶಿವಯೋಗಿಗಳೂ ಒಬ್ಬರು. ನಿಜಗುಣರು ವೇದಾಂತ ಮತ್ತು ಸಂಗೀತಗಳೆರಡರಲ್ಲೂ ಮಹಾಪಂಡಿತರು. ಅವರ ವಿವೇಕಚಿಂತಾಮಣಿ' ಎಂಬ ಗ್ರಂಥ ಧರ್ಮದ ವಿಶ್ವಕೋಶವಾಗಿದೆ. ಕನ್ನಡ ಭಾಷೆಯಲ್ಲಿ ಸಂಗೀತಶಾಸ್ತ್ರವನ್ನು ವಿಶದೀಕರಿಸುವ ಮೊದಲ ಗ್ರಂಥ 'ವಿವೇಕ ಚಿಂತಾಮಣಿ' ನಿಜಗುಣರು ಕೆಲವು ಕೀರ್ತನೆಗಳನ್ನೂ ರಚಿಸಿದ್ದಾರೆ. ಇವರ ಕೆಲವು ಕೀರ್ತನೆಗಳು ಅಂದು ಪ್ರಚಲಿತವಾಗಿದ್ದ ರಾಗಗಳನ್ನೂ ವೀಣೆಯ ಸ್ವರೂಪವನ್ನೂ ಚಿತ್ರಿಸುತ್ತವೆ.[41]

ಸಂಗೀತಕ್ಕೆ ಪಕ್ಕವಾದ್ಯಗಳು ಬಹುಮುಖ್ಯ ಸಾಧನಗಳು ಅವುಗಳನ್ನು ಸಿದ್ಧಪಡಿಸುತ್ತಿದ್ದವರು, ನುಡಿಸುತ್ತಿದ್ದವರು ಸಹ. ಒಂದು ನಿರ್ದಿಷ್ಟ ಸಮುದಾಯಕ್ಕೆ ಸೇರಿದವರೇ ಆಗಿದ್ದರು. ಪ್ರಾಚೀನ ಲಾಕ್ಷಣಿಕರು ವಾದ್ಯಗಳನ್ನು ತತ, ಸುಷಿರ, ಆನದ್ಧ, ಘನ - ಎಂದು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ. ನಿಜಗುಣರು 'ವಿವೇಕಚಿಂತಾಮಣಿ'ಯಲ್ಲಿ ವಾದ್ಯ ಭೇದನಗಳನ್ನು ಹೇಳುತ್ತಾ, ಈ ನಾಲ್ಕು ವಾದ್ಯಗಳನ್ನು ಹೇಳಿ ಅವುಗಳ ವಿವರಣೆಯನ್ನು ಉದಾಹರಣೆಗಳೊಂದಿಗೆ ಕೊಡುತ್ತಾರೆ:

"ತಂತಿಯನ್ನು ಕಟ್ಟಿ ನುಡಿಸುವ ವೀಣಾಕವೇ ತತವೆನಿಸುವುದು. ಚರ್ಮವಂ ಕಟ್ಟಿ ನುಡಿಸುವ ಮುರಜಾಧಿಕವೇ ಆನದ್ಧವೆನಿಸುವುದು, ಕಂಚಿನ ತಾಳಾಧಿಕವೇ ಘನವೆನಿಸುವುದು, ಊದಿ ಬಾರಿಸುವ ನುಡಿ ಮೇಳ ಮೊದಲಾದುದೇ ಸುಷಿರವೆನಿಸುವುದು. ಶೃಂಗವಾದ್ಯಗಳೆಂಬ ಕೊಂಬು, ತಮ್ಮಟೆವೆಂಬ ಹಲಿಗೆ, ಶಂಖವೆಂಬ ಧವಳ, ಭೇರಿಯೆಂಬ ಭಾಜಾಜಯ ಘಂಟೆಯೆಂಬ ಜಾಗಟೆ - ಇತ್ತೆರದ ಪಂಚಮಹಾವಾದ್ಯಂಗಳಂ; ಭದ್ರವೆಂಬ ಕರಾಡಿ, ಶಾಸಕವೆಂಬ ನಗಾರಿ, ಭೀಷಣವೆಂಬ ತ್ರಾಸ, ಘೋಷಣವೆಂಬ ಹುಡುಕ್ಕಾ, ಡಿಂಡಿಮವೆಂಬ ಢಕ್ಕೆ, ಡಮರವೆಂಬ ಡೋಲು, ಜರ್ಝರವೆಂಬ ಝಾಯಿ, ಕಾಹಳವೆಂಬ ಗೌರಿಕಾಳೆ, ದುಂದುಭಿಯೆಂಬ ಧೋರ, ಘಂಟಿಕೆಯೆಂಬ ಘಂಟೆ, ಇತ್ತೆರದ ದಶವಾದ್ಯಂಗಳು... ಹೀಗೆ ನಿಜಗುಣರು ಚತುರ್ವಿಧವಾದ್ಯಭೇದಗಳನ್ನೂ, ಪಂಚಮಹಾವಾದ್ಯ ಮತ್ತು ದಶವಾದ್ಯಗಳ ಹೆಸರುಗಳನ್ನು ಹೇಳುವರು.[42]

"ವಾದ್ಯವು ಮನುಷ್ಯನ ಶಾರೀರದ ಪ್ರತಿಬಿಂಬ, ಅದನ್ನು ಅನುಕರಣೆ ಮಾಡುವುದೂ, ಸಾಧ್ಯವಾದರೆ ಅದಕ್ಕೆ ಸಲಹೆ ಕೊಡುವುದೂ ಇದರ ಕೆಲಸ. ಈ ದೃಷ್ಟಿಯಿಂದಲೇ ನಮ್ಮವರು ವಾದ್ಯಗಳನ್ನು ಸೃಷ್ಟಿ ಮಾಡಿದರು.

ಮಿಕ್ಕ ಬಣ್ಣರೂಪ ಅಳತೆ, ಅಲಂಕಾರ ಮುಂತಾದ ಎಲ್ಲ ವಿಷಯಗಳೂ ಕೇವಲ ವಿನೋದ ಪ್ರಪಂಚಕ್ಕೆ ಸೇರಿದವು. ಮೂರು ಸ್ಥಾಯಿಗಳಲ್ಲೂ ಸಜೀವವಾದ, ಗಂಭೀರನಾದ, ಕೇಳುವುದಕ್ಕೆ ಇಂಪು, ಎಲ್ಲಾ ಗಮಕಗಳನ್ನೂ ಸ್ಪಷ್ಟವಾಗಿ ನುಡಿಸಲು ಅನುಕೂಲ, ನೋಡುವುದಕ್ಕೆ ಒಟ್ಟಂದವಾದ ಚದರವಾದ ಆಕಾರ - ಇವೇ ವಾದ್ಯ ರಚನೆಯಲ್ಲಿ ಮುಖ್ಯವಾದ ವಸ್ತುಗಳು."

ಲಾಕ್ಷಣಿಕರು ಹೇಳಿರುವ ಈ ನಾಲ್ಕು ಬಗೆಯ ವಾದ್ಯಗಳೂ ಬಹಳ ಹಿಂದಿನಿಂದ ಬಳಕೆಯಲ್ಲಿದ್ದವು ಎಂಬುದಕ್ಕೆ ಶಾಸನಗಳಲ್ಲಿ, ಸಾಹಿತ್ಯ, ಕೃತಿಗಳಲ್ಲಿ ಕಂಡುಬರುವ ಅವುಗಳ ಹೆಸರುಗಳೇ ಸಾಕ್ಷಿ. ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ನಾನಾ ವಿಧವಾದ ವಾದ್ಯಗಳು ಇಂತಿವೆ. ತಮಟೆ, ಭೇರಿ, ಪಟಹ, ಮೃದಂಗ, ಡೋಲು, ಕರಡೆ, ಚಂಬಕ, ಡೌಡೆ (ನಗಾರಿ), ನಿಸ್ಸಾಳ, ಡಮರುಗ, ಹರೆ, ಬೊಂಬುಳಿ, ಡಿಂಡಿಮ, ಮದ್ದಳೆ, ಗಿಡಿಬಿಡಿ, ಡಮಾಣ, ಢಕ್ಕೆ, ಮೌವರಿ, ಮುರಜ, ತುಡುಮು.[43]

ಘನವಾದ್ಯಗಳು : ಜಯಘಂಟೆ, ಕಂಸಾಳೆ, ಜಾಗಟೆ, ತಾಳ, ಕೈತಾಳ, ಮತ್ತು ಸುಷಿರ ವಾದ್ಯಗಳೆಂದರೆ: ಕೊಂಬು, ಶಂಖ, ಕಹಳೆ, ವೇಣು, ನಾಗಸ್ವರ, ತುತ್ತೂರಿ, ತತ್ತಿರಿ (ತಿದಿವಾದ್ಯ) ಬರುಗು[44] ಇವಲ್ಲದೆ, ತತವಾದ್ಯಗಳು,[45] ಮಂಗಳವಾದ್ಯಗಳು,[46] ಪಂಚಮಹಾವಾದ್ಯ[47] ಮೊದಲಾದವು ಸಂಗೀತಕ್ಕೆ ಪಕ್ಕವಾದ್ಯಗಳಾಗಿ ಸಹಕರಿಸುತ್ತವೆ. ಇವುಗಳನ್ನು ಸಿದ್ದಮಾಡುವ ಒಂದು ಸಮುದಾಯ ವಿಜಯನಗರ ಕಾಲದಲ್ಲಿ ಅಸ್ಥಿತ್ವದಲ್ಲಿತ್ತು.

**ನೃತ್ಯ :** ಪ್ರಕೃತಿಯಲ್ಲಿರುವ ಲಯಬದ್ಧವಾದ ವ್ಯವಸ್ಥೆಗೆ ಮಾನವನು ತೋರಿಸಿದ ದೈಹಿಕ ಪ್ರತಿಕ್ರಿಯೆಯೇ ನರ್ತನಕ್ಕೆ ಮೂಲ. "Dancing is the rhythmatic physical movement prompted by feelings and emotions" (Projes Banerji, dance of India)

ಮನುಷ್ಯನ ಭಾವನೆಗಳ ಪ್ರಕಾಶನಕ್ಕಾಗಿ ಈ ದೈಹಿಕ ಪ್ರತಿಕ್ರಿಯೆಯೂ ಲಯಬದ್ಧವಾದ ರೀತಿಯಲ್ಲಿ ರೂಪುತಾಳಿತು. ಸಂವೇದನೆಗಳಿಗೂ ಭಾವನೆಗಳಿಗೂ ಅನುಗುಣವಾಗಿ ಉಂಟಾಗುವ ದೇಹದ ಲಯಬದ್ಧವಾದ ಚಲನೆಯೇ ನೃತ್ಯದ ಮೂಲ.[48]

ದಕ್ಷಿಣ ಭಾರತದಲ್ಲಿ ನೃತ್ಯಕಲೆ ವಿಜಯನಗರದ ಅರಸರ ಕಾಲದಲ್ಲಿ ಶಿಖರವನ್ನು ಮುಟ್ಟಿತು. ವಿಜಯನಗರ ಸಾಮ್ರಾಜ್ಯಕ್ಕೆ ಮುಂಚೆಯೂ ಸಂಗೀತ ಮತ್ತು ನೃತ್ಯಕಲೆ ಜನಜೀವನವನ್ನು ಸೂರೆಗೊಂಡಿದ್ದವು. ವಿದೇಶೀ ಪ್ರವಾಸಿಗಳ ಅಬ್ದುಲ್ ಜಾಕ್, ಪಾಯೇಸ್[49] ಮತ್ತು ನ್ಯೂನಿಜ್[50] ಅವರುಗಳು, ವಿಜಯನಗರದ ನವರಾತ್ರಿ ವೈಭವವನ್ನೂ ಹಾಗೂ ಹೆಂಗಸರು ಹೊಂದಿದ್ದ ಸ್ಥಾನಗಳನ್ನು ಕುರಿತು ಹೇಳುವಾಗ ನೃತ್ಯನಾರಿಯರ ವೈಭವವನ್ನೂ ಅವರ ಹಾವಭಾವಗಳನ್ನೂ ನೋಡಿ ಬೆರಗುಕೊಂಡಿದ್ದಾರೆ. ಭಾವಪರವಶರಾಗಿದ್ದಾರೆ. ಪಾಯೇಸನು ತಾನು ಅರಮನೆಯಲ್ಲಿ ಕಂಡ ನಾಟ್ಯಶಾಲೆಯ ರಮ್ಯತೆಯನ್ನೂ, ಕಲಾವೈಭವವನ್ನೂ ಮನಮುಟ್ಟಿ ಹೊಗಳಿದ್ದಾನೆ; ಹಾಗೆಯೇ ಮಹಾನವಮಿ ಹಬ್ಬದಲ್ಲಿ ನಡೆಯುತ್ತಿದ್ದ ನೃತ್ಯಪ್ರದರ್ಶನವನ್ನು ವಿಸ್ತಾರವಾಗಿ ಚಿತ್ರಿಸಿದ್ದಾನೆ.[51]

ಪೂಜೆಯಲ್ಲಿ ದೇವರಿಗೆ ಮಾಡುವ ನಾನಾ ವಿಧವಾದ ಉಪಚಾರಗಳಲ್ಲಿ ನೃತ್ಯೋಪಚಾರವೂ ಒಂದು.[52] ಕರ್ನಾಟಕದ ಶಾಸನಗಳಲ್ಲಿ 'ಅಂಗಭೋಗ' ಮತ್ತು 'ರಂಗಭೋಗ' ಎಂಬ ಮಾತುಗಳು ಬರುತ್ತವೆ. ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು. ಗರ್ಭಗುಡಿಯ ಮುಂದಿನ ರಂಗದ ಮೇಲೆ, ಎಂದರೆ ದೇವತಾಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತ ನೃತ್ಯಗಳೇ ರಂಗಭೋಗಗಳು. ದೇವದಾಸಿಯರು ರಂಗಭೋಗದ ಉಪಕರಣಗಳು.[53] ಪಾಯೇಸನು ಕೂಡ ವಿಜಯನಗರದಲ್ಲಿನ ದೇವಸ್ಥಾನಗಳನ್ನು ಕುರಿತು ಹೇಳುವಾಗ ದೇವಸ್ಥಾನಕ್ಕೆ ಸೇರಿದ ದೇವದಾಸಿಯರು ದೇವರ ಮುಂದೆ ನೃತ್ಯ ಮಾಡುತ್ತಾರೆ ಎಂದು ಹೇಳಿದ್ದಾನೆ.[54]

ದೇವರಿಗೆ ನೃತ್ಯಸೇವೆಯನ್ನು ಪೂಜೆಯ ಕಾಲದಲ್ಲಿ ದೇವದಾಸಿಯರು ಸಲ್ಲಿಸುವುದು ಹಿಂದಿನಿಂದಲೂ ಬಂದ ಪದ್ಧತಿ. ಆದರೆ ಕೇವಲ ವೇಶ್ಯೆಯರೆ ಅಲ್ಲದೆ ಉತ್ತಮ ಕುಲದವರೂ ನಾಟ್ಯವನ್ನು ಕಲಿಯುತ್ತಿದ್ದರು. ಕರ್ನಾಟಕದ ರಾಣಿಯರಾದ ಶಾಂತಲಾ, ಚಂದಲಾ, ಪದ್ಮಲಾ ಮುಂತಾದವರು ಬಹಿರಂಗವಾಗಿ ರಾಜನ ಮುಂದೆ ನೃತ್ಯಮಾಡಿ ಸಂತುಷ್ಟನಾದ ರಾಜನಿಂದ ಬಹುಮಾನವಾಗಿ ಪಡೆದ ಗ್ರಾಮಗಳನ್ನು ದೇವಬ್ರಾಹ್ಮಣರಿಗೆ ದಾನಮಾಡಿದಂತೆ ಶಾಸನಗಳು ಹೇಳುತ್ತವೆ. ಆದುದರಿಂದ ಸತ್ಕುಲದವರು ಅಭಿನಯ ಮಾಡಿದರೆ ಗೌರವಕ್ಕೆ ಕಡಿಮೆಯೆಂಬ ಭಾವವು 14ನೆಯ ಶತಾಬ್ದದವರೆಗೂ ಇರಲಿಲ್ಲ.[55]

ನಾಟ್ಯಕ್ಕೆ ರಂಗಸ್ಥಳವು ಆವಶ್ಯಕ. ಭರತನ 'ನಾಟ್ಯಶಾಸ್ತ್ರ'ದಲ್ಲಿ ಚತುರಸ್ರ, ತ್ರಿಕೋಣ, ಮಂಡಲಾಕಾರ, ಅರ್ಧಚಂದ್ರಾಕಾರಗಳಾದ ರಂಗಸ್ಥಳವನ್ನು ನಿರ್ಮಿಸುವ ರೀತಿಯನ್ನು ವರ್ಣಿಸಿದೆ.[56] ನಾಟಕ ಶಾಲೆಯಲ್ಲಿ ಪ್ರೇಕ್ಷಾಗೃಹ ಮತ್ತು ರಂಗಭೂಮಿ ಎಂದು ಎರಡು ಮುಖ್ಯ ಭಾಗಗಳು. ವಾದ್ಯಗಾರರು ನೇಪಥ್ಯದಲ್ಲಾಗಲೀ ಪಾರ್ಶ್ವಗಳಲ್ಲಾದರೂ ಇರಬಹುದು. ನೇಪಥ್ಯದ ಮುಂದುಗಡೆ ಪೂರ್ವರಂಗವೂ ಅದರ ಮುಂದೆ ಯವನಿಕೆಯೂ ಇರುವುವು.

ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ನೆನಪಿನ ಕುರುಹಾಗಿ, ಹಂಪೆಯ ವಿರೂಪಾಕ್ಷ ದೇವಾಲಯಕ್ಕೆ ಒಂದು ರಂಗಮಂಟಪವನ್ನೂ, ಗೋಪುರವನ್ನೂ ಕಟ್ಟಿಸಿದಂತೆ ತೋರುವುದು.[57]

ವಿಜಯನಗರದಲ್ಲಿ ವೈಭವದಿಂದ ನಡೆಯುತ್ತಿದ ಮಹಾನವಮಿ ಹಬ್ಬದ ಸಂದರ್ಭದಲ್ಲಿ ಸಂಗೀತ, ನೃತ್ಯಕಲಾ ಪ್ರದರ್ಶನಗಳಿಗೆ ಭವ್ಯವಾದ ರಂಗಮಂಟಪಗಳನ್ನು, ವಿಶಾಲವಾದ ಬಯಲಿನಲ್ಲಿ ರಚಿಸುತ್ತಾರೆ ಎಂದು ಹೇಳಿ, ಆ ರಂಗಮಂಟಪದ ರಚನಾ ಕೌಶಲವನ್ನೂ, ಕಲಾವೈಭವವನ್ನೂ ಅಬ್ದುಲ್ ರಜಾಕನು ಅಮೋಘವಾಗಿ ವರ್ಣಿಸಿದ್ದಾನೆ.[58] ಕೆಲವು ಮಂಟಪಗಳನ್ನು ಯಾವ ರೀತಿ ನಿರ್ಮಿಸಿರುತ್ತಾರೆಂದರೆ ಅವನ್ನು ಬೇಕೆಂದರೆ ಕ್ಷಿಪ್ರದಲ್ಲಿ ತಿರುಗಿಸಿ ಬೇರೊಂದು ಮುಖ ತೋರಿಸಬಹುದು. ಒಂದಂದು ಕ್ಷಣಕ್ಕೆ ಒಂದೊಂದು ತರಹ ಕೋಣೆ ಅಥವಾ ಹಜಾರ ಕಣ್ಣಿಗೆ ಕಾಣಿಸಿಕೊಳ್ಳುತ್ತದೆ.[59] ಸಾರ್ವಜನಿಕ ನೃತ್ಯಪ್ರದರ್ಶನಗಳೇ ಅಲ್ಲದೆ ಅರಮನೆಗಳಲ್ಲೂ ಆಗಾಗ್ಗೆ ನೃತ್ಯ ಮುಂತಾದ ಕಲಾಪ್ರದರ್ಶನಗಳೇರ್ಪಡುತ್ತಿದ್ದವು. ಈ ಪ್ರದರ್ಶನಗಳಿಗೆಂದೇ

ಅರಮನೆಯಲ್ಲಿ ಅನೇಕ ಕಲಾಶಾಲೆಗಳಿದ್ದವು. ಅವುಗಳಲ್ಲಿ ನಾಟ್ಯಶಾಲೆಯೂ ಒಂದು. ಇದನ್ನು ನಾಟಕಶಾಲೆ, ನರ್ತನಶಾಲೆ ಎಂದೂ ಕರೆಯುವರು.[60]

ಈ ನಾಟ್ಯಶಾಲೆಯ ವೈಭವ ವರ್ಣನಾತೀತ. ಅದು ಶ್ರೀಮಂತಿಕೆಯ ಸಂಕೇತ ಒಂದೇ ಅಲ್ಲದೆ ಕುಶಲಕಲೆಯ ಬೀಡೂ ಆಗಿದ್ದಿತು. ಗೋಡೆಗಳಲ್ಲಿ ಉದ್ದಕ್ಕೂ ಸಾಲುಸಾಲಾಗಿ ರನ್ನಗನ್ನಡಿಗಳನ್ನು ಹಾಕಿರಲು, ಮೇಲ್ಕಟ್ಟಿನ ಮೇಲೆ ಜೋಡಿಸಿದ್ದ ಬೊಂಬೆಗಳು ಅದರಲ್ಲಿ ಮಾರ್ಪೊಳೆದಾಗ ಹೊಸಬರು ಭ್ರಾಂತರಾಗಿ ಕಂಭಗಳಲ್ಲಿ, ಲೋವೆಗಳಲ್ಲಿ ಲಲನಾಸ್ತಂಭಿತ ಮಣಿಪ್ರತಿಮೆಗಳು, ರಂಭೆ ಮೇನಕೆಯರು ನಿಂದರೋ ಎನ್ನುವಂತೆ ಚಿತ್ತಜೃಂಭಣೆಗಳನ್ನು ಮಾಡುತ್ತಿದ್ದವು. ನಾಟ್ಯ ಪ್ರಾರಂಭವಾಗುವುದಕ್ಕೆ ಮುಂಚೆ ಪಕ್ಕವಾದ್ಯಗಳವರು ನಡೆಸುವ ಸಿದ್ಧತೆಯ ಕೆಲವು ಚಿತ್ರಗಳನ್ನು ಗಮನಿಸಿದರೆ ನಾಟ್ಯದಲ್ಲಿ ಯಾವ ಯಾವ ಪಕ್ಕವಾದ್ಯಗಳನ್ನು ಉಪಯೋಗಿಸುತ್ತಿದ್ದರು ಎಂಬುದರ ಕಲ್ಪನೆ ಸ್ವಲ್ಪಮಟ್ಟಿಗೆ ಮೂಡುತ್ತದೆ:[61]

ವಾದ್ಯಗಳನ್ನು ನುಡಿಸುವುದರಲ್ಲಿ ಮಹಿಳಾ ವಾದ್ಯಗಾರ್ತಿಯರೂ ಇದ್ದು ಪ್ರೌಢಿಮೆಯನ್ನು ಗಳಿಸಿ ರಾಜಸಭೆಯಲ್ಲಿ ಸನ್ಮಾನಿತರಾದ ಸಂದರ್ಭಗಳೂ ಅನೇಕವಿವೆ. ಕನಕದಾಸರು 'ಮೋಹನ ತರಂಗಿಣಿಯಲ್ಲಿ ಅನಿರುದ್ಧನು ನಗರ ಶೋಧನೆಗೆಂದು ಹೊರಟಾಗ ಹಸ್ತಿನಾವುಜ, ವೀಣೆ ಮದ್ದಳೆ, ರಾವಣಹಸ್ತ, ಕಿನ್ನರಿ, ಜಂತ್ರ, ವುಡುಕು, ಸ್ವರ ಮಂಡಲ" ಮುಂತಾದವುಗಳೊಂದಿಗೆ ವಿದ್ಯಾಧರ ಸ್ತ್ರೀಯರು ಇಕ್ಕೆಲದಲ್ಲೂ ಇದ್ದುದನ್ನು ಕಂಡುದಾಗಿ ಹೇಳುತ್ತಾರೆ.[61a]

## 4.3. ಸೈನ್ಯ ವ್ಯವಸ್ಥೆ ಹಾಗೂ ವಿವಿಧ ಸಮುದಾಯಗಳು

ವಿಜಯನಗರ ಸಾಮ್ರಾಜ್ಯದ ತನ್ನ ವೈಭವದ ಪರಾಕಾಷ್ಠೆಯನ್ನು ಮುಟ್ಟಲು ಕಾರಣವಾದ ಹಲವು ವಿಚಾರಗಳಲ್ಲಿ ಪ್ರಮುಖವಾಗಿ ಪರಿಗಣಿಸಬೇಕಾದ ಅಂಶವೆಂದರೆ ಸೈನ್ಯವಸ್ಥೆ. ಸುಭದ್ರವಾದ ಸಾಮ್ರಾಜ್ಯದ ಸ್ಥಾಪನೆಗೆ ಸೈನ್ಯವೇ ತಳಹದಿ. ಬಹುಮುಖ್ಯವಾಗಿ ಎಲ್ಲಕ್ಕಿಂತ ಮಿಗಿಲಾಗಿ ತನ್ನ ನೆರೆಹೊರೆಯವರು ಪರಸ್ಪರ ಹೋರಾಟವನ್ನೇ ರೂಢಿಮಾಡಿಕೊಂಡಿದ್ದರಿಂದ ಹಾಗೂ ಅಂದಿನ ರಾಜಕೀಯ ಸನ್ನಿವೇಶಗಳಂತೂ ಸೈನ್ಯವು ಪ್ರಬಲವಾಗಿ ನಿರ್ಮಿತವಾಗುವುದು ಅನಿವಾರ್ಯವೇ ಆಗಿತ್ತೆಂಬುದನ್ನು ದೃಢಪಡಿಸುತ್ತವೆ. ಅತ್ಯಂತ ಶಕ್ತಿಯುತವಾಗಿ ರಾಜ್ಯವಾಳಿದ ವಿಜಯನಗರದಲ್ಲಿ ಸೈನ್ಯ ಸಂಪತ್ತು ಅಗಾಧವಾಗಿಯೇ ಬೆಳೆದಿತ್ತು. ಸದಾ ಹೊಂಚು ಹಾಕುತ್ತಿದ್ದ ಮುಸ್ಲಿಮರು ಧಾಳಿಯನ್ನು ಹಿಂದೆ ತಳ್ಳಿ ಸುಭದ್ರವಾದ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಮತ್ತು ಅದನ್ನು ರಕ್ಷಿಸಿಕೊಳ್ಳುವಲ್ಲಿ ಇವರ ಪಾತ್ರ ಹಿರಿದಾದದ್ದು.

ವಿಜಯನಗರದ ಅರಸರು ಸೈನ್ಯವನ್ನು ಆರಿಸಿಕೊಳ್ಳುವಾಗ ಎರಡು ವಿಧಾನಗಳನ್ನು ಅನುಸರಿಸುತ್ತಿದ್ದರು. ಒಂದನೆಯದು ಸರ್ಕಾರವೇ ನೇರವಾಗಿ ಸೈನಿಕರನ್ನು ಆಯ್ಕೆ ಮಾಡಿಕೊಳ್ಳುವುದು, ಮತ್ತೊಂದು ಆಶ್ರಿತರಾಗಿದ್ದ (ಸಾಮಂತ) ರಾಜರ ಮೂಲಕ ಸೈನಿಕರನ್ನು ಆಯ್ಕ ಮಾಡಿಕೊಳ್ಳುವುದು. ಸೈನ್ಯದ ಆಯ್ಕೆಯಲ್ಲಿ ತುಂಬ ಎಚ್ಚರಿಕೆ

ವಹಿಸಲಾಗುತ್ತಿತ್ತು. ಇಂದಿನಂತೆಯೇ ಅಂದೂ ಸಹ ಎತ್ತರ, ದೇಹದಾರ್ಢ್ಯತೆ ಮೊದಲಾದುವನ್ನು ಮುಖ್ಯವಾಗಿ ಗಮನಿಸಿಯೇ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಅನಂತರ ಸೈನಿಕರಿಗೆ ಯುದ್ಧದ ತರಬೇತಿಯ ಶಿಕ್ಷಣ ನೀಡುತ್ತಿದ್ದರು. ಸೈನಿಕರು ಯಾವ ಕ್ಷಣದಲ್ಲಿಯಾದರೂ ಸಂಭವಿಸುತ್ತಿದ್ದ ಯುದ್ಧಕ್ಕೆ ಸೈನ್ಯವು ಸದಾ ಸಿದ್ಧವಾಗಿರುವಂತೆ ವ್ಯವಸ್ಥೆಗೊಳಿಸಿಕೊಳ್ಳುತ್ತಿದ್ದರು.

ಯುದ್ಧದ ಸಮಯದಲ್ಲಿ ಸೈನ್ಯವನ್ನು ಅನೇಕ ವಿಭಾಗಗಳಾಗಿ ವಿಂಗಡಿಸಿಕೊಳ್ಳಲಾಗುತ್ತಿತ್ತು. ಪ್ರತಿಯೊಂದು ವಿಭಾಗದಲ್ಲಿಯೂ ಸೇನಾಧಿಪತಿಗಳೇ ಮುಖ್ಯಸ್ಥರಾಗಿರುತ್ತಿದ್ದರು. ಇತರ ಅಧಿಕಾರಿಗಳೂ ಇರುತ್ತಿದ್ದರು.

ರಾಜರೇ ಮುಂದೆ ನಿಂತು ಸೈನ್ಯವನ್ನು ಹುರಿದುಂಬಿಸಿ ಶತೃಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಏಕೆಂದರೆ ಅಂದಿನ ಯುದ್ಧ ತಂತ್ರಗಳಲ್ಲಿ ಕೋಟೆಗಳು ಬಹು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವು. ಸೈನ್ಯವು ಯುದ್ಧಕ್ಕೆ ಹೊರಟಾಗ ಅವರ ಜೊತೆಗೆ ಪ್ರಮುಖ ಅವಶ್ಯಕತೆಗಳನ್ನು ಪೂರೈಸಲು ಒಂದು ದೊಡ್ಡ ವ್ಯವಸ್ಥೆಯೇ ಸಿದ್ಧವಾಗಿರುತ್ತಿತ್ತು. ವ್ಯಾಪಾರಿಗಳು ಅಡುಗೆಯವರು ಅಗಸರು ಇತರ ಕೂಲಿಕಾರರು, ಮನರಂಜನೆಗಾಗಿ ಗಾಯಕರು, ವಾದಕರು, ವೈದ್ಯರು, ಖೋಜಾಗಳು, ವೇಶ್ಯೆಯರು ಎಲ್ಲರೂ ಯುದ್ಧಕ್ಕೆ ಹೋಗುವ ರೀತಿಯಲ್ಲಿಯೇ ಏರ್ಪಾಡಾಗಿರುತ್ತಿದ್ದರು.

ಸೈನಿಕರು ಯುದ್ಧದಲ್ಲಿ ತಾವು ತೋರಿದ ಪರಾಕ್ರಮ, ವೀರಾವೇಶಗಳಿಗೆ ಮಹಾರಾಜರು ಕೊಡುತ್ತಿದ್ದ ಬಿರುದುಗಳನ್ನು 'ರಾಮನಾಥ ಚರಿತೆ'ಯಲ್ಲಿ ನೋಡಬಹುದು. ನಂಜುಂಡ ಕವಿಯು ಈ ವರ್ಣನೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಡಾ. ಕೆ. ಶ್ರೀಕಂಠಯ್ಯನವರು ತಮ್ಮ ಮಹತ್ವದ ಕೃತಿಯಾದ 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ' ಚಿತ್ರ ಎಂಬುವುದರಲ್ಲಿ ನಂಜುಂಡ ಕವಿಯು ಈ ಬಿರುದುಗಳ ಹಾಗೂ ಶೌರ್ಯ ಪರಾಕ್ರಮಗಳ ಕುರಿತು ಹೇಳಿರುವ ಮಾತನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಸೈನಿಕರು ಬಣ್ಣಬಣ್ಣದಿಂದ ಕೂಡಿದ ಸೊಗಸಾದ ಶ್ರೀಮಂತ ಉಡುಪನ್ನು ಧರಿಸುತ್ತಿದ್ದರೆಂದು ಪಾಯೀಸನು ಹೇಳಿಕೊಂಡಿದ್ದಾನೆ. ಆದರೆ ಇದು ರಾಜಧಾನಿಯಲ್ಲಿ ರಾಜರಿಂದ ಸೇನಾ ವೀಕ್ಷಣೆಯ ಸಂದರ್ಭದ ಸನ್ನಿವೇಶದ ವರ್ಣನೆಯಾಗಿದೆ. ಏಕೆಂದರೆ ಮತ್ತೊಬ್ಬ ವಿದೇಶಿ ಯಾತ್ರಿಕನಾದ ನ್ಯೂನಿಜ್‌ನು ಕೃಷ್ಣದೇವರಾಯನು ರಾಯಚೂರಿನ ಮೇಲೆ ದಂಡೆತ್ತಿ ಹೋದಾಗ, ಸಮರ ಸೈನಿಕರ ಉಡುಗೆ ತೊಡುಗೆಯ ಸಂಪೂರ್ಣ ಚಿತ್ರವನ್ನು ತೆರೆದಿಡುತ್ತಾರೆ. ಇಲ್ಲಿ ಅವನು ಕೇವಲ ಸೈನಿಕರು ಯುದ್ಧಕ್ಕೆ ಬಳಸುತ್ತಿದ್ದ ಆಯುಧಗಳ ಕುರಿತು ವರ್ಣಿಸಿರುವುದೇ ಹೊರತು ಅವರು ಉಡುಗೆ-ತೊಡುಗೆಯ ಬಗ್ಗೆ ಚರ್ಚಿಸಿರುವುದು ಕಂಡುಬರುವುದಿಲ್ಲ. ಸಾಮಾನ್ಯ ಸೈನಿಕರು ರಣರಂಗದಲ್ಲಿ ಉಪಯೋಗಿಸುತ್ತಿದ್ದ ಬಟ್ಟೆಗಳು ತುಂಬ ಸಾಧಾರಣವಾಗಿದ್ದವು. ಆಧಾರಗಳಲ್ಲಿಯೂ ಸಹ ಸೈನಿಕರ ಉಡುಗೆಯ ಬಗ್ಗೆ ಹೆಚ್ಚಿನ ಪ್ರಸ್ತಾಪ ಕಂಡುಬರುವುದಿಲ್ಲ. ಕೇವಲ ಅವರು ಯುದ್ಧದಲ್ಲಿ ಬಳಸುತ್ತಿದ್ದ ವಸ್ತುಗಳ ಬಗ್ಗೆ ಹೆಚ್ಚಿನ ಗಮನ ಹರಿಸಿದಂತೆ ಕಂಡುಬರುತ್ತದೆ.

ವಿಜಯನಗರದರಸರ ಕಾಲದಲ್ಲಿ ಸೈನಿಕರು ಯುದ್ಧಗಳಲ್ಲಿ ಬಳಸುತ್ತಿದ್ದ ಆಯುಧಗಳು ವಿವಿಧ ರೀತಿಯವಾಗಿದ್ದವು. ಇವುಗಳ ವರ್ಣನೆಯನ್ನು 'ಮಧುರಾವಿಜಯಂ' ಹಾಗೂ 'ಸಾಳ್ವಭ್ಯುದಯಮ್' ಎಂಬ

ಸಂಸ್ಕೃತ ಗ್ರಂಥಗಳಿಂದ ತಿಳಿಯಬಹುದಾಗಿದೆ. ಈ ಕಾವ್ಯಗಳು ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಆಯುಧಗಳ ಕುರಿತು ಬಾಕು(ಕತ್ತಿ), ಶರಾಸನ (ಬಿಲ್ಲು), ಅಸಿ (ಕತ್ತಿ), ಕರ್ಪಣ (ಒಂದು ರೀತಿಯ ಸಣ್ಣ ಕತ್ತಿ), ಭರ್ಚಿ (ಈಟಿ), ಕಠಾರಿ ಕಾಸ್ತ್ರಮ್ (ಒಂದು ರೀತಿಯ ಬಾಣ), ಕಾರ್ಮುಕಂ (ಬಿಲ್ಲು), ಪ್ರಾಸ (ಕ್ಷಿಪಣಿ) ಮುಂತಾದ ಆಯುಧಗಳ ಹೆಸರನ್ನು ತಿಳಿಸುತ್ತವೆ. ಶತ್ರುಗಳ ಬಾಣದಿಂದ ರಕ್ಷಿಸಿಕೊಳ್ಳಲು ಸೈನಿಕರು ರಕ್ಷ ಕವಚಗಳನ್ನು ಉಪಯೋಗಿಸುತ್ತಿದ್ದರು ಎಂದು ವರ್ಣಿಸಿರುವುದು ಕಂಡುಬರುತ್ತದೆ. ವಿಜಯನಗರದ ಕಾಲದ ಯುದ್ಧಗಳಲ್ಲಿ ಬಳಸುತ್ತಿದ್ದ ಆಯುಧಗಳು ಅದರಲ್ಲಿಯೂ ಬಿಲ್ಲುಬಾಣ, ಕತ್ತಿ, ಭರ್ಚಿಗಳು ಪ್ರಾಚೀನ ಭಾರತದಲ್ಲಿಯೂ ಬಳಕೆಯಲ್ಲಿದ್ದವೆಂದು ಆಧಾರಗಳು ಸೂಚಿಸುತ್ತವೆ. ಅಂದು ನಡೆಯುತ್ತಿದ್ದ ಯುದ್ಧಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದನೆಯದು ಕೋಟೆ ಕಾಳಗ, ಎರಡನೆಯದಾಗಿ ಬಯಲು ಯುದ್ಧ. ಈ ಎರಡು ಯುದ್ಧಗಳಲ್ಲಿ ಭಾಗವಹಿಸಲು ಸೈನಿಕರು ಪ್ರತ್ಯೇಕ ಆಯುಧಗಳನ್ನು ಬಳಸಬೇಕಾಗಿದ್ದಿತು. ಬಯಲು ಯುದ್ಧದಲ್ಲಿ ಬಳಸುವ ಆಯುಧಗಳು ಕೋಟೆ ಕಾಳಗಕ್ಕೆ ಉಪಯೋಗವಾಗುತ್ತಿರಲಿಲ್ಲ ಎಂಬುದು ಕಂಡುಬರುತ್ತದೆ. ಕೋಟೆ ಕಾಳಗಕ್ಕೆ ಬಿಲ್ಲು, ಬಾಣ ಹಾಗೂ ಕೈಯಿಂದಲೇ ಈಟಿಗಳನ್ನು ರಭಸದಿಂದ ಎಸೆಯುವ ಶಕ್ತಿಯುತ ಸೈನಿಕರು ಬೇಕಾಗಿರುತ್ತಿದ್ದರು.

ವಿಜಯನಗರದ ಕಾಲದಲ್ಲಿ ಮತ್ತೊಂದು ಪ್ರಮುಖ ಯುದ್ಧದ ದಳವೆಂದರೆ ಅಶ್ವದಳ. ಅಶ್ವದಳದ ಮುಖಂಡನನ್ನು 'ಅಶ್ವಪತಿತ' ಎಂದು ಕರೆಯುತ್ತಿದ್ದರು. ವಿಜಯನಗರದ ಅರಸರು ಗೆದ್ದ ಅನೇಕ ಯುದ್ಧಗಳಿಗೆ ಈ ಅಶ್ವಪಡೆಯೇ ಮೂಲ ಕಾರಣವೆನ್ನಬಹುದು. ಕೃಷ್ಣದೇವರಾಯನೇ ಸ್ವತಃ 'ಆಮುಕ್ತಮಾಲ್ಯ'ದಲ್ಲಿ ಈ ವಿಷಯ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ವಿಜಯನಗರದರಸರ ಕಾಲದಲ್ಲಿ ಸಾಮ್ರಾಜ್ಯದ ಆದಾಯದಲ್ಲಿ ಶೇ. ೫೦ರಷ್ಟು ಸೈನಿಕ ವ್ಯವಸ್ಥೆಗೆ ಮೀಸಲಿರಿಸಲಾಗಿತ್ತು. ಅದರಲ್ಲಿಯೂ ಕುದುರೆಗಳ ಮೇಲೆ ಮಾಡುವ ಖರ್ಚು ಹೆಚ್ಚಿನದಾಗಿರುತ್ತಿತ್ತೆಂದು ತಿಳಿದುಬರುತ್ತದೆ. ಕುದುರೆಗಳನ್ನು ಅರೇಬಿಯ, ಪಾರಸೀಕ, ಕಾಂಬೋಜ ಮುಂತಾದ ದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಸಮಕಾಲೀನ ಸಾಹಿತ್ಯ ಕೃತಿಗಳಿಂದ ಹಾಗೂ ದೇವಾಲಯಗಳ ಮೇಲೆ ಕೆತ್ತಿಸಿರುವ ಉಬ್ಬು ಶಿಲ್ಪಗಳಿಂದ ಯುದ್ಧಕ್ಕೆ ಹೊರಟ ಕುದುರೆ ಸವಾರರು ಧರಿಸಿದ್ದ ಉಡುಗೆ ತೊಡಿಗೆಗಳು, ಅಶ್ವಗಳನ್ನು ಸಮರಕ್ಕೆ ಸಿದ್ಧಗೊಳಿಸುತ್ತಿದ್ದ ರೀತಿ, ನೀತಿಗಳು, ರಣರಂಗದಲ್ಲಿ ಅವರುಗಳ ಹೋರಾಟಗಳ ಬಗ್ಗೆ ನೈಜ ಚಿತ್ರಣವನ್ನು ಚಿತ್ರಿಸಿರುವುದು ಕಂಡುಬರುತ್ತದೆ.

ಕೇವಲ ಯುದ್ಧಗಳಿಗೆ ಅಲ್ಲದೆ ಆನೆ ಹಾಗೂ ಕುದುರೆಗಳು ರಾಜವೈಭವದ ಸಂಕೇತಗಳಾಗಿಯೂ ಮೆರೆಯುತ್ತಿದ್ದವು. ಹಬ್ಬ (ದಸರ ಹಬ್ಬ), ಜಾತ್ರೆ, ರಾಜಪರಿವಾರದವರ ವಿವಾಹ, ಸಂದರ್ಭ, ದೇವತಾ ಕಾರ್ಯಗಳ ಸಂದರ್ಭಗಳಲ್ಲಿ ಇವುಗಳ ಪಾತ್ರ ಅಮೂಲ್ಯವಾಗಿತ್ತು. ಇಂತಹ ಸಂದರ್ಭದಲ್ಲಿ ಆನೆಗಳಿಗೆ ಅಲಂಕರಿಸುತ್ತಿದ್ದ ಚಿತ್ರಗಳನ್ನು ಪಾಯೇಸನು ಸಂಕ್ಷಿಪ್ತವಾಗಿ ವರ್ಣಿಸಿರುವುದು ಕಂಡುಬರುತ್ತದೆ. ಯುದ್ಧದಲ್ಲಿ ಆನೆಗಳ ಪಾತ್ರ ಹಿರಿದಾಗಿತ್ತು. ಕೋಟೆಗಳ ಬೃಹದಾಕಾರದ ದ್ವಾರಗಳನ್ನು ನೂಕಲು, ಬೃಹತ್ ಮರಗಳು

ರಸ್ತೆಯಲ್ಲಿ ಅಡ್ಡಬಿದ್ದು ತೊಂದರೆಯಾದರೆ ಮುಕ್ತಗೊಳಿಸಲು ಇವುಗಳ ಪಾತ್ರ ಬಹುಮುಖ್ಯವಾಗಿದ್ದಿತು. ವಿಜಯನಗರದ ನಿರ್ಣಾಯಕ ಯುದ್ಧವಾದ ರಕ್ಕಸತಂಗಡಿ ಯುದ್ಧದಲ್ಲಿ ೮೦ ವರ್ಷದ ಹರೆಯದ ರಾಮರಾಯನು ಆನೆಯ ಮೇಲೆ ಪಲ್ಲಕ್ಕಿಯನ್ನು ಇರಿಸಿ ತಾನು ಕುಳಿತು ಎರಡು ಕಡೆಯಲ್ಲಿಯೂ ಚಿನ್ನ, ಬೆಳ್ಳಿ, ವಜ್ರಗಳನ್ನು ತುಂಬಿಕೊಂಡು ಯುದ್ಧದಲ್ಲಿ, ಶೌರ್ಯ, ಪೌರುಷ ಮೆರೆದ.

**ಗೂಢಾಚಾರ್ಯರು :** ಯಾವುದೇ ದೇಶದ ಯಾವುದೇ ಕಾಲದ ರಾಜ್ಯಾಡಳಿತದಲ್ಲಿ ಬೇಹುಗಾರಿಕೆ ಅಥವಾ ಗೂಢಚಾರಿಕೆ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ಮುಂದಾಗಿ ತಿಳಿಯುವ ಅಂಶಗಳು ರಾಜ್ಯದ ರಾಜಕೀಯವನ್ನೇ ಏರುಪೇರು ಮಾಡುತ್ತವೆ. ಹಾಗೆಯೇ ರಾಜ್ಯದ ಆಡಳಿತವನ್ನು ಸುಗಮವೂ ಮಾಡುತ್ತವೆ. ಗೂಢಚಾರರು ತರುವ ಮಾಹಿತಿಗಳು ಆರ್ಥಿಕ, ಸಾಮಾಜಿಕ, ರಾಜಕೀಯ ಯೋಜನೆಗಳ ರೂಪುರೇಷೆಗಳನ್ನು ನಿರ್ಧರಿಸಲು ಸಹಾಯ ಮಾಡುತ್ತವೆ. ಅದರಲ್ಲೂ ಹಿಂದಿನ ಕಾಲದಲ್ಲಿ ದೇಶದ ರಕ್ಷಣೆಯಲ್ಲಿ, ವಿಸ್ತರಣೆಯಲ್ಲಿ ಅವು ಬಹಳ ಸಹಾಯ ಮಾಡುತ್ತಿದ್ದವು.

ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ದೊರೆ ಕೃಷ್ಣದೇವರಾಯನು ರಾಜ್ಯವನ್ನು ವಿಸ್ತರಿಸಿದ್ದು, ವೈಭವದಿಂದ ರಾಜ್ಯವಾಳಿದ್ದುದಕ್ಕೆ ಕಾರಣ ಬೇಹುಗಾರಿಕೆಯ ಮಾಹಿತಿಯಿಂದಲೇ ಎಂದರೆ ತಪ್ಪಾಗಲಾರದು. ಕೃಷ್ಣದೇವರಾಯನ ಕಾಲದಲ್ಲಿದ್ದ ಕಾಹಿನವರ ಮತ್ತು ಬೇಹಿನವರ ಎರಡೂ ವಿಭಾಗಗಳು ನೀಡಿದ ಮಾಹಿತಿಗಳು ಆಂತರಿಕ ವೈರಿಗಳನ್ನು ನಿಗ್ರಹಿಸಲು, ಹೊರಗಿನ ಶತ್ರುಗಳನ್ನು ಗೆಲ್ಲಲು, ಸಾಮ್ರಾಜ್ಯದ ಶಾಂತಿಯನ್ನು ಕಾಪಾಡುವುದರಲ್ಲಿ ಪ್ರಮುಖ ಪಾತ್ರ ವಹಿಸಿವೆ. ಆ ವಿಭಾಗಗಳ ಕ್ರಿಯಾಶೀಲ ಸಹಕಾರ, ಅನುಪಮವಾದ ನಿಷ್ಠೆ ಕೃಷ್ಣದೇವರಾಯನ ಆಡಳಿತದ ಬೆನ್ನೆಲುಬಾಗಿದ್ದು ಅವನ ಆಡಳಿತದಲ್ಲಿ ಅವನು ಬಿಗಿ ಹಿಡಿತ ಹೊಂದಲು ಕಾರಣವಾಯಿತು. ಅವನ ದಂಡಯಾತ್ರೆಗಳ ದಿಗ್ವಿಜಯಗಳಿಗೆ ಸುಸಂಬದ್ಧ ಆಡಳಿತಕ್ಕೆ ನೆರವಾಗಿದ್ದ ಮುಖ್ಯ ಸತ್ತ್ವಾಂಶವೂ ಈ ಬೇಹಿನವರು, ಕಾಹಿನವರು ನಿರ್ವಹಿಸಿದ ಕರ್ತವ್ಯವೇ ಆಗಿದೆ.

ಕೌಟಿಲ್ಯನ ಅರ್ಥಶಾಸ್ತ್ರ, ಮನುಧರ್ಮಶಾಸ್ತ್ರ, ಶುಕ್ರನೀತಿ ಮುಂತಾದವು ಬೇಹುಗಾರಿಕೆಯ ವ್ಯವಸ್ಥೆ ಹೇಗಿರಬೇಕು ಎನ್ನುವುದನ್ನು ವಿವರವಾಗಿ ಹೇಳುತ್ತವೆ. 'ರಾಜ್ಯ ವ್ಯವಸ್ಥೆಯಲ್ಲಿ ವೀಕ್ಷಣಾಧಿಕಾರಿಗಳ ಕಾರ್ಯಾಲಯವೊಂದು ಇರಬೇಕು. ಅವರು ಎಂಬತ್ತು ಜನ ಗಂಡಸರು, ಐವತ್ತು ಜನ ಹೆಂಗಸರು ತಾಯ್ತಂದೆಗಳ, ವಯಸ್ಕರ, ಷಂಡರ, ಸಂನ್ಯಾಸಿಗಳ, ಭಿಕ್ಷುಕರ ವೇಷದಲ್ಲಿ ಗುಪ್ತವಾಗಿ ಸಂಚರಿಸುತ್ತ ಶುಚಿರುಚಿಗಳನ್ನು ತಿಳಿದು ಪ್ರಜೆಗಳು ಮತ್ತು ಅಂತಃಪುರವಾಸಿಗಳು ಜೀವನದಲ್ಲಿ ರಾಜನಿಗೆ ಅನುಕೂಲವಾಗುವಂತೆ ಹದಗೊಳಿಸಬೇಕು' ಎನ್ನುತ್ತದೆ. (ಕೌಟಿಲ್ಯನ ಅರ್ಥಶಾಸ್ತ್ರ)

ಗೂಢಚಾರರು ಆಚಾರ್ಯ, ಸಂನ್ಯಾಸಿ, ವಿಜ್ಞಾನಿ, ಜ್ಯೋತಿಷಿ, ಕರಕುಶಲಕಲೆಗಳ ಕಲಾವಿದರು, ಕೆಳವರ್ಗದ ಕೆಲಸಗಾರರು ಮುಂತಾದವರಲ್ಲಿ ಆಟ-ಪಾಠ ವಿನೋದಗಳಲ್ಲಿ ತೊಡಗಿಕೊಂಡ ವಿಷಯಗಳನ್ನು ಸಂಗ್ರಹಿಸಬೇಕು. ಶ್ರೀಮಂತರ ವೇಷದಲ್ಲಿ, ರೋಗಿಗಳ ವೇಷದಲ್ಲಿ, ಭಕ್ತರ ವೇಷದಲ್ಲಿ, ಹುಚ್ಚರ ವೇಷದಲ್ಲಿ,

ಛತ್ರ, ನಾಟ್ಯಶಾಲೆಗಳು, ಮಧುಶಾಲೆಗಳು, ದೇವಾಲಯಗಳು, ಸಂತೆಗಳು, ಜೂಜು ಸ್ಥಳಗಳು ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಬುದ್ಧಿವಂತಿಕೆಯಿಂದ ಕನಿಷ್ಟ ವರ್ಗದ ನೌಕರರನ್ನು ಹೊಗಳಿ, ಹಣ ನೀಡಿ ಮಾಹಿತಿ ಸಂಗ್ರಹಿಸಬೇಕು. (ಮನುಧರ್ಮಶಾಸ್ತ್ರ)

ಈ ಬೇಹಿನವರು ಶತ್ರುವಿನ ದುರ್ಗದೊಳಗೆ ವರ್ತಕರಂತೆ, ಕೃಷಿಕರಂತೆ ಪ್ರವಾಸಿಗಳಂತೆ, ಗಡಿ ಪ್ರದೇಶಗಳನ್ನು ಗೊಲ್ಲರಂತೆ, ಪಶುಪಾಲಕರಂತೆ, ಸಂನ್ಯಾಸಿಗಳಂತೆ ಇದ್ದು ಸಂದೇಶಗಳನ್ನು ರವಾನೆ ಮಾಡಬೇಕಿತ್ತು. ಇವರು ಬುದ್ಧಿ ವಿಚಕ್ಷಣರು ಬಹು ಭಾಷಾಂತರಿಗಳು, ಔಚಿತ್ಯ ವಿಜ್ಞಾನಿಗಳು, ಸೂಕ್ಷ್ಮಗ್ರಾಹಿಗಳು, ಬಹುರೂಪಿಗಳು, ಬಹುಪರಿಚಿತರು, ಮಾತುಗಾರರೂ ಆಗಿರಬೇಕಿತ್ತು.

ಕೃಷ್ಣದೇವರಾಯನು ಮನುಧರ್ಮಶಾಸ್ತ್ರ, ಕೌಟಿಲ್ಯ ಅರ್ಥಶಾಸ್ತ್ರ, ಶುಕ್ರನೀತಿ, ಮೊದಲಾದ ಧರ್ಮಶಾಸ್ತ್ರ ಗ್ರಂಥಗಳನ್ನು ಚೆನ್ನಾಗಿ ಓದಿಕೊಂಡಿದ್ದನು. ತಾನು ತಿಳಿದುಕೊಂಡ ರಾಜನೀತಿಯನ್ನು ಹಿರಿಯರಿಂದ ಪಡೆದು ತಿಳಿವಳಿಕೆಯನ್ನು ತನ್ನ ಆಡಳಿತ ಕಾಲದಲ್ಲಿ ದಂಡಯಾತ್ರೆಗಳ ಸಂದರ್ಭದಲ್ಲಿ ಅನುಸರಿಸುತ್ತಿದ್ದನು. ಶತ್ರುಗಳ ಚಲನವಲನಗಳನ್ನು, ಸಂಚುಹೊಂಚುಗಳನ್ನು ದಳಗಳ ಬಲಾಬಲವನ್ನು ಅವರ ಉಪಾಯಗಳನ್ನು ಬೇಹುಗಾರರ ಮೂಲಕ ಮೊದಲೇ ತಿಳಿದು ತನ್ನ ಆಪ್ತರಾದ ಮಂತ್ರಿ, ನಿಷ್ಠರಾದ ಅಧಿಕಾರಿಗಳೊಂದಿಗೆ ಸಮಾಲೋಚನೆ ಮಾಡಿ, ಸಮಯಕ್ಕೆ ತಕ್ಕಂತೆ ತಂತ್ರ ಪ್ರತಿತಂತ್ರಗಳನ್ನು ರೂಪಿಸಿ, ಚತುರೋಪಾಯಗಳನ್ನು ಪ್ರಯೋಗಿಸಿ, ಶತ್ರುಗಳ ಬಲ ಹೆಚ್ಚಿದ್ದರೂ ಅವರನ್ನು ಸ್ವಾಧೀನಕ್ಕೆ ಬರುವಂತೆ ಮಾಡುತ್ತಿದ್ದನು.

ಕೃಷ್ಣದೇವರಾಯನ ವ್ಯಕ್ತಿತ್ವ ಅವನ ದಿನಚರಿಯಲ್ಲಿ ವಿವರವಾಗಿ ನಿರೂಪಿತವಾಗಿವೆ. ಇದರಲ್ಲಿ ಬರುವ ಬೇಹುಗಾರಿಕೆಯ ವಿವರ ವಿಸ್ಮಯ ಮೂಡಿಸುವಷ್ಟು ಮಹತ್ತ್ವದ್ದಾಗಿ ಕಾಣುತ್ತದೆ. ಚರಿತ್ರೆ ಗ್ರಂಥಗಳಲ್ಲಿಯೂ ಕಾಣಸಿಗದ ಕೆಲವು ಮುಖ್ಯ ವಿಚಾರಗಳನ್ನು ಅದು ಪ್ರಸ್ತಾಪಿಸುತ್ತದೆ. ಸ್ವತಃ ಕೃಷ್ಣದೇವರಾಯನೇ ರಾತ್ರಿಯ ವೇಳೆ ವೇಷ ಮರೆಸಿಕೊಂಡು ನಗರ ಶೋಧನೆಗೆ ಹೊರಡುತ್ತಿದ್ದನು. ಅವನೂ ಒಬ್ಬ ಬೇಹುಗಾರನಾಗಿ ತನ್ನ ಬೇಹುಗಾರರು ತಂದ ಸುದ್ದಿ ನಿಜವೋ ಸುಳ್ಳೋ ಎಂದು ಪರಿಶೀಲಿಸುತ್ತಿದ್ದನು.

ಕೃಷ್ಣದೇವರಾಯನ ಕಾಹಿನವರು ಮತ್ತು ಬೇಹಿನವರು ಅತ್ಯಂತ ನಿಷ್ಠಾವಂತರಾಗಿದ್ದರು. ಶತ್ರುಗಳ ಪಾಳೆಯನ್ನು ಪ್ರವೇಶ ಮಾಡುವುದೆಂದರೆ ಪ್ರಾಣವನ್ನು ಪಣಕ್ಕಿಟ್ಟಂತೆಯೇ ಹೌದು. ಆದರೂ ಧೈರ್ಯದಿಂದ ಬುದ್ಧಿವಂತಿಕೆಯಿಂದ ಆ ಕೆಲಸ ನಿರ್ವಹಿಸುತ್ತಿದ್ದರು. ರಾಜನೂ ಕೂಡಾ ಅವರ ಕೆಲಸಗಳಿಗೆ ಆಗಾಗ್ಗೆ ಉಡುಗೊರೆ, ಕಾಣಿಕೆ, ಸನ್ಮಾನಗಳಿಂದ ಪ್ರೋತ್ಸಾಹಿಸುತ್ತಾ, ಯಥೇಚ್ಛವಾಗಿ ಸಂಬಳವನ್ನೂ ನೀಡುತ್ತಾ, ಶತ್ರುಪಾಳಯದಲ್ಲಿ ಪ್ರಾಣಾಪಾಯ ಸಂಭವಿಸಿದರೆ ಅವರ ಕುಟುಂಬದ ಜೀವನಕ್ಕೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುತ್ತಿದ್ದನು.

ವಿದೇಶಿ ಪ್ರವಾಸಿ ಅಬ್ದುಲ್ ರಜಾಕ್ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ಕೊಟ್ಟ ಸಂದರ್ಭದಲ್ಲಿ ಕಾಪಿನ ವ್ಯವಸ್ಥೆ ಹೇಗಿತ್ತು ಎನ್ನುವುದನ್ನು ಹೀಗೆ ಹೇಳುತ್ತಾನೆ. 'ರಾಜನನ್ನು ಕಾಣಬೇಕಾದರೆ ೭ ಬಾಗಿಲುಗಳನ್ನೂ ಕಾಪಿನವರನ್ನೂ ಎದುರಿಗೆ ದಾಟಿ ಕಡೆಯಲ್ಲಿ ರಾಜನನ್ನು ಕಾಣಬೇಕಿತ್ತು. ಅರಮನೆಯ ಎದುರಿಗೆ ಟಂಕಸಾಲೆ,

ಅದರ ಎದುರಿನಲ್ಲಿ ರಾಜ್ಯಪಾಲರ ಮನೆ ಇತ್ತು. ೧೨,೦೦೦ ಜನ ಸೈನಿಕರು ಪಹರೆಯಲ್ಲಿ ಸಜ್ಜಾಗಿರುತ್ತಿದ್ದರು. ಕೋಟೆಯ ಒಳಗೆ ನಡೆಯುವ ಪ್ರತಿಯೊಂದು ಘಟನೆಯ ಬಗ್ಗೆಯೂ ತಿಳಿದುಕೊಳ್ಳುವುದು ತನ್ನ ಪಾಲಿನ ಕರ್ತವ್ಯವೆಂದು ಪಹರೆಯವರೂ ಸೈನಿಕರು ತಿಳಿದಿರುತ್ತಿದ್ದರು. ಒಂದು ವೇಳೆ ಯಾವುದೇ ವಸ್ತುವು ಕಳುವಾದರೆ ಅದರ ಬಗ್ಗೆ ಕೂಡಲೇ ವರದಿ ಸಲ್ಲಿಸಬೇಕಿತ್ತು. ಅದಕ್ಕೆ ಸಂಬಂಧಪಟ್ಟ ಕರ್ತವ್ಯ ಕಾಪಿನವರು ಕೂಡಲೇ ಹುಡುಕಿಕೊಡಬೇಕಿತ್ತು. ಹುಡುಕಲಾಗದಿದ್ದರೆ, ಕಳ್ಳರನ್ನು ಪತ್ತೆ ಹಚ್ಚದಿದ್ದರೆ ಅದಕ್ಕೆ ತಗಲುವ ವೆಚ್ಚವನ್ನು ಅವರೇ ಭರಿಸಬೇಕಿತ್ತು. ಯಾವುದೇ ಕಳುವಾದ ವಸ್ತುವು ಗಮನಕ್ಕೆ ಬರದೇ ಇರುತ್ತಿರಲಿಲ್ಲ.

ಕೃಷ್ಣದೇವರಾಯನು ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿಗಳನ್ನು ಚೆನ್ನಾಗಿ ಅರಿತವನಾಗಿದ್ದನು. ಮಂತ್ರಿಗಳು ಮತ್ತು ಆಪ್ತ ನಿಷ್ಠಾವಂತ ಅಧಿಕಾರಿಗಳು ಹಾಗೂ ಗೂಢಚಾರಿಗಳೊಡನೆ ಸಂಭಾಷಿಸದೆ ಮಂತ್ರಾಲೋಚನೆ ಮಾಡದೆ, ಸಲಹೆಗಳನ್ನು ತೆಗೆದುಕೊಳ್ಳದೆ ಯಾವ ದಂಡಯಾತ್ರೆಯನ್ನು ಮಾಡುತ್ತಿರಲಿಲ್ಲ. ಯಾವ ಹೊಸ ಆಜ್ಞೆಗಳನ್ನೂ ಮಾಡುತ್ತಿರಲಿಲ್ಲ. ಜನಾಭಿಪ್ರಾಯವನ್ನು ಸಂಗ್ರಹಿಸಿ ಜನರ ಅನುಕೂಲ ಅನನುಕೂಲಗಳನ್ನು ತಿಳಿದು ಕಾನೂನು, ನಿಯಮಗಳನ್ನು ಮಾಡುತ್ತಿದ್ದನು. ಆದ್ದರಿಂದ ತನ್ನ ಆಳ್ವಿಕೆಯ ೨೦ ವರ್ಷಗಳ ಅವಧಿಯಲ್ಲಿ ಗೋದಾವರಿಯಿಂದ ಕನ್ಯಾಕುಮಾರಿಯವರೆಗೆ ಸಮಸ್ತ ಪಾಳಯಪಟ್ಟುಗಳನ್ನು ಸಾಮಂತರನ್ನು, ಅಧಿಕಾರಿಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು, ಸಾಧ್ಯವಾಯಿತು.

## 4.4. ತಳವಾರಿಕೆ

ವಿಜಯನಗರವನ್ನು ಪಾಳೆಯಗಳಾಗಿ ವಿಭಾಗಿಸಲಾಗಿತ್ತು. ಪ್ರತಿ ವಿಭಾಗದಲ್ಲೂ ಅನೇಕ ಕೇರಿಗಳು ಬೀದಿಗಳು ಇದ್ದವು. ಪ್ರತಿಯೊಂದು ವಿಭಾಗಕ್ಕೂ ಒಬ್ಬ ಮುಖ್ಯ ರಕ್ಷಣಾಧಿಕಾರಿಯು ಇರುತ್ತಿದ್ದ. ಆತನನ್ನು ತಳಾರನೆಂದು ಕರೆಯುತ್ತಿದ್ದರು. ಆತನು ಅನೇಕ ಸಹಾಯಕರೊಡನೆ ಬೀದಿಗಳಲ್ಲಿ ಹಗಲೂ ರಾತ್ರಿ ಗಸ್ತು ತಿರುಗುತ್ತಾ, ಬರುವ ಹೋಗುವ ಜನರನ್ನೂ ಅಪರಿಚಿತರನ್ನೂ ಗಮನಿಸುತ್ತ, ಕಳ್ಳಕಾಕರನ್ನು ಹಿಡಿಯುತ್ತ ಹೀಗೆ - ನಗರ, ಪಟ್ಟಣ, ಗ್ರಾಮಗಳನ್ನು ರಕ್ಷಿಸಬೇಕಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಗೌಡನ ಅಧೀನದಲ್ಲಿದ್ದ ಗೌಡನ ರಕ್ಷಕನಾಗಿ ಕೆಲಸ ಮಾಡಬೇಕಿತ್ತು. ಇವರನ್ನು ಕಾಪಿನವರು ಎಂದೂ ಕರೆಯುತ್ತಿದ್ದರು. ತಳವಾರಿಕೆ ವೃತ್ತಿ ವಂಶಪಾರಂಪರ್ಯವಾಗಿತ್ತು. ಗ್ರಾಮಗಳಲ್ಲಿ ಭೂಮಿ, ಕಾಣಿಕೆಗಳನ್ನು ದಾನ ಮಾಡಿದಾಗ ಇವರಿಗೂ ಒಂದು ಭಾಗ ಸಲ್ಲುವಂತೆ ವ್ಯವಸ್ಥೆ ಮಾಡಲಾಗಿತ್ತು. ಕ್ರಿ.ಶ. ೧೫೨೮ರ ಒಂದು ಶಾಸನದಲ್ಲಿ ಚೆನಮನಾಯಕರು ಕಂಡಕುಂಟದ ಕೆಳಗಿನ ಭೂಮಿಯನ್ನು ೩ ಭಾಗವಾಗಿ ಮಾಡಿ ೨ ಭಾಗವನ್ನು ಬ್ರಾಹ್ಮಣರಿಗೆ ಒಂದು ಭಾಗವನ್ನು ಕಾಪಿನವರಿಗೂ ಕೊಡಬೇಕೆಂದು ತೀರ್ಮಾನಿಸಿದರು ಎಂದು ಹೇಳುತ್ತದೆ.

ಸರ್ಕಾರದ ಆಡಳಿತ ವಿಧಾನದಲ್ಲಿ ಬೇರೆ ಬೇರೆ ವಿಭಾಗಗಳಿಗೆ ಸಂಬಂಧಿಸಿದಂತೆ ಚಾವಡಿಗಳಿದ್ದವು. ಅದರಲ್ಲಿ ಬೇಹಿನ ಚಾವಡಿಯೂ ಒಂದು. ಇದು ಗುಪ್ತಚಾರ ಇಲಾಖೆಯಂತೆ ಕೆಲಸ ಮಾಡುತ್ತಿತ್ತು. ಬೇರೆ

ಬೇರೆ ರಾಜ್ಯಗಳಲ್ಲಿ ಬೇಹುಗಾರಿಕೆಯ ನಿಯೋಗಿಗಳೂ ಸ್ಥಾನಪತಿಗಳೂ ಆಗಿದ್ದು ಆ ರಾಜನ ಆಸ್ಥಾನದಲ್ಲಿದ್ದು ಅಲ್ಲಿ ನಡೆಯುವ ಕಾರ್ಯಗಳನ್ನು ತಮ್ಮ ರಾಜನಿಗೆ ವರದಿ ಮಾಡುತ್ತಿದ್ದರು.

ಕೃಷ್ಣದೇವರಾಯನು ಸಿಂಹಾಸನವನ್ನೇರುತ್ತಿದ್ದಂತೆ ಹಿರಿಯರ ಸಲಹೆ ಮೇರೆಗೆ ಮೊದಲು ಮಾಡಿದ ಕೆಲಸವೆಂದರೆ ತನ್ನ ಹಾಗೂ ಇತರೇ ದೇಶಗಳಲ್ಲಿ ಸಂಚಾರ ಮಾಡಿ ಅನುಭವ ಪಡೆದುಕೊಂಡದ್ದು. ಸಂಚಾರಕ್ಕೆ ಮುನ್ನ ತಾನು ಹೋಗಬೇಕಾಗಿದ್ದ ಸ್ಥಳಗಳಾದ ಗೋಲಕೊಂಡ, ಅಹಮದ್‌ನಗರ, ಬೇದಂಡಕೋಟೆ, ರಾಜಮಹೇಂದ್ರಿ, ಇಕ್ಕೇರಿ, ಚೆನ್ನಪಟ್ಟಣ, ಶ್ರೀರಂಗಪಟ್ಟಣ, ಉಮ್ಮತ್ತೂರು, ಶಿವನಸಮುದ್ರ, ಪೆನುಗೊಂಡೆ, ಮೊರಸನಾಡು, ತಿಗುಳಾಣ್ಯ, ಚೋಳದೇಶ, ಮಲಯಾಳ, ಕೊಚ್ಚಿ, ಕೇರಳ, ತುಳುವ, ಹೈರಳ, ಚಂದ್ರಗಿರಿ, ತಿರುಪತಿ, ಗುತ್ತಿ, ನಂದ್ಯಾಲ, ರಾಯಚೂರು, ಮುದಗಲ್ಲು ಮುಂತಾದ ಸ್ಥಳಗಳಿಗೆ ಹೋಗಿ ಆ ದೇಶವಾರ್ತೆಗಳು, ಅವರ ದೌರ್ಬಲ್ಯಗಳು, ಜನರು ತಮ್ಮ ದೊರೆಗಳ ಬಗ್ಗೆ ಆಡಿಕೊಳ್ಳುವ ಮಾತುಗಳು, ಪಂಡಿತ ಪಾಮರರ ನಡವಳಿಕೆಗಳು, ಆ ದೇಶದ ಮಾರ್ಗಗಳು, ಮಳೆ ಬೆಳೆ ಕೃಷಿ, ಆರ್ಥಿಕ ರೀತಿ, ಸಾಮಾಜಿಕ ನೀತಿ, ಧಾರ್ಮಿಕತೆ ಇವೆಲ್ಲವುಗಳನ್ನು ತಿಳಿದು ಬಂದು ಹೇಳಬೇಕು ಎಂದು, ಬುದ್ಧಿ ವಿಚಕ್ಷಣರು, ಬಹುರೂಪಿಗಳು, ಬಹು ಭಾಷಾಂತರಿಗಳು, ಮಾತುಗಾರರೂ ಆದ ಗೂಢಚಾರರನ್ನು ಕಳುಹಿಸಿದನು. ಅನಂತರ ಕೃಷ್ಣದೇವರಾಯ ಲೋಕಸಂಚಾರ ಮಾಡಿದನು. ಈ ಲೋಕಾನುಭವ ಅವನ ಆಳ್ವಿಕೆಗೆ ಬಹಳಷ್ಟು ಸಹಾಯ ಮಾಡಿತು.

ಪಿ. ಯಶೋಧ ರಾಜಶೇಖರಪ್ಪ ಅವರು ತಮ್ಮ ಸಂಶೋಧನಾ ಲೇಖನದಲ್ಲಿ ಬೇಹಿನವರನ್ನು ಕುರಿತು ವಿಸ್ತಾರವಾಗಿ ಬರೆದಿದ್ದಾರೆ. ಅದರ ಸಂಕ್ಷಿಪ್ತ ರೂಪ ಇಂತಿದೆ.

ಕೃಷ್ಣದೇವರಾಯನು ಅರಸನಾದ ಮೇಲೆ ಬಿಜಾಪುರಕ್ಕೆ ಕೆಲವು ಬೇಹಿನವರನ್ನು ಕಳುಹಿಸಿದ್ದನು. ಅವರಲ್ಲಿ ಬೇಹಿನ ಮಾರೀಚರಾಮಯ್ಯನೂ ಒಬ್ಬ. ಅವನು ವಿಜಾಪುರದಿಂದ ತಂದ ಮಾಹಿತಿ ವಿಶೇಷವಾದುದ್ದಾಗಿತ್ತು. ಅಲ್ಲಿಯೂ ಪಟ್ಟಣ ಹೊರಪಾಳ್ಯ, ಕೋಟೆ ಕೊತ್ತಳ, ರಾವುತ ಮಾವುತರ ಸಂಖ್ಯೆ, ಚತುರಂಗ ಬಲದ ಸಂಖ್ಯೆ, ಇದಲ್ಲದೆ ಗೋಲ್ಕೊಂಡದ ವಜೀರರು, ಕುತುಬ್ ಮುಲ್ಕ್, ನಿಜಾಮ್ ಸಾಹೇಬರು, ವಜೀಬರು, ಮುದ್ರಾಪಂಡಿತರು, ದತ್ತೋಪಂಡಿತರು, ಬಾಹುಬಲೇಂದ್ರನವರು, ಬ್ರಹ್ಮಾಪಂಡಿತರು, ಕುಳಿತು ಆಲೋಚನೆ ಮಾಡಿದ್ದನ್ನು ಹೇಳುತ್ತಾನೆ. ಅದೇನೆಂದರೆ 'ಕರ್ನಾಟಕ ಸಿಂಹಾಸನಕ್ಕೆ ನೂತನವಾಗಿ ಕೃಷ್ಣರಾಯರನ್ನು ಅಧಿಷ್ಠಾನದ ಕರ್ತರ ಮಾಡಿದಾರಭ್ಯ ಅವರು ತುರುಕರ ಮೇಲೆ ಕಾರ್ಯವ ಮಾಡಬೇಕೆಂದು ಆಲೋಚನೆ ಮಾಡಿ ಅದಕ್ಕೆ ತಕ್ಕ ಯತ್ನಗಳ ಮಾಡುತ್ತಾಯಿದ್ದಾರೆ ಎಂಬ ಸುದ್ದಿಯು ಅಲ್ಲೆಲ್ಲಾ ಹರಡಿದೆ. ಗಜಪತಿ, ಅಶ್ವಪತಿ, ನರಪತಿಯರಲ್ಲಿ ನರಪತಿ ಕೃಷ್ಣದೇವರಾಯನು ಬಹಳ ಭಕ್ತಿವಂತ. ಅವರ ರಾಜ್ಯದಲ್ಲಿ ದೇವದಾಯ ಬ್ರಹ್ಮದಾಯ ಪುಣ್ಯತೀರ್ಥಗಳು ಉಂಟಾಗಿ ವಿಷ್ಣುವೇ ಪ್ರತ್ಯಕ್ಷವಾಗಿ ವೆಂಕಟಾಚಲದಲ್ಲಿ ಇದ್ದಾರೆ ಎಂದುಕೊಂಡು ಆದಿಲ್‌ಶಾಹ್‌ರ ಕೂಡ ವಿಚಾರಮಾಡಿ ಸರಹದ್ದುಗಳನ್ನೆಲ್ಲ ಭದ್ರಗೊಳಿಸಿಕೊಂಡಿದ್ದಾರೆ. ನಾವೂ ಕೂಡಾ ನಮ್ಮ ನಮ್ಮ ಸರಹದ್ದುಗಳನ್ನು ಭದ್ರಗೊಳಿಸಿ ಕುದುರೆ ಆನೆ ಬಲಗಳನ್ನು ಹೆಚ್ಚಿಸಬೇಕಾಗಿದೆ' ಎಂದು ಮಾತಾಡಿದ್ದನ್ನು

ಹೇಳುತ್ತಾನೆ. 'ಅಷ್ಟೇ ಅಲ್ಲ, ಅವರು ೬೦ ಜನ ಬೇಹಿನವರನ್ನು ನಮ್ಮ ವಿದ್ಯಾನಗರಕ್ಕೆ (ವಿಜಯನಗರ) ಕಳುಹಿಸಿದ್ದಾರೆ. ವಿಜಾಪುರದ ಜನ ಯಾವಾಗ ಕೃಷ್ಣದೇವರಾಯ ದಾಳಿ ಮಾಡುತ್ತಾನೋ ಎಂದು ಹೆದರಿದ್ದಾರೆ ಎಂದು ಹೇಳಿದಾಗ, ಕೃಷ್ಣದೇವರಾಯನು ಮಂತ್ರಿಯೊಡನೆ ಸಮಾಲೋಚಿಸಿ, ಸುದ್ದಿತಂದ ಬೇಹಿನವರನ್ನು ಮೆಚ್ಚಿಕೊಂಡು, ಸಾಕಷ್ಟು ಉಡುಗೊರೆ ಹಣವನ್ನು ಕೊಟ್ಟು, 'ಇನ್ನೂ ಸ್ವಲ್ಪ ಕಾಲ ವಿಜಾಪುರದಲ್ಲಿಯೇ ಇದ್ದು, ಅಲ್ಲಿಯ ರಾಜರ ಬಗ್ಗೆ ಚೆನ್ನಾಗಿ ತಿಳಿದು ಹೇಳಿ, ಅಂದಂದಿನ ಸುದ್ದಿಗಳನ್ನು ಅಂದಂದೇ ಕಳುಹಿಸಿ' ಎಂದು ಇನ್ನೂ ಯೋಚನೆ ಮಾಡುವ ಮೊದಲೇ ಅವರು ಮಾಡಿದ್ದಾರೆ' ಎನ್ನಲು ಮಂತ್ರಿಯು 'ಎಲ್ಲಿ ಧೈರ್ಯವಿರುವುದೋ ಅಲ್ಲಿ ಲಕ್ಷ್ಮಿ ಇರುತ್ತಾಳೆ. ನಾವು ರಾಜ್ಯವನ್ನು ವಿಸ್ತರಿಸಲು ದಂಡಯಾತ್ರೆ ಮಾಡಬೇಕಾಗಿದೆ. ಯಾರಾದರೂ ಓಲೆಕಾರರು ಬೇಹಿನವರು ಬಂದರೆ ತಿಳಿಸಿ' ಎಂದು ಕಾವಲುಗಾರರಿಗೆ ಹೇಳಿದರು. ಅಷ್ಟರಲ್ಲಿ 'ಬೇಹಿನ ರಾಮಯ್ಯ ಮತ್ತು ಬೇಹಿನ ಗೋಪಾಜಿಯವರು ವಿಜಾಪುರನಗರದಿಂದ ಹೊರಟು ಅಹಮದ್‌ನಗರ, ರಕ್ಷಣ ವ್ಯವಸ್ಥೆಯನ್ನು ತಿಳಿಸುತ್ತಾ ಸರಹದ್ದಿನಲ್ಲಿ ಬರುವವರನ್ನು ಹೇಗೆ ಶೋಧಿಸುತ್ತಾರೆ, ಹಾಗೆ ಕಾಗದಗಳನ್ನು ಹಿಡಿದು ಬರುವ ಓಲೆಕಾರರನ್ನು ಹೇಗೆ ಹಿಡಿದು ಶೋಧಿಸಿ ಬಿಡುತ್ತಾರೆ, ಪರಿಚಿತರನ್ನು, ಪರದೇಶಿಯವರನ್ನು ಒಳಗೆ ಬಿಡುವುದೇ ಇಲ್ಲ. ಒಂದು ವೇಳೆ ಅವರಿಗೆ ಅಪರಿಚಿತರಾದ ಸ್ಥಳೀಯರು ಬಂದು ಅವರ ಬಗ್ಗೆ ನಂಬಿಕೆಕೊಟ್ಟು ಅವರ ತಪ್ಪು ಒಪ್ಪುಗಳ ಜವಾಬ್ದಾರಿಯನ್ನು ಹೊತ್ತುಕೊಳ್ಳುವುದಾದರೆ ಮಾತ್ರ ಕೋಟೆಯೊಳಗೆ ಬಿಡುತ್ತಾರೆ. ಹಾಗೆ ಒಳಕ್ಕೆ ಬಿಡುವಾಗ ಕೈ ಮುದ್ರೆ ಒತ್ತುತ್ತಾರೆ. ಊರಿನಲ್ಲಿ ಓಡಾಡುವಾಗ ಅಪರಿಚಿತರನ್ನು ತಳವಾರರು ತಡೆದರೆ ಈ ಮುದ್ರೆಯನ್ನು ತೋರಿಸಿದರೆ ಸುಮ್ಮನೆ ಬಿಡುತ್ತಾರೆ ಮತ್ತು ಊರಿನಿಂದ ಹೊರಗೆ ಹೋಗುವಾಗಲೂ ಈ ಮುದ್ರೆಯನ್ನು ತೋರಿಸಬೇಕು. ಇಲ್ಲದೆ ಹೋದರೆ ಬಂಧಿಸಿಯೇ ಬಿಡುತ್ತಾರೆ' ಎಂಬ ವಿವರಗಳನ್ನು ನೀಡುತ್ತಾನೆ.

ಬೇಹಿನ ಗೋಪಜಿಯು ಸುಲ್ತಾನರ ಪಟ್ಟಣದ ಭಯಾನಕ ನಿಯಮಗಳು ಮತ್ತು ಶಿಕ್ಷೆಗಳ ವಿವರ ನೀಡುತ್ತಾನೆ. 'ಕುರುಬರ ಪಟ್ಟಣವು ಯಮಪುರಿ. ಅವರನ್ನು ಓಲೈಸಿದವರು ಯಮದೂತರು. ನಡುವಿಗೆ ಹರಿಯ ಹುಯ್ಯುದು, ಗರಗಸದಲ್ಲಿ ಮನುಷ್ಯರ ಕೊಯ್ವರು, ಗೋಣಿಯೊಳಗೆ ಮನುಷ್ಯರ ಹಾಕುವರು, ಗುದಿಗೆಯಲ್ಲಿ ಕೊಲ್ಲುವುದು, ಕಾಲು, ಕೈ, ಕಿವಿ, ಮೂಗುಗಳ ಕೊಯ್ಯುದು, ಆನೆ ಕಾಲಿಗೆ ಕಟ್ಟಿ ಎಳೆಸುವುದು, ಅರಮನೆಗಳ ಹಣಿಗಳ ಕೊಟ್ಟರೆ ಪ್ರಾಣ ಸಹಿತ ಬಿಡುವರು. ಹಾಗೆಯೇ ದಿವಾನರ (ಅರಮನೆ ಒಳಾಂಗಣ) ಬಾಗಿಲಲ್ಲಿ ಬಿಚ್ಚು ಕತ್ತಿಯವರು, ಬೆತ್ತದ ಕೋಲಿನವರು, ಗುದಿಗೆ ಕೈಯವರು ಹೊಸ ಮನುಷ್ಯರನ್ನು ಕಂಡರೆ ಆ ಕ್ಷಣವೇ ಕೊಲ್ಲುವರು. ಅವರನ್ನು ನೋಡಿದಾಕ್ಷಣ ಮೈ ನಡುಗುವುದು. ದೊರೆಗಳು, ಮನ್ನೆಯರು, ವಜೀರರು, ರಾವುತರು, ಮಾವುತರುಗಳು, ನಿಯೋಗಿಗಳು ಇರುವುದಕ್ಕೆ ಏರ್ಪಾಟು ಮಾಡಿದ್ದಾರೆ. ಅಷ್ಟ ಚಾವಡಿಗಳನ್ನು ಅರಮನೆಯ ಇದಿರಲ್ಲಿ ಕಟ್ಟಿದ್ದಾರೆ. ಮಿತಪರಿವಾರದ ಓಲಗವಿದ್ದು ಅರಮನೆಯಿಂದ ಹೋಗುವಾಗ ಅಲ್ಲಿ ಚಾವಡಿಯವರು ಕೈ ಮುಗಿಯುತ್ತಾರೆ. ಆಗ ರಾಜನು ಅವರಿಗೆ ನಿತ್ಯಗಟ್ಟಲೆ ಬಹುಮಾನ ಸನ್ಮಾನ ಮಾಡುತ್ತಾನೆ. ರೊಕ್ಕ ಉಡುಗೊರೆ, ದಟ್ಟಿಕಬಾಯಿ (ನಿಲುವಂಗಿ) ಅಡಕೆ ಎಲೆಗಳನ್ನು ಕೊಡುತ್ತಾನೆ. ಅರಮನೆಯ ಒಳಗೆ ಪ್ರವೇಶಕ್ಕೆ

ಫಕೀರರಿಗೆ ಮತ್ತು ಅವಧೂತರಿಗೆ ಅಡ್ಡಿ ಆತಂಕಗಳು ಇಲ್ಲ. ಅವರನ್ನು ಗೌರವದಿಂದ ಕಾಣುತ್ತಾರೆ' - ಎಂಬ ಮಾಹಿತಿಯನ್ನು ತಿಳಿಸುತ್ತಾನೆ. 'ಅಷ್ಟೇ ಅಲ್ಲ ಅವರೀಗ ತಮ್ಮ ಸರಹದ್ದುಗಳೆಲ್ಲವನ್ನು ಭದ್ರಪಡಿಸಿ ಯುದ್ಧ ಸಿದ್ಧತೆಗಳಲ್ಲಿ ತೊಡಗಿದ್ದಾರೆ' ಎನ್ನುತ್ತಾ, ಅವರು ಈಗಾಗಲೇ ತಮ್ಮ ಅಧೀನ ಸಾಮಂತರಿಗೆ ಕುದುರೆ, ಆನೆ, ಇತ್ಯಾದಿಗಳ ವಿವರ ಕೋರಿ ಕಾಗದಗಳನ್ನು ಬರೆದಿದ್ದಾರೆ. ವಿದ್ಯಾನಗರಕ್ಕೆ (ವಿಜಯನಗರಕ್ಕೆ) ಸು. ೧೭೦ ಜನ ಬೇಹುಗಾರರನ್ನು ಕಳಿಸಿದ್ದಾರೆ. ಅವರೆಲ್ಲ ಈ ವಿದ್ಯಾನಗರದಲ್ಲಿ (ವಿಜಯನಗರದಲ್ಲಿ) ನಾನಾ ಕಡೆ ತಿರುಗುತ್ತಿದ್ದಾರೆ. ಅವರು ಅಂದಂದಿನ ಮಾಹಿತಿಗಳನ್ನು ಕಳುಹಿಸುತ್ತಿರಬಹುದು' ಎಂದು ವರದಿ ಒಪ್ಪಿಸುತ್ತಾನೆ. ಇದನ್ನು ಕೇಳಿಸಿಕೊಂಡು ಕೃಷ್ಣದೇವರಾಯರು ತಮ್ಮ ಶೌರ್ಯ ಸಾಹಸದ ವಿಷಯಗಳು ಪರದೇಶದಲ್ಲಿ ಹರಡಿರುವ ವಿಷಯ ತಿಳಿದು ಬೇಹಿನವರಿಗೆ ನೂರು ಹೊನ್ನು, ಉಡುಗೊರೆಗಳನ್ನು 'ಕೊಟ್ಟು ಪಟ್ಟಣದಲ್ಲಿ ಸಂಚರಿಸಿ ನಡೆದ ಘಟನೆಗಳನ್ನೂ ಇನ್ನೂ ಹೆಚ್ಚಿನ ಸುದ್ದಿಗಳನ್ನೂ ತಿಳಿದು ಬಂದು ಹೇಳಿ' ಎಂದು ಕಳುಹಿಸಿಕೊಡುತ್ತಾನೆ.

ಹಾಗೆಯೇ ಕೃಷ್ಣದೇವರಾಯನ ಮತ್ತೊಂದ ನೀತಿಯೆಂದರೆ ವಿದೇಶಿ ನಿಯೋಗಿಗಳನ್ನು ಬಹಳ ಪ್ರೀತಿ ಗೌರವದಿಂದ ನೋಡಿಕೊಳ್ಳುವುದು. ಅವರಿಗೆ ಒಳ್ಳೆಯ ಬಿಡದಿ ಕಲ್ಪಿಸಬೇಕಾದ ಅನುಕೂಲಗಳನ್ನು ಮಾಡಿಕೊಟ್ಟು, ಯಾವುದಕ್ಕೂ ಅವರನ್ನು ಒತ್ತಾಯಿಸದೆ, ಆಗಾಗ್ಗೆ ಉಡುಗೊರೆಗಳನ್ನು ನೀಡುತ್ತಾ, ಸನ್ಮಾನಗಳನ್ನು ಮಾಡುತ್ತಾ ವಿನಯವಾದ ಸರಸ ಸಲ್ಲಾಪಗಳನ್ನು ಮಾಡುತ್ತಾ ಅವರು ತಮ್ಮ ವಿರೋಧವಾದ ಯಾವ ಸುದ್ದಿಯೂ ಅವರ ರಾಜರಿಗೆ ಮುಟ್ಟದಂತೆ, ಕಾಗದಗಳನ್ನು ಬರೆಯದಂತೆ ನೋಡಿಕೊಳ್ಳುವುದು. ಈ ಬಗೆಯ ತಂತ್ರದ ಮೂಲಕ ಸಹ ಈ ದೊರೆ ಸುತ್ತಲ ರಾಜರ ಜೊತೆ ಒಳ್ಳೆಯ ಸಂಬಂಧ ಇಟ್ಟುಕೊಳ್ಳುತ್ತಿದ್ದನು.

ದೊರೆ ಕೃಷ್ಣದೇವರಾಯ ಬೇಹಿನ ರಾಮಯ್ಯ, ಬೇಹಿನ ಗೋಪಾಜಿ ಮತ್ತಿತರ ಬೇಹುಗಾರರು ತಂದ ಸುದ್ದಿಯನ್ನು ಕೇಳಿ, ಮಂತ್ರಿಗಳೊಂದಿಗೆ ಸಮಾಲೋಚಿಸಿ, ಅಮರನಾಯಕರು, ಬೇಡನಾಯಕರನ್ನು ಕರೆಸಿ, ಹದಿನೆಂಟು ಕಂಪಣದವರಿಗೂ ಯುದ್ಧ ಸಿದ್ಧತೆಗಳನ್ನು ಮಾಡಲು ತಿಳಿಸಿ, ಉಮ್ಮತ್ತೂರು, ಶಿವನಸಮುದ್ರಕ್ಕೆ ಬಂದು, ಗಂಗ ರಾಜರನ್ನು ಗೆದ್ದು, ಶ್ರೀರಂಗಪಟ್ಟಣದ ಕೋಟೆಯನ್ನು ನೋಡಿ ಇಕ್ಕೇರಿ ನಗರಕ್ಕೆ ಬಂದು, ರಾಯಚೂರು, ಮುದಗಲ್ಲು, ಆದವಾನಿಗಳನ್ನು ಗೆದ್ದು, ಗೋಲಕೊಂಡಕ್ಕೆ ಬಂದು, ಮೂರು ಬಗೆಯ ಸುಲ್ತಾನರನ್ನು ಗೆಲ್ಲಲು, ಹೊಳೆಯ ಬಳಿ ಡೇರಿ ಹಾಕಿದನಂತೆ. ಮುಂದೆ ಅವರ ಮೇಲೆ ದಾಳಿ ಮಾಡಲು ಸಿದ್ಧತೆ ಮಾಡಿಕೊಂಡು ಬೇಹಿನವರು ಬಂದು ಹೇಳುವ ಸುದ್ದಿಗೆ ಕಾದರಂತೆ. ಅದರಂತೆ ಬೇಹಿನವರು ಬಂದು ಸುಲ್ತಾನರ ಬಲಾಬಲಗಳನ್ನು ಹೇಳಿ ಕೃಷ್ಣೆಯನ್ನು ದಾಟಿ ಬಂದ ಪಾಳ್ಯದಲ್ಲಿರುವ ಸುದ್ದಿಯನ್ನು ತಂದಾಗ ರಾಯನು ತನ್ನ ಮಂತ್ರಿ ಅಮರನಾಯಕರೊಂದಿಗೆ ಸಮಾಲೋಚಿಸಿ ಯುದ್ಧ ತಂತ್ರವನ್ನು ರೂಪಿಸಿ ಸುಲಭವಾಗಿ ಸೋಲಿಸಿ ಅವರ ಆನೆಕುದುರೆಗಳನ್ನು ವಶಪಡಿಸಿಕೊಂಡು, ಗಜಪತಿಯ ರಾಜ್ಯ (ಒರಿಸ್ಸಾ)ವನ್ನು ಗೆಲ್ಲುವುದಕ್ಕೆ ಸಿದ್ಧತೆ ಮಾಡಿಕೊಂಡು ಅಲ್ಲಿಯ ವಿಷಯ ತಿಳಿದು ಬರಲು ಬೇಹುಗಾರರಾದ ವಾಯುವೇಗಿ ಹನುಮಂತಯ್ಯ ಮತ್ತು ಮನೋವೇಗಿ ಪುರುಷಾಮೃಗಯ್ಯ ಎಂಬುವವರನ್ನು ಗಜಪತಿ ರಾಜ್ಯಕ್ಕೆ ಕಳುಹಿಸಿದರಂತೆ.

ಈ ಇಬ್ಬರು ಬೇಹಿನವರು ಅಲ್ಲಿಗೆ ಹೋಗಿ ಅನೇಕ ವಿವರಗಳನ್ನು ತರುತ್ತಾರೆ. 'ಗಜಪತಿ ರಾಜ್ಯವು ಅತ್ಯಂತ ಸಮೃದ್ಧವಾದದು. ರಾಜನು ಶೂರನೂ ದೈವಭಕ್ತನೂ ಆಗಿದ್ದಾನೆ. ಅವನ ರಾಜ್ಯದಲ್ಲಿ ಸುಂದರ ಕಟ್ಟಡಗಳು, ಸಭಾಮಂಟಪಗಳು, ಆನೆ ಕುದುರೆಗಳೂ ಇವೆಯೆಂದೂ 'ಜಗನ್ನಾಥ' ಸ್ವಾಮಿಯ ರಥಮಹೋತ್ಸವವೂ ಅತ್ಯಂತ ವೈಭವದಿಂದ ನಡೆಯುತ್ತದೆ'ಯೆಂದೂ, 'ಪುಣ್ಯಾಂಗನೆಯರು, ಕ್ಷತ್ರಿಯರು, ಬ್ರಾಹ್ಮಣರು, ವಿದ್ವಾಂಸರು, ವೈಶ್ಯರು, ಶೂದ್ರರೂ, ಕವಿಗಳು, ವಾನಪ್ರಸ್ಥರು, ಬ್ರಹ್ಮಚಾರಿಗಳು ನಾನಾ ಜಾತಿಯವರೂ ಬಂದು ಸ್ವಾಮಿಯ ದರ್ಶನ ಮಾಡುತ್ತಾರೆ. ಈ ವಾಯುವೇಗಿ ಹನುಮಂತಯ್ಯ ಮತ್ತು ಮನೋವೇಗಿ ಪುರುಷಾಮೃಗಯ್ಯ ಇವರಿಗೆ ಅನೇಕ ಉಡುಗೊರೆಗಳನ್ನೂ, ವೆಚ್ಚಕ್ಕೆ ೨೦೦ ವರಹಗಳನನೂ ಕೊಟ್ಟು ಗಜಪತಿಯ ರಾಜ್ಯದಲ್ಲಿಯೇ ಇದ್ದು ಇನ್ನೂ ಹೆಚ್ಚಿನ ಮಾಹಿತಿ ತರಲು ಹೇಳುತ್ತಾನೆ. ಗಜಪತಿಯನ್ನು ಗೆಲ್ಲುವ ಸಿದ್ಧತೆಗಳನ್ನು ಆರಂಭಿಸುತ್ತಾನೆ.

ಇಲ್ಲಿ ಬರುವ ಬೇಹಿನವರ ಹೆಸರಿನ ಜೊತೆಗಿನ 'ವಾಯುವೇಗಿ' 'ಮನೋವೇಗಿ' ಎಂಬ ವಿಶೇಷಣಗಳು ಕುತೂಹಲ ಕೆರಳಿಸುತ್ತವೆ. ಇದು ಹನುಮಂತಯ್ಯನಿಗೂ ಪುರುಷಾ ಮೃಗಯ್ಯನಿಗೂ ಅವರವರ ಕೆಲಸಕ್ಕೆ ತಕ್ಕಂತೆ ಕೊಟ್ಟ ಬಿರುದುಗಳಿರಬಹುದು. ವಾಯುವೇಗಿಯೆಂದರೆ ಸಾಮಾನ್ಯರಿಗಿಂತಲೂ ಹೆಚ್ಚಿನ ವೇಗದಲ್ಲಿ ಸುದ್ದಿ ತರುವರು, ಮನೋವೇಗಿಯೆಂದರೆ ವಾಯುವೇಗಿಗಿಂತಲೂ ಶೀಘ್ರವಾಗಿ ಸುದ್ದಿ ತರುವವನು ಎಂದಿರಬಹುದು.

ಗಜಪತಿಯನ್ನು ಜಯಿಸಲು ಹೊರಡುವುದಕ್ಕೆ ಮೊದಲು ಗಜಪತಿಯ ಬಳಿಯಿದ್ದ ನಿಯೋಗಿ ಸ್ಥಾನಪತಿ ಕಮಲನಾಭಯ್ಯನು ಬೇಹಿನವರ ಕೈಯಲ್ಲಿ ಕಳುಹಿಸಿದ ಪತ್ರ ಕೃಷ್ಣದೇವರಾಯ ಮತ್ತು ಮಂತ್ರಿ ತಿಮ್ಮರಸರು ಅವರ ಯುದ್ಧ ತಂತ್ರವನ್ನೇ ಬದಲಾಯಿಸಿತು. ಗಜಪತಿಯ ಆಸ್ಥಾನದಲ್ಲಿ ನಡೆದ ಮಾತುಕತೆ, ೧೬ ಜನ ಮಹಾಪಾತ್ರರು ಗಜಪತಿಗೆ ಕರ್ನಾಟಕದ ಅರಸನನ್ನು ಗೆದ್ದುಕೊಟ್ಟೇ ತೀರುತ್ತೇವೆಂದು ಮಾಡಿದ ಪ್ರತಿಜ್ಞೆ ಅವರ ಚತುರಂಗ ಬಲದ ವಿವರಣೆ ಇವೆಲ್ಲವುಗಳನ್ನು ಕೇಳಿ ಸ್ವತಃ ಕೃಷ್ಣದೇವರಾಯನೇ ಭಯಪಟ್ಟು ತಿಮ್ಮರಸನ ಬಳಿ ಆಪ್ತಾಲೋಚನೆ ಮಾಡುತ್ತಾನೆ. ತಿಮ್ಮರಸ 'ಚತುರಂಗ ಬಲದ ಮೂಲಕ ಯುದ್ಧದಲ್ಲಿ ಇವರನ್ನು ಸೋಲಿಸಲು ಸಾಧ್ಯವಿಲ್ಲ. ಇದಕ್ಕೆ ಚಾಣಾಕ್ಷ ತಂತ್ರವನ್ನು ರೂಪಿಸಬೇಕು. ಮಹಾಪಾತ್ರರನ್ನು ಗಜಪತಿಯನ್ನು ಬೇರೆ ಮಾಡುವ ಭೇದೋಪಾಯವನ್ನು ಪ್ರಯೋಗಿಸಿ ಮಹಾಪಾತ್ರರು ಮೋಸ ಮಾಡಿದರೆನ್ನುವ ಅಭಿಪ್ರಾಯ ಮೂಡಿಸಬೇಕು' ಎಂದು, ಅದೇ ತಂತ್ರ ಮಾಡಿ ಗಜಪತಿಯನ್ನು ಏಕಾಂಗಿಯನ್ನಾಗಿ ಮಾಡಿ ಸೋಲಿಸುತ್ತಾರೆ. ಆಮೇಲೆ ಕೃಷ್ಣದೇವರ ರಾಜಕೀಯ ಹೊಂದಾಣಿಕೆ ಮಾಡಿಕೊಂಡು ಗಜಪತಿಯ ಮಗಳನ್ನು ವಿವಾಹ ಮಾಡಿಕೊಂಡು ತಿರುಪತಿಗೆ ಬೇಟಿಕೊಟ್ಟು ಭಕ್ತಿ ಸಮರ್ಪಣೆ ಮಾಡಿ ವಿಜಯನಗರಕ್ಕೆ ಮರಳುತ್ತಾನೆ.

ಹೀಗೆ ಕೃಷ್ಣದೇವರಾಯನ ದಿಗ್ವಿಜಯಗಳನ್ನು ಆಳ್ವಿಕೆಯನ್ನು ನೋಡಿದರೆ ಅದರ ಹಿಂದೆ ಕಾಪಿನವರ ಮತ್ತು ಬೇಹಿನ ವೃತ್ತಿಯವರ ಪಾತ್ರ ಪ್ರಧಾನವಾಗಿತ್ತು, ಎಂದು ಹೇಳಲೇಬೇಕು. ಅವರುಗಳು ಶತ್ರುಪಾಳೆಯಕ್ಕೆ ನುಗ್ಗಿ ತಮ್ಮ ಪ್ರಾಣವನ್ನು ಪಣವಾಗಿಟ್ಟು, ಅನೇಕ ಮಾಹಿತಿಗಳನ್ನು ತರುತ್ತಿದ್ದರು. ಇಲ್ಲಿ ಬರುವ ಬೇಹಿನ

ರಾಮಯ್ಯ, ಬೇಹಿನ ಗೋಪಾಜಿ ತಳವಾರ ಜಂಗಮಯ್ಯ, ಬೇಹಿನ ಮಾರೀಚ, ಸ್ಥಾನಪತಿ ಕಮಲನಾಭಯ್ಯ, ವಾಯುವೇಗಿ ಹನುಮಂತಯ್ಯ, ಮನೋವೇಗಿ ಪುರುಷಾಮೃಗಯ್ಯ ಮುಂತಾದವರು ಸಲ್ಲಿಸಿದ ನಿಷ್ಠಾವಂತ ಸೇವೆಯು ಕಡಿಮೆಯೇನಲ್ಲ. ವಿಜಯನಗರ ಕಾಲದ ಸೈನ್ಯ ವ್ಯವಸ್ಥೆಯಲ್ಲಿ ಬೇಹುಗಾರಿಕೆ ವೃತ್ತಿಯೂ ಪ್ರಾಮುಖ್ಯತೆಯನ್ನು ಹೊಂದಿತ್ತು.

## 4.5. ನಾಯಿಂದ ಸಮುದಾಯ :

ವಿಜಯನಗರ ಅರಸರು ಕೆಲವು ಪ್ರಮುಖ ತೆರಿಗೆಗಳನ್ನು ನಾಯಿಂದ ಜನಾಂಗದವರಿಗೆ ವಿನಾಯಿತಿ ನೀಡಿದ ವಿಷಯವನ್ನು ಡಾ.ಬಿ. ರಾಜಶೇಖರಪ್ಪ, ಬಿ.ಎ. ಸಾಲೆತೊರೆ ಅವರು ದಾಖಲೆ ಸಮೇತ ತೋರಿಸಿಕೊಟ್ಟಿದ್ದಾರೆ.

ವಿಜಯನಗರ ಕಾಲದಲ್ಲಿ ಪ್ರಜೆಗಳ ಮೇಲೆ ಅನೇಕ ವಿಧದ ತೆರಿಗೆ ಸುಂಕಗಳನ್ನು ವಿಧಿಸಲಾಗಿತ್ತಾದರೂ, ಕಾರಣಾಂತರದಿಂದ ಆಗಾಗ ಕೆಲವಕ್ಕೆ ವಿನಾಯಿತಿ ನೀಡಲಾಗುತ್ತಿತ್ತೆಂಬ ಅಂಶ ಸರ್ವವಿದಿತ. ಕೆಲವಕ್ಕಂತೂ ವ್ಯಾಪಕವಾಗಿ ವಿನಾಯಿತಿ ಇತ್ತೆಂಬ ಅಂಶ ಕೂಡಾ ಸ್ಪಷ್ಟ. ಹಾಗೆ ವ್ಯಾಪಕವಾಗಿ ನೀಡಲಾದ ವಿನಾಯಿತಿಗಳಲ್ಲಿ ತುಂಬ ಕುತೂಹಲಕಾರಿಯಾದದ್ದು ನಾಯಿಂದರ ಮೇಲೆ ಹಾಕಿದ್ದ ತೆರಿಗೆ ಸುಂಕಗಳ ವಿನಾಯಿತಿ. ಸಾಮ್ರಾಜ್ಯದ ಅನೇಕ ಪ್ರಾಂತಗಳಲ್ಲಿ ಆ ಸಮುದಾಯದವರಿಗೆ ವಿವಿಧ ತೆರಿಗೆ ಸುಂಕಗಳ ವಿನಾಯಿತಿಗಳನ್ನು ಅನೇಕ ಶಾಸನಗಳು ಸಾರುತ್ತವೆ. ಅವನ್ನು ನೋಡಿದರೆ, ಬೇರಾವ ಸಮುದಾಯಕ್ಕೂ ಬಹುಶಃ ಅಷ್ಟು ಪ್ರಮಾಣದಲ್ಲಿ ಆಗ ಸುಂಕ ವಿನಾಯಿತಿ ನೀಡಿರುವುದು ಕಂಡುಬರುವುದಿಲ್ಲ. ಆ ಸಮುದಾಯಕ್ಕೆ ಅಷ್ಟೊಂದು ವಿನಾಯಿತಿ ನೀಡಲು ಕಾರಣ ಏನು ? ಮತ್ತು ಕಾರಣ ಯಾರು ? ಈ ಬಗ್ಗೆ ಪರಿಶೀಲಿಸಿದಾಗ, ಈ ವಿನಾಯಿತಿಯ ಹಿಂದೆ ಆ ಸಮುದಾಯದ ಇಬ್ಬರು ಪ್ರಭಾವಶಾಲಿ ಪ್ರಮುಖರು ಕಾಣಬರುತ್ತಾರೆ. ಅವರೇ ತಿಮ್ಮೋಜ ಮತ್ತು ಕೊಂಡೋಜ.[62]

ವಿಜಯನಗರ ಅರಸರ ಜೊತೆ ಈ ತಿಮ್ಮೋಜ ಕೊಂಡೋಜರಿಗೆ ಉಂಟಾದ ಮತ್ತು ಬೆಳೆದ ಸಂಪರ್ಕ ಹಾಗೂ ಅವರಿಂದ ಅವರ ಸಮುದಾಯಕ್ಕೆ ಉಂಟಾದ ಲಾಭ ಮತ್ತು ಸ್ಥಾನಮಾನ, ಅವರ ಬಗೆಗಿನ ಲಭ್ಯ ಚರಿತ್ರೆ ಕುತೂಹಲಕಾರಿಯಾದವು. ಇನ್ನೂ ಹೆಚ್ಚಿನ ಕುತೂಹಲದ ಸಂಗತಿ ಎಂದರೆ ಒಂದು ಕಾಲಕ್ಕೆ (ಕ್ರಿ.ಶ. ೧೬ನೇ ಶತಮಾನದ ಕಾಲಕ್ಕೆ) ಮನುಷ್ಯರಾಗಿದ್ದ ಇವರು ಆ ತರುವಾಯ (ಕ್ರಿ.ಶ. ೧೮ನೇ ಶತಮಾನದ ಹೊತ್ತಿಗೆ) ಆ ಜನಾಂಗದ ದೇವರುಗಳಾಗಿ ಪರಿಗಣಿತರಾಗಿದ್ದುದು. ಇವರನ್ನು ನಯನಕ್ಷತ್ರಿಯರ ದೇವರು ಎಂದು ಹೆಸರಿಸುವ ಒಂದು ಶಾಸನ ಹಾಗೂ ಅವರ ಒಂದು ಉಬ್ಬುಶಿಲ್ಪ ಈಗಾಗಲೇ ಬೆಳಕಿಗೆ ಬಂದಿವೆ. ಈ ಎಲ್ಲ ಹಿನ್ನೆಲೆಯಿಂದ ಇವರು ಆ ಜನಾಂಗದ 'ಸಾಂಸ್ಕೃತಿಕ ನಾಯಕರು'[63] ಎಂದು ಪರಿಗಣಿಸಬೇಕಾದವರಾಗಿ ಕಾಣುತ್ತಾರೆ. ಈ ಎಲ್ಲ ಅಂಶಗಳು ವಿಜಯನಗರ ಕಾಲದ, ಅಷ್ಟೇ ಏಕೆ, ನಮ್ಮ ನಾಡಿನ ಸಾಮಾಜಿಕ ಸಾಂಸ್ಕೃತಿಕ ಚರಿತ್ರೆಯಲ್ಲಿ ವಿಶೇಷವಾಗಿ ಗುರುತಿಸಬೇಕಾದವು.

ನಾಯಿಂದರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆಯಾದರೂ ಅವರು ತಮ್ಮನ್ನು 'ನಯನಕ್ಷತ್ರಿಯ' (ಅಥವಾ 'ನಯವಜ ಕ್ಷತ್ರಿಯ') ಎಂದೂ 'ನಾಯಿಂದ ಬ್ರಾಹ್ಮಣ' (ಅಥವಾ ಕೆಲವೆಡೆ 'ನಾಯಿ ಬ್ರಾಹ್ಮಣ') ಎಂದೂ ಕರೆದುಕೊಳ್ಳುವುದಕ್ಕೆ ಹೆಚ್ಚು ಇಷ್ಟಪಡುತ್ತಾರೆ. ನಾಯಿಂದಿರು ತಮ್ಮ ಕಾಯಕದಲ್ಲಿ ಕತ್ತಿ, ಕತ್ತರಿ ಮುಂತಾದ 'ಶಸ್ತ್ರ'ಗಳನ್ನು ಬಳಸುವುದರಿಂದ ತಮಗೆ ಕ್ಷತ್ರಿಯತ್ವವನ್ನು ಆರೋಪಿಸಿಕೊಂಡು, ಕ್ಷತ್ರಿಯ ವರ್ಗದಲ್ಲೂ ಹಾಗೆಯೇ ಅವರು ಯಂತ್ರ, ಮಂತ್ರ, ಪಂಚಾಂಗ, ಪೌರೋಹಿತ್ಯ ಮುಂತಾದವುಗಳಲ್ಲಿ ಪರಿಶ್ರಮವುಳ್ಳವರಾದ್ದರಿಂದ ತಮಗೆ ಬ್ರಾಹ್ಮಣತ್ವವನ್ನು ಆರೋಪಿಸಿಕೊಂಡು, ಬ್ರಾಹ್ಮಣ ವರ್ಗದಲ್ಲೂ ತಮ್ಮನ್ನು ಗುರುತಿಸಿಕೊಳ್ಳಲು ಯತ್ನಿಸಿರುವುದು ಕಾಣುತ್ತದೆ. ಹೀಗೆ ಅವರು ತಮ್ಮನ್ನು ಸಮಾಜದ ಮೇಲುವರ್ಗದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನದಿಂದ ಆ ಹೆಸರುಗಳು ಬಂದಿರುವುದು ಸ್ಪಷ್ಟ. ಕ್ಷೌರಿಕ ಅರ್ಥದ ಸಂಸ್ಕೃತದ ನಾಪಿತ ಶಬ್ದವೇ ಕಾಲಾಂತರದಲ್ಲಿ ರೂಪಾಂತರ ಹೊಂದಿ ಈ ಮೇಲಿನ ಹೆಸರುಗಳಲ್ಲಿ ನಯನ, ನಾಯಿಂದ, ನಾಯಿ ಶಬ್ದಗಳು ಬಂದಿರುವುದು ಕಾಣುತ್ತದೆ.[64]

ಈ ಸಮುದಾಯದವರು ಮದುವೆ ಇತ್ಯಾದಿ ಶುಭಕಾರ್ಯಗಳಲ್ಲಿ ತಮ್ಮ ಕುಲದೇವತೆಗೆ ಮೊದಲ ವೀಳ್ಯದ ಮರ್ಯಾದೆ ಸಲ್ಲಿಸಿದ ಮೇಲೆ, ತಮ್ಮ ಕುಲದ ಮೂಲಪುರುಷರೆಂದು ಖಂಡೋಜಿ ಮತ್ತು ತಿಮ್ಮೋಜಿಯರಿಗೆ ವೀಳ್ಯ ಸಲ್ಲಿಸುವ ಸಂಪ್ರದಾಯವಿದೆ. ಇವರ ತರುವಾಯ ವೀಳ್ಯ ಸಲ್ಲುವುದು ಇವರ ಕುಲದ 'ಕಟ್ಟೆಮನೆ' ಮತ್ತು 'ಯಜಮಾನ ಕೋಲುಕಾರ'ರಿಗೆ. ಮೈಸೂರು ಕಡೆ ಖಂಡೋಜಿಯನ್ನು ಕೊಂಡೋಜಿ ಎಂದೂ ಕರೆಯುವುದುಂಟು. ಹೀಗೆ ನಾಯಿಂದ ಸಮುದಾಯದ ಮೂಲಪುರುಷರು ಮತ್ತು ದೇವರು ಎಂದು ಗೌರವಿಸಲ್ಪಟ್ಟ ಕೊಂಡೋಜಿ ತಿಮ್ಮೋಜಿಯರು ಕ್ರಿ.ಶ. ೧೬ನೇ ಶತಮಾನದ ಕಾಲದಲ್ಲಿ ಮನುಷ್ಯ ವ್ಯಕ್ತಿಗಳಾಗಿ ಬದುಕಿದ್ದವರು ಎಂಬ ಸಂಗತಿ ಆ ಕಾಲದ ಅನೇಕ ಶಿಲಾಶಾಸನಗಳ ಅಭ್ಯಾಸದಿಂದ ಸ್ಪಷ್ಟವಾಗುತ್ತದೆ.[65] ಶಾಸನಗಳಲ್ಲಿ ಕಾಣಸಿಗುವ ಇವರ ಹೆಸರಿನ ರೂಪ ಕೊಂಡೋಜ ತಿಮ್ಮೋಜ ಎಂದು ಇವರ ಹೆಸರಿನ ಜೊತೆಗೆ ಭದ್ರೋಜ, ಭರ್ಮೋಜ ಎಂಬ ಇನ್ನಿಬ್ಬರ ಹೆಸರುಗಳೂ ಕೆಲವೇ ಕೆಲವೆಡೆ ಬಂದಿರುವುದುಂಟು. ಆದರೆ ಹೆಚ್ಚು ಕಡೆ ಕಾಣಿಸುವ ಹೆಸರುಗಳೆಂದರೆ ತಿಮ್ಮೋಜ ಕೊಂಡೋಜರವೇ. ಇವರ ಪರಸ್ಪರ ಸಂಬಂಧ ಇನ್ನೂ ಸ್ಪಷ್ಟ ತಿಳಿಯದು.

ಇವರು ಮೂಲತಃ ಆಂಧ್ರಪ್ರದೇಶದ ಕಂದನವೋಲು (ಈಗಿನ ಕರ್ನೂಲು) ಕಡೆಯವರೆಂದೂ ಆಮೇಲೆ ಅಲ್ಲಿಂದ ಕರ್ನಾಟಕದ ಬಾದಾಮಿಗೆ ಬಂದಿರಬೇಕೆಂದೂ ತಿಳಿಯಲಾಗಿದೆ. ವಿಜಯನಗರಕ್ಕೆ ಬಂದ ಇವರು ರಾಜಬಂಧುಗಳಾದ ರಾಮರಾಜಯ್ಯ ಮುಂತಾದ ಗಣ್ಯರ ಸಂಪರ್ಕ ಪಡೆದು, ಸದಾಶಿವರಾಯ ದೊರೆಯ ಪ್ರೀತಿಯನ್ನೂ ಗಳಿಸಿ, ಆಮೇಲೆ ತಮ್ಮ ಸಮುದಾಯದವರಿಗೆ ವಿಧಿಸಲಾಗಿದ್ದ ಸಿದ್ಧಾಯ, ಮನೆವಣ, ಕಾಣಿಕೆ, ಕಡ್ಡಾಯ, ಮದುವೆಯ ಸುಂಕ, ಬಿರಾಡ ಮೊದಲಾದ ಎಲ್ಲ ಬಗೆಯ ತೆರಿಗೆ ಸುಂಕಗಳನ್ನು ಮಾನ್ಯ

ಮಾಡಿಸಿಕೊಂಡರೆಂದೂ ತಿಳಿಯುತ್ತದೆ. ತೆರಿಗೆ ಸುಂಕಗಳನ್ನು ಅವರು ಮಾನ್ಯ ಮಾಡಿಸಿಕೊಂಡ ಸಂಗತಿ ಕರ್ನಾಟಕದ ಚಿತ್ರದುರ್ಗ, ಬಳ್ಳಾರಿ, ಧಾರವಾಡ, ಬಿಜಾಪುರ, ಬೆಳಗಾವಿ, ತುಮಕೂರು, ಮೈಸೂರು ಹಾಗೂ ನೆರೆಯ ಆಂಧ್ರಪ್ರದೇಶದ ಅನಂತಪುರ ಈ ಜಿಲ್ಲೆಗಳ ಶಾಸನಗಳಿಂದ ಈಗಾಗಲೇ ವಿದಿತ.[66] ಇಷ್ಟು ವಿಶಾಲವಾದ ಭೌಗೋಳಿಕ ವ್ಯಾಪ್ತಿಯಲ್ಲಿ ನಾಯಿಂದರು, ಬಹುಶಃ ಇತರ ಯಾವ ಸಮುದಾಯದವರಿಗಿಂತಲೂ, ಹೆಚ್ಚಿನ ರೀತಿಯ ತೆರಿಗೆ-ಮಾನ್ಯತೆ ಪಡೆಯಲು ವಿಜಯನಗರದ ಅರಸರು ಹಾಗೂ ಅವರ ಸಮೀಪ ಬಂದುಗಳೊಂದಿಗೆ ಕೊಂಡೋಜ ತಿಮ್ಮೋಜರು ಹೊಂದಿದ್ದ ಪ್ರಭಾವಪೂರ್ಣ ಸಂಪರ್ಕ ಕಾರಣವೆನ್ನಬಹುದು.

ವಿಜಯನಗರದ ಅರಸರು ಹಾಗೂ ಅವರ ಬಂಧುಗಳೊಂದಿಗೆ ಅವರ ಆ ಸಂಪರ್ಕದ ಪ್ರಭಾವ ಕಾರಣವಾಗಿಯೋ ಏನೋ, ವಿಜಯನಗರ ಸಾಮ್ರಾಜ್ಯದ ಪತನಾನಂತರದಲ್ಲೂ (ಹಿಂದೊಮ್ಮೆ ಅವರ ಅಧೀನರಾಗಿದ್ದ) ಪಾಳೆಯಗಾರರುಗಳ ಕಾಲದಲ್ಲೂ, ಆ ತೆರಿಗೆ ಮಾನ್ಯತೆ ವಂಶಪಾರಂಪರ್ಯವಾಗಿ ಆ ಸಮುದಾಯದವರಿಗೆ ಸಲ್ಲುತ್ತಾ ಬಂದಿತು. ಇದನ್ನು ಅನೇಕ ಶಾಸನಗಳು ಸಾರುತ್ತವೆ. ತೆರಿಗೆ ಮಾನ್ಯತೆಗೆ ಸಂಬಂಧಿ ಸಿದಂತೆ ಈ ಇವರಿಗೆ ಸಮಾನಾಂತರವಾದ ಇನ್ನೊಂದು ಉದಾಹರಣೆ ಆ ಕಾಲದಲ್ಲಿ ಸಿಕ್ಕುವುದು ಕಷ್ಟ.

ವಿಜಯನಗರ ಪ್ರಭುತ್ವ ನಾಯಿಂದರಿಗೆ ಇಷ್ಟೊಂದು ಉತ್ತೇಜನ ನೀಡಲು ಕಾರಣವೇನೆಂದು ಹಿರಿಯ ವಿದ್ವಾಂಸರಾದ ಡಾ.ಬಿ.ಎ. ಸಾಲೆತೊರೆ ಅವರು ಸಾಕಷ್ಟು ವಿವೇಚಿಸಿ, ತಮ್ಮೊಂದು ಊಹೆ ಅಥವಾ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. ಅದನ್ನು ಸಂಗ್ರಹವಾಗಿ ಹೀಗೆ ಹೇಳಬಹುದು. ವಿಜಯನಗರದ ಅರಸರು ನಾಯಿಂದರಿಗೆ ಇಷ್ಟೊಂದು ಪುರಸ್ಕಾರ ನೀಡುವಲ್ಲಿ ಅವರ ಕಸುಬಿನ ಕುಶಲತೆಯೊಂದೇ ಕಾರಣವಾಗಿರಲಾರದು; ಅವರು ಸಮಾಜಕ್ಕೆ ಉಪಯುಕ್ತ ಸೇವೆ ಸಲ್ಲಿಸುವವರೆಂಬ ಮತ್ತು ಹಿಂದೂಗಳ ಕೆಲವು ಸಂಪ್ರದಾಯಗಳಲ್ಲಿ ಅವರ ಪಾತ್ರ ಮುಖ್ಯ ಎಂಬ ಈ ಯಾವುದೇ ಕಾರಣವೂ ಇದ್ದಿರಲಾರದು; ಬಹುಶಃ ಆಗಿನ ಕಾಲದಲ್ಲಿ ರಾಜರಿಗೆ ಕಿರಿಕಿರಿ ಎನಿಸಿದ್ದ ಕುರುಬರಂಥ ಗಿರಿಜನ ಪಂಗಡಗಳನ್ನು ಹತ್ತಿಕ್ಕುವಲ್ಲಿ ನಾಯಿಂದರ ಸೇವೆಯನ್ನು ಅವರು ಪಡೆಯುತ್ತಿದ್ದು ಅಷ್ಟೊಂದು ಪುರಸ್ಕರಿಸಬೇಕು. ರಾಜಕೀಯವಾದ ಕಾರಣವೊಂದನ್ನು ಅವರು ಊಹಿಸಿದ್ದಾರೆ.

ಮೇಲೆ ಹೇಳಿದಂತೆ ಡಾ.ಬಿ.ಎ. ಸಾಲೆತೊರೆ ಅವರು ಊಹಿಸುವ ಕಾರಣಕ್ಕೆ ಭಿನ್ನವಾದ ಇತರ ಕಾರಣಗಳೇನಾದರೂ ಕಾಣಬಹುದೆ ಎಂಬುದು ವಿಚಾರಣೀಯ ಶಾಸನಗಳು ಕೊಂಡೋಜ ತಿಮ್ಮೋಜರನ್ನು ವಿಶ್ಲೇಷಿಸಿರುವಲ್ಲಿ ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಕೆಲವು ಕಾರಣಗಳನ್ನು ಸೂಚಿಸಿರುವಂತಿದೆ. ಶಾಸನಗಳು ಅವರನ್ನು 'ದೊರೆಗಳ ಗಡ್ಡದ ಕೆಲಸಿಗರು' ಎಂದು ವಿಶ್ಲೇಷಿಸಿರುವಲ್ಲಿ ಅವರು ತಮ್ಮ ಜಾತಿ ಸಹಜವಾದ ನಾಯಿಂದ ಕಸುಬಿನಲ್ಲಿ ಕುಶಲತೆಯನ್ನು ತೋರಿ ರಾಜ ಮತ್ತು ರಾಜಬಂಧುಗಳ ಸೇವೆ ಮಾಡುತ್ತಿದ್ದರೆಂದು ಅಭಿಮಾನದಿಂದ ಹೇಳಿರುವಂತಿದೆ. ಇದಲ್ಲದೆ ಅವರನ್ನು 'ರಾಜ ನಿಯೋಗದ ನಾಯಿಂದರು'

ಎಂದು ಹೇಳಿರುವುದರಿಂದ ಅವರು ಕೇವಲ ರಾಜವರ್ಗಕ್ಕೆ ನಾಯಿಂದರಾಗಿ ಸೇವೆ ಸಲ್ಲಿಸುತ್ತಿದ್ದವರೆಂದಲ್ಲ, ಸಂದರ್ಭಾನುಸಾರ ರಾಜನಿಯೋಗಿಗಳಾಗಿಯೂ ಸಹ ಗುರುತರ ಪಾತ್ರ ನಿರ್ವಹಿಸುತ್ತಿದ್ದವರೆಂದೂ ಸೂಚಿತವಾಗುತ್ತದೆ. ಇದಷ್ಟೇ ಅಲ್ಲ, ಇವರನ್ನು 'ದೇಶಾಭಾಗದ ನಾಯಿಂದರು' ಎಂದು ಕರೆದಿರುವಲ್ಲಿ, ಇವರು ಸಾಂದರ್ಭಿಕವಾಗಿ ನ್ಯಾಯ ನಿರ್ಣಯ ವಿಷಯದಲ್ಲಿ ಕೂಡಾ ಮಹತ್ತ್ವದ ಪಾತ್ರ ವಹಿಸುತ್ತಿದ್ದವರೆಂದೂ ಬಿಂಬಿತವಾಗುತ್ತದೆ. ಅವರು ತೆರಿಗೆಮಾನ್ಯತೆ ಪಡೆಯಲು ಇಂಥ ಕಾರಣಗಳಿರುವ ಸಾಧ್ಯತೆಯೂ ಇದೆ.

ಇಷ್ಟಲ್ಲದೆ, ಕೊಂಡೋಜ ತಿಮ್ಮೋಜರ ಹೆಸರುಗಳ ಅಂತ್ಯದಲ್ಲಿಯ 'ಓಜ' ಎಂಬ ಶಬ್ದ ಕೂಡಾ ಗಮನೀಯ. ಎಲ್ಲ ಶಾಸನಗಳಲ್ಲೂ ಈ ಶಬ್ದ ತಪ್ಪದೆ ಅವರ ಹೆಸರಿನ ಅವಿಭಾಜ್ಯ ಭಾಗವೆಂಬಂತೆ ಬಂದಿದೆ. 'ಓಜ' ಎಂದರೆ 'ಆಚಾರ್ಯ' ಎಂದರ್ಥ. ಈ ಶಬ್ದ ಆ ಕಾಲದ ನಾಯಿಂದರಿಗೆ ಚೆನ್ನಾಗಿ ಒಪ್ಪುವಂಥದ್ದೆ. ಏಕೆಂದರೆ, ಅವರು ತಮ್ಮ ಕುಲಕಸುಬನ್ನಷ್ಟೇ ಅಲ್ಲದೆ, ವಾದ್ಯ ಸಂಗೀತ ವೈದ್ಯ ಜೋತಿಷ್ಯ ಪೌರೋಹಿತ್ಯ ಇವನ್ನೂ ಸಹ ಬಲ್ಲವರಾಗಿದ್ದರು. ಈ ಜನಾಂಗದವರು ಈಗಲೂ ಅಂಥ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಹಾಗಾಗಿಯೆ ಕೆಲವೆಡೆ ಇವರನ್ನು 'ಪಂಡಿತರು' ಎಂದು ಮುಂತಾಗಿ ಕರೆಯುವುದನ್ನೂ ನೋಡಬಹುದು. ಒಂದು ಶಾಸನದಲ್ಲಿ ಕೊಂಡೋಜ ತಿಮ್ಮೋಜರನ್ನು ಹೆಸರಿಸುವಾಗ 'Mangalla Timmoja Kondaja' ಎಂದಿರುವುದರಿಂದ, ಅವರು ಮಂಗಳವಾದ್ಯ ವಾದಕರಾಗಿ ಸಹ ಸೇವೆ ಸಲ್ಲಿಸಿದರೆಂಬ ಸಂಗತಿ ಹಿಂದಿನಿಂದಲೂ ಪ್ರಸಿದ್ಧವಾದುದು."[67] ಹೀಗೆ ಕೊಂಡೋಜ ತಿಮ್ಮೋಜರು ಡಾ. ಸಾಲೆತೊರೆ ಅವರು ಊಹಿಸುವ ರೀತಿಯ ಕಾರಣಕ್ಕೆ ಭಿನ್ನವಾಗಿ, ಬಹುವಿಧದ ಮತ್ತು ಮಹತ್ವದ ಸೇವೆ ಸಲ್ಲಿಸುತ್ತಿದ್ದ ಕಾರಣಕ್ಕೆ ಅವರ ಜನಾಂಗಕ್ಕೆ ವಿಶೇಷ ರೀತಿಯಲ್ಲಿ ತೆರಿಗೆಮಾನ್ಯತೆ ಪಡೆದರೆಂದು ತಿಳಿಯಬೇಕಾಗುತ್ತದೆ.

ಇಲ್ಲಿ ಮತ್ತೊಂದು ಅಂಶವನ್ನು ಕೂಡಾ ಪ್ರಸ್ತಾಪಿಸಬಹುದೆಂದು ಅನ್ನಿಸುತ್ತದೆ. ಮೇಲೆ ತಿಳಿಸಿದ, ಚಿತ್ರದುರ್ಗದ ಬೆಟ್ಟದ ಬಂಡೆಯಲ್ಲಿರುವ ಸರಳ ಕೆತ್ತನೆಯ ಶಿಲ್ಪದಲ್ಲಿ ತಿಮ್ಮೋಜ ಕೊಂಡೋಜರು ನಿಲುವಂಗಿ, ಉತ್ತರೀಯ, ಸುರುವಾಲು, ಚಡಾವು ಧರಿಸಿ ನಿಂತಿರುವಂತೆ ಚಿತ್ರಿಸಲಾಗಿರುವುದರ ಜೊತೆಗೆ, ಇಂಗ್ಲಿಷಿನ 'ಯು' ಅಕ್ಷರವನ್ನು ಹೋಲುವಂತಹ ಹಣೆಯ ನಾಮದಿಂದ ಅವರು ವೈಷ್ಣವ ಪಂಥದವರೆಂದೂ ಸೂಚಿಸಿದೆ. ವೈಷ್ಣವ ಪಂಥವನ್ನು ಅನುಸರಿಸಿದ ನಾಯಿಂದರು ಬ್ರಾಹ್ಮಣ ಅಥವಾ ಸಾತಾನಿ (ಶ್ರೀವೈಷ್ಣವ) ಗುರುಗಳಿಂದ ಶಂಖ ಚಕ್ರ ನಾಮಗಳ ಮುದ್ರೆಯನ್ನು ಪಡೆಯುತ್ತಿದ್ದರು; ಮದ್ಯ ಮಾಂಸಗಳಿಂದ ದೂರವಿರುತ್ತಿದ್ದರಲ್ಲದೆ ಪೌರೋಹಿತ್ಯವನ್ನು ಮಾಡುತ್ತಿದ್ದರೆಂದು ತಿಳಿಯುತ್ತದೆ. ವಿಜಯನಗರದ ತುಳುವ ವಂಶದ ಅರಸರು ವೈಷ್ಣವ ದೇವಾಲಯ, ಮಠ ಮತ್ತು ಗುರುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದು ಸ್ಪಷ್ಟ. ತಿಮ್ಮೋಜ ಕೊಂಡೋಜರಂತೂ ವೈಷ್ಣವ ಸಂಪ್ರದಾಯಕ್ಕೆ ಸೇರಿದ್ದರೆಂಬ ಸಂಗತಿ ಅದೇ ತುಳುವ ವಂಶದ ದೊರೆ ಸದಾಶಿವರಾಯ ಹಾಗೂ ರಾಜವರ್ಗದವರ ಮನ್ನಣೆಗೆ ಹೆಚ್ಚಿನ ಒಂದು ಕಾರಣವಾಗಿರಬಹುದು.

ಹೀಗೆ ತಮ್ಮವರಿಗೆ ತೆರಿಗೆ ಮಾನ್ಯತೆ ಸಂಪಾದಿಸಿಕೊಟ್ಟು ಅದರ ಪ್ರತಿಷ್ಠೆ ಸ್ಥಾನಮಾನಗಳಿಗೆ ಮುಖ್ಯ ಕಾರಣರಾದ ತಿಮ್ಮೋಜ ಕೊಂಡೋಜರು, ತರುವಾಯದಲ್ಲಿ ಅಂದರೆ ಕ್ರಿ.ಶ. ೧೮ನೆಯ ಶತಮಾನದ ಹೊತ್ತಿಗಾಗಲೇ ಆ ಸಮುದಾಯದವರ ದೃಷ್ಟಿಯಲ್ಲಿ ಅವರ ಕುಲದೇವತೆಗಳೇ ಆಗಿಹೋಗಿದ್ದರೆಂದು ಮೇಲೆ ತಿಳಿಸಿದ ಚಿತ್ರದುರ್ಗದ ಶಾಸನ ಮತ್ತು ಶಿಲ್ಪದಿಂದ ವ್ಯಕ್ತವಾಗುತ್ತದೆ.

ಒಂದು ಕಾಲಕ್ಕೆ ಮನುಷ್ಯರಾಗಿ ಬದುಕಿ ಬಾಳಿದ್ದವರು, ಒಂದು ಜನಸಮುದಾಯದ ಹಿತಸಾಧನೆಗಾಗಿ ಅಸಾಧಾರಣ ಕಾರ್ಯ ಮಾಡುವುದರಿಂದಲೋ ಇಲ್ಲವೆ ತಮ್ಮ ವಸ್ತು ಪ್ರಾಣವನ್ನೇ ಈಡಾಡುವುದರಿಂದಲೋ ತರುವಾಯದ ಕಾಲದಲ್ಲಿ ಆ ಸಮುದಾಯದ ದೇವತಾಪುರುಷರಾಗುತ್ತಾರೆ. ಅಂಥವರನ್ನು ಹೊಸ ಅಧ್ಯಯನದ ಪರಿಭಾಷೆಯಲ್ಲಿ 'ಸಾಂಸ್ಕೃತಿಕ ನಾಯಕರು' ಎಂದು ಕರೆಯುವಂತೆ ತಿಮ್ಮೋಜ ಕೊಂಡೋಜರನ್ನು ನಾಯಿಂದ ಜನಾಂಗದ 'ಸಾಂಸ್ಕೃತಿಕ ನಾಯಕರೆಂದು' ಕರೆಯುವುದು ಉಚಿತವಾಗಿ ಕಾಣುತ್ತದೆ.

## 4.6. ವಿಜಯನಗರ ಕಾಲದಲ್ಲಿ ಮುಸ್ಲೀಂ ಧರ್ಮೀಯರು

ವಿಜಯನಗರ ಕಾಲದಲ್ಲಿ ಹಿಂದು ಮುಸ್ಲಿಂ ಬಾಂಧವ್ಯ ಹಾಗೂ ವಿಜಯನಗರ ಸೈನ್ಯಾಡಳಿತದಲ್ಲಿ ಮುಸ್ಲೀಮರ ಪಾತ್ರ ಹೇಗಿತ್ತೆಂಬುದನ್ನು ಬಿ. ಅಬ್ದುಲ್ ಮನ್ನಾನ್ ತಮ್ಮಲೇಖನದಲ್ಲಿ ವಿಷದವಾಗಿ ನಿರೂಪಿಸಿದ್ದಾರೆ.

ವಿಜಯನಗರ ಪಟ್ಟಣದಲ್ಲಿ ಮುಸ್ಲಿಂ ಧರ್ಮವಿದ್ದುದರ ಕುರುಹಾಗಿ ಇಲ್ಲಿರುವ ಪುರಾತನ ಅವಶೇಷಗಳು, ಶಿಲಾಶಾಸನಗಳು ಹಾಗೂ ಸಾಹಿತ್ಯ ಆಕಾರಗಳು ದೃಢಪಡಿಸುತ್ತವೆ.

ಬಹುತೇಕವಾಗಿ ದೆಹಲಿ ಸುಲ್ತಾನ ಅಲ್ಲಾ ಉದ್-ದ್ದೀನ್ ಖಿಲ್ಜಿ ಅವರ ದಕ್ಷಿಣ ಭಾರತದ ದಾಳಿಯ ನಂತರ ಇಲ್ಲಿ ಮುಸ್ಲಿಂ ಧರ್ಮ ನೆಲೆಯೂರಿತ್ತೆಂದು ಹೇಳಬಹುದಾಗಿದೆ. ಬಿಜಾಪುರ, ಗುಲ್ಬರ್ಗಾ ವಿಭಾಗಗಳನ್ನು ದೆಹಲಿ ಸುಲ್ತಾನರ ವಶವಾಗಿದ್ದು, ಆ ಪ್ರದೇಶದಲ್ಲಿ ಸುಲ್ತಾನರು ತೆರಿಗೆಗಳನ್ನು ವಿಧಿಸಿದ್ದುದರ ಹಿನ್ನೆಲೆಯಲ್ಲಿ ಗಮನಿಸಿದರೆ ಕ್ರಿ.ಶ. ೧೩೨೪ರ ವೇಳೆಗೆ ಈ ಪ್ರದೇಶದಲ್ಲಿ ಮುಸ್ಲಿಂ ಧರ್ಮ ಪ್ರವೇಶಿಸಿತು ಎಂಬುದು ಸ್ಪಷ್ಟ.

೧. ದೆಹಲಿ ಸುಲ್ತಾನನಾಗಿ ಪಟ್ಟಕ್ಕೆ ಬಂದ ಮಹಮ್ಮದ್-ಬಿನ್-ತುಘಲಕ್ ಬಾದಷಹನು ತನ್ನ ಸೋದರ ಅಳಿಯ ಬಹ-ಉದ್-ದ್ದೀನ್ ಗುಸ್ತಾಪ್ (ಬಾದುರ್‌ಖಾನ್)ನನ್ನು ಗುಲ್ಬರ್ಗಾ ಪ್ರದೇಶದ ಸಗರ ನಾಡಿಗೆ ರಾಜ್ಯಪಾಲನನ್ನಾಗಿ ನೇಮಿಸಿದುದನ್ನು, ಕುಮಾರರಾಮನ ಸಾಂಗತ್ಯಗಳು ದೃಢೀಕರಿಸುತ್ತವೆ.

೨. ಸುಲ್ತಾನಿಗೂ ಮತ್ತು ಬಾದುರ ಖಾನನಿಗೂ ವೈಮನಸ್ಸುಂಟಾಗಿ ಬಾದುರನನ್ನು ಸುಲ್ತಾನನು ಗಡಿಪಾರು ಮಾಡಿದನು. ಈ ಒಂದು ಸನ್ನಿವೇಶದಿಂದ ಬಾದುರನು ತನ್ನ ಸಂಸಾರ ಪರಿವಾರ ಸಮೇತ ಕಂಪಿಲದೇವನ ಆಶ್ರಯಕ್ಕಾಗಿ ಬಂದನು. ಕಂಪಿಲರಾಯನು ಬಾದುರ ಖಾನನಿಗೆ ರಾಜಾಶ್ರಯ ನೀಡಿ ಅವನಲ್ಲೇ ಇರುವಂತೆ ವ್ಯವಸ್ಥೆ ಮಾಡಿದನು.

ಇದರಿಂದ ಒಬ್ಬ ಹಿಂದೂ ಧರ್ಮದ ರಾಜ ಮುಸ್ಲಿಂ ಧರ್ಮದ ಬಾದುರ ಖಾನನಿಗೆ ಆಶ್ರಯ ನೀಡಿ, ಹಿಂದೂ, ಮುಸ್ಲಿಂ ಧರ್ಮ ಸಮನ್ವಯತೆಯ ಬ್ರಾತೃತ್ವವನ್ನು ತೋರಿಸಿದವನು ಕಂಪಿಲರಾಯ. ಮುಂದೆ ವಿಜಯನಗರ ಪರಿಸರದಲ್ಲಿ ಮುಸ್ಲಿಂ ಧರ್ಮಕ್ಕೆ ಅಡಿಪಾಯ ಹಾಕಿದವನು ಕಂಪಿಲರಾಯನೆ. ಹಿಂದೂ ಹಬ್ಬ ಉತ್ಸವಗಳಲ್ಲಿಯೂ ಬಾದುರಖಾನ, ಆತನ ಮಕ್ಕಳು ಪರಿವಾರದವರು ಸಹ ಭಾಗವಹಿಸಿದ್ದುದನ್ನು ಕುಮಾರರಾಮನ ಸಾಂಗತ್ಯಗಳು ದೃಢೀಕರಿಸುತ್ತವೆ. ಅನಂತರ ಸುಲ್ತಾನನ ಮಗಳು ಬಾಬಮಿ ಕುಮಾರರಾಮನನ್ನು ಮನಸಾರೆ ಪ್ರೀತಿಸಿ ಮದುವೆಯಾಗಬೇಕೆಂದು ಆತನಿಗೆ ದಕ್ಷಿಣ ಭಾರತದ ಪೂರ್ವ ಭಾಗವನ್ನು ಉಡುಗೊರೆಯಾಗಿ ನೀಡುವುದಾಗಿ ಮಾತು ಕೊಡುತ್ತಾನೆ. ಈ ಒಂದು ಕಾರಣ ಮತ್ತು ಬಾದುರಖಾನನನ್ನು ಒಪ್ಪಿಸುವಂತೆ ಕಮ್ಮಟದ ಮೇಲೆ ಯುದ್ಧ ಮಾಡಿದ್ದು, ಈ ಯುದ್ಧಗಳಲ್ಲಿ ಸುಲ್ತಾನನು ೪ (ನಾಲ್ಕು) ಬಾರಿ ಸೋತನು. ಇದಕ್ಕೆ ಕಾರಣ ಬಾದುರಖಾನನ ಯುದ್ಧ ಪರಿಣತೆ, ಯುದ್ಧ ತಂತ್ರದಲ್ಲಿ ಕುದುರೆಕಲ್ಲುಗಳು ಹಾಗೂ ನುಗ್ಗು ಗಲ್ಲುಗಳ ತಂತ್ರಜ್ಞಾನವನ್ನು ಅಳವಡಿಸಿದುದರಿಂದ ಕುಮ್ಮಟ ದುರ್ಗವನ್ನು ಸುಲ್ತಾನರಿಂದ ಸುಲಭವಾಗಿ ಜಯಿಸುವುದು ಕಷ್ಟವಾಯಿತು. ಈ ಒಂದು ವೈಜ್ಞಾನಿಕ ಯುದ್ಧ ತಾಂತ್ರಿಕ ಕಲೆ ಬಾದುರಖಾನನ ಕೊಡುಗೆಯಾಗಿದೆ. ಕ್ರಿ.ಶ. ೧೩೨೭ರಲ್ಲಿ ನಡೆದ ನಿರ್ಣಾಯಕ ಯುದ್ಧದಲ್ಲಿ ಸುಲ್ತಾನನು ವಿಜಯಿಯಾಗಿ ಕಂಪಿಲನ ರಾಜ್ಯದ ಅವನತಿಯಾಯಿತು. ಆದರೂ ಕಂಪಿಲರಾಯನು ಬಾದುರಖಾನನ್ನು ಹೊಯ್ಸಳ ಅರಸರ ಮೂರನೆ ಬಲ್ಲಾಳನ ಆಶ್ರಯದಲ್ಲಿರಿಸಿದ್ದು ಕಂಪಿಲರಾಯನ ಹಿಂದೂ ಮುಸ್ಲಿಂ ಬಾಂಧವ್ಯದ ಪ್ರತೀಕವಾಗಿದೆ. ತದನಂತರ ದೆಹಲಿ ಸುಲ್ತಾನರ ಮಹಮ್ಮದ್ ಬಿನ್-ತುಘಲಕ್‌ನ ಮಗಳು ಬಾಬಮಿಯನ್ನು ಆಸೆಯ ಮೇರೆಗೆ ಕುಮಾರ ರಾಮನಾಥನನ್ನು ಜೀವಂತವಾಗಿ ಹಿಡಿದು ತರುವಂತೆ ಆಜ್ಞೆ ಮಾಡಿದನಾದರೂ ರಾಮನಾಥನು ಈ ಯುದ್ಧದಲ್ಲಿ ಮಡಿದಿದ್ದರಿಂದ ಬಾಬಮಿ ಆನೆಗಳೊಂದಿಗೆ, ಹಂಪೆಯ ಪರಿಸರಕ್ಕೆ ಬಂದು ಪ್ರಾಣ ನೀಗಿದಳೆಂದು ಸಾಹಿತಿಕ ಗ್ರಂಥಗಳಾದ ಕುಮಾರ ರಾಮನಾಥ ಸಾಂಗತ್ಯದಲ್ಲಿ ಉಲ್ಲೇಖವಾಗಿದೆ. ಅನಂತರ ಬಾಬಮಿಯ ಹೆಸರಿನಲ್ಲಿ ಸಮಾಧಿ (ಘೋರಿ)ಯನ್ನು ಕಟ್ಟಲಾಯಿತೆಂದು ದೆಹಲಿ ಸುಲ್ತಾನನ ಮಗಳ ಮೇಲಿನ ಪ್ರೀತಿ ಹಾಗೂ ಬಾದುರಖಾನನ ಮೇಲಿನ ದ್ವೇಷದಿಂದ ಕುಮ್ಮಟದ ಮೇಲೆ ಯುದ್ಧ ಮಾಡಬೇಕಾಯಿತೆಂಬ ಅಂಶವನ್ನು ಬಿಟ್ಟರೆ, ಅನ್ಯತಃ ಕಂಪಿಲನ ಮೇಲೆ ವೈರತ್ವವಿರಲಿಲ್ಲವೆಂದು ತಿಳಿದುಬರುತ್ತದೆ. ಈ ಅಂಶವು ವಿಜಯನಗರ ಸ್ಥಾಪನೆಯ ಮೊದಲು ನಡೆದ ಘಟನೆಗಳಿಂದ ಈ ನೆಲದಲ್ಲಿ ಮುಸ್ಲಿಂ ಧರ್ಮ ನೆಲೆಯೂರಿತೆಂದು ಸ್ಪಷ್ಟವಾಗುತ್ತದೆ.

ವಿಜಯನಗರ ಪಟ್ಟಣಕ್ಕೆ ಸಂಬಂಧಿಸಿದಂತೆ ವಿವಿಧ ಧರ್ಮಗಳ ಜನರು ಈ ಪಟ್ಟಣದಲ್ಲಿದ್ದು ಮೂರರು (ಮುಸ್ಲಿಂಮರು) ಪಟ್ಟಣದ ಪೂರ್ವ ಭಾಗದಲ್ಲಿದ್ದರೆಂದು ವಿದೇಶಿಯರ ಬರಹಗಳು ಈ ಧರ್ಮವಿರುವುದನ್ನು ಪ್ರಚುರಪಡಿಸಿವೆ. (ವಿ.ಪಿ.ಆರ್. ೧೯೭೮-೮೩, ೧೯೮೩-೮೪, ೧೯೮೪-೮೭) ಇಲ್ಲಿ ಧರ್ಮಶಾಲೆ, ಗೋರಿಗಳು,

ಮಸೀದಿಗಳು ಹಾಗೂ ಕಡ್ಡೇ ರಾಮಪುರದಲ್ಲಿರುವ ಬೃಹತ್ ಗೋರಿಗಳು, ಒಳಕೋಟೆಯಲ್ಲಿರುವ ಘೋರಿಗಳು ಶಾಸನಗಳು ಈ ಅಂಶವನ್ನು ಎತ್ತಿ ಹಿಡಿದಿವೆ.

ವಿಜಯನಗರ ಸೈನ್ಯದಲ್ಲಿ ಮುಸ್ಲಿಂ ಸೈನಿಕರು ಹಾಗೂ ಸೈನ್ಯಾಧಿಕಾರಿಗಳು ಇದ್ದರು. ಈ ದಿಶೆಯಲ್ಲಿ ಕಟ್ಟಿಗೆ ಅಹ್ಮದ್ ಖಾನ್ ಎಂಬ ಸೈನ್ಯಾಧಿಕಾರಿ ದೇವರಾಯರಿಗೆ ಧರ್ಮವಾಗಬೇಕೆಂದು ಕಟ್ಟಿಸಿದ ಧರ್ಮಶಾಲೆ ಮತ್ತು ಬಾವಿ ಆಚಂದ್ರಕರ್ ಸ್ಥಾಯಿಯಾಗಿ ಇರಲೆಂದು ಉಲ್ಲೇಖವಿದೆ. ಈಗಲೂ ಧರ್ಮಶಾಲೆ ಬಾವಿ ಹಾಗೂ ಕಟ್ಟಿಗೆ ಆಹಮ್ಮದ್ ಖಾನನ ಸಮಾಧಿಯನ್ನು ಸಂರಕ್ಷಿಸಲಾಗಿದೆ.

ಕಡೆ ರಾಮಪುರದ ಎರಡು ಘೋರಿಗಳ ಬಳಿ ಇರುವ ಶಾಸನದಲ್ಲಿ ಸುಲ್ತಾನ (ಸುಲಿತಾಣ) ಷಾಯಿದು ಪೀರಿಗೆ ಮತ್ತು ಬಾಬಯನ ಗುಡಿಗೆ ಎಲೆಕುಲು ಧರ್ಮವನ್ನು ಬಿಟ್ಟಿರುವುದನ್ನು ಕಾಣಬಹುದು.

ಅಹಮ್ಮದ್ ಖಾನ್ ಧರ್ಮಶಾಲೆಯ ಈಶಾನ್ಯಕ್ಕೆ ಹಲವು ಗೋರಿಗಳು ಇರುವವು. ಈ ಗೋರಿಗಳ ಬಳಿಯಲ್ಲಿರುವ ಶಾಸನಗಳಲ್ಲಿ ಗೋರಿಗಳನ್ನು ಕಟ್ಟಿಸಿದ ಕುರಿತಾಗಿ ಹೇಳಿದೆ. ಮಿಯಾ ರಾಹುತನ ಘೋರಿ ಹಾಗೂ ದಾದನ ರಾಹುತನ ಘೋರಿಗಳ ಉಲ್ಲೇಖವಿದ್ದು, ಈ ಘೋರಿಗಳನ್ನು ಯಾರು ಹಾಳು ಮಾಡಬಾರದು, ಮಾಡಿದರೆ ಒಂದು ಮಕ್ಕಾ ತೀರ್ಥದಲ್ಲಿ, ತಾಯಿ ತಂದೆಯರನ್ನು ಕೊಂದ ಪಾಪಕ್ಕೆ ಹೋಗುವರೆಂದಿದೆ.

ಇನ್ನೊಂದು ಶಾಸನವು ಉಲ್ಲೇಖಿಸುವಂತೆ ಅಚ್ಯುತರಾಯನ ಮಗ ಚಿಕ್ಕರಾಯನಿಗೆ ಪುಣ್ಯವಾಗಬೇಕೆಂದು ಸಕಲಜಿ ರಾಹುತನು ಚಿಕ್ಕರಾಯನ ಹೆಸರಿನಲ್ಲಿ ಗುಮ್ಮಟವನ್ನು ಕಟ್ಟಿಸಿದ್ದಾನೆ.

ಕ್ರಿ.ಶ. ೧೪೧೨ರಲ್ಲಿ ಹೊಸಪೇಟೆಯಲ್ಲಿ ಕಟ್ಟಿಸಿದ ಗುಮ್ಮಟ ಈ ಪರಿಸರದಲ್ಲಿ ಅಂದರೆ ವಿಜಯನಗರ ಕಾಲಾವಧಿಯಲ್ಲಿ, ಇಸ್ಲಾಂ ಧರ್ಮವೂ ಬಾಳಿ ಬೆಳಗಿತು ಎಂಬ ಅಂಶವು ಕಂಡುಬರುತ್ತದೆ. ಐತಿಹಾಸಿಕವಾಗಿ ಈ ಅಂಶಗಳನ್ನು ಗಮನಿಸಿದಾಗ ಕೃಷ್ಣದೇವರಾಯನು ಬಿಜಾಪುರದಲ್ಲಿ ಸುಲ್ತಾನನ ಮಗನಿಗೆ ಪಟ್ಟಗಟ್ಟಿದ್ದು, ವಿಜಯನಗರದ ಅರಸರು ಮುಸ್ಲಿಂ ದ್ವೇಷಿಗಳಾಗಿರಲಿಲ್ಲವೆಂದು ಅಭಿಪ್ರಾಯಪಡಬಹುದಾಗಿದೆ.

ಡೋಮಿಂಗೂ ಪಾಯೆಸನ ಉಲ್ಲೇಖದಂತೆ ಮೂರರ ಮನೆಗಳು ವಿಜಯನಗರ ಪಟ್ಟಣದಲ್ಲಿರುವ ಮುಖ್ಯ ಬೀದಿಯ ತುದಿಯಲ್ಲಿದ್ದವೆಂದು ಇದು ನಗರದ ಆಚಿನ ಭಾಗವಾಗಿತ್ತು ಎಂದಿದ್ದಾರೆ. ಮೂರರಲ್ಲಿ ಅನೇಕ ಜನರು ರಾಜನ ಅಂಗರಕ್ಷಕರಾಗಿ ಮತ್ತು ಸೈನಿಕರಾಗಿ, ಸೈನ್ಯಾಧಿಕಾರಿಗಳಾಗಿಯೂ ವಿಜಯನಗರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ ಎಂಬ ಉಲ್ಲೇಖವಿದೆ.

ಇಲ್ಲಿ ಇರುವ ಘೋರಿಗಳ ಮೇಲಿರುವ ಶಿಲೆಗಳ ಮೇಲೆ ಖುರಾನಿನ ಶ್ಲೋಕಗಳನ್ನು ಬರೆಯಲಾಗಿದೆ.

ಶಿವಪುರದ ಬಳಿ ಇರುವ ಶಾಸನದಲ್ಲಿ ನಾಗಪ್ಪ ದಣ್ಣಾಯಕರಿಗೆ ಧರ್ಮವಾಗಲೆಂದು ರೇಖಲಖಾನ್ ಎಂಬುವರು ಗದ್ದೆಯನ್ನು ಕೊಟ್ಟ ವಿವರವಿದೆ. (ಡಾ.ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹೊಸಪೇಟೆ ಇವರು ಇತ್ತೀಚೆಗೆ ಶಾಸನವನ್ನು ಬೆಳಕಿಗೆ ತಂದಿರುವರು.)

ಒಟ್ಟಾರೆ ವಿಜಯನಗರ ಕಾಲದಲ್ಲಿ ಮುಸ್ಲಿಂ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಹಿಂದೂ ಧರ್ಮದಲ್ಲಿರುವಂತೆ ಗಂಗಾತೀರ್ಥ, ಪಂಪಾತೀರ್ಥದಂತಹ ಪವಿತ್ರ ತೀರ್ಥವೊಂದು ಮುಸ್ಲಿಂ ಧರ್ಮದಲ್ಲಿಯೂ ಇರುವುದನ್ನು ಈ ಪರಿಸರದ ಶಾಸನ ಒಂದು ಉಲ್ಲೇಖಿಸುತ್ತದೆ. ದಾದನ ರಾಹುತನ ಗುಮ್ಮಟವನ್ನು ಹಾಳು ಮಾಡಿದವರು "ಮಕ್ಕಾತೀರ್ಥ"ದಲ್ಲಿ ತಮ್ಮ ತಾಯಿ ತಂದೆಯವರನ್ನು ಕೊಂದ ಪಾಪಕ್ಕೆ ಹೋಗುವರೆಂದಿದೆ. ಇದರಿಂದ ಮಕ್ಕಾದಲ್ಲಿರುವ ತೀರ್ಥವು ಮುಸ್ಲಿಂ ಧರ್ಮದವರಿಗೆ ಪವಿತ್ರವಾದುದಾಗಿತ್ತೆಂಬುದು ಇಲ್ಲಿನ ಅಭಿಪ್ರಾಯವಾಗಿದೆ. ಕಡೇ ರಾಮಪುರದಲ್ಲಿನ ಶಾಸನ ಕ್ರಿ.ಶ. ೧೫೦೫ರಲ್ಲಿ ಸೈದು ಪೀರು ಅಲಿ ಮಕ್ಕಳು ಅಬೂಮಗ ಮುರದ ಎಂಬುವರು ಬಾಬಯ (ಬಾಬಮ)ನ ಗುಡಿಯನ್ನು ಕಟ್ಟಿಸಿ, ಮಾಹುವರಗಳನ್ನು ಕೊಟ್ಟು, ಸೇವೆಯನ್ನು ಮಾಡಿದರೆಂದು ಉಲ್ಲೇಖವಿದೆ. ಇದರಿಂದ ಈ ಗುಮ್ಮಟ ಮಸೀದಿಯನ್ನು ಕಟ್ಟಿಸಿದ್ದರು ಎಂದು ಸ್ಪಷ್ಟವಾಗಿದೆ.

ವಿಜಯನಗರದಲ್ಲಿರುವ ಮುಸ್ಲಿಂ ಧರ್ಮದ ಶಾಸನಗಳಲ್ಲಿ ಕಂಡುಬರುವ ಒಂದು ಮುಖ್ಯ ಅಂಶವೆಂದರೆ ಇವರು ಮುಸ್ಲಿಂರಾದರೂ ಹಿಂದೂ ಧರ್ಮದ ಅಂಶಗಳನ್ನು ತಮ್ಮ ಶಾಸನದಲ್ಲಿ ಅಳವಡಿಸಿರುವುದು ಪ್ರಮುಖ ಅಂಶ.

ಶುಭಮಸ್ತು, ಸ್ವಸ್ತಿಶ್ರೀ ಜಯಾ ಬ್ಯುದ್ಯ ಶಾಲಿವಾಹನ ಶಕೆ ವರ್ಷ, ಸಂವತ್ಸರ ಮಾಸ, ತಿಥಿ, ವಾರ ಮತ್ತು ಇಲ್ಲಿನ ಅರಸರು ಹೆಸರುಗಳು ಹಾಗೂ ಶಾಪಭಾಗದಲ್ಲಿ ತಂದೆ ತಾಯಿಗೆ ತಪ್ಪಿರುವರು, ಗುರುವಿಗೆ ತಪ್ಪಿದವರು ಎಂದಿದೆ, ಕೊನೆಯಲ್ಲಿ (ಅಂತ್ಯದಲ್ಲಿ) ಮಂಗಳ ಮಹಾಶ್ರೀ ಎಂದು ಉಲ್ಲೇಖಿಸಲಾಗಿದೆ.

ಹಿಂದೂಗಳಾದ ಬಸವ ಮತ್ತು ರಾಮನಾಯಕನು ಮಿಯಾ ರಾಹುತೆಗೆ ಪುಣ್ಯವಾಗಬೇಕೆಂದು ಮೀಯಾ ರಾಹುತನ ಹೆಸರಿನಲ್ಲಿ ಯಿಂಬುಗೋರಿ (ಸಮಾಧಿಗೋರಿ) ಮಜಾರ, ಮಸೀದಿಯನ್ನು ಕಟ್ಟಿಸಿದರೆಂದು ಉಲ್ಲೇಖವಿದೆ. ವಿಜಯನಗರ ಕಾಲದಲ್ಲಿದ್ದ ಹಿಂದೂ ಮುಸ್ಲಿಂ ಬಾಂಧವ್ಯಕ್ಕೆ ಇದೊಂದು ಕೈಗನ್ನಡಿಯಂತಿದೆ.

ಅಂದಿನ ಕಾಲದಲ್ಲಿಯೂ ಗುಮ್ಮಟಗಳ ಒಳಗೆ ಅಗೆತಮಾಡುವ ಕಳ್ಳರಿದ್ದಾರೆಂದು ಇಂತಹ ಕಾರ್ಯಗಳನ್ನು ಮಾಡಿದವರು ತಮ್ಮ ತಂದೆ ತಾಯಿಯನ್ನು "ಮಖಾತೀರ್ಥದಲ್ಲಿ" ಕೊಂದ ಪಾಪಕ್ಕೆ ಹೋಗುವರೆಂದು, ಇದು "ಕಲಾಬನಾಣಿ" ಹಾಗೂ ಮುಂದಿನ ಜನ್ಮದಲ್ಲಿ ಹಂದಿ ಹಾಗೂ ನಾಯಿಯ ಬಸಿರಲ್ಲಿ ಹುಟ್ಟುವರೆಂದು ಶಾಸನದ ಶಾಪಾಶಯ ಭಾಗದಲ್ಲಿದೆ. ಗೋರಿ ಕೆಳಗಣ ಮಾಗಣಿ, ಗೋರಿ ಮಾಗಣಿ ಎಂಬ ಸ್ಥಳಸೂಚಕಗಳು ಶಾಸನಗಳಲ್ಲಿವೆ. ಕ್ರಿ.ಶ. ೧೪೩೫ರ ಶಾಸನದಲ್ಲಿ ಗೋರಿ ಕೆಳಗಿನ ಮಾಗಣಿಯನ್ನು ವಿಠಲೇಶ್ವರ ದೇವರ ಅಮೃತಪಡಿ ನೈವೇದ್ಯಕ್ಕೆ ಮಾನ್ಯ ಮಾಡಿರುವರು. ಇದರಿಂದ ಗೋರಿ ಇದ್ದುದರ ಉಲ್ಲೇಖವನ್ನು ಶಾಸನಗಳು ತಿಳಿಸುತ್ತವೆ.[68]

## 4.7. ವಿಜಯನಗರ ಕಾಲದಲ್ಲಿ ಕ್ರೈಸ್ತ ಮಿಷನರಿಗಳು

ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿಯೇ ಏಸುವಿನ ಶಿಷ್ಯರು ಭಾರತಕ್ಕೆ ಬಂದರೆಂದು ಹೇಳಲಾಗಿದೆ. ಎರಡನೆಯ ಶತಮಾನದಲ್ಲಿ ಅಲೆಕ್ಸ್ಯಾಂಡ್ರಿಯಾದಿಂದ ಕ್ರೈಸ್ತ ಪಾದ್ರಿಗಳು ಬ್ರಾಹ್ಮಣರೊಂದಿಗೆ ವಾದ ಮಾಡಲು ಭಾರತಕ್ಕೆ ಬಂದರು.[69] ಆರನೆಯ ಶತಮಾನದಲ್ಲಿ ಕಲ್ಯಾಣವೆಂದರೆ ಈಗಿನ ಆನೆಗೊಂದಿಯಲ್ಲಿ ಇಗರ್ಜಿಯೇ ಇತ್ತೆಂದು ರೆವರೆಂಡ್ ಕಿಟ್ಟೆಲ್ ಹೇಳುತ್ತಾರೆ.[70] ಈ ರೀತಿಯಲ್ಲಿ ಹದಿನಾಲ್ಕನೇ ಶತಮಾನದವರೆಗೆ ಕ್ರೈಸ್ತ ಮಿಷನರಿಗಳು ಪಾಲಸ್ತೈನ್, ಪರ್ಶಿಯಾ, ಬ್ಯಾಬಿಲೋನ್, ಸಿರಿಯಾ, ಅರಮೇನಿಯಾ ಅಲೆಕ್ಸ್ಯಾಂಡ್ರಿಯಾದಿಂದ ತಂಡ ತಂಡವಾಗಿ ಭಾರತಕ್ಕೆ ಬಂದರು. ಕರ್ನಾಟಕಕ್ಕೆ ಯುರೋಪಿಯನ್ ಮಿಷಿನರಿಗಳು ಹದಿಮೂರನೇ ಶತಮಾನದಲ್ಲಿ ಆಗಮಿಸಿದರು. ಅವರು ಕೆನರಾ, ಮೈಸೂರು ಮತ್ತು ತಿರುವನಂತಪುರದ ಕಡೆ ಮತಾಂತರದ ಕೆಲಸ ನಡೆಸಿದರು. ವಾಸ್ಕೋಡಗಾಮಾ ಕಲ್ಲಿಕೋಟೆ ತಲುಪಿದ ಮೇಲೆ ಮಿಷನರಿಗಳು ಬಲಗೊಂಡರು. ಕ್ರಿ.ಶ. ೧೫೦೬ರಲ್ಲಿ ಆಲ್ಬುಕರ್ಕನು ಗೋವೆಯ ಗವರ್ನರ್ ಆಗಿ ನಿಯುಕ್ತಗೊಂಡನು.

ಕ್ರಿ.ಶ. ೧೫೦೦-೧೫೧೧ರ ಅವಧಿಯಲ್ಲಿ ಲೂಯಿಸ್ ಎಂಬ ಪಾದ್ರಿಯು ಅನೇಕ ಸಲ ವಿಜಯನಗರಕ್ಕೆ ಬಂದಿದ್ದನು[71]. ಕೃಷ್ಣದೇವರಾಯರಿಗೆ ಅಲ್ಬುಕರ್ಕನ ಸ್ನೇಹ ಮತ್ತು ಅವನು ತರಿಸುತ್ತಿದ್ದ ಕುದುರೆಗಳು ಬೇಕಾಗಿದ್ದವು. ಯುರೋಪಿನಿಂದ ಬರುತ್ತಿದ್ದ ಎಲ್ಲಾ ಕುದುರೆಗಳನ್ನು ಖರೀದಿಸುವ ಅವಶ್ಯಕತೆಯೂ ಇತ್ತು. ಹೀಗಾಗಿ ರಾಯರು ಲೂಯಿಸ್ ಪಾದ್ರಿಗೆ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಲೂ ಇಗರ್ಜಿಗಳನ್ನು ಕಟ್ಟಲೂ ಅನುಮತಿ ನೀಡಿದರಂತೆ. ಆದರೆ ಅವನು ಮತಾಂತರ ಮಾಡಲು ಯತ್ನಿಸಲಿಲ್ಲ. ಫ್ರಾನ್ಸಿಸ್ಕನ್ ಮಿಷನರಿಗಳ ಚರಿತ್ರೆಯಲ್ಲಿ ಹೇಳಿದಂತೆ - ಲೂಯಿಸ್ ಪಾದ್ರಿಯು ವಿಜಯನಗರದಲ್ಲಿ ಕ್ರಿಸ್ತ ಧರ್ಮ ಪ್ರವಚನ ನಡೆಸುತ್ತಿರುವಾಗ ಬ್ರಾಹ್ಮಣರು ಅವನ ಸಭೆಗೆ ನುಗ್ಗಿ ಅವನನ್ನು ಹೊಡೆದರಂತೆ. ಆಗ ರಾಯರು ಪಾದ್ರಿಯನ್ನು ಕರೆಸಿ ವಿಚಾರಿಸಿ, ಸಾಂತ್ವನಮಾಡಿ, ಪೂರ್ತುಗಾಲಕ್ಕೆ ವಾಪಸಾಗಲು ಧನಸಹಾಯ ಮಾಡಿದರಂತೆ.[72] ಇನ್ನೊಂದು ದಾಖಲೆಯ ಪ್ರಕಾರ ಈ ಪಾದ್ರಿಯನ್ನು ವಿಜಯನಗರದಲ್ಲಿ ಕೊಲೆ ಮಾಡಿದರೆಂದೂ, ಅದರ ಹಿಂದೆ ಅದಿಲ್‌ಷಾಹನ ಕೈವಾಡವಿತ್ತೆಂದೂ ಹೇಳಲಾಗಿದೆ. ಆದರೆ ರಾಜಗುರುಗಳಾದ ತಾತಾಚಾರ್ಯರ ವಿರೋಧದಿಂದ ಮಿಷನರಿಗಳು ತತ್ಕಾಲಕ್ಕೆ ಗೋವೆಗೆ ಮರಳಿದರಂತೆ.[73]

೧೫೪೨ರಲ್ಲಿ ಆಂಟೋನಿಯೋ ಪತ್ರಾ ವೋ ಎಂಬ ಫ್ರಾನ್ಸಿಸ್ಕನ್ ಪಾದ್ರಿಯು ವಿಜಯ ನಗರದಲ್ಲಿ ೧೩೦೦ ಜನ ಹಿಂದೂಗಳನ್ನು ಕ್ರೈಸ್ತರನ್ನಾಗಿ ಮತಾಂತರಿಸಿದ್ದಲ್ಲದೇ ರಾಜಧಾನಿಯಲ್ಲಿಯೇ ಸಂತ ಅಂತೋನಿಯರ ಇಗರ್ಜಿಯನ್ನು ಕಟ್ಟಿಸಿದ್ದನೆಂದು ಫಾದರ್ ಹೆರಾಸ್ ಬರೆದಿದ್ದಾರೆ.[74] ಆದರೆ ಕ್ರಿ.ಶ. ೧೫೯೮ರಲ್ಲಿ ಚಂದ್ರಗಿರಿಯಲ್ಲಿ ಪರಿಪಾಲನೆ ಮಾಡುತ್ತಿದ್ದ ಅರವೀಡು ವಂಶದ ವೆಂಕಟಪತಿರಾಯನ ಆಹ್ವಾನದ ಮೇರೆಗೆ ಜೆಸುಟ್ ಮಿಷನ್ ಆರಂಭವಾಯಿತು. ವೆಂಕಟಪತಿರಾಯನ ಮಾವನು ಜೆಸುಟ್‌ರಿಗೆ ಇಗರ್ಜಿಯನ್ನು ಕಟ್ಟಲು ಭೂಮಿಯನ್ನು ನೀಡಿದನಲ್ಲದೇ, ಅವರ ಖರ್ಚಿಗೆಂದು ರಾಜ್ಯಕೋಶದಿಂದ ವರ್ಷಕ್ಕೆ ಸಾವಿರ ಪಗೋಡಾ ಸಿಗುವಂತೆ ವ್ಯವಸ್ಥೆ

ಮಾಡಿದನು. ಈ ಮಿಷನರಿಗಳ ಮೂಲಕ ವೆಂಕಟಪತಿರಾಯ ಗೋವೆಯ ಪೋರ್ಚುಗೀಜ್ ರಾಜ್ಯಪಾಲನ ಮತ್ತು ಸ್ಪೇನ್ ದೇಶದ ಅರಸನಾಗಿದ್ದ ಫಿಲಿಪ್ಪನ ಗೆಳೆತನವನ್ನು ಸಂಪಾದಿಸಿದನು.

ಕ್ರಿ.ಶ. ೧೬೦೦ರಲ್ಲಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದ್ದ ವಿಜಯನಗರದ ರಾಜ ಪ್ರತಿನಿಧಿ ತಿರುಮಲರಾಯನು ಜೆಸುಟ್ ಗುರುಗಳಿಗೆ ಪತ್ರ ಬರೆದು ಆಹ್ವಾನಿಸುತ್ತಾನೆ. ಶ್ರೀರಂಗಪಟ್ಟಣದಲ್ಲಿ ಇಗರ್ಜಿ ಕಟ್ಟಲು ಸ್ಥಳ ನೀಡುವ ಮತ್ತು ವಾರ್ಷಿಕ ೫೦೦ ಪಗೋಡಾ ಜೀವನಾಂಶ ನೀಡುವ ಭರವಸೆ ನೀಡುತ್ತಾನೆ. ಆದರೆ ಅವರು ಬರಲಾಗಲಿಲ್ಲ. ಕ್ರಿ.ಶ. ೧೭೧೪ರಲ್ಲಿ ಫಾದರ್ ಅಲ್‌ಫಾನ್ಸೊ ಡಿಕೊಸ್ಟಾ ಪತ್ರೇವು - ಶ್ರೀರಂಗರಾಯನು ತನ್ನ ಪತ್ನೀ ಸಮೇತ ಕ್ರಿಸ್ತ ಮತಾವಲಂಬಿಯಾದ - ಎಂದು ಹೇಳುತ್ತಾನೆ.

ಈ ಎಲ್ಲಾ ಆಧಾರಗಳ ಮೇಲೆ ಮಿಷನರಿ ದಾಖಲೆಗಳು ಹೀಗೆ ಸಾರುತ್ತವೆ. King of vijayanagara was definitely friend of Chrisitians in 1443 AD at one time the chief minister of vijayanagara was a Christian.

ಬಿಜಾಪುರದ ಆದಿಲ್‌ಷಾಹಿ ಸುಲ್ತಾನರೂ ಕ್ರಿಶ್ಚಿಯನ್ನರ ಬಗ್ಗೆ ಉದಾರವಾಗಿದ್ದರು. ರಾಯಚೂರು, ಮುದುಗಲ್‌ಗಳಲ್ಲಿ ಫ್ರಾನ್ಸಿಸ್ಕನ್ ಮಿಷನರಿಗಳು ತುಂಬಾ ಚೆನ್ನಾಗಿ ಕೆಲಸ ಮಾಡುತ್ತಿದ್ದರು. ಇಬ್ರಾಹಿಂ ಆದಿಲ್‌ಷಾಹನ ಕಾಲಕ್ಕೆ (೧೫೦೨ ಕ್ರಿ.ಶ.) ಮುದುಗಲ್‌ನಲ್ಲಿ ಸಾಕಷ್ಟು ಹಿಂದೂಗಳು ಕ್ರಿಸ್ತ ಧರ್ಮವನ್ನು ಸೇರಿದರು. ಅವರಲ್ಲಿ ಕುರುಬರೂ, ನೇಕಾರರೂ ಮತ್ತು ಕುಂಬಾರರೇ ಅಧಿಕವಾಗಿದ್ದರು. ಮುದುಗಲ್ಲಿಗೆ ನಾಲ್ಕು ಮೈಲು ದೂರದಲ್ಲಿರುವ 'ಬುದ್ದಿನಿ' ಎಂಬ ಗ್ರಾಮವನ್ನು ಆದಿಲ್‌ಷಾಹಿಗಳು ಮಿಷನರಿಗಳಿಗೆ ಉಂಬಳಿಯಾಗಿ ನೀಡಿದ್ದರಂತೆ.[75] ಅಲ್ಲದೆ ಅನೇಕ ತೆರಿಗೆ ಮತ್ತು ಸುಂಕಗಳ ವಿನಾಯಿತಿಯನ್ನೂ ನೀಡಿದ್ದರು. ಚಿತ್ತಾಪುರ ಭಾಗದಲ್ಲಿ ವಿಶೇಷವಾಗಿ ಕುಂಬಾರರು ಮತ್ತು ಈಡಿಗರು ಮತಾಂತರವಾದರು. ಸುರಪುರದಲ್ಲಿ ಆಂಗ್ಲರ ರಾಜಪ್ರತಿನಿಧಿಯಾಗಿದ್ದ ಕ್ಯಾಪ್ಟನ್ ಮೆಡೋಸ್ ಟೇಲರ ತನ್ನ ವರದಿಯಲ್ಲಿ ಈ ವಿಷಯಗಳನ್ನು ಪುಷ್ಟೀಕರಿಸುತ್ತಾನೆ.[76]

ಬಿಜಾಪುರದ ಸೇನೆಯಲ್ಲಿ ಜಾರ್ಜಿಯನ್, ಸರ್ಕಾಶಿಯನ್ ಮತ್ತು ಅಬಿಸೇನಿಯನ್ ಯೋಧರು ಅದರಲ್ಲಿಯೂ ಪ್ರಮುಖವಾಗಿ ಕ್ರಿಸ್ತಿಯನ್ನರು ಇದ್ದರು. ಅವರೆಲ್ಲಾ ಸೇನಾಪತಿ ಅಸದ್‌ಖಾನನ ಕೆಳಗೆ ಕೆಲಸ ಮಾಡುತ್ತಿದ್ದರು. ಗೋಲ್ಕೊಂಡದ ಕುತುಬ್‌ಷಾಹಿ ನವಾಬರ ಮಂತ್ರಿಯೊಬ್ಬನು ಕ್ರಿಸ್ತೀಯನಾಗಿದ್ದನಂತೆ.

ಹೀಗೆ ಕ್ರಿಸ್ತಶಕೆಯ ಆರಂಭದಿಂದಲೂ ದಕ್ಷಿಣ ಭಾರತದಲ್ಲಿ ಕ್ರೈಸ್ತ ಮಿಷನರಿಗಳು ಕೆಲಸ ನಡೆಸಿರುವುದು ಖಚಿತ. ವಿಜಯನಗರದ ರಾಯರ ಸರ್ವಧರ್ಮ ಸಮನ್ವಯದ ನೀತಿಯನ್ನು ಬಳಸಿ ಅವರು ನೆಲೆಯೂರಲು ಪ್ರಯತ್ನಿಸಿದರು. ಗೋವೆಯ ರಾಜ್ಯಪಾಲರನ್ನು ತಮ್ಮ ಸ್ನೇಹದಲ್ಲಿ ಬಂಧಿಸಿ ಕುದುರೆಗಳನ್ನು ತಾವೇ ಖರೀದಿಸಬೇಕೆಂಬ ಯುದ್ಧನೀತಿಯಿಂದ ರಾಯರು ಮಿಷನರಿಗಳಿಗೆ ಅವಕಾಶ ನೀಡಿದರು.

ಆದರೆ ಬ್ರಾಹ್ಮಣರ ಮತ್ತು ಮುಖ್ಯವಾಗಿ ರಾಜಗುರುಗಳಾದ ತಾತಾಚಾರ್ಯರ ಕಡುವಿರೋಧದಿಂದ ಅವರು ಕೃಷ್ಣದೇವರಾಯರ ಕಾಲದಲ್ಲಿ ಭದ್ರವಾಗಿ ವಿಜಯನಗರದಲ್ಲಿ ನೆಲೆ ಊರಲು ಸಾಧ್ಯವಾಗಲಿಲ್ಲ. ಆದರೆ ಅರವೀಡು ವಂಶದವರ ಪರಿಪಾಲನೆಯಲ್ಲಿ ಅವರು ಆಹ್ವಾನಿತರಾದರು. ಅನೇಕ ಮುಖವಾಗಿ ತಮ್ಮ ಕೆಲಸ ಮಾಡಿದರು.

ರಾಜಕೀಯ ತಂತ್ರದ ಫಲವಾಗಿ ಆದಿಲ್‌ಷಾಹಿ ಮತ್ತು ಗೋಲ್ಕೊಂಡದ ಕುತುಬ್‌ಷಾಹಿ ಅರಸರು ನೀಡಿದ ಸವಲತ್ತುಗಳಿಂದ ಮಿಷನರಿಗಳು ರಾಯಚೂರು, ಮುದುಗಲ್, ಚಿತ್ತಾಪುರ, ಆದವಾನಿ, ರಾಮದುರ್ಗ ಮತ್ತು ಮುದ್ದನಗೆರೆಗಳಲ್ಲಿ ತೀವ್ರವಾಗಿ ಮತಾಂತರದ ಕೆಲಸ ನಡೆಸಿದರು. ಹಂಪೆಯ ಪತನದ ಅನಂತರ ಅವರು ಬಳ್ಳಾರಿಯಲ್ಲಿ ತಳ ಊರಿದರು. ಕ್ರಿ.ಶ. ೧೫೪೨ರಲ್ಲಿ ಗೋವೆಗೆ ಆಗಮಿಸಿದ ಸಂತ ಫ್ರಾನ್ಸಿಸ್ಸಸ್ ಕ್ಸೇವಿಯರನು ಗೋವಾ, ಕಾರವಾರ ಮತ್ತು ತಿರುವನಂತಪುರದಲ್ಲಿ ಸಾವಿರಾರು ಜನರನ್ನು ಮತಾಂತರ ಮಾಡಿದನು. ಅವನ ಕಾರ್ಯವನ್ನು ಜೆಸುಟ್ ಮತ್ತು ಫ್ರಾನ್ಸಿಸ್ಕನ್ ಮಿಷನರಿಗಳು ಮುಂದುವರಿಸಿದರೆಂದು ಭಾರತದ ಗೆಝೆಟಿಯರ್ ಉಲ್ಲೇಖವಿದೆ. ಆದರೆ ಜೆಸುಟ್ ಮತ ಪ್ರಚಾರಕನಾದ ಪಾದ್ರಿ ಫಾದರ್ ಡಿನೊಬಲಿಯಾ ಅತ್ಯಂತ ಬುದ್ಧಿವಂತಿಕೆಯಿಂದ ಹೊಂದಿಕೊಂಡು ಹೋಗುವ ಪದ್ಧತಿಯನ್ನು ಪ್ರಾರಂಭಿಸಿದನು. ಅವನು ತಮಿಳುನಾಡಿನ ಮಧುರೆ ನಗರದಲ್ಲಿ ನೆಲೆಸಿದನು. ಹಿಂದೂಗಳನ್ನು ತೆಗಳುವುದಾಗಲೀ, ಅವರ ಆಚಾರ ವಿಚಾರಗಳನ್ನು ಅವಹೇಳನ ಮಾಡುವುದಾಗಲೀ ಮಾಡಲಿಲ್ಲ. ಅದರ ಬದಲು ಅವನು ಸಂಸ್ಕೃತ ಮತ್ತು ತಮಿಳಿನ ಪ್ರಭುತ್ವ ಪಡೆದು, ಹಿಂದೂ ಧರ್ಮಗ್ರಂಥಗಳನ್ನು ಅಭ್ಯಾಸ ಮಾಡಿ, ಹಿಂದೂ ಪಂಡಿತರೊಂದಿಗೆ ವಾದ-ವಿವಾದ, ಖಂಡನೆ - ಮಂಡನೆಯಲ್ಲಿ ತೊಡಗಿದನು. ಅವನ ವೇಷವೂ ಹಿಂದೂ ಸನ್ಯಾಸಿಯಂತಿತ್ತು. ಅವನ ವಿಧಾನಕ್ಕೆ ಮರುಳಾಗಿ ಅನೇಕ ಮೇಲು ಜಾತಿಯ ಜನರು ಕ್ರೈಸ್ತರಾದರು. ಅದರಂತೆ 'ವೀರಮುನಿವರ' ಎಂದು ಪ್ರಸಿದ್ಧನಾದ ಬ್ರೆಸ್ಚಿಯು ತಮಿಳಿನಲ್ಲಿ ಪ್ರಸಿದ್ಧವಾದ 'ತೆಂಬುವಾಣಿ' ಎಂಬ ಕಾವ್ಯವನ್ನು ರಚಿಸಿದನು. ಥಾಮಸ್ ಸ್ಟೀಫನ್ಸ್ ಅದೇ ಕಾಲದಲ್ಲಿ ಮರಾಠಿಯಲ್ಲಿ ಕ್ರಿಸ್ತಪುರಾಣವನ್ನು ರಚಿಸಿದನು. ಮೊಘಲ್ ಚಕ್ರವರ್ತಿ ಅಕಬರನೂ ಜೆಸುಟ್‌ರಿಗೆ ತನ್ನ ಆಸ್ಥಾನದಲ್ಲಿ ಅವಕಾಶ ನೀಡಿದನು.

ವಿಜಯನಗರ ಕಾಲದಲ್ಲಿ ಹಿಂದೂ ಸಮಾಜವು ಅತ್ಯಂತ ಸಂಘಟಿತವಾಗಿತ್ತು. ಆದರೆ ಕ್ರಿಸ್ತ ಮಿಷನರಿಗಳು ದೂರದ ಯುರೋಪಿನಿಂದ ಬಂದು ನಾನಾ ರೀತಿಯ ಬುದ್ಧಿವಂತಿಕೆಯಿಂದ ಸ್ಥಳೀಯ ರಾಜಕಾರಣದ ಉಪಯೋಗ ಪಡೆದು, ಹಿಂದೂ - ಮುಸ್ಲಿಮರ ದ್ವೇಷದ ಅವಕಾಶದ ಲಾಭ ಪಡೆದು ಕೆಲಸ ಮಾಡಿದರು. ರಾಜಾಶ್ರಯ ಪಡೆಯಲು, ಅಧಿಕಾರಿಗಳ ಬೆಂಬಲ ಗಳಿಸಲು ಪ್ರಯತ್ನಿಸಿದರು. ಕೆಳಜಾತಿಯ ಮುಗ್ಧರನ್ನು ಮತಾಂತರ ಮಾಡಿದರು. ದೇಶ ಭಾಷೆಗಳನ್ನು ಕಲಿತು ಕಾವ್ಯ ರಚಿಸಿ, ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕೆಲಸ ಮಾಡಿ ಗೌರವಾನ್ವಿತರೆನಿಸಿದರು. ಆಗ ಮೇಲು ಜಾತಿಯವರನ್ನೂ, ವಿಚಾರವಾದಿಗಳನ್ನು ಮತಾಂತರಗೊಳಿಸಿದರು.

ತಮ್ಮ ಬುದ್ಧಿವಂತಿಕೆಯಿಂದ ಆ ಕಾಲದ ಹಿಂದೂ ಮತ್ತು ಮುಸಲ್ಮಾನ ದೊರೆಗಳ ಅನುಮತಿ ಮತ್ತು ಸದ್ಭಾವನೆಗಳನ್ನು ಸಂಪಾದಿಸಿ ದಕ್ಷಿಣ ಭಾರತದಲ್ಲಿ ಕ್ರಮವಾಗಿ ತಮ್ಮ ಮಿಷನರಿ ಕೆಲಸವನ್ನು ವಿಸ್ತರಿಸಿ ಗಟ್ಟಿಯಾದದ್ದು ಇತಿಹಾಸ.

ಕ್ರೈಸ್ತ ನೆಲೆಗಳ ಅಧ್ಯಯನದ ಒಂದು ಅಂಶ ಜನಾಂಗ ಸ್ಥಿತಿಗತಿಯನ್ನು ಪರಿಶೀಲಿಸುವುದು. ಕೆಳದಿಯ ನಾಯಕರ ಹತೋಟಿಯಲ್ಲಿದ್ದ ಪ್ರದೇಶದ ಕ್ರೈಸ್ತ ಸಮುದಾಯದ ಜನಾಂಗ ಸ್ಥಿತಿಗತಿಯ ಒಂದು ಚಿತ್ರವನ್ನು ಪಡೆಯುವುದು ಕಷ್ಟ. ಅದಕ್ಕೆ ಕಾರಣ ಕೆಳದಿಯ ರಾಜರಿಗೆ ತಮ್ಮ ರಾಜ್ಯದ ಜನಸಂಖ್ಯೆಯ ಜನಗಣತಿ ಮಾಡುವ ಪದ್ಧತಿಯಿರಲಿಲ್ಲವಾದುದು. ಹದಿನೇಳು ಮತ್ತು ಹದಿನೆಂಟು ಶತಮಾನದಲ್ಲಿ ಕರ್ನಾಟಕದಲ್ಲಿ ಈ ಭಾಗದಲ್ಲಿ ಪ್ರವಾಸ ಮಾಡಿದ ಕ್ರೈಸ್ತ ವರ್ತಕರು, ಪ್ರವಾಸಿಗರು, ಪಾದ್ರಿಗಳು, ಸೇನಾಧಿಕಾರಿಗಳು ಅಲ್ಲಿಯ ಕ್ರೈಸ್ತ ಸಮಾಜದ ಸ್ಥಿತಿಗತಿಯ ಬಗೆಗೆ ಖಚಿತವಾಗಿ ಬರೆದಿಟ್ಟಿಲ್ಲ. ಉದಾಹರಣೆಗೆ, ಸಾಮಾನ್ಯವಾಗಿ ಪ್ರತಿಯೊಂದನ್ನೂ ಅತಿ ಸೂಕ್ಷ್ಮವಾಗಿ ಗಮನಿಸುವ ಪೀಯೇಟ್ರೋಡೆಲ್ಲಾವಲ್ಲೆಯು ಕ್ರೈಸ್ತ ವಿವರಣೆಯ ವಿಚಾರಕ್ಕೆ ಬಂದರೆ ಬಹು ಸ್ಥೂಲವಾದ ಉಲ್ಲೇಖದೊಂದಿಗೆ ಮುಗಿಸುತ್ತಾನೆ.

ಆದರೆ ಹದಿನೆಂಟನೆಯ ಶತಮಾನದಿಂದ ಸ್ವಲ್ಪಮಟ್ಟಿಗೆ ಆಧಾರವು ದೊರಕುತ್ತದೆ. ಅದು ಈ ವಿಚಾರದಲ್ಲಿ ಒಂದು ಒಳನೋಟವನ್ನು ಒದಗಿಸುತ್ತದೆ. ಆ ಸಂಗತಿಗಳನ್ನು ಇಲ್ಲಿ ಸಂಗ್ರಹವಾಗಿ ನಿರೂಪಿಸಬಹುದು. ಕ್ರಿ.ಶ. 1799ರ ಟೀಪು ಸುಲ್ತಾನನ ಪತನದ ನಂತರ ದಕ್ಷಿಣ ಕನ್ನಡದ ಕಲೆಕ್ಟರ್ ಆಗಿ ಬಂದ ಸರ್ ಥಾಮಸ್ ಮುನ್ರೋ ಕೆಲವು ಲೇಖನಗಳನ್ನು ಬರೆದಿದ್ದಾನೆ. ಇದು ಈ ಸಮಸ್ಯೆಯ ಮೇಲೆ ಒಂದಿಷ್ಟು ಬೆಳಕು ಚೆಲ್ಲುತ್ತದೆ. ಅಲ್ಲದೆ ಬಿಕ್ಕಟ್ಟಿನ ಸನ್ನಿವೇಶದಲ್ಲಿ ಶ್ರೀರಂಗಪಟ್ಟಣಕ್ಕೆ ವಲಸೆ ಬಂದ ಕುಟುಂಬಗಳಿಗೆ ಸೇರಿದ ಕ್ರೈಸ್ತರ ಪತ್ರ ವ್ಯವಹಾರಗಳು ಕೂಡ ಇಲ್ಲಿ ನೆರವಾಗುತ್ತವೆ. ಅಲ್ಲದೆ ಇನ್ನೂ ಕೆಲವು ಸಣ್ಣ ಪುಟ್ಟ ಮೂಲಗಳಿವೆ.

ಥಾಮಸ್ ಮುನ್ರೋ ಪ್ರಕಾರ ದಕ್ಷಿಣ ಕನ್ನಡ ಪ್ರದೇಶದಿಂದ, ಟೀಪು ಸುಲ್ತಾನನ ಕಾಲದಲ್ಲಿ ಹಲವು ಕಾರಣಗಳಿಗಾಗಿ ಕೊನೆಯಪಕ್ಷ ಅರವತ್ತು ಸಾವಿರ ಜನರು ತಾತ್ಕಾಲಿಕವಾಗಿ ವಲಸೆ ಬರಬೇಕಾಯಿತು.[77] ಇದರಿಂದ 1763ಕ್ಕೆ ಮುಂಚೆ ಕೆಳದಿಯ ನಾಯಕರ ರಾಜ್ಯದ ಭಾಗವಾಗಿದ್ದ ದಕ್ಷಿಣ ಕನ್ನಡ ಪ್ರದೇಶದ ಕ್ರೈಸ್ತ ಜನತೆಯ ಬಗೆಗೆ ಒಂದು ಚಿತ್ರವು ಮೂಡಬಹುದು. ಥಾಮಸ್ ಮುನ್ರೋ ಹೇಳಿದ ಘಟನೆಯು ನಡೆದುದು 1794ರಲ್ಲಿ ಯಾವಾಗಲೋ ಒಮ್ಮೆ. ಆದ್ದರಿಂದ 1763 ಮತ್ತು 1794ರ ನಡುವೆ ಅಷ್ಟಾಗಿ ಕಾಲದ ಅಂತರವಿರಲಿಲ್ಲ ಎಂದು ತೋರುತ್ತದೆ. ಕ್ರೈಸ್ತರೆಲ್ಲರೂ ಶ್ರೀರಂಗಪಟ್ಟಣಕ್ಕೆ ವಲಸೆ ಬರಬೇಕಾಯಿತು ಎಂದು ಥಾಮಸ್ ಮುನ್ರೋ ಹೇಳುವುದಿಲ್ಲ, ಅವರ ಒಂದು ಭಾಗದಷ್ಟು ಜನರು ಮಾತ್ರ ಬಿಟ್ಟು ಹೋದರು ಎಂದು ಹೇಳುತ್ತಾನೆ. ಆದರೆ ಬೇರೊಂದು ಮೂಲವು ಆಗ ಎಂಬತ್ತು ಸಾವಿರ ಜನ ಕ್ರೈಸ್ತರು ವಲಸೆ ಹೋಗಬೇಕಾಯಿತು ಎಂದು ಹೇಳುತ್ತದೆ.[78] ಇದಕ್ಕೆ ವ್ಯತಿರಿಕ್ತವಾಗಿ ಕರ್ನಲ್ ವಿಲ್ಕ್ಸ್ ಆ ಸಂಖ್ಯೆಯನ್ನು ಮೂವತ್ತು ಸಾವಿರ ಎಂದು ಉಲ್ಲೇಖಿಸುತ್ತಾನೆ. ಅವನು ಕೂಡ ಟೀಪುಸುಲ್ತಾನನ ಸಮಕಾಲೀನನಾಗಿದ್ದವನು.[79]

ಇದರಿಂದ ಕೆಳದಿ ರಾಜ್ಯದಲ್ಲಿ ಕ್ರೈಸ್ತ ಜನರು ಗಣನೀಯ ಪ್ರಮಾಣದಲ್ಲಿ ಇದ್ದರು ಎನ್ನುವುದು ಸೂಚಿತವಾಗುತ್ತದೆ. ಇವರು ಕೆಳದಿಯ ನಾಯಕರ ಆಶ್ರಯದಲ್ಲಿ ಹೆಚ್ಚಿನ ಸವಲತ್ತುಗಳನ್ನು ಪಡೆದಿದ್ದರು.[80] ಇಲ್ಲಿ ಫಾದರ್ ಗೊನ್ಸಾಲ್ವೋ ಮಾರ್ಟಿನ್ಸ್‌ನ ಹೇಳಿಕೆಯನ್ನು ಗಮನಿಸುವುದು ಮುಖ್ಯವಾಗುತ್ತದೆ. ಆತನು ಶಿವಪ್ಪನಾಯಕನ ಕಾಲದಲ್ಲಿ ಕೆಳದಿ ರಾಜ್ಯದಲ್ಲಿ ಗೋವೆಯ ರಾಯಭಾರಿಯಾಗಿದ್ದನು. ಅವನ ಪ್ರಕಾರ, ಕೆಳದಿಯ ನಾಯಕರ ರಾಜ್ಯದ ಕೆನರಾ ಭಾಗದಲ್ಲಿ 80,000 ಜನ ಕ್ರೈಸ್ತರಿದ್ದರು, ರಾಜಧಾನಿ ಬಿದನೂರು ಅಥವಾ ನಗರದಲ್ಲಿ 30,000 ಜನ ಇದ್ದರು.[81] ಬಹುಶಃ ಅವರಲ್ಲಿ ಅನೇಕರು ರಾಜಧಾನಿಯ ಖಾಯಂ ನಿವಾಸಿಗಳಾಗಿರಲಿಲ್ಲ, ಬಂದು ಹೋಗುವ ಜನ ಸಮೂಹದ ಭಾಗವಾಗಿದ್ದರು. ಅನೇಕ ಕ್ರೈಸ್ತರು ಕೆಳದಿ ಸೈನ್ಯಕ್ಕೆ ಸೇರಿಕೊಂಡಿದ್ದಿರಲೂಬಹುದು. ದೇಶೀಯ ಮೂಲಗಳಲ್ಲಿ "ತಿಗ್ಳರ ಬೀದಿ" ಅಥವಾ ಕ್ರೈಸ್ತರ ರಸ್ತೆಯೊದು ರಾಜಧಾನಿಯಲ್ಲಿದ್ದುದರ ಉಲ್ಲೇಖವಿದೆ. ಕ್ಷೇತ್ರ ಕಾರ್ಯದ ಸಮಯದಲ್ಲಿ ಪರೀಕ್ಷೆ ಮಾಡಿದ ಕೆಲವು ಪ್ರಾಚೀನ ಸಮಾಧಿ ಶಿಲೆಗಳು ಬಹುಶಃ ಫಾ ಗೊನ್ಸಾಲ್ವೋ ಮಾರ್ಟಿನ್ಸನ ಹೇಳಿಕೆಯನ್ನು ಸಮರ್ಥಿಸುತ್ತವೆ. ನಗರದ ಪ್ರದೇಶದಲ್ಲಿ ಇನ್ನಷ್ಟು ಉತ್ಖನನಗಳಾಗಬೇಕಾದ ಅವಶ್ಯಕತೆಯಿದೆ. ಇದರ ಜೊತೆಗೆ, ಕೋಟೆಯ ಪಕ್ಕದಲ್ಲಿ, ಈಗ ಹೊಸ ಚರ್ಚು ಇರುವ ಸ್ಥಳದಲ್ಲಿ ಹಳೆಯ ದೇವಮಂದಿರವೊಂದರ ಶಿಥಿಲ ಅವಶೇಷಗಳು, ತಳಪಾಯ ಕಂಡುಬರುತ್ತದೆ. ಇದೂ ಫಾ | ಗೊನ್ಸಾಲ್ವೋ ಮಾರ್ಟಿನ್ಸನು ಹೇಳುವ ಮಾತಿಗೆ ಒಂದಿಷ್ಟು ಸೂಚನೆ ಕೊಡುತ್ತದೆ.

**ಸಮಕಾಲೀನ ಸಮಾಜಕ್ಕೆ ಕ್ರೈಸ್ತರ ಕೊಡುಗೆ :** ಆ ಪ್ರದೇಶದಲ್ಲಿ ಇದ್ದ ಜೀವನ ಪರಿಸ್ಥಿತಿಗೆ ಕ್ರೈಸ್ತರು ವೈವಿಧ್ಯವನ್ನು ಕೂಡಿಸಿದರು. ಅವರು ತಮ್ಮೊಂದಿಗೆ ಕೊಂಕಣಿ ಭಾಷೆ, ಆಚಾರಗಳು, ವ್ಯಾಪಾರ ಪದ್ಧತಿ, ನಡವಳಿಕೆಗಳು, ಉಡುಗೆ ತೊಡುಗೆ ಮೊದಲಾದವನ್ನು ತಂದರು. ಅವು ತುಳುನಾಡು ಎಂದು ಪ್ರಸಿದ್ಧವಾಗಿದ್ದ ಪ್ರದೇಶದ ಸುಸ್ಥಾಪಿತ ಸಾಂಸ್ಕೃತಿಕ ಹಾಗೂ ಭಾಷಿಕ ಸ್ಥಿತಿಗತಿಗಳಿಂದ ವಾಸ್ತವವಾಗಿ ಬೇರೆಯಾಗಿದ್ದುವು. ಹಾಗೆಯೇ ಸಮಕಾಲೀನ ಯುರೋಪಿಯನ್ ಶೈಲಿಯಲ್ಲಿ ಅವರು ಚರ್ಚುಗಳನ್ನು ಕಟ್ಟಿದರು. ಗೋವಾದಿಂದ ಎರವಲು ತಂದ ಈ ಕಲೆಯು ತುಳುನಾಡಿಗೆ ವೈವಿಧ್ಯವನ್ನು ತುಂಬಿತು.

ಸ್ಥಳೀಯ ಜನರೊಂದಿಗೆ ಸಂಪರ್ಕವನ್ನು ಸ್ಥಾಪಿಸಿಕೊಳ್ಳುವ ಸಲುವಾಗಿ ಅವರು ತುಳುಭಾಷೆಯನ್ನು ಕಲಿತರು. ಹಾಲಿ ಇದ್ದ ಬದುಕನ್ನು ಶ್ರೀಮಂತಗೊಳಿಸಲು ಅವರು ಕೆಲವು ಅಂಶಗಳನ್ನು ಪರಸ್ಪರ ಎರವಲು ಪಡೆದುಕೊಂಡರು. ಗೋವೆಯಿಂದ ವಲಸೆ ಬಂದ ಕೊಂಕಣಿ ಕ್ರೈಸ್ತರು ಪ್ರತ್ಯೇಕವಾಗಿ ಜೀವಿಸಲು ಬಯಸಲಿಲ್ಲ. ಬದಲಿಗೆ ತಮ್ಮ ವಿಶಿಷ್ಟತೆಯನ್ನು ಕಾಪಾಡಿಕೊಂಡೇ ಸ್ಥಳೀಯ ಪಂಗಡಗಳೊಂದಿಗೆ ವ್ಯವಹರಿಸಲು ಪ್ರಯತ್ನಿಸಿದರು.

**ವಿಜಯನಗರ ಸಂಸ್ಕೃತಿಗೆ ವಿದೇಶಿ ಕ್ರೈಸ್ತರ ಕೊಡುಗೆ :** ಪೋರ್ಚುಗೀಸ್ ಕ್ರೈಸ್ತರು ವಿಜಯನಗರ ಸಾಮ್ರಾಜ್ಯಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದರು. ವಿಜಯನಗರದ ಸೈನ್ಯಕ್ಕೆ ಅವರು ಕುದುರೆಗಳನ್ನು ಪೂರೈಸುತ್ತಿದ್ದರು. ವಿಶೇಷವಾಗಿ ನೀರಾವರಿ ಕೆಲಸ ಸಂಬಂಧವಾದ ನಿರ್ಮಾಣ ಕಾರ್ಯದಲ್ಲಿ ತಂತ್ರಜ್ಞಾನವನ್ನು

ಒದಗಿಸಿದರು. ಪೋರ್ಚುಗೀಸರು ವಿಜಯನಗರ ಸೈನ್ಯಕ್ಕೆ ಸೇರಿದರು, ಅದಕ್ಕಿಂತ ಮಿಗಿಲಾಗಿ ಅವರು ವಿಜಯನಗರದ ವ್ಯಾಪಾರ ವಾಣಿಜ್ಯದ ಏಳಿಗೆಗೆ ಹೆಚ್ಚಿನ ಕೊಡುಗೆ ನೀಡಿದರು. ವಿಜಯನಗರದ ಉತ್ಪಾದನೆಗಳಿಗೆ ಪಶ್ಚಿಮ ಏಷ್ಯಾ ಮತ್ತು ಯುರೋಪುಗಳಲ್ಲಿ ವಿಶಾಲವಾದ ಮಾರುಕಟ್ಟೆಯನ್ನು ರೂಪಿಸಿದರು. ವಿಜಯನಗರದಿಂದ ಅವರು ಅಕ್ಕಿ, ಮೆಣಸು, ಮರ, ಮತ್ತಿತರ ಭೋಗವಸ್ತುಗಳನ್ನು ಕೊಂಡುಕೊಂಡರು.[82] ಪ್ರತಿಯಾಗಿ ಸಾಮ್ರಾಜ್ಯಕ್ಕೆ ಅಮೂಲ್ಯ ಲೋಹಗಳನ್ನು, ವಿಶೇಷವಾಗಿ ಚಿನ್ನವನ್ನು ಒದಗಿಸಿದರು.

"ಬಿಸ್ನಗರದಲ್ಲಿದ್ದ ಒಬ್ಬ ಪೋರ್ಚುಗೀಸನ ಬಳಿ ಬಹು ಬೆಲೆಬಾಳುವ ಒಂದು ಕುದುರೆಯಿದ್ದಿತು. ಆದರೆ ಹೊಟ್ಟೆಯಲ್ಲಿ ಗ್ಯಾಸ್ ತುಂಬುವ ತೊಂದರೆ ಅದನ್ನು ಕಾಡುತ್ತಿತ್ತು. ಆ ಕಾರಣದಿಂದ ರಾಜನು ಅದನ್ನು ಕೊಳ್ಳಬಯಸಲಿಲ್ಲ. ಒಡೆಯನು ಕುದುರೆಗೆ ಹಿಟ್ಟು ಬೆರೆಸಿದ "ಯುಂಗು" (Yumgu)ವನ್ನು ಬೆರೆಸಿ ಅದರ ಅನಾರೋಗ್ಯವನ್ನು ಪರಿಹರಿಸಿದನು. ಗುಣ ಹೊಂದಿದ ಆ ಕುದುರೆಯನ್ನು ಒಳ್ಳೆ ಬೆಲೆ ಕೊಟ್ಟು ರಾಜನು ಕೊಂಡುಕೊಂಡನು. ಕಾಯಿಲೆಯನ್ನು ಹೇಗೆ ಗುಣಪಡಿಸಿದೆ ಎಂದು ಕೇಳಲು, "ಯುಂಗು" ಕೊಟ್ಟುದಾಗಿ ರಾಜನಿಗೆ ಹೇಳಿದನು. ಆಗ ರಾಜನು "ಇದರಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ನೀನು ದೇವತೆಗಳ ಆಹಾರವನ್ನು ಅದಕ್ಕೆ ಕೊಟ್ಟಿರುವೆ. ಅದು ಕವಿಗಳು ಹೇಳುವ ಅಮೃತವೇ ಸರಿ" ಎಂದನು.[83] ಈ ಉದ್ಧರಣದಿಂದ ನಾವು ಈ ನಿರ್ಧಾರಕ್ಕೆ ಬರಬಹುದು. ಮೊದಲನೆಯದಾಗಿ ವಿಜಯನಗರದಲ್ಲಿ ಪೋರ್ಚುಗೀಸ್ ಅಶ್ವವ್ಯಾಪಾರಿಗಳು ವಾಸವಾಗಿದ್ದರು. ಎರಡನೆಯದಾಗಿ, ಅವರು ಅಶ್ವಶಾಸ್ತ್ರ ಅಥವಾ ಕುದುರೆಗಳ ಚಿಕಿತ್ಸೆಗೆ ಸಂಬಂಧಿಸಿದ ವಿಜ್ಞಾನದಲ್ಲಿ ಪರಿಣತರಾಗಿದ್ದರು. ಮೂರನೆಯದಾಗಿ, ಪೋರ್ಚುಗೀಸ್ ವರ್ತಕರು ಶ್ರೀಮಂತರಾಗಿದ್ದು ವಿಜಯನಗರದ ರಾಜರೊಂದಿಗೆ ನೇರವಾದ ಸಂಪರ್ಕವನ್ನಿರಿಸಿಕೊಂಡಿದ್ದರು. ಬಹಳ ಬೆಲೆಬಾಳುವ ವಸ್ತುಗಳ ವಹಿವಾಟು ನಡೆಸುತ್ತಿದ್ದರು. ಹೀಗೆ ಅಶ್ವವ್ಯಾಪಾರವು ವಿಜಯನಗರವನ್ನೂ ಪೋರ್ಚುಗೀಸರನ್ನೂ ಒಟ್ಟಿಗೆ ತಂದಿತು. ಇದನ್ನು ಹದಿನಾರನೆಯ ಶತಮಾನದಲ್ಲಿ ಕ್ರೈಸ್ತರು ನೀಡಿದ ಒಂದು ಕೊಡುಗೆ ಎಂದು ಪರಿಗಣಿಸಬಹುದು.

ಕ್ರಿ.ಶ.1633 ಏಪ್ರಿಲ್ 5ರಂದು ವೀರಭದ್ರನಾಯಕನಗೂ ಪೋರ್ಚುಗೀಸ್ ವೈಸರಾಯಿ ಡಾಮ್ ಮಿಗುಯೆಲ್ ನೊರೊನ್ಹಾನಿಗೂ ನಡುವೆ ಆ ಒಪ್ಪಂದವು ಸ್ವಾರಸ್ಯವಾಗಿದೆ.[84] ವೀರಭದ್ರ ನಾಯಕನು ವೈಸರಾಯಿಗೆ ಒಂದು ಪತ್ರ ಬರೆದುದನ್ನು ಅದು ಉಲ್ಲೇಖಿಸುತ್ತದೆ. ನಾಯಕನು ಕೆಳದಿ ರಾಜ್ಯದ ಪ್ರತಿನಿಧಿ ವಿಠ್ಠಲ ಶೆಣೈಗೆ ಅಧಿಕಾರ ನೀಡಿ (ಅ) ಕನ್ನರ್ (ಆ) ಅಶ್ವಪರಿಣತ (ಇ) ಭಾರತೀಯ ವೈದ್ಯ ಹಾಗೂ (ಈ) ಒಬ್ಬ ಒಳ್ಳೆಯ ಅಡಿಗೆಯವನು - ಇವರನ್ನು ಕಳುಹಿಸಿಕೊಡುವಂತೆ ಪೋರ್ಚುಗೀಸ್ ವೈಸರಾಯಿಯನ್ನೂ ತನ್ನ ಪರವಾಗಿ ಕೇಳಬೇಕೆಂದು ತಿಳಿಸಿದನು.[85]

ಪೋರ್ಚುಗೀಸ್ ಕ್ರೈಸ್ತರು ತಜ್ಞತೆ ಸಂಪಾದಿಸಿದ್ದ ಇನ್ನೊಂದು ಕ್ಷೇತ್ರ ಅಶ್ವಪಡೆ. ವಾಸ್ತವವಾಗಿ ಅಶ್ವವ್ಯಾಪಾರವನ್ನು ನಿಯಂತ್ರಿಸುವುದರ ಮೂಲಕ ಸೈನ್ಯದ ಬಹುಮುಖ್ಯವಾದ ಒಂದು ಅಂಗದ ಮೇಲೆ

ಚೌಕಾಶಿ ಮಾಡುವ ಸ್ಥಿತಿಯಲ್ಲಿದ್ದರು. ಪ್ರತಿಯೊಬ್ಬ ದೇಶೀಯ ಅರಸನೂ ಕುದುರೆಗಳನ್ನೂ ಕುದುರೆಗಳ ತರಬೇತಿದಾರರನ್ನೂ ಹೊಂದಿರಲು ಕಾತರನಾಗಿದ್ದನು. ಅಶ್ವಶಾಸ್ತ್ರ ಅಥವಾ ಕುದುರೆ ಸಾಕಾಣಿಕೆಯ ಶಾಸ್ತ್ರವು ಭಾರತದಲ್ಲಿ ತುಂಬ ಪ್ರಾಚೀನವಾದ ವಿದ್ಯೆಯಾಗಿದ್ದು ಕೆಳದಿ ರಾಜರಿಗೂ ಪರಿಚಯವಿದ್ದಿತಾದರೂ, ಹದಿನೇಳನೆಯ ಶತಮಾನದಲ್ಲಿ ಅವರಿಗೆ ಇದ್ದ ಆ ಶಾಸ್ತ್ರದ ಪರಿಜ್ಞಾನವು ಆಧುನಿಕವಾಗಿರಲಿಲ್ಲ. ಆದ್ದರಿಂದ ಗೋವೆಯ ಕ್ರೈಸ್ತ ವೈಸರಾಯಿಯು ಇಕ್ಕೇರಿಗೆ ಕುದುರೆ ತಜ್ಞನೊಬ್ಬನನ್ನು ಕಳುಹಿಸಬೇಕೆಂದು ವೀರಭದ್ರನಾಯಕನು ಬಯಸಿದನು. ಆ ಮೂಲಕ ತನ್ನ ಅಶ್ವಪಡೆಯನ್ನು ಅತ್ಯಾಧುನಿಕ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಅವನು ಇಚ್ಛಿಸಿದನು ಹೀಗೆ ಮಿಲಿಟರಿ ವಿಜ್ಞಾನ ಕ್ಷೇತ್ರದಲ್ಲೂ ಕೆಳದಿ ರಾಜ್ಯಕ್ಕೆ ವಿದೇಶೀಯ ಕ್ರೈಸ್ತರು ಕೊಡುಗೆ ನೀಡಿದುದನ್ನು ನಾವು ನೋಡುತ್ತೇವೆ.

ಪೋರ್ಚುಗೀಸ್ ಕ್ರೈಸ್ತರೊಂದಿಗೆ ಒಪ್ಪಂದ ಮಾಡಿಕೊಳ್ಳುವಾಗ ವೀರಭದ್ರನಾಯಕನು ಭಾರತೀಯ ಕ್ರೈಸ್ತ ವೈದ್ಯನೊಬ್ಬನನ್ನು ಇಕ್ಕೇರಿಗೆ ಕಳುಹಿಸಿಕೊಡುವಂತೆ ವೈಸರಾಯಿಯನ್ನು ಕೋರಿದನು. ಆಯುರ್ವೇದ ಒಂದು ದೇಶೀಯ ವೈದ್ಯ ಪದ್ಧತಿಯಾಗಿ ಕೆಳದಿ ರಾಜ್ಯದಲ್ಲಿ ಚಾಲ್ತಿಯಲ್ಲಿತ್ತು. ಆದರೆ ವೀರಬದ್ರನಾಯಕನು ಬಹುಶಃ ಪಾಶ್ಚಾತ್ಯ ಚಿಕಿತ್ಸಾ ಪದ್ಧತಿಯಲ್ಲಿ ಪರಿಣತನಾಗಿದ್ದ ಭಾರತೀಯ ಕ್ರೈಸ್ತ ವೈದ್ಯನೊಬ್ಬನನ್ನು ಕಳುಹಿಸಿಕೊಡಲು ಕೇಳಿದುದು ಸ್ವಾರಸ್ಯವಾದ ವಿಚಾರ. ಇದೂ ಜನರ ಜೀವನ ಮತ್ತು ಸಂಸ್ಕೃತಿಗೆ ಕ್ರೈಸ್ತರು ನೀಡಿದ ಕೊಡುಗೆ ಎಂದು ಭಾವಿಸಬಹುದು.

ಒಪ್ಪಂದದಲ್ಲಿ ರುಚಿಯಾದ ಖಾದ್ಯವಸ್ತುಗಳನ್ನು ತಯಾರಿಸಬಲ್ಲ ಉತ್ತಮವಾದ ಅಡುಗೆಯವನೊಬ್ಬನನ್ನು ಕಳುಹಿಸಿಕೊಡಬೇಕೆಂದು ವೀರಭದ್ರನಾಯಕನು ಕೋರಿದ್ದಾನೆ. ಇಂಥದೊಂದು ಕೋರಿಕೆಯನ್ನು ಅವನು ಮುಂದಿಟ್ಟನು ಎಂಬುದು ಪೂರ್ತಿಯಾಗಿ ಅರ್ಥವಾಗುವುದಿಲ್ಲ. ಪೋರ್ಚುಗೀಸ್ ಕ್ರೈಸ್ತ ಖಾದ್ಯ ವಸ್ತುಗಳು ಕೆಳದಿ ರಾಜ್ಯದಲ್ಲಿ ಅರಸರ ಮನೆಯವರೆಗೂ ತಲುಪಿರಬಹುದು. ಇನ್ನೊಂದು ಸಂಭವನೀಯ ಕಾರಣ, ರಾಜಧಾನಿಯಲ್ಲಿದ್ದ ಪೋರ್ಚುಗೀಸ್ ಕ್ರೈಸ್ತ ಗಣ್ಯರನ್ನು ಸತ್ಕರಿಸಲು ಅವರಿಗೆ ಇಷ್ಟವಾಗುವ ಖಾದ್ಯ ಪದಾರ್ಥಗಳನ್ನು ತಯಾರಿಸುವುದಕ್ಕಾಗಿ ಒಳ್ಳೆಯ ಅಡಿಗೆಯವನನ್ನು ಕರೆಸಿಕೊಳ್ಳಲು ಬಯಸಿರಬಹುದು. ಇದು ಪೀಯೆಟ್ರೋಡೆಲ್ಲಾವಲ್ಲೆಯ ಪ್ರವಾಸಿ ವಿವರಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಹಾಗಲ್ಲದೆ ವೀರಭದ್ರನಾಯಕನು ಪೋರ್ಚುಗೀಸರ ಕಡೆಯಿಂದ ಅಡುಗೆಯವನನ್ನು ಕರೆಸಿಕೊಳ್ಳಲು ಬೇರೆ ಕಾರಣ ಯಾವುದು ತಿಳಿಯುವುದಿಲ್ಲ. ಇದನ್ನೂ ಕೆಳದಿ ರಾಜ್ಯಕ್ಕೆ ಕ್ರೈಸ್ತರು ನೀಡಿದ ಕೊಡುಗೆಗಳಲ್ಲಿ ಒಂದು ಎಂದು ಪರಿಗಣಿಸಬಹುದು.

ಅವರು ರೋಮನ್ ಕ್ಯಾಥೊಲಿಕ್ ಪಂಥದ ಸುಧಾರಿ ರೂಪವನ್ನು ಭಾರತದಲ್ಲಿ ಹರಡಿದರು. ಜೊತೆಗೆ ಯುರೋಪಿಯನ್ ಧಾರ್ಮಿಕ ಮತ್ತು ಲೌಕಿಕ ವಾಸ್ತುಶಿಲ್ಪವನ್ನು ಪರಿಚಯಿಸಿದರು. ಪಾಶ್ಚಾತ್ಯ ವೇಷ ಭೂಷಣ, ನಡವಳಿಕೆ, ಆಚಾರ, ಭಾಷೆ ಮತ್ತು ಇತರ ಅನೇಕ ಅಂಶಗಳನ್ನು ಅವರು ರೂಢಿಗೆ ತಂದರು. ಸಂಕ್ಷೇಪವಾಗಿ

ಹೇಳಬೇಕೆಂದರೆ, ಪೋರ್ಚುಗೀಸರು ವಿಜಯನಗರದಿಂದ ಪ್ರಯೋಜನ ಪಡೆದಿರುವ ಹಾಗೆಯೇ ಪೋರ್ಚುಗೀಸ್ ಸಂಪರ್ಕದಿಂದ ವಿಜಯನಗರವು ಅಧಿಕ ಪ್ರಯೋಜನವನ್ನು ಪಡೆದುಕೊಂಡಿತು. ವಿಜಯನಗರದ ಅನಂತರ ಕಾಲದಲ್ಲಿ ಅವರು ಕರಾವಳಿ ಕರ್ನಾಟಕದ ವ್ಯಾಪಾರದ ಸ್ವಾಮ್ಯವನ್ನು ಸಾಧಿಸಿದರು.

ಅವರು ಕೆಳದಿಯಿಂದ ಮೆಣಸನ್ನೂ, ಅಕ್ಕಿಯನ್ನೂ ಕೊಂಡು, ಕುದುರೆಗಳನ್ನು ಮಾರಿದರು. ವಾಸ್ತವವಾಗಿ ಕೆಳದಿ ರಾಜ್ಯದ ಐಶ್ವರ್ಯಕ್ಕೆ ಪೋರ್ಚುಗೀಸರು ಇಲ್ಲಿಯ ಉತ್ಪನ್ನಗಳನ್ನು ಕೊಳ್ಳುತ್ತಿದ್ದುದೂ ಕಾರಣ. ಹೀಗೆ ರಾಜ್ಯದ ಸಂಪದಭಿವೃದ್ಧಿಗೆ ಪೋರ್ಚುಗೀಸ್ ಕ್ರೈಸ್ತರು ತಮ್ಮ ಕೊಡುಗೆಯನ್ನು ನೀಡಿದರು. ಬೇರೆ ಬೇರೆ ಸ್ಥಳಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿ ಕೆಳದಿಯ ವರ್ತಕರಿಗೆ ತಮ್ಮ ಸರಕುಗಳನ್ನು ಪೂರೈಸುವ ಸ್ಥಳಗಳನ್ನು ರೂಪಿಸಿದರು. ಹಾಗೆಯೇ ಕೆಳದಿ ರಾಜ್ಯಕ್ಕೆ ಚಿನ್ನ ಬೆಳ್ಳಿಯನ್ನು ಪೂರೈಸಿದರು.

ನಮ್ಮ ಅಧ್ಯಯನಾವಧಿಯಲ್ಲಿ ಪೋರ್ಚುಗೀಸ್ ಕ್ರೈಸ್ತರು ವಿದೇಶಗಳಿಂದ ಅನೇಕ ವಾಣಿಜ್ಯ ಬೆಳೆಗಳನ್ನೂ ಆಹಾರ ಸಸ್ಯಗಳನ್ನೂ ತರಿಸಿ ಇಲ್ಲಿ ಬೆಳೆಸಿ ಕೃಷಿ ಅರ್ಥವ್ಯವಸ್ಥೆಗೆ ವಿಶೇಷವಾದ ಕೊಡುಗೆಯನ್ನು ಸಲ್ಲಿಸಿದರು. ಇವುಗಳಲ್ಲಿ ಆಲೂಗೆಡ್ಡೆ, ಹೊಗೆಸೊಪ್ಪು (ತಂಬಾಕು), ಪಪಾಯ, ಮೆಣಸಿನಕಾಯಿ, ಗೋಡಂಬಿ ಮೊದಲಾದವನ್ನು ಉಲ್ಲೇಖಿಸಬಹುದು. ಹಾಗೆಯೇ ಅವರು ವಿದೇಶೀಯ ಮದ್ಯವನ್ನೂ ಇಲ್ಲಿ ಬಳಕೆಗೆ ತಂದರು. ಹೀಗೆ ಈ ಪ್ರದೇಶದ ಆಹಾರ ಪಾನೀಯಗಳಲ್ಲಿ ಅವರು ವೈವಿಧ್ಯವನ್ನು ಒದಗಿಸಿದರು.[86]

ಪೋರ್ಚುಗೀಸ್ ಕ್ರೈಸ್ತರು, ವಿಶೇಷವಾಗಿ ಪಾದ್ರಿಗಳು ವಿಜಯನಗರ ಚಕ್ರವರ್ತಿಯ ಹಾಗೂ ಕೆಳದಿ ನಾಯಕರ ಆಸ್ಥಾನಗಳಲ್ಲಿ ರಾಯಭಾರಿಗಳಾಗಿ ಸೇವೆ ಸಲ್ಲಿಸಿದರು. ಅವರು ವಿದ್ವಾಂಸರಾಗಿದ್ದು, ಒಬ್ಬ ರಾಯಭಾರಿಗೆ ಅಗತ್ಯವಾದ ಎಲ್ಲಾ ಅರ್ಹತೆಗಳನ್ನೂ ಪಡೆದಿದ್ದುದರಿಂದ ಸಮಕಾಲೀನ ರಾಜರೊಂದಿಗೆ ವಾಣಿಜ್ಯ ಮತ್ತು ಧಾರ್ಮಿಕ ಒಪ್ಪಂದಗಳನ್ನು ಕಾರ್ಯಗತಗೊಳಿಸಲು ಅವರ ಸೇವೆಯನ್ನು ಬಳಸಿಕೊಳ್ಳಲಾಯಿತು. ಉದಾಹರಣೆಗೆ ಜೆಸ್ಯೂಟ್ ಪಾದ್ರಿಯಾದ ಫಾ. ಗೊನ್ಸಾಲ್ವೋ ಮಾರ್ಟಿನ್ಸ್, ಶಿವಪ್ಪ ನಾಯಕನ ಆಸ್ಥಾನದಲ್ಲಿ ರಾಯಭಾರಿಯಾಗಿದ್ದನು.[87] ಫಾ. ಅಂಟೋನಿಯೋ ಕೊರಿಯಾ,[88] ಫಾ. ಇಗ್ನಾಶಿಯೊ ಡಿ ಅರ್ಕಾಮೋನ್ ಇವರು 1652ರಲ್ಲಿಯೂ,[89] ಫಾ. ಮಿಗೆಲ್ ಡಿ ಅಲ್ಮೀಡಿಯ 1652ರಲ್ಲಿಯೂ,[90] ಫಾ. ಆಂಟೋನಿಯೋ ನ್ಯೂನಿಸ್ 1654ರಲ್ಲಿಯೂ[91] ಶಿವಪ್ಪನಾಯಕನ ಆಸ್ಥಾನದಲ್ಲಿ ಬೇರೆ ಬೇರೆ ಕಷ್ಟಕರವಾದ ನಿಯೋಗಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು. ಹಾಗೆಯೇ ಫ್ರಾನ್ಸಿಸ್ಕನರ ಫ್ರೈಯರ್ ಲೂಯಿಜ್, ಕೃಷ್ಣದೇವರಾಯನ ಆಸ್ಥಾನದಲ್ಲಿದ್ದನು.[92]

ಕರ್ನಾಟಕದ ಸಂಪದ್ಭರಿತ ಕರಾವಳಿ ವ್ಯಾಪಾರ ವಹಿವಾಟಿನಲ್ಲಿ ಡಚ್, ಇಂಗ್ಲಿಷ್ ಮತ್ತು ಫ್ರೆಂಚ್ ಕ್ರೈಸ್ತರು ಸ್ಪರ್ಧೆಯ ಅಂಶವನ್ನು ಮೂಡಿಸಿದರು. ಪೋರ್ಚುಗೀಸರ ಸ್ವಾಮ್ಯವನ್ನು ಮುರಿದರು. ಅದರ ಫಲವಾಗಿ ಕೆಳದಿಯ ವರ್ತಕರಿಗೂ ನಾಯಕರಿಗೂ ಅವರ ಉತ್ಪನ್ನಗಳಿಗೆ ಅಪಾರವಾದ ಸ್ಪರ್ಧಾತ್ಮಕ ಬೆಲೆ ದೊರಕಿತು. ಈ ಮೂಲಕವಾಗಿ ಈ ಕ್ರೈಸ್ತ ಶಕ್ತಿಗಳು ಕೆಳದಿ ರಾಜ್ಯದ ಅರ್ಥ ವ್ಯವಸ್ಥೆಗೆ ಅಮೂಲ್ಯವಾದ ಸೇವೆ ಸಲ್ಲಿಸಿದರು.

ಇಂಗ್ಲಿಷರು ಕಾರವಾರದ ಸ್ಥಳೀಯ ನೇಕಾರರನ್ನು ಪ್ರೋತ್ಸಾಹಿಸಿ ತಮ್ಮ ಕಾರ್ಖಾನೆಗಳಲ್ಲಿ ಬಹುಸಂಖ್ಯೆಯಲ್ಲಿ ಜನರನ್ನು ನೇಮಕ ಮಾಡಿಕೊಂಡಿದ್ದರು.[93]

ಮಧ್ಯಯುಗೀನ ಕರ್ನಾಟಕ ಇತಿಹಾಸದ ರಚನೆಯಲ್ಲಿ ಕ್ರೈಸ್ತ ಪ್ರವಾಸಿಗಳು ತಮ್ಮ ಬರೆವಣಿಗೆಗಳ ಮೂಲಕ ನೀಡಿರುವ ಕೊಡುಗೆ ತುಂಬಾ ಮುಖ್ಯವಾದುದು. ಅವರು ಕೊಟ್ಟಿರುವ ಕೆಲವು ಮಾಹಿತಿಗಳು ಇಂತಹ ಕ್ರೈಸ್ತೇತರ ಮೂಲಗಳಲ್ಲಿ ಸುಲಭವಾಗಿ ಕಾಣಲಾರೆವು. ಇತಿಹಾಸದ ಮೂಲವಾಗಿ ಈ ಬರವಣಿಗೆಗಳ ಕೆಲವು ಲಕ್ಷಣಗಳು ಇವು: (ಅ) ಅವು ಬಹುಮಟ್ಟಿಗೆ ವಸ್ತುನಿಷ್ಠವಾಗಿವೆ. (ಆ) ಅವು ಆಸ್ಥಾನ ರಚನೆಯಲ್ಲಿನ ಸಹಜವಾದ ದೋಷದಿಂದ ಮುಕ್ತವಾಗಿವೆ. (ಇ) ಅವು ನಿಜವಾದ ಬದುಕಿನ ಚಿತ್ರಗಳನ್ನು ಕೊಡುತ್ತವೆ. (ಈ) ಅವು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಗತಿಗಳನ್ನು ದಾಖಲಿಸುತ್ತವೆ.

ವಿಜಯನಗರ ಇತಿಹಾಸದ ತಿಳಿವಿಗೆ ಡೊಮಿಂಗೋ ಪೇಸ್ ಮತ್ತು ಫರ್ನಾವೋ ನ್ಯೂನಿಜ್ ಇವರ ಕೊಡುಗೆಯನ್ನು ಕುರಿತು "ಫರ್‌ಗಾಟನ್ ಎಂಪೈರ್" ಕೃತಿಯ ಲೇಖಕರಾದ ರಾಬರ್ಟ್ ಸೆವೆಲ್ ಹೀಗೆ ಬರೆಯುತ್ತಾನೆ. "ಈ ದಾಖಲೆಗಳಿಗೆ ವಿಶಿಷ್ಟವೂ, ಅನನ್ಯವೂ ಆದ ಮೌಲ್ಯವಿದೆ; ಅತ್ಯಂತ ಶ್ರೇಷ್ಠ ಹಿಂದೂ ರಾಜಧಾನಿಯಲ್ಲಿ ಅದರ ಅತ್ಯಂತ ವೈಭವದ ಮತ್ತು ಭವ್ಯತೆಯ ಕಾಲದಲ್ಲಿ ತಾನು ಪಡೆದ ಸ್ವಂತ ಅನುಭವಗಳ ಸ್ಪಷ್ಟವೂ, ಸತ್ಯವೂ ಆದ ಚಿತ್ರಗಳನ್ನು ಹೊಂದಿದೆ. 'ನಾನು ನೋಡಿದ ಮತ್ತು ತಿಳಿದುಕೊಂಡ ವಿಚಾರಗಳು' ಇವು ಎಂದು ಅವನು ಹೇಳುತ್ತಾನೆ. ನ್ಯೂನಿಜ್ ಬರವಣಿಗೆಯೂ ಸ್ಥಳದಲ್ಲಿ ತಾನೇ ಖುದ್ದಾಗಿ ಸಂಗ್ರಹಿಸಿದ ಈ ದೇಶದ ಪರಂಪರಾಗತ ಇತಿಹಾಸವನ್ನೂ, ಅತ್ಯಂತ ಮುಖ್ಯವಾದ ಸ್ಥಳೀಯ ಹಾಗೂ ಪ್ರಚಲಿತ ಘಟನೆಗಳ ನಿರೂಪಣೆಯನ್ನೂ ಒಳಗೊಂಡಿದೆ. ಅವು ತಾನೇ ಖುದ್ದಾಗಿ ಹಾಜರಿದ್ದುದರಿಂದ ತಿಳಿದುದು ಅಥವಾ ಹಾಗೆ ಹಾಜರಿದ್ದವರಿಂದ ತಾನೇ ಕೇಳಿ ತಿಳಿದುಕೊಂಡುದು ಇರಬಹುದು.[94]

ಈ ದಾಖಲೆಗಳನ್ನು ಮೂಲ ಪೋರ್ಚುಗೀಸಿನಲ್ಲಿ ಪ್ರಕಟಿಸಿರುವ ಸೆನ್ಹಾರ್ ಲೋಪೆಸ್, ತನ್ನ ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾನೆ. "ಯಾವುದೇ ಭಾಷೆಯಲ್ಲಿ ನಾವು ತಿಳಿದಿರುವ ಬೇರೆ ಯಾವುದೂ ಇದಕ್ಕೆ ಸರಿದೊರೆಯಾಗಲಾರದು. ಐತಿಹಾಸಿಕ ಪ್ರಾಮುಖ್ಯವಾಗಲಿ, ದೇಶದ, ರಾಜಧಾನಿಯ, ಅಲ್ಲಿಯ ಉತ್ಪನ್ನಗಳ, ರೂಢಿ-ಸಂಪ್ರದಾಯಗಳ ವಿವರಣೆಯಾಗಲಿ ಅನನ್ಯವಾಗಿವೆ." ನಿಕೊಲೋ ಡಿ ಕಾಂಟಿ, ವರ್ತೆಮಾ, ಫೆಡರಿಚಿ ಮೊದಲಾಗಿ ಈ ದೇಶವನ್ನು ಕುರಿತು ಬರೆದ ಇಟಾಲಿಯನ್ ಪ್ರವಾಸಿಗರು, ದೇಶದ ಭೌಗೋಳಿಕವಾದ ಹಾಗೂ ರೂಢಿ ಸಂಬಂಧವಾದ ವಿವರಗಳನ್ನು ತುಂಬಾ ಸಂಕ್ಷೇಪವಾಗಿ ಕೊಡುತ್ತಾರೆ. ಅವರು ಯಾರೂ ಕಾಲಾನುಕ್ರಮಣಿಯನ್ನು ಕೊಡುವುದಿಲ್ಲ.[95]

ವಿಜಯನಗರದ ಇತಿಹಾಸ ಲೇಖನಕ್ಕೆ ಸಂಬಂಧಿಸಿದಂತೆ ಪ್ರವಾಸಿಗರ ಕೊಡುಗೆಯನ್ನು ಪರಿಗಣಿಸುತ್ತಾ ರಾಬರ್ಟ್ ಸೆವೆಲ್ ಹೀಗೆ ಬರೆಯುತ್ತಾನೆ. ಅವು ನಿಜವಾಗಿ ಅಮೂಲ್ಯವಾಗಿವೆ. ವಿಜಯನಗರದ ಸ್ಥಿತಿಗತಿಯನ್ನು ಕುರಿತು ಹಾಗೂ ಚರಿತ್ರೆಯಲ್ಲಿ ಹಲವು ಸಂದೇಹಾಸ್ಪದ ಅಂಶಗಳನ್ನು ಕುರಿತು ಅಸಾಧಾರಣವಾದ ಬೆಳಕು

ಚೆಲ್ಲುತ್ತವೆ. ಹಾಗಾಗಿ, ನ್ಯೂನಿಜ್‌ನಲ್ಲಿ ಮೊದಲ ಬಾರಿಗೆ ಮೊದಲನೆಯ ರಾಜವಂಶದ ಪತನಕ್ಕೆ ಹಾಗೂ ನರಸಿಂಹನು ಸಿಂಹಾಸನವನ್ನು ಆಕ್ರಮಿಸಿ ಎರಡನೆಯ ವಂಶವನ್ನು ಸ್ಥಾಪಿಸಿದುದಕ್ಕೆ ಎಡೆಗೊಟ್ಟ ಘಟನೆಯ ಖಚಿತವಾದ ವರದಿ ದೊರಕುತ್ತದೆ. ನ್ಯೂನಿಜನಂತೆಯೇ ಕೃಷ್ಣದೇವರಾಯನು ವಿಜಯನಗರದ ರಾಜರಲ್ಲೆಲ್ಲ ಅತ್ಯಂತ ಶ್ರೇಷ್ಠನಾದವನು, ಫಿರಿಷ್ಟಾ ಪರಿಗಣಿಸುವಂತೆ ಕೇವಲ ಬೊಂಬೆಯಾಗಿರಲಿಲ್ಲ ಎಂಬುದನ್ನು ನಿರ್ಣಾಯಕವಾಗಿ ಸಮರ್ಥಿಸಿದ್ದಾನೆ. ಏಕೆಂದರೆ ಪೇಸ್ ಕೃಷ್ಣದೇವರಾಯನನ್ನು ಹಲವು ಸಂದರ್ಭಗಳಲ್ಲಿ ನೋಡಿದನು. ಅವನನ್ನು ಕುರಿತು ಆತ್ಮೀಯವಾದ ಉಜ್ವಲವಾದ ಮಾತುಗಳಲ್ಲಿ ಪ್ರಶಂಸಿಸಿದ್ದಾನೆ. ನ್ಯೂನಿಜನದು ಪ್ರತ್ಯಕ್ಷದರ್ಶಿ ನಿರೂಪಣೆ. ಕೃಷ್ಣದೇವರಾಯನ ಉತ್ತರಾಧಿಕಾರಿ ಅಚ್ಯುತನು ದುರ್ಬಲ, ಅವನ ಸ್ವಾರ್ಥ, ಹೇಡಿತನ ಮತ್ತು ಕ್ರೌರ್ಯಗಳಿಂದ ಬೃಹತ್ ಸಾಮ್ರಾಜ್ಯದ ಅಂತಿಮ ವಿನಾಶಕ್ಕೆ ದಾರಿಯಾಯಿತು. ಈ ಇಬ್ಬರು ಪ್ರವಾಸಿಗರ ವರದಿಗಳ ಎದುರಿಗೆ ದೊಡ್ಡ ದೊಡ್ಡ ಯುರೋಪಿಯನ್ ಇತಿಹಾಸಕಾರರ ಬರವಣಿಗೆಗಳು ನಿರ್ಜೀವವಾಗಿ ಕಾಣಿಸುತ್ತವೆ.[96]

**ವಿಜಯನಗರದ ಕೃಷಿ ಮತ್ತು ಅರ್ಥ ವ್ಯವಸ್ಥೆಗೆ ಕ್ರೈಸ್ತರ ಕೊಡುಗೆ :** ಕೆಳದಿಯ ಅರ್ಥ ವ್ಯವಸ್ಥೆಯಲ್ಲಿ ವಲಸೆ ಬಂದ ಕ್ರೈಸ್ತರು ಕೃಷಿಕರಾಗಿ ಮಹತ್ವದ ಪಾತ್ರವನ್ನು ನಿರ್ವಹಿಸಿದರು.

ಈ ಸಂದರ್ಭದಲ್ಲಿ ವಲಸೆ ಬಂದ ಕೊಂಕಣಿ ಕ್ರೈಸ್ತರ ಪೈಕಿ ಕೃಷಿಯನ್ನು ಜೀವನೋಪಾಯವಾಗಿ ಹಿಡಿದವರನ್ನು ಗುರುತಿಸುವುದು ಅಗತ್ಯ. ವಲಸಿಗ ಕ್ರೈಸ್ತರಲ್ಲಿ ಗೌಡಿಗಳೆಂಬ ಹೆಸರಿನ ಜಾತಿಯಿದ್ದಿತು. ಅವರು ಸಮಾಜದಲ್ಲಿ ಬಹು ಸಹಿಷ್ಣುಗಳಾದ ಕೃಷಿಕರು. ಇದರಿಂದ ಕೆಳದಿ ರಾಜ್ಯದಲ್ಲಿ ಬಹುಶಃ ಗೌಡಿ ಕ್ರೈಸ್ತರು ಬೇಸಾಯದಲ್ಲಿ ನಿರತರಾಗಿದ್ದರು ಎಂದು ನಿರ್ಣಯಿಸಬಹುದು. ಆದರೂ ಬ್ರಾಹ್ಮಣ ಉಪನಾಮಗಳಾದ ಕಾಮತ್, ಪೈ. ಪ್ರಭು ಹಾಗೂ ಪೋರ್ಚುಗೀಸ್ ಉಪನಾಮಗಳಾದ ಸಲ್ದಾನ್ಹಾ, ಫೆರ್ನಾಂಡಿಸ್, ಪಿಂಟೋ ಮೊದಲಾದವರು ಕೆಳದಿಯಲ್ಲಿ ಜಮೀನುದಾರರಾಗಿದ್ದಂತೆ ತೋರುತ್ತದೆ. ಏಕೆಂದರೆ ಹಿಂದೂ ಸಾಂಪ್ರದಾಯಿಕ ನಿಯಮದಂತೆ ಬ್ರಾಹ್ಮಣರು ಸಂಕಟದ ಸಮಯದಲ್ಲಿ ಕೃಷಿಯ ಹೊರತು ಬೇರೆ ಯಾವ ವೃತ್ತಿಯನ್ನು ಬೇಕಾದರೂ ಅನುಸರಿಸಬಹುದಾಗಿತ್ತು. ಆದರೆ ಅವನು ಭೂಮಾಲೀಕನಾಗಿ ಭೂಮಿಯನ್ನು ಗೇಣಿಗೆ ಕೊಡಲು ಅವಕಾಶವಿತ್ತು.

ಇಂಗ್ಲಿಷ್ ದಾಖಲೆಗಳು ದಕ್ಷಿಣ ಕನ್ನಡದ ಕ್ರೈಸ್ತರನ್ನು 'ಅತ್ಯುತ್ತಮ ಬೇಸಾಯಗಾರ'ರೆಂದು ವರ್ಣಿಸುತ್ತವೆ. ಈ ಪ್ರದೇಶದ ಕೆಲವು ಕ್ರೈಸ್ತರು ನೆಲವನ್ನು ಮೂಲಗೇಣಿಗೆ ಹಿಡಿದಿದ್ದರೆಂದು ದಾಖಲೆ ಸೂಚಿಸುತ್ತದೆ. ಅವರನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸುವುದಕ್ಕೆ ಮೊದಲು ಅವರು ತಮ್ಮ ಮೂಲಗೇಣಿ ಭೂಮಿಯನ್ನು ಮಾರಿದರು. ಇನ್ನು ಕೆಲವರು ತಮ್ಮ ಜಮೀನುಗಳನ್ನು ಸ್ವಲ್ಪ ಕಾಲದವರೆಗೆ ಸುರಕ್ಷಿತವಾಗಿ ಇಟ್ಟುಕೊಂಡಿರುವರಂತೆ ಇತರರ ಕೈಗೊಪ್ಪಿಸಿದರು. ಮೂಲಗೇಣಿಯ ಮೇಲೆ ಬೇಸಾಯ ಮಾಡುತ್ತಿದ್ದ ಕ್ರೈಸ್ತ ಗೇಣಿದಾರರಿದ್ದರು. ಮೂಲಗೇಣಿ ಎನ್ನುವುದು ಭೂ ಹಿಡುವಳಿಯ ಒಂದು ಸಾಮಾನ್ಯ ರೂಪ. ಕೆಳದಿ ಕಾಲದಲ್ಲಿ ಅದು ಕರಾವಳಿ ಪ್ರದೇಶದಲ್ಲಿ ಚಾಲ್ತಿಯಲ್ಲಿತ್ತು. ಅದರ ಪ್ರಕಾರ ಕ್ರೈಸ್ತ ಗೇಣಿದಾರನು ಭೂ ಮಾಲೀಕನಿಂದ ಖಾಯಂ ಆಗಿ ಭೂಮಿಯನ್ನು

ಪಡೆದು ಕೃಷಿ ಮಾಡುತ್ತಿದ್ದನು. ಅವನಿಗೆ ನಿರ್ದಿಷ್ಟ ಪ್ರಮಾಣದ 'ಗೇಣಿ' ಅಥವಾ ಉತ್ಪನ್ನದ ಪಾಲನ್ನು ಸಲ್ಲಿಸುತ್ತಿರುವವರೆಗೆ ಅವನಿಂದ ಭೂಮಿಯನ್ನು ತೆರವುಪಡಿಸಿ ಕಿತ್ತುಕೊಳ್ಳುವಂತಿರಲಿಲ್ಲ. ಇದರಿಂದ ಎಲ್ಲಾ ಕ್ರೈಸ್ತರೂ ಭೂ ಮಾಲೀಕರಾಗಿರಲಿಲ್ಲ. ಕೆಲವರು ಜಮೀನಿನ ಮೂಲಗೇಣಿ ಹಕ್ಕನ್ನು ಪಡೆದ ಗೇಣಿದಾರರಾಗಿದ್ದರು ಎನ್ನುವುದು ತಿಳಿಯುತ್ತದೆ. ಹೀಗೆ ಕ್ರೈಸ್ತ ಗೇಣಿದಾರರು ಕ್ರೈಸ್ತ ಮತ್ತು ಹಿಂದೂ ಜಮೀನುದಾರರಂತೆಯೇ ಚರ್ಚಿಗೆ ಸೇರಿದ ನೆಲವನ್ನೂ ಮೂಲ ಗೇಣಿಯ ಮೇಲೆ ಪಡೆದಿದ್ದುದು ಸಂಭವ.

ಕೆಳದಿ ರಾಜ್ಯದ ಕರಾವಳಿ ಕರ್ನಾಟಕ ಪ್ರದೇಶದ ಕ್ರೈಸ್ತರು, ವಿಶೇಷವಾಗಿ ಬಾರಕೂರು, ಬ್ರಹ್ಮಾವರ, ಕುಂದಾಪುರ ಮತ್ತು ಕೋಟೇಶ್ವರಗಳಲ್ಲಿ ಎರಡು ಗುಂಪಿನವರಾಗಿದ್ದರು. ಕಾರ್ಮಿಕರು ಮತ್ತು ಕೃಷಿಕರು ಎಲ್ಲಾ ಕ್ರೈಸ್ತರೂ ನೆಲದೊಡೆಯರಾಗಿರಲಿಲ್ಲ. ಟೀಪು ಸುಲ್ತಾನನು ದಕ್ಷಿಣ ಕನ್ನಡದ ಎರಡು ತಾಲೂಕುಗಳಿಂದ ಸುಮಾರು 20,000 ಕ್ರೈಸ್ತರನ್ನು ಹಿಡಿದುಕೊಂಡು ಹೋದುದರಿಂದಲೇ ಇದು ವೇದ್ಯವಾಗುತ್ತದೆ. ಅವನ ಅಧಿಕಾರಿಗಳು ಕ್ರೈಸ್ತರನ್ನು ಈ ರೀತಿಯಾಗಿ ವರ್ಗೀಕರಿಸಿದರು. ಇದರಿಂದ ನಾವು ನಿರ್ಣಯಿಸಬಹುದಾದುದು - ಕ್ರೈಸ್ತರು ಕೆಳದಿಯ ಕೃಷಿ ಅರ್ಥವ್ಯವಸ್ಥೆಗೆ ಎರಡು ರೀತಿಗಳಲ್ಲಿ ಕೂಲಿಕಾರರಾಗಿ ಮತ್ತು ಕೃಷಿಕರಾಗಿ ಕೊಡುಗೆ ನೀಡಿದರು ಎಂಬುದಾಗಿ, ಹದಿನೆಂಟು ಶತಮಾನದಲ್ಲಿ ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ನಿಜವಾಗಿಯೂ ಕೂಲಿಗಾರರ ಅಭಾವವಿದ್ದಿತು. ಕೆಳದಿ ರಾಜ್ಯಕ್ಕೆ ಗೋವೆಯಿಂದ ಕ್ರೈಸ್ತರು ವಲಸೆ ಬರಲಾಗಿ ಈ ಸಮಸ್ಯೆ ಪರಿಹಾರವಾಯಿತು. ಸ್ವಲ್ಪ ಮಟ್ಟಿಗೆ ಬಂಡವಾಳ ಮತ್ತು ಸಾಮಾಜಿಕ ಸ್ಥಾನಮಾನ ಯಾರಿಗಿತ್ತೋ ಅವರು ತಾವೇ ಭೂಮಿಯನ್ನು ಪಡೆದುಕೊಂಡು ಕೃಷಿಕರಾದರು. ಈ ವರ್ಗದಲ್ಲಿ ಮೂಲತಃ ಗೋವೆಯ ಬ್ರಾಹ್ಮಣ ಕುಟುಂಬಗಳಿಂದ ಬಂದ ಪ್ರಭು, ಶೆಣೈ, ಕಾಮತ್, ಪೈ ಮೊದಲಾದ ಕ್ರೈಸ್ತರನ್ನು ಸೇರಿಸಬಹುದು.

ಗೋವೆಯಿಂದ ವಲಸೆ ಬಂದ ಕ್ರೈಸ್ತರನ್ನು ಅರಸರು ಆಹ್ವಾನಿಸಿದುದಕ್ಕೆ ಒಂದು ಮುಖ್ಯ ಕಾರಣ ಅವರಿಗೆ ತೆಂಗಿನ ಬೇಸಾಯದಲ್ಲಿ ಇದ್ದ ಪರಿಣತಿ.[97] ಅರ್ಥ ವ್ಯವಸ್ಥೆಯಲ್ಲಿ ಅಕ್ಕಿ, ಮೆಣಸು ಮತ್ತು ಅಡಕೆಯ ನಂತರದ ಮುಖ್ಯವಾದ ಸ್ಥಾನ ತೆಂಗಿನಕಾಯಿಗೆ. ಸಹಜವಾಗಿಯೇ ಈ ಪ್ರದೇಶಕ್ಕೆ ಕ್ರೈಸ್ತರು ಆಗಮಿಸಿದ್ದು ತೋಟದ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ನೆರವಾಯಿತು. ಚರ್ಚು ಮತ್ತು ಕ್ರೈಸ್ತ ಜಮೀನುದಾರರು ಕೃಷಿ ಉತ್ಪಾದನೆಯ ಈ ಕ್ಷೇತ್ರದಳಲ್ಲಿ ಶಕ್ತಿಮೀರಿ ಶ್ರಮಿಸಿದರು.[98]

**ಅ. ವರ್ತಕರಾಗಿ ಕ್ರೈಸ್ತರು :** ವಲಸಿಗ ಕ್ರೈಸ್ತರು ಇನ್ನೊಂದು ಕ್ಷೇತ್ರದಲ್ಲಿಯೂ ಆರ್ಥಿಕಾಭಿವೃದ್ಧಿಗೆ ಕೊಡುಗೆ ನೀಡಿದರು. ಅದು ವ್ಯಾಪಾರ ವಹಿವಾಟು. ಅವರಲ್ಲಿ, ವಿಶೇಷವಾಗಿ ಮೇಲುಜಾತಿಯ ಕಾಮತ್, ಪೈ ಮೊದಲಾದವರು ವರ್ತಕರಾಗಿದ್ದರು. ಪೋರ್ಚುಗೀಸರು ರಾಜ್ಯಾಡಳಿತ, ಸೈನ್ಯ ಹಾಗೂ ಧರ್ಮಗಳ ವ್ಯವಸ್ಥೆಯಲ್ಲಿ ಮಗ್ನರಾಗಿದ್ದುದರಿಂದ, ಅನೇಕ ದೇಶೀಯ ಕ್ರೈಸ್ತರನ್ನು ಒಳಗೊಳ್ಳುವ ವ್ಯಾಪಾರ ವಹಿವಾಟಿನಲ್ಲಿ ತೊಡಗಲು ಅಗತ್ಯವಾದ ಸಮಯವಾಗಲಿ ಸಂಪನ್ಮೂಲವಾಗಲಿ ಜನಬಲವಾಗಲಿ ಅವರಲ್ಲಿರಲಿಲ್ಲ. ಹಾಗೆ ಸಂಪನ್ಮೂಲವನ್ನು ಕ್ರೋಡೀಕರಿಸಲು ಪೋರ್ಚುಗೀಸರು ದೇಶೀಯ ಕ್ರೈಸ್ತರನ್ನೇ ಅವಲಂಬಿಸಿದ್ದರು. ವಲಸೆ ಬಂದುದರ ಫಲವಾಗಿ

ಕೆಲವು ಕ್ರೈಸ್ತರು ವ್ಯಾಪಾರವನ್ನು ವೃತ್ತಿಯಾಗಿ ಹಿಡಿದರು, ವಿಶೇಷವಾಗಿ ಗೋವೆಗೆ ಅಕ್ಕಿಯನ್ನೂ, ಮೆಣಸನ್ನೂ ರಫ್ತು ಮಾಡತೊಡಗಿದರು. ಆ ಮೂಲಕ ಕ್ರೈಸ್ತರು ವಲಸೆ ಬಂದುದು ನಾಯಕರಿಗೆ ಹೆಚ್ಚಿನ ಪ್ರಯೋಜನವಾಯಿತು. ಅದೇ ಸಮಯಕ್ಕೆ ಗೋವೆಯ ಪೋರ್ಚುಗೀಸ್ ಕ್ರೈಸ್ತರ ಹಿತರಕ್ಷಣೆಯೂ ಆಯಿತು. ಆ ಕಾಲದ ಆರ್ಥಿಕ ಸಂಪರ್ಕ ಜಾಲದಲ್ಲಿ ಕರ್ನಾಟಕ ಮತ್ತು ಗೋವಾಗಳ ನಡುವೆ ಕ್ರೈಸ್ತರು ಸಂಪರ್ಕ ಕಲ್ಪಿಸಿದ ಕೊಂಡಿಯಾದರು. ಹೊನ್ನಾವರ ಮತ್ತು ಕಾರವಾರಗಳಲ್ಲಿ ಅನೇಕ ಮಂಗಳೂರಿಗರು ಕೆಲಸ ಮಾಡುತ್ತಿದ್ದರು. ಈ ಜನರು ಬಹಳ ಮೊದಲೇ ಅಲ್ಲಿ ಮರದ ವ್ಯಾಪಾರಕ್ಕಾಗಿ ನೆಲೆಸಿದ್ದರು.[99]

**ಆ. ಸೈನ್ಯದಲ್ಲಿ ಕ್ರೈಸ್ತರು :** ಕ್ರೈಸ್ತರು ಸಶಸ್ತ್ರ ಪಡೆಗಳ ಬಲವರ್ಧನೆಯಲ್ಲಿ ಮಹತ್ವದ ಕೊಡುಗೆ ನೀಡಿದರು. ಮೊದಲೇ ಸೂಚಿಸಿರುವಂತೆ ಪೋರ್ಚುಗೀಸ್ ಗೋವೆಯಿಂದ ವಲಸೆ ಬಂದ ಕ್ರೈಸ್ತರ ಪೈಕಿ ಹಿಂದೂ ಜಾತಿಪದ್ಧತಿ ವ್ಯಾಪಕವಾಗಿ ಪ್ರಚಲಿತವಾಗಿತ್ತು. ವಸ್ತುತಃ ವಲಸೆ ಬಂದ ಎಲ್ಲಾ ಕ್ರೈಸ್ತರನ್ನೂ ಕೊಂಕಣಿ ಕ್ರೈಸ್ತರೆಂದು ಕರೆಯಲಾಗುತ್ತಿತ್ತು. ಅವರಲ್ಲಿ ಒಂದು ಜಾತಿ ಚಾರ್ದೋಗಳು. ಇವರು ವರ್ಣ ಅಥವಾ ಜಾತಿ ವ್ಯವಸ್ಥೆಯಲ್ಲಿ ಕ್ಷತ್ರಿಯರಿಗೆ ಸಮನಾದವರು. ಚಾರ್ದೋಗಳು ಗೋವೆಯ ಯೋಧ ಸಮುದಾಯಕ್ಕೆ ಸೇರಿದವರು. ಸಹಜವಾಗಿಯೇ ಅವರು ಕೆಳದಿಯಲ್ಲೂ ಅದೇ ವೃತ್ತಿಯನ್ನೇ ಇಷ್ಟಪಡುತ್ತಿದ್ದಿರಬಹುದು. ಆದ್ದರಿಂದ ಕೊಂಕಣಿ ಕ್ರೈಸ್ತರ ಪೈಕಿ ಇದ್ದ ಚಾರ್ದೋಗಳು ಕೆಳದಿ ಸೈನ್ಯಕ್ಕೆ ಮುಖ್ಯವಾದ ಭಾಗವಾದರು. ಉಡುಪಿಯ ಬಳಿಯ ಕಲ್ಯಾಣಪುರದ ಲೂಯಿಜ್ ಕುಟುಂಬಕ್ಕೆ ಸೇರಿದ ಅನೇಕ ಗಣ್ಯ ಸದಸ್ಯರು ಸೇನೆಯಲ್ಲಿದ್ದರು. ಅವರು ರಾಜ್ಯಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದರು. ಅವರ ಸೇವೆಯನ್ನು ಮೆಚ್ಚಿ ನಾಯಕರು ಅವರಿಗೆ ಬೇಕಾದಷ್ಟು ಭೂಮಿಯನ್ನು ಇನಾಂ ಆಗಿ ಕೊಟ್ಟರು.[100]

ಇಕ್ಕೇರಿ ರಾಜ್ಯದ ಸೈನ್ಯಕ್ಕೆ ಅನೇಕ ಕ್ರೈಸ್ತರು ಸೇರಿದರು. ಅವರು ಪಡೆಗಳ ನಾಯಕರಾಗಿಯೂ ಕೆಲಸ ಮಾಡಿರಬೇಕು. ಹಾಗಾಗಿ, ಜಿಲ್ಲೆಯ ಉತ್ತರ ಭಾಗದಲ್ಲಿ ಪ್ರತಿಯೊಬ್ಬ ಕ್ರೈಸ್ತರನ್ನೂ "ನಾಯ್ಕರು" ಎಂದು ಕನ್ನಡದಲ್ಲಿ ಕರೆದರೆ, ದಕ್ಷಿಣ ಭಾಗದಲ್ಲಿ ಕೆಳಜಾತಿಯ ಜನರು ಅವರನ್ನು "ನಾಗೆರ್" (ನಾಯಕ) ಎಂದು ತುಳುವಿನಲ್ಲಿ ಕರೆದರು.[101]

**ಇ. ವಿದ್ಯೆ ಮತ್ತು ಸಾಹಿತ್ಯಕ್ಕೆ ಕ್ರೈಸ್ತರ ಕೊಡುಗೆ :** ಕರಾವಳಿ ಕರ್ನಾಟಕಕ್ಕೆ ವಲಸೆ ಬಂದಾಗ ಗೋವೆಯ ಕ್ರೈಸ್ತರ ವಲಸಿಗರು ತಮ್ಮೊಂದಿಗೆ ಭಾಷೆ, ಜೀವನ ವಿಧಾನ ಮತ್ತು ವೃತ್ತಿ ಕೌಶಲಗಳನ್ನು ತಂದರು. ಹೊಸ ಸ್ಥಳದಲ್ಲಿ ತಮ್ಮ ಸಾಂಸ್ಕೃತಿಕ ಅಂಶಗಳನ್ನು ಪರಿಚಯಗೊಳಿಸಿದರು. ಇಂದು ಕೊಂಕಣಿಯ ಕರ್ನಾಟಕದ ಭಾಷೆಗಳಲ್ಲಿ ಒಂದಾಗಿದೆ. ಅದು ಅನೇಕ ಪದಗಳನ್ನು ಕನ್ನಡದಿಂದಲೂ ತುಳುವಿನಿಂದಲೂ ಪಡೆದುಕೊಂಡಿದೆ.[102]

ಸಾಹಿತ್ಯಕ್ಕೆ, ವಿಶೇಷವಾಗಿ ಕೊಂಕಣಿಗೆ, ಅವರು ನೀಡಿದ ಮಹತ್ವದ ಕೊಡುಗೆಯೆಂದರೆ ಫಾದರ್ ಥಾಮಸ್ ಸ್ಟೀವನ್ಸನು ಕ್ರಿಸ್ತ ಪುರಾಣವನ್ನು ರಚಿಸಿದ್ದು.[103] ಈ ಕೃತಿಯನ್ನು ಕೊಂಕಣಿ ಭಾಷೆಯ ಸಾಹಿತ್ಯದ ಮಹತ್ಕೃತಿ ಎಂದು ಪರಿಗಣಿಸಲಾಗಿದೆ. ಪುರಾಣವು ಹಿಂದೂಗಳಲ್ಲಿ ಧಾರ್ಮಿಕ ಸಿದ್ಧಾಂತಗಳ ಪ್ರವರ್ತನೆಗೆ ಬಹು ಜನಪ್ರಿಯ

ಮಾಧ್ಯಮವಾಗಿತ್ತು. ಯೇಸು ಕ್ರಿಸ್ತನ ಜೀವನ, ಸಂದೇಶ ಮತ್ತು ಬೋಧನೆಗಳನ್ನು ನಿರೂಪಿಸಲು ಅದನ್ನು ಉಪಯೋಗಿಸಿಕೊಳ್ಳಲಾಯಿತು. ಫಾ. ಥಾಮಸ್ ಸ್ಟೀವನ್ಸ್ ಕನ್ನಡವನ್ನೂ ಹಿಂದೂಸ್ಥಾನಿಯನ್ನೂ ಕಲಿತಿದ್ದನು. ಅವನು ಕೊಂಕಣಿ ವ್ಯಾಕರಣವೊಂದನ್ನು ರಚಿಸಿದನು. ಜೊತೆಗೆ ಕೊಂಕಣಿ, ತುಳು ಮತ್ತು ಕನ್ನಡ ಭಾಷೆಗಳಲ್ಲಿ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ ಜಾನಪದ ಗೀತೆಗಳನ್ನೂ ಇತರ ಸಾಹಿತ್ಯ ರೂಪಗಳನ್ನೂ ರಚಿಸಿದನು. ಥಾಮಸ್ ಸ್ಟೀವನ್ಸ್‌ನ ಕೃತಿಗಳು ವಲಸೆ ಬಂದ ಕೊಂಕಣಿ ಕ್ರೈಸ್ತರಲ್ಲಿ ತುಂಬಾ ಜನಪ್ರಿಯವಾಗಿದ್ದುವು. ಕ್ರಿಸ್ತ ಪುರಾಣವನ್ನು ಶ್ರದ್ಧಾ ಭಕ್ತಿಗಳಿಂದ ನಿರಂತರವಾಗಿ ಪಠಿಸುತ್ತಿದ್ದರು. ಓದಲು ಅಶಕ್ತರಾಗಿದ್ದವರು ಕಂಠಸ್ಥವಾಗಿ ಕಲಿತು ಹೇಳುತ್ತಿದ್ದರು. ಹಲವರು ಅದನ್ನು ಓದಲು ಕಲಿತರು.[104]

ಜನಪ್ರಿಯ ಧಾರ್ಮಿಕ ಕೃತಿಗಳನ್ನು ರಚಿಸಲು ಕೊಂಕಣಿಯ ಜೊತೆಗೆ ಕನ್ನಡವನ್ನು ಉಪಯೋಗಿಸಲಾಯಿತು. ತಮಿಳುನಾಡು ಸರಕಾರದ ಪ್ರಾಚ್ಯ ಹಸ್ತಪ್ರತಿ ಸಂಗ್ರಹಾಲಯದಲ್ಲಿ ಕ್ರೈಸ್ತ ಧರ್ಮವನ್ನು ಕುರಿತು ಕನ್ನಡದಲ್ಲಿ ರಚಿತವಾದ ಎರಡು ಓಲೆಗರಿ ಕೃತಿಗಳಿವೆ. ಅವು (1) ಕ್ರಿಸ್ತಮತ ಬೋಧೆ[105] ಹಾಗೂ (2) ಜ್ಞಾನ ಉಪದೇಶ.[106] ಜಗತ್ತಿನ ಸೃಷ್ಟಿ, ಭಗವಂತನ ಸ್ವರೂಪ, ಮೋಕ್ಷ ಅದನ್ನು ಪಡೆಯುವ ವಿಧಾನ ಇವುಗಳನ್ನು ಕ್ರಿಸ್ತಮತ ಬೋಧೆಯು ಹೇಳುತ್ತದೆ.[107] ಜ್ಞಾನೋಪದೇಶವು ಅಪೂರ್ಣವಾದ ಕೃತಿ, ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ್ದು. ಮೇಲ್ಕಂಡ ಹಸ್ತ ಪ್ರತಿಗಳು ಹತ್ತೊಂಬತ್ತನೆಯ ಶತಮಾನದ ಪ್ರಾರಂಭ ಕಾಲಕ್ಕೆ ಸೇರಿದವು.

ಒಟ್ಟಿನಲ್ಲಿ ವಿಜಯನಗರದ ಸಂಸ್ಕೃತಿ ವೈವಿಧ್ಯಮಯವೂ ಕುತೂಹಲವೂ ಆಗಿದ್ದು, ವಿಶಿಷ್ಟವಾಗಿ ಕಂಗೊಳಿಸಿದೆ. ಲಕ್ಷ್ಮಣ ತೆಲ್ಲಗಾವಿಯವರು ವಿಜಯನಗರ ಸಂಸ್ಕೃತಿಯನ್ನು ಕುರಿತಂತೆ ಆಳವಾಗಿ ಅಧ್ಯಯನ ಮಾಡಿದವರು. ಅವರ ದೃಷ್ಟಿಯಲ್ಲಿ ಜನರಿಂದ ಜನರಿಗಾಗಿ ಇತಿಹಾಸ ರಚಿಸುವುದು ಹೆಚ್ಚು ಅರ್ಥಪೂರ್ಣ. ಸದ್ಯದ ಅಗತ್ಯ ಕೂಡಾ. ವಿಜಯನಗರ ಇತಿಹಾಸದಲ್ಲಿ ಜನರನ್ನು ಹುಡುಕುವ ಕೆಲಸಕ್ಕೆ ಜನರೇ ಕೈ ಹಾಕುವ ಪ್ರಯತ್ನಕ್ಕೆ ಒತ್ತು ನೀಡಬೇಕಾಗಬಹುದು ಎಂದು ಒಂದು ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಅವರು ಸ್ಪಷ್ಟಪಡಿಸುತ್ತಾರೆ.

ಮೇಲ್ನೋಟಕ್ಕೆ ತೋರಿಬರುವ ವಿಜಯನಗರದ ವೈಭವವಾಗಲಿ, ಸಾಮರ್ಥ್ಯವಾಗಲಿ, ಮಹತ್ವವಾಗಲಿ ಅಂತರ್ಯದಲ್ಲಿ ಇರಲಿಲ್ಲವೆನ್ನುವುದು ವಾಸ್ತವ. ಅಲ್ಲದೆ ಭಾರತೀಯ / ಹಿಂದೂ ಸಂಸ್ಕೃತಿಯ ಪೋಷಣೆ ಮತ್ತು ಪ್ರಸಾರಗಳ ಹೊಣೆಗಾರಿಕೆಯನ್ನು ನಿರ್ವಹಿಸುವಲ್ಲಿ ಈ ಸಾಮ್ರಾಜ್ಯ ಯಜಮಾನನ ಪಾತ್ರ ನಿರ್ವಹಿಸಿತೆಂಬುದು ಸಹ ಪ್ರಶ್ನಾರ್ಹ. ಇದಕ್ಕೆ ಕೆಲವು ಆಂತರಿಕ ನಿದರ್ಶನಗಳನ್ನು ನೀಡಬಹುದು. ವಿಜಯನಗರ ಕಾಲದ ಸಮಾಜದಲ್ಲಿ ಬೇರೂರಿದ್ದ ಕೆಲವು ಅನಿಷ್ಟ ಪದ್ಧತಿಗಳು ಇಂಥ ಪರಿಸ್ಥಿತಿಯನ್ನು ಸಮರ್ಥಿಸಲು ನೆರವಿಗೆ ಧಾವಿಸುತ್ತವೆ.

ಲಕ್ಷ್ಮಣ ತೆಲಗಾವಿಯವರು ವಿಜಯನಗರ ಸಮಾಜದಲ್ಲಿ ಪ್ರಚಲಿತವಿದ್ದ ಐದು ಪ್ರಮುಖ ಅನಿಷ್ಟ ಪದ್ದತಿಗಳನ್ನು ಪಟ್ಟಿ ಮಾಡಿ ಚರ್ಚಿಸುತ್ತಾರೆ. ಅವೆಂದರೆ ಸತಿಪದ್ದತಿ, ವೇಶ್ಯಾ ಪದ್ಧತಿ, ಗುಲಾಮ ಪದ್ಧತಿ,

ಬಲಿ ಪದ್ಧತಿ, ಅಸಹ್ಯಕರವಾದ ಅಂತಃಪುರ ಜೀವನ (ವಿಜಯನಗರ ಕಾಲದ ಸಾಮಾಜಿಕ ಪರಿಸ್ಥಿತಿ ಕೆಲವು ಅನಿಷ್ಟಪದ್ಧತಿಗಳು ಶ್ರೀ ಬಸವರಾಜಯ್ಯ ಮಠದ ೧೯೯೪ ಕನ್ನಡ ವಿಶ್ವವಿದ್ಯಾಲಯ ಹಂಪಿ) ಈ ಪದ್ಧತಿಗಳನ್ನು ಇಲ್ಲಿ ಸ್ಥೂಲವಾಗಿ ಪರಿಶೀಲಿಸುವ ಅಗತ್ಯವಿದೆ ಎಂದಿದ್ದಾರೆ.

ವಿಷಾದದ ಸಂಗತಿಯೆಂದರೆ, ನಿಸ್ಸಹಾಯಕ ಅಬಲೆ / ವಿಧವೆಯರನ್ನು ಬಲವಂತವಾಗಿ ದಹಿಸುವ ಪದ್ಧತಿ ಭಾರತೀಯ ಸಂಸ್ಕೃತಿಯ ರಕ್ಷಣೆ / ಪೋಷಣೆಗೆಂದು ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯದಲ್ಲಿ ವ್ಯಾಪಕವಾಗಿದ್ದಿತು. ಇದೊಂದು ಅರಸರು / ಅಧಿಕಾರಸ್ಥರು / ಕುಲೀನರು / ಕೆಲವು ಸಾಮಾನ್ಯ ವರ್ಗದವರು ಪಾಲಿಸುವ ಪ್ರತಿಷ್ಠೆಯ ಆಚರಣೆಯಾಗಿದ್ದಿತೆಂಬುದನ್ನು ದೇಸೀ ಅಧ್ಯಯನಗಳು ಅರುಹುತ್ತವೆ. ವಿದೇಶಿ ಬರಹಗಾರರಂತೂ ಇಂಥಾ ಕ್ರೂರ ಪದ್ಧತಿಯನ್ನು ಅಧಿಕೃತವಾಗಿಯೇ ದಾಖಲಿಸಿಕೊಂಡಿದ್ದಾರೆ. ಎರಡು - ಮೂರು ಸಾವಿರ ಸ್ತ್ರೀಯರು ರಾಜನು ಸತ್ತಾಗ ಆತ್ಮಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣತ್ಯಾಗ ಮಾಡುತ್ತೇವೆಂದು ವಾಗ್ದಾನ ಮಾಡಿ ರಾಜನ ಕೈ ಹಿಡಿಯುತ್ತಿದ್ದರೆಂದು ನಿಕೊಲೊ-ಡಿ-ಕೊಂತಿ ಹೇಳಿದರೆ ರಾಜ ಸತ್ತರೆ ಅಂತಃಪುರದ ೪೦೦-೫೦೦ ಸ್ತ್ರೀಯರು ಆತನೊಡನೆ ಚಿತೆಯಲ್ಲಿ ಬೀಳುತ್ತಿದ್ದರೆಂಬ ಸ್ವಯಂವೀಕ್ಷಣೆಯ ವರದಿಯನ್ನು ನೀಡುತ್ತಾನೆ ಬಾರ್ಬೋಸಾ. ಇವು ವಿಚಿತ್ರ ವಿವರಣೆ, ವ್ಯಾಖ್ಯಾನಗಳಿಂದ ಕೂಡಿದವು ಹಾಗೂ ಉತ್ಪ್ರೇಕ್ಷೆಭರಿತ ಸಂಗತಿಗಳೆಂದು ತಳ್ಳಿಹಾಕುವ ಪ್ರಯತ್ನ ನಡೆದರು ಸಾಮಾನ್ಯರಲ್ಲಿಯೂ ರೂಢಿಯಲ್ಲಿದ್ದ ಇಂಥಾ ಭಯಾನಕ ಪದ್ಧತಿಯನ್ನು ಮುಚ್ಚಿಡಲಾಗುವುದಿಲ್ಲ. ಇವರೆಲ್ಲರಿಗೂ ರಾಜನೇ ಆದರ್ಶ. ಗೌಡರು, ನಾಯಕರು, ಯೋಧರ ಕುಟುಂಬಗಳಲ್ಲೂ ಇದು ಪ್ರಚಲಿತವಿದ್ದಿತೆನ್ನುತ್ತಾರೆ. ಟಿ.ವಿ. ಮಹಾಲಿಂಗಂ. ಕರ್ನಾಟಕದಲ್ಲಿ ಈ ಪದ್ಧತಿ ಕುರಿತು ಹೇರಳ ಶಿಲಾಶಾಸನಗಳಿರುವುದನ್ನು ಹಾಗೂ ಹಾಸನ ಜಿಲ್ಲೆಯಲ್ಲಿ ವಿಪುಲ ಸಂಖ್ಯೆಯಲ್ಲಿರುವುದನ್ನು ಅವರು ದಾಖಲಿಸಿದ್ದಾರೆ. ಅವರು ಗುರುತಿಸಿರುವಂತೆ, ಸತಿ ಆಚರಣೆಯು ವಿಜಯನಗರ ಸಮಾಜದ ಪ್ರಮುಖ ಲಕ್ಷಣವಾಗಿದ್ದಿತು.

ಭೋಗಾಪೇಕ್ಷಿಗಳಾದ ವಿಜಯನಗರ ಅರಸರು ವೇಶ್ಯಾವಾಟಿಕೆಗೆ ರಹಸ್ಯವಾಗಿ / ಅನಧಿಕೃತವಾಗಿ ಭೇಟಿ ಕೊಡುವುದರೊಡನೆ ವೇಶ್ಯಾವೃತ್ತಿ ರಾಜಾಶ್ರಯದಲ್ಲಿ ವ್ಯವಸ್ಥಿತವಾಗಿ ಬೆಳೆಯುವಂತೆ ಪ್ರೋತ್ಸಾಹಿಸಿದರು. ವಿಜಯನಗರದಲ್ಲಿ ಇಂಥಾ ವ್ಯವಸ್ಥೆ ಬಲಿಯಲು ಇದ್ದ ಕಾರಣಗಳೆಂದರೆ ಜನರ ಆರ್ಥಿಕ ದುಸ್ಥಿತಿ ಹಾಗೂ ಕೆಲವು ಅಮಾನವೀಯ ಸಾಮಾಜಿಕ ಕಟ್ಟುಪಾಡುಗಳು. ವಿಜಯನಗರದಲ್ಲಿ ಇದು ಸಾಂಸ್ಥಿಕ ಸ್ವರೂಪ ಪಡೆದುಕೊಂಡಿತ್ತೆಂದರೆ ಇದರ ಭೀಕರತೆಯ ಪರಿಚಯವಾಗುತ್ತದೆ. ಇದು ಧಾರ್ಮಿಕ ನೆಲೆಯಲ್ಲಿ ದೇವರ ಹೆಸರಿನಲ್ಲಿ ಅಧಿಕೃತವಾಗಿ ಅಂಗೀಕರಿಸಲ್ಪಟ್ಟಿದ್ದಿತು. ಅಚ್ಯುತಪೇಟೆ / ಬಜಾರನ್ನು 'ಸೂಳೆ ಬಜಾರ್' ಎಂತಲೇ ಕರೆಯಲಾಗಿದ್ದಿತು. ಈ ಪದ್ಧತಿಯನ್ನು ಪ್ರೋತ್ಸಾಹಿಸಿದ ಎರಡು ಮಹಾ ಪಿಡುಗುಗಳೆಂದರೆ ಮದ್ಯಪಾನ ಮತ್ತು ಜೂಜುಗಾರಿಕೆ. ಪ್ರವಾಸಿ ಅಬ್ದುಲ್ ರಜಾಕನು, ಈ ನಗರದ ಏಳು(ಸುತ್ತು) ಕೋಟೆಗಳಲ್ಲಿ ಈ ತರಹದ ಅನೇಕ ವೇಶ್ಯಾಗೃಹಗಳಿವೆ. ಈ ವೇಶ್ಯಾಗೃಹಗಳ ಮೇಲೆ ಹಾಕಿದ ತೆರಿಗೆಯಿಂದ ೧೨,೦೦೦ ಪಣಂ ಆದಾಯ

ಬರುತ್ತದೆ. ಈ ಹಣವನ್ನು ಪಹರೆಯವರಿಗೆ ಸಂಬಳವಾಗಿ ಕೊಡುತ್ತಿದ್ದರೆನ್ನುತ್ತಾನೆ. ರಾಜಧಾನಿಯ ರಕ್ಷಣೆ ಸಂಪೂರ್ಣವಾಗಿ ವೇಶ್ಯೆಯರು ನೀಡುತ್ತಿದ್ದ ತೆರಿಗೆಯನ್ನು ಅವಲಂಬಿಸಿದ್ದಿತೆಂಬುದನ್ನು ನೋಡಿದ್ದೇವೆ.

ಮುತ್ತು-ರತ್ನಗಳನ್ನು ಮುಕ್ತ ಮಾರುಕಟ್ಟೆಯಲ್ಲಿ ಬಿಕರಿಗಿಡುವಂತೆಯೇ ಪ್ರಾಣಿಗಳೊಡನೆ ಮನುಷ್ಯರನ್ನು / ಗುಲಾಮರನ್ನು ವಿಜಯನಗರದಲ್ಲಿ ಬಿಕರಿಗಿಡಲಾಗುತ್ತಿದ್ದಿತು. ಇಮ್ಮಡಿ ಪ್ರೌಢರಾಯನ ಕಾಲದ ಮರಗಲ್ಲು ಗ್ರಾಮದ ಶಾಸನ (ಕ್ರಿ.ಶ. ೧೪೩೦) ಹಾಗೂ ಕುಪ್ಪತ್ತೂರು ಶಾಸನ (ಕ್ರಿ.ಶ. ೧೪೭೦)ಗಳಲ್ಲಿಯೂ ಈ ಕುರಿತು ಸೂಚನೆಯಿದೆ. ಹಾಗೆಯೇ, ನಿಕೊಲೊ ದ ಕೊಂಟಿ, ಅಬ್ದುಲ್ ರಜಾಕ್ ಮತ್ತು ಬಾರ್ಬೋಸಾರ ಬರಹಗಳೂ ಇದನ್ನು ಸಮರ್ಥಿಸುತ್ತವೆ.

ಮನುಷ್ಯರನ್ನು ಮತ್ತು ಪ್ರಾಣಿಗಳನ್ನು ಬಲಿ ನೀಡುವ ಇನ್ನೊಂದು ಭಯಾನಕ / ಅನಿಷ್ಟ ಪದ್ಧತಿ ವಿಜಯನಗರದಲ್ಲಿ ಬೇರೂರಿದ್ದಿತು. ಇದು ತೀರಾ ವ್ಯಾಪಕವಾದ ಆಚರಣೆಯಾಗಿದ್ದಿತೆನ್ನಲು ಸಾಕಷ್ಟು ಉದಾಹರಣೆಗಳಿವೆ. ಕೆರೆಗಳನ್ನು, ಕೋಟೆಗಳನ್ನು ಕಟ್ಟುವಾಗಲಂತೂ ಮನುಷ್ಯರನ್ನು ಜೀವಂತವಾಗಿ ಆಹುತಿ ಕೊಡಲಾಗುತ್ತಿತ್ತು. ಇಂಥಾ ಅಮಾನವೀಯ ಜೀವವಿರೋಧಿ ಪದ್ಧತಿಯು ವಿಜಯನಗರದಲ್ಲಿ 'ಧರ್ಮ-ಸಂಸ್ಕೃತಿ ಸಮ್ಮತ'ವಾದುದಾಗಿದ್ದಿತೆಂಬುದೇ ವಿಷಾದದ ಸಂಗತಿ. ಹಬ್ಬಾಚರಣೆ, ಮುಖ್ಯವಾಗಿ ವಿಜಯದಶಮಿ ಸಂದರ್ಭದಲ್ಲಿ ರಕ್ತದ ಕೋಡಿಯನ್ನೇ ನೋಡಬಹುದಿತ್ತು. ಲೆಕ್ಕವಿಲ್ಲದಷ್ಟು ಪ್ರಾಣಿಗಳನ್ನು ಬಲಿಕೊಡುತ್ತಿದ್ದ ವಿವರಣೆಯೇ ಅತ್ಯಂತ ಭೀಕರ. ಎರಡು ಗುಡ್ಡಗಳ ನಡುವೆ ಕಟ್ಟಲಾದ ಕೆರೆಯೊಂದಕ್ಕೆ ಅಂದರೆ ಹೊಸಪೇಟೆ ಮತ್ತು ಮರಿಯಮ್ಮನಹಳ್ಳಿ ರಸ್ತೆಯಲ್ಲಿರುವ ರಾಯರೆಕೆರೆಗ, ೬ ಮಂದಿಯನ್ನು ಬಲಿ ನೀಡಲಾಯಿತೆಂಬ ಮಾಹಿತಿ ಒದಗಿಸುತ್ತಾನೆ ಪಾಯೆಸ್. ವಿರೂಪಾಕ್ಷ ದೇವಾಲಯದ ಮಹಾದ್ವಾರ ಬಿಷ್ಟಪ್ಪಯ್ಯನ ಗೋಪುರಕ್ಕೆ ರಂಗಾಪುರದ ಲಕ್ಷ್ಮಾಂಬೆ ಎಂಬುವವಳನ್ನು ಬಲಿ ನೀಡಲಾದ ಇನ್ನೊಂದು ವಿರಳ ಉದಾಹರಣೆಯು ಬಾಗಿಲ ಬಳಿ 'ಗೋಪುರಾಂಬ' ಹೆಸರಿನಲ್ಲಿ ಈಕೆಯ ಸ್ಮರಣಾರ್ಥ ವಿಗ್ರಹ ಸ್ಥಾಪಿಸಿದ ವಿಚಾರ ತಿಳಿಯುತ್ತದೆ.

ಬಹಿರಂಗವಾಗಿಯೇ ರಾಜಧಾನಿಯ ಸ್ತ್ರೀಯರ ಮಾನಾಪಹರಣದಂಥಾ ಲೈಂಗಿಕ ಶೋಷಣೆಯಂಥಾ ವ್ಯವಸ್ಥಿತ ಪ್ರಯತ್ನಗಳಿಗೆ ತಡೆಹಾಕಲು ವಿಫಲವಾದ ವಿಜಯನಗರ ಸಾಮ್ರಾಟರು, ಮಹಿಳೆಯರ ಆತ್ಮಗೌರವವನ್ನು ರಕ್ಷಿಸುವಲ್ಲಿ ಸಂಪೂರ್ಣ ಸೋತಿದ್ದರೆಂತಲೇ ಭಾವಿಸಬೇಕಾಗುತ್ತದೆ. ರಾಜಸಂತತಿ ಶ್ರೀಮಂತವರ್ಗ, ಅಧಿಕಾರಿ ವರ್ಗ, ಕುಲೀನವರ್ಗ - ಇಂಥಾ ಕೆಲವು ಪ್ರತಿಷ್ಠಿತರ ಮಹಿಳೆಯರನ್ನು ಹೊರತುಪಡಿಸಿದರೆ, ಇತರ ಸಾಮಾನ್ಯ ವರ್ಗಗಳ ಮಹಿಳೆಯರ ಪಾಡು ಹೇಗಿದ್ದಿತೋ ಊಹಿಸಲಾಗದು. ಸಾಮ್ರಾಟರು ಹಾಗೂ ಇತರ ಧನಿಕವರ್ಗದವರು ಸಲಹುತ್ತಿದ್ದ ಅನಧಿಕೃತ ಮಹಿಳೆಯರ ಸಮೂಹವು ತೀರಾ ಹೀನಾಯವಾಗಿ ಬದುಕಬೇಕಿದ್ದ ಬಗೆಗೆ ಸೂಚನೆಗಳು ದೊರೆಯುತ್ತವೆ. ಉದಾಹರಣೆಗೆ, ತಮಗೆ ಇಷ್ಟವೆನಿಸಿದ ಹೆಣ್ಣನ್ನು ಶಯ್ಯಾಗಾರಕ್ಕೆ ಆಹ್ವಾನಿಸುವ ಮುನ್ನ ವಿಜಯನಗರದ ಅರಸರು ಅಂತಃಪುರದ ಎಲ್ಲ ಹೆಣ್ಣುಗಳನ್ನು ಪ್ರದರ್ಶನದಲ್ಲಿಟ್ಟ ಬೊಂಬೆಗಳನ್ನು ಪರೀಕ್ಷಿಸುವಂತೆ ನಡೆದುಕೊಳ್ಳುತ್ತಿದ್ದರು. ಹೆಣ್ಣಿನ ಎಲ್ಲ ಕೋಮಲ

ಭಾವನೆಗಳನ್ನು ಮುರುಟಿಸುವ ಈ ಪ್ರಕ್ರಿಯೆ ಹೆಣ್ತನಕ್ಕೆ ಅಪಮಾನ ಮಾಡುವಷ್ಟು ಕ್ರೂರವಾಗಿದ್ದಿರಲು ಸಾಧ್ಯ. ಲೈಂಗಿಕ ತೃಷೆಯ ಪರಿಹಾರಕ್ಕಾಗಿ ಮಾತ್ರ ಅವರನ್ನು ಬಳಸಿಕೊಳ್ಳಲಾಗುತ್ತಿತ್ತು. ಇನ್ನು ಅಂತಃಪುರದಲ್ಲಿ ಪರಿಚಾರಿಕೆಯರಾಗಿದ್ದವರಾದರೂ ಸಾಮಂತರು, ಪಾಳೆಯಗಾರರು, ಉನ್ನತ ಅಧಿಕಾರಿಗಳು, ಸಾಮ್ರಾಟರಿಗೆ ಸಲ್ಲಿಸುವ ಆಭರಣ, ಕುದುರೆಗಳ ಜತೆಯಲ್ಲಿ ಕಾಣಿಕೆಯಾಗಿ ಸಮರ್ಪಿಸಲ್ಪಟ್ಟವರು. ಅಬ್ದುಲ್ ರಜಾಕ್, ಪಾಯೀಸ, ಬಾರ್ಬೋಸಾರ ಹೇಳಿಕೆಯಂತೆ ಅರಮನೆಯ ರಾಣಿವಾಸದವರು ಪರಸ್ಪರ ಈರ್ಷ್ಯೆ, ಅಸೂಯೆ, ಸ್ಪರ್ಧೆ, ಕ್ರೌರ್ಯ, ಕೊಲೆ, ಹಿಂಸೆ, ನಿರಾಶೆ, ಅಪಮಾನ, ಆತ್ಮಹತ್ಯೆ ಪ್ರಯತ್ನಗಳಲ್ಲಿ ತೊಡಗಿದ್ದರು. ಅಶಾಂತಿಯ ಆಗರದಂತೆ ಅಂತಃಪುರವಿದ್ದಿತು.

ಊಳಿಗಮಾನ್ಯ ವ್ಯವಸ್ಥೆಯನ್ನು ಪೂರ್ಣ ಪ್ರಮಾಣದಲ್ಲಿ ಪೋಷಿಸಿ ಬೆಳೆಸಿದ ವಿಜಯನಗರ ಸಾಮ್ರಾಜ್ಯವು ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಯಥಾಸ್ಥಿತಿ ಧೋರಣೆಯನ್ನೆ ಮುಂದುವರಿಸಿತೆಂಬುದು ಸ್ಪಷ್ಟ. ಕಾಕತೀಯ ರಾಜ್ಯದ ಕೊನೆಯ ಈರ್ವರು ಆಡಳಿತಗಾರರಾದ ರುದ್ರಾಂಬಾ ಮತ್ತು ಕಾಪಯನಾಯಕರ ಕಾಲದಲ್ಲಿ ಜಾರಿಗೆ ಬಂದ ನಾಯಕತನ ವ್ಯವಸ್ಥೆಯು ವಿಜಯನಗರ ಕಾಲದಲ್ಲಿ ನಾಯಕರ ವ್ಯವಸ್ಥೆಯಾಗಿ ವಿಸ್ತಾರಗೊಂಡಿತು. ಇದನ್ನು ಪರಿಣಾಮಕಾರಿಯಾಗಿ ರೂಢಿಸಿಕೊಂಡ ಕೀರ್ತಿ ವಿಜಯನಗರದ್ದೇ.

ಇತಿಹಾಸ ತಿಳಿಸುವಂತೆ, ಕಾಕತೀಯರ ಅಧೀನದಲ್ಲಿದ್ದ ಪದ್ಮಕುಲದ ೭೭ ನಾಯಕರು ಅನಂತರ ವಿಜಯನಗರಕ್ಕೆ ತಮ್ಮ ನಿಷ್ಠೆ ತೋರಿದರು. ನ್ಯೂನಿಜ್ ಪ್ರಕಾರ, ವಿಜಯನಗರ ಅವಧಿಯಲ್ಲಿ ಸಾಮ್ರಾಜ್ಯವನ್ನು ೨೦೦ ಭಾಗಗಳಾಗಿ ವಿಭಾಗಿಸಲಾಗಿದ್ದಿತು. ೨೦೦ ನಾಯಕರು ಮತ್ತು ಪಾಳೆಯಗಾರರು ಇವುಗಳ ಆಡಳಿತ ನೋಡಿಕೊಳ್ಳುತ್ತಿದ್ದರು. ಇದು ತುಂಡು ರಾಜ್ಯಗಳಿಂದ ಕೂಡಿದ ಆಡಳಿತ ವ್ಯವಸ್ಥೆಯಾಗಿದ್ದಿತೆಂದು ವ್ಯಾಖ್ಯಾನಿಸುವುದರೊಡನೆ ಕೇಂದ್ರೀಕೃತ ಆಡಳಿತದ ಪ್ರಶ್ನೆಯನ್ನು ಎತ್ತಿದ ವಿದೇಶಿ ಇತಿಹಾಸಕಾರರಿಗೆ ದೇಸೀ ಇತಿಹಾಸಕಾರರು ಸಮಾಧಾನಕರ ಉತ್ತರ ನೀಡಿದ್ದಾರೆ. ಇಲ್ಲಿಯ ಪ್ರಶ್ನೆಯೆಂದರೆ, ಊಳಿಗಮಾನ್ಯ ವ್ಯವಸ್ಥೆಯನ್ನು ಪೋಷಿಸಿದ ವಿಜಯನಗರವು ತನ್ನ ಆಳ್ವಿಕೆಯ ಗರ್ಭದಲ್ಲಿ ಪ್ರಜಾಪ್ರಭುತ್ವದ ಲಕ್ಷಣಗಳನ್ನು ಒಳಗೊಂಡಿದ್ದಿತೇ? ನಾಯಕರ ವ್ಯವಸ್ಥೆಯನ್ನು ಪೂರ್ಣ ಪ್ರಮಾಣದಲ್ಲಿ ಜಾರಿಗೆ ತರುವುದರೊಡನೆ ವಿಜಯನಗರವು ಇಂಥಾ ಪ್ರಯೋಗವನ್ನು ಪರೋಕ್ಷವಾಗಿ ನಡೆಸಿತೇ ?

ವಿಜಯನಗರ ಸಾಮ್ರಾಜ್ಯದ ಅಳಿವಿನ ನಂತರ ಪಾಳೆಯಗಾರಶಾಹಿಯು ಕನಿಷ್ಠ ಎರಡೂವರೆ ಶತಮಾನಗಳ ಕಾಲ ಕರ್ನಾಟಕದ / ದಕ್ಷಿಣ ಭಾರತದ ರಾಜಕೀಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದರು. ಹೈದರ್ ಅಲಿ ಟಿಪ್ಪು ಸುಲ್ತಾನರು ಈ ವ್ಯವಸ್ಥೆಯನ್ನು ದುರ್ಬಲಗೊಳಿಸಿದರು. ಇಂಗ್ಲಿಷರು ಸಹಾ ಇಂಥಾ ಕಾರ್ಯದಲ್ಲಿ ಹಿಂದೆ ಬೀಳಲಿಲ್ಲ. ವಸಾಹತುಶಾಹಿ ಹುಟ್ಟುಹಾಕಿದ ನವಸಾಮ್ರಾಜ್ಯಶಾಹಿ ವ್ಯವಸ್ಥೆಯ ವಿರುದ್ಧ ಜನರು ತೋರಲೆತ್ನಿಸಿದ ಪ್ರತಿಭಟನೆಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ದಕ್ಷಿಣ ಭಾರತದಲ್ಲಿ ವಸಾಹತುಶಾಹಿಯ ದಬ್ಬಾಳಿಕೆಯ ವಿರುದ್ಧ ನಡೆದ ಜನಾಂದೋಲನದ ನಾಯಕತ್ವ ವಹಿಸಿದವರು ಸ್ಥಳೀಯ

ಪಾಳೆಯಗಾರರೇ ಎಂಬುದು ಗಮನಾರ್ಹ. ಅಂದರೆ ಮಾಜಿ ಪಾಳೆಯಗಾರರು / ನಾಯಕರು / ಜಮೀನುದಾರರು ಆ ನಂತರದಲ್ಲಿ ಜನನಾಯಕರಾಗಿ ಅಥವಾ ಪ್ರಜೆಗಳನ್ನು ಪ್ರತಿನಿಧಿಸುವವರಾಗಿ ಹೊಸಕಾಲದ ಆಡಳಿತ ವ್ಯವಸ್ಥೆ ಜಾರಿಗೆ ಬರುವಲ್ಲಿ ನೆರವಾದರೆನ್ನಬಹುದು. ಈ ದೃಷ್ಟಿಯಿಂದಲೂ ವಿಜಯನಗರದ ಕೊಡುಗೆಯನ್ನು ಗಂಭೀರವಾಗಿಯೇ ಪರಿಗಣಿಸಬೇಕಾಗುತ್ತದೆ.

ರಾಜಕೀಯವಾಗಿ ಬಲಿಷ್ಟವಾಗಿದ್ದು, ಈ ಬಗೆಯ ಹೊಸ ಮನ್ವಂತರವನ್ನು ಸೃಷ್ಟಿಸಿದ ವಿಜಯನಗರವು, ಆಂತರ್ಯದಲ್ಲಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ದುರ್ಬಲಗೊಂಡಿದ್ದುದು ಹೇಗೆ ? ಅತಿ ಶ್ರೀಮಂತಿಕೆ ಇದಕ್ಕೆ ಶಾಪವಾಗಿ ಪರಿಣಮಿಸಿತೇ ? ರಾಜರ, ಪ್ರಜೆಗಳ ನೈತಿಕಮಟ್ಟ ಕುಸಿಯಲು ಇದ್ದಿರುವ ಅನ್ಯ ಕಾರಣಗಳೇನು? ಹೆಸರಾಂತ ಧರ್ಮದ್ರಷ್ಟಾರರು ನೆಲೆಗೊಂಡಿದ್ದ ರಾಜಧಾನಿಯಲ್ಲಿ ಜನವಿರೋಧಿ / ಜೀವ ವಿರೋಧಿ ಪ್ರವೃತ್ತಿಗಳು ವಿಜೃಂಭಿಸಿದುದು ಹೇಗೆ ? ದಕ್ಷಿಣ ಭಾರತದಲ್ಲಿ ಸನಾತನ ಸಂಸ್ಕೃತಿಯ ರಕ್ಷಣೆಗೆಂದು ಹುಟ್ಟಿತೆಂದು ವಿಜಯನಗರವನ್ನು ಕೊಂಡಾಡುವ ಇತಿಹಾಸಕಾರರ ನಿಲುವುಗಳ ಔಚಿತ್ಯವೇನು ? ಎಂಬುದಕ್ಕೆ ಅವರೇ ಕೆಲವು ಉತ್ತರಗಳನ್ನು ಕೊಡುತ್ತಾರೆ. ವಿಜಯನಗರದ ವೈಭವಕ್ಕೆ ಬೆರಗಾದವರ ಬರವಣಿಗೆಗಳನ್ನು ಮೆಚ್ಚಿದವರ ಸಂಖ್ಯೆ ಹೆಚ್ಚಾದುದೇ ಹೊಸ ಬರವಣಿಗೆಗಳು ಹುಟ್ಟಲು ಕಾರಣವಾಯಿತೆನ್ನಬಹುದು. ವಿಜಯನಗರದವರ ಸಾಧನೆಗೆ ಸರಿಗಟ್ಟಬಲ್ಲ ಬೇರೆ ಸಮ್ರಾಟರು ದಕ್ಷಿಣದಲ್ಲಿ ಮತ್ತೆ ತಲೆಯೆತ್ತಲಿಲ್ಲ. ದಕ್ಷಿಣ ಭಾರತದ ಕೊನೆಯ ಸಾಮ್ರಾಜ್ಯವಾಗಿ ಬಾಳಿ ದುರಂತಾಂತ್ಯವನ್ನು ಕಂಡ ವಿಜಯನಗರ ಕುರಿತು ಅನುಕಂಪದ ಧೋರಣೆ ಸದಾಕಾಲಕ್ಕೂ ಮುಂದುವರೆದುದನ್ನು ಕಾಣಬಹುದು. ಸೈದ್ಧಾಂತಿಕ ನೆಲೆಯ ಬರಹಗಳ ದುರ್ಭರತೆಯೂ ಇಂಥಾ ಪ್ರವೃತ್ತಿಗೆ ಕಾರಣವಿದ್ದಿರಬಹುದು.

ಏನೇ ಇದ್ದರೂ ಕೆಳಸ್ತರದ ಚರಿತ್ರೆ ಬರವಣಿಗೆಯ ದೃಷ್ಟಿಯಿಂದ ವಿಜಯನಗರವನ್ನು ಪರಿಭಾವಿಸಬಹುದಾದರೆ, ನೈತಿಕಬಲವಿಲ್ಲದ ಸಾಮ್ರಾಜ್ಯವೊಂದು ಕಣ್ಣೆದುರು ನಿಂತಂತಾಗುತ್ತದೆ. ವಿಜಯನಗರ ಯುಗವು ಕನ್ನಡಿಗನ ಇತಿಹಾಸದ ವೈಪರೀತ್ಯಗಳ, ವಿರೋಧಾಭಾಸದ ಯುಗವಿತ್ತೆನ್ನುವ ಡಾ. ರಮೇಶ್ ಅವರ ಮಾತನ್ನು ಸಮರ್ಥಿಸಲೇಬೇಕಾಗುತ್ತದೆ. ಹಾಗೆಯೇ, ವಿಜಯನಗರ ಯುಗವು ನಿಜಕ್ಕೂ ಇಂದಿನ ಕನ್ನಡಿಗನ ದಾರುಣ ಪರಿಸ್ಥಿತಿಯ ಉಪಕ್ರಮ ಕಾಲವಿದ್ದಿರಬಹುದೆಂಬ ಅವರ ಅನಿಸಿಕೆಯನ್ನು ಖಂಡಿತ ನಿರಾಕರಿಸಲಾಗುವುದಿಲ್ಲ. ವಿಜಯನಗರವನ್ನು ವೈಭವಯುತವಾಗಿ ಚಿತ್ರಿಸುವ ಪರಿಪಾಟ ಮುಂದುವರೆದಿದ್ದರೂ ವಸ್ತುನಿಷ್ಠ ಇತಿಹಾಸ ಬರವಣಿಗೆಯತ್ತ ಹೊಸ ಚಿಂತನೆಯ ಯುವ ಇತಿಹಾಸಕಾರರ ಒಲವು ಮೂಡುವಂತಾಗಲು ಪ್ರಯತ್ನಿಸಬೇಕಿದೆ ಎಂಬ ಲಕ್ಷ್ಮಣತೆಲ್ಲಗಾವಿಯವರ ಮಾತು ಒಪ್ಪಬೇಕಾಗುತ್ತದೆ.

**ಅಡಿಟಿಪ್ಪಣಿಗಳು**

1. S.N. Das : costumes of India and portion, p. 1
2. Ibid, p. 104

3. 'ಭಾಸಂ', ಪು. 229-30
4. ವಿಜಯನಗರ ಕಾಲದ ಕ.ಸಾ.ಜ ಜೀವನ ಚಿತ್ತ
5. 'ಮೋಹನ ತರಂಗಿಣಿ' ಪು. 3-21
6. 'ಭಾಸಂ' ಪು. 231
7. 'ಪ್ರಕಂಞಂ' 2, ಪು. 366
8. 'ಪ್ರಕಂಞಂ' 2, ಪು. 292
9. 'ರಾಚ' 4-114
10. 'ಪುರಂದರದಾಸರ ಕೀರ್ತನೆಗಳು' 2-52-2
11. 'ಮೋತ 4-11 (ರನ್ನ ಪಾವುಗೆ) ರಾಚ 21-39 (ರನ್ನದ ಹಾವುಗೆ) : ಭವ್ವೆ, 16-18 (ಅರಳೆಲೆ, ಕೀಲಿಸಿದ ಬೆಳ್ಳಿಯ ಪಾವುಗೆಯ)
12. 'ಭಾಸಂ' ಪು. 230-1
13. 'ಬಾಪು' 4-35 'ಪುಲೀ 4-4
14. 'ಸನತ್ಕುಚ', '15-44' ಕಪ್ಪಿನ ಕರಡಿಗೆ, ಪನ್ನೀರ ಕುದಿಸಿ ಸಿಪ್ಪಿನ (ಚಿಪ್ಪು) ನಾದು ಹೆಸರನ್ನು ಸೂಚಿಸುತ್ತದೆ. 'ರಾಚಿ' 21-49, ರಾಚ 42-63 (ಅಂಗಡಿಗಳು ಗಂಧ ಕಿತ್ತುರಿಗಳ ಭವಣಿಗಳಿಂದ ಕರ್ಪೂರದ ಕರಡಿಗೆಗಳ ಸಾಲಿಂದ ಕಂಗೆಸೆದವು) 'ಪುಕೀ' 2-182-7 (ಕರ್ಪೂರ ಕರಡಿಗೆಯ)
15. 'ಭರತೇಶ ವೈಭವ' 19-117
16. 'ಮೋತ' - 3-18 (ಭೋಜಪ, ಕರ್ಪೂರ ಕಸ್ತೂರಿ ಜೀರ್ಣಜವಾಜಿ ಪುಣುಗು ಬಹುತೈಲ ಸೋಜಿಗವಡೆದ ಸುಗಂದದಂಗಡಿಗಳು ರಾಜಿಸುತ್ತಿದ್ಮವಿಕ್ಕಲವಿ;
ಮಾತಂಗಿಯ ಸೇನಾ ಶಿಬಿರದಲ್ಲಿದ್ದ ಅಂಗಡಿಗಳ ಗುಡಾರಗಳು "ಬುರುಕಿದಗಿಲು ವರಗಂಧ ಕತ್ತುರಿಗಳ ಭಂಶಿಗಳಿಂದ ಕರ್ಪುರದ ಕರಡಿಗೆಗಳ ಸಾಲಿಂದ ಕಂಗೆಸೆದಾ" (ರಾಚ 42-63), ಇತರ ಕವಿಗಳ ವರ್ಣನೆಗೆ ನೋಡಿ: 'ಧನಾಪು' 32-77 ಚಬಪು 11-44ಚ ಬೇಕಾ, 2-27
17. 'ಸನತ್ಕುಚ' 15-42, 43 "ಚೆಂದನಾಗರು ಪರಿಮಳೋತ್ಕರದಿಂ ಪನ್ನೀರ್ವೆರಿಸಿ ಶಿಲೆಯೊಳಗಿಂದುಮುಖಿಯರು ನೀಡಿ ನಳಿತೊಳ್ಗಳನು ಕಂಕಣಧ್ವನಿ ಕುಂದದ ಅಯುತ್ತಿರಲು ಗಂಧವಘುಟ್ಟವಳ್ತಿಯರು ನೋಡಿ 'ಮೋತ' 3-14 'ಮಲಿಪು' 20-19 (ಬಾವನ್ನದ ಮಳಿಗೆ)
18. ಕಿಟ್ಟಲ್‌ರ ವಿವರಣೆಗೆ ನೋಡಿ : 'ಕಿನಿ' ಪು. 1314
19. (ದೇದಾವ' : 134)
20. 'ಜೀಚ' 8-49; 'ಕಿಚಿ' ಪು. 188
21. 'ಭರತೇಶ ವೈಭವ' 56-30, 56-64
22. 'ರಾಚಿ' 41-92
23. 'ಪುಕೀ' 1-174
24. 'ಭಾಸಂ', ಪು. 230-31
25. ಪುಲೀ 4-5
26. ಪುವಂ. 236
27. ಅಪಾಜೀ, 1, ಪು. 45, 57
28. ಸಾರಾಜೀ, 2, ಪು. 295
29. ಪ ಎಂ, ಪು. 238
30. ಪುಕೀ, 2-5
31. ಪುಕೀ, 3-178

31a. ಅದೇ.

32. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಪು. ೪೪೮
33. ಅದೇ, ಪು. ೪೪೯
34. ಎಲ್. ರಾಜಾರಾವ್, ಕರ್ನಾಟಕ ಸಂಗೀತ, ಕಪ. 2, ಪು. 172
35. ಡಾ. ಶ್ರೀಕಂಠಶಾಸ್ತ್ರಿ ಭಾಸಂ ; ಪು. 300 ಕರ್ನಾಟಕ ಸಂಗೀತದಲ್ಲಿ ರಾಗಗಳನ್ನು ಮೇಳಗಳ ಪ್ರಕಾರ ವಿಂಗಡಿಸಿದೆ

36. ತಿಪ್ಪೇರುದ್ರಸ್ವಾಮಿ, 'ಕಸಂಸ' ಪು. 664
37. Hulugur Krishnacharya (V.SCC) p. 367
38. ರಾ.ಸತ್ಯನಾರಾಯಣ "ಆಧುನಿಕ ಸಂಗೀತದ ಆದ್ಯಾಚಾರ್ಯ ಕನ್ನಡಿಗ ಕಿಲ್ಲಪ್ಪ" ಉಲ್ಲೇಖ ತಿಪ್ಪೇರುದ್ರಸ್ವಾಮಿ 'ಕಸಂಸ' ಪು. 666
39. ದೊರೆ ರಾಮರಾಯನು ಸಂಗೀತಾಭಿಮಾನಿಯಾಗಿದ್ದು ವೀಣೆ ಮತ್ತು ಹಾಡುಗಾರಿಕೆಯಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದ
40. ಎಕ, 12CK3a. p. 84
41. ಎಲ್. ರಾಜಾರಾವ್, "ಕರ್ನಾಟಕ ಸಂಗೀತ" (ಕಪ, 2, ಪು. 174)
42. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನ ಜೀವನ ಚಿತ್ರ, ಪು. 444
43. ಅದೇ, ಪು. 446
44. ಕಪ, 1, ಪು. 581
45. ('ಭಾ.ಸಂ.', ಪು. 309-310)
46. (ಪರಾಪು, 3-52ರಿಂದ 55)
47. ಸಂಶೋಧನಾ ತರಂಗ, ಭಾಗ 2, ಪು. 246
48. ತಿಪ್ಪೇರುದ್ರಸ್ವಾಮಿ, ಕ.ಸಂ.ಸಾ ಪುಟ 636
49. A Forgotton Empire, ಪು. 263
50. ಅದೆ, ಪು. 258-59
51. ಪಾಯೇಸ್, A Forgotton Empire. ಪು. 262-3
52. ಶ್ರೀವತ್ಸ, ಪು. 67
53. ಚಿದಾನಂದಮೂರ್ತಿ, ಕ.ರಾ.ಸಾಂ.ಅ. ಪು. 181
54. ಪಾಯೇಸ್, 'A Forgotton Empire' ಪು. 234
55. ಶ್ರೀಕಂಠಶಾಸ್ತ್ರಿ, 'ಭಾಸಂ' ಪು. 306
56. 'ನಾಟ್ಯಶಾಸ್ತ್ರ', 2, ಪು. 366
57. ಕರ್ನಾಟಕ ಸಂಪುಟ : ಪು. 600
58. ಅಬ್ದುಲ್ ರಜಾಕ್ : A Forgotton Empire, ಭಾಗ 2, ಪು. 165
59. ಭರತೇಶ ವೈಭವ; 20, ಪುಟ 34ರಿಂದ 49
60. ವಿಜಯನಗರ ಕಾಲದ ಕನ್ನಡ ಸಾಹಿತ್ಯದ ಜನಜೀವನ ಚಿತ್ರ, ಪು. 459
61. ಅದೇ; ಪು. 462
61a. ಅದೇ; ಪು. 463
62. ಎಕ, Vol, XI
63. SII; Vols, IX, XVII
64. E. Thurston : Castes and Tribes of Southern India, Vol I, Govt. Press, Madras, 1909
65. H.V. Nanjunadayya and L.K. Ananthakrishna Iyer : The Mysore Tribes and Castes, Vol IV, University of Mysore, Mysore 1931
66. Dr. B.A. Saletore : Social and Political Life in the Vijayanagar Empire, Vol II, Madras, 1934
67. ಪ್ರೊ.ಬಿ. ರಾಜಶೇಖರಪ್ಪ : ಇತಿಹಾಸ ಕಥನ; ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು ೨೦೦೧
68. Nagaraja Rao. M.S 1983 Ahmad Khans Dharmasala, VPR - 197-83, P. 565
69. George Michell : 1985 Architecture of the muslim quarters at Vijayanagar VPR 1983-84, Pp 10-118
70. SII; Vol IX, Par - II, No. 447, p.No. 457
71. VPR - 1984-87, No. 2, 14-150, 218-221
72. VPR - 1984-87, No. 149-150
73. E.S. patils and vinodha patil, 1996 Vijayanagar inscription, Vol I. No. 73, 279, 286, 282, 283, 175

74. ವಿಜಯನಗರ ಅಧ್ಯಯನ, ಪು. 14
75. History of Christianity in Canara; Vol. 2, ಪು. 31
76. Imperial Gazetiar, Vol. XIV, ಪು. 346, ಸೆವೆರೀನ್ ಸಿಲ್ವಾ, ಪೂರ್ವೋಕ್ತ, ಪು. 31
77. ಎಂ.ವಿಲ್ಕ್ಸ್, History of Mysore, Vol. II, ಪು. 100-111
78. ಜೆ.ಪಿ. ಸಿಕ್ವೇರಾ, Tiger of Mysore, ಪು. 33
79. ಡಿ. ಫೆರೊಲ್ಲಿ, Jesuits in Mysore, ಪು. 206
80. ಸಿವೆಲ್; A Forgotton Empire, ಪು. 364-365
81. ಆಂಟನಿ ಡಿ ಕೋಸ್ಟಾ, "Garcia De orta as a Source of Indian History", Indica, Vol. 7, Sept. 1970, ಪು. 123
82. Pazes, tratados No. 1 ff. 17r, 20v. Indica, Vol 10, 1973, ಪು. 99
83. "Indo-Lusitana" II, Indica, Vol 10, No. 1973, ಪು. 99-100
84. ಶ್ರೀಧರ್ ಮೆನನ್, A Survey of Kerala History, Kottayam, 1967, ಪು. 220, ಕೆ.ಜಿ. ವಸಂತ ಮಾಧವ, "Role of Konkani people in Agrarian set up of the coastal Karnataka 1525-1800 A.D. QJMS, Vol. LXXXI ಸಂ. 3-4, 1990, ಪು. 353. Manualor the administration of the Madras Presidency, Vol I, Pt. II, ಪು. 445
85. ಸೆವರೀನ್ ಸಿಲ್ವಾ, History of Christianity in Canara, I, ಪು. 57
86. Intruccao, Tolio 42, Assentos III, ಪು. 100-101
87. Intruccao, Tolio 63-64, Assentos III ಪು. 530-533
88. ಸೆವರೀನ್ ಸಿಲ್ವಾ, ಪೂರ್ವೋಕ್ತ, ಪು. 57
89. A Forgotton Empire ಪು. 123
90. ಜೆ. ಮೂರ್, The History of the Diocese of Mangalore, ಪು. 69
91. A Forgotton Empire, Vol. VII, ಪು 125
92. ಅದೇ, Vol. VIII, ಪು 230
93. ಅದೇ, Vol. VII-IX, ಪು 231
94. ಅದೇ, ಜೆ.ಮೂರ್ ಎಸ್.ಜೆ., ಪೂರ್ವೋಕ್ತ, ಪು. 57-59
95. ಕೆ.ಜಿ. ವಸಂತಮಾಧವ; "Christians and Agrarian setup in the Coastal Karnataka 1509-1800", The Quarterly review of historical studies, XXV, Vol 2, ಜುಲೈ-ಸೆಪ್ಟೆಂಬರ್ 1985, ಪು. 46
96. ಜೆ. ಮೂರ್ ಎಸ್.ಜೆ. ಪೂರ್ವೋಕ್ತ, ಪು. 38-39
97. ಸೆವರೀನ್ ಸಿಲ್ವಾ, ಪೂರ್ವೋಕ್ತ, ಸಂ. I, ಪು. 75
98. ಅದೇ, ಸಂ. II, ಪು. 113
99. ಅದೇ, ಸಂ. I, ಪು. 109
100. ಎ.ಎಚ್.ಪಿ.ಡಿ. ಸೋಜಾ : History of Catholic Community of South kanara, P. 24
101. ಎಸ್.ಆರ್. ಡಾಲ್ಗಡೋ : Portuguese Vocables in Asiatic languages, Tr. by A.X. Soares, p. 437-8, 519-20
102. ಜೆ.ಎ. ಸಲ್ಡಾನ್ಹಾ : Konkani Castes, p. 105-118
103. ಜೆ. ಮೂರ್ ಎಸ್.ಜೆ., : The History of the Diocese of Mangalore, p. 46
104. ಎ. ಶಂಕರನ್ : A Descriptive Catalogue of the Kannada Manuscripts in the Government oriental Manuscripts library, Madras, Vol. IV, p. 939-940
105. ಅದೇ, ಪು. 940
106. ಟಿ.ಆರ್. ಡಿಸೋಜಾ : "Glimpses of Hindu Dominance of Goan Economy in the 17th Century", Indica, Vol. 12, ಮಾರ್ಚ್ 1975, p. 34
107. ಡಿ.ಬಿ. ತಾರಾಪೂರ್‌ವಾಲ್ : Malabar and the Portuguese 1500-1663, p. 208

# ಅಧ್ಯಾಯ 5

# ವೃತ್ತಿ ಸಂಘಗಳು ಹಾಗೂ ವ್ಯಾಪಾರ ಮತ್ತು ವಾಣಿಜ್ಯ

'ವೃತ್ತಿ'ಗೆ ಇತಿಹಾಸದಲ್ಲಿ ಮಾನವನಷ್ಟೇ ಪ್ರಾಚೀನತೆಯಿದೆ. ವ್ಯಕ್ತಿಯ ಜೀವನಾಧಾರ ವೃತ್ತಿ. ವೃತ್ತಿಯಿಲ್ಲದೆ ಬಾಳುವುದು ಬದುಕುವುದು ಸಾಧ್ಯವೇ ಇಲ್ಲ. ಹೀಗಾಗಿ ಚರಿತ್ರೆಯ ಆರಂಭದಿಂದಲೂ ಒಂದಿಲ್ಲೊಂದು ವೃತ್ತಿಯನ್ನು ಕೈಗೊಳ್ಳುವುದು ಮಾನವನಿಗೆ ಅನಿವಾರ್ಯವೂ ಅಗತ್ಯವೂ ಆಗಿದ್ದಿತು.

ಪ್ರಾಚೀನರ ಬದುಕು ತುಂಬ ಸೀಮಿತವಾದುದು; ಹಸಿವು, ನಿದ್ರೆ, ಮೈಥುನಗಳಿಗೆ ಪರಿಮಿತವಾದುದು. ಕಾಲಕ್ರಮೇಣ ಮಾನವನ ಬೌದ್ಧಿಕ, ಮಾನಸಿಕ ವಿಕಾಸವಾದಂತೆ ವೃತ್ತಿಗಳೂ ವಿಕಾಸಗೊಂಡವು. ಕುಟುಂಬ, ಸಮಾಜ, ಮಂಡಲ ರಾಷ್ಟ್ರಗಳ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದಂತೆ ನಿಸರ್ಗಜೀವಿಯಾದ ಮಾನವ ಸಮಾಜ ಜೀವಿಯಾದನು. ಆಗ ನೈಸರ್ಗಿಕ ವೃತ್ತಿಗಳೊಂದಿಗೆ ಸಾಮಾಜಿಕ ವೃತ್ತಿಗಳೂ ಬೆಳೆದು ಬರುವಂತಾದವು. ಇದರಿಂದ ವೃತ್ತಿಗಳು ಸರಳತೆಯಿಂದ ಸಂಕೀರ್ಣತೆಗೆ ಸರಿಯುತ್ತ ನಡೆದವು.

ಆಯಾ ಕಾಲ, ದೇಶಗಳಲ್ಲಿ ಮತ್ತು ಕಾಲ ದೇಶಗಳನ್ನೂ ದಾಟಿ ಬರುವಲ್ಲಿ ಈ ವೃತ್ತಿಗಳು ಸ್ವರೂಪ, ಸ್ವಭಾವಗಳಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಪಡೆದಿರಬಹುದು. ಇದಲ್ಲದೆ ಕೆಲವು ಪ್ರಧಾನ ವೃತ್ತಿಗಳು ಅನೇಕ ಉಪವೃತ್ತಿಗಳಿಗೆ ದಾರಿ ಮಾಡಿಕೊಟ್ಟಿರಬಹುದು. ಮುಂದೆ ಈ ಉಪವೃತ್ತಿಗಳಲ್ಲಿಯೇ ಮತ್ತೆ ಒಳ ವೃತ್ತಿಗಳು ಹುಟ್ಟಿಕೊಂಡಿರುವ ಸಾಧ್ಯತೆಯಿದೆ. ಇನ್ನು ಕೆಲವೊಂದು ಮುಖ್ಯ ವೃತ್ತಿಗಳು ಉಪ ವೃತ್ತಿಗಳಿಗೆ ಜನ್ಮ ನೀಡದೆ ಹಾಗೆಯೇ ಉಳಿದಿರಬಹುದು ಇಲ್ಲವೆ ನಾಶವಾಗಿ ಹೋಗಿರಬಹುದು.

ಆರಂಭದಲ್ಲಿ ಈ ವೃತ್ತಿಗಳೆಲ್ಲ ಆನುವಂಶಿಕವಾಗಿದ್ದವು. ಅಲ್ಲದೆ ಜಾತಿವಾಚಿ, ಧರ್ಮವಾಚಿಗಳಾಗಿರದೆ ವೃತ್ತಿವಾಚಿಗಳೆನಿಸಿದ್ದವು. ಕ್ರಮೇಣ ಇವು ಜಾತಿನಿಷ್ಠ, ಜನಾಂಗನಿಷ್ಠ, ಪ್ರದೇಶ ನಿಷ್ಠಗಳಾಗಿಯೂ ವರ್ಗನಿಷ್ಠವಾಗಿಯೂ ಬೆಳೆದುಬಂದವು.

ವ್ಯಕ್ತಿ, ಶ್ರಮಜೀವಿಯೂ ವೃತ್ತಿಜೀವಿಯೂ ಆದುದರಿಂದ ಶ್ರಮ ಮತ್ತು ವೃತ್ತಿಗಳು ಅವನ ಬದುಕಿನಲ್ಲಿ ಬೆಲೆಯುಳ್ಳ ಅಂಶಗಳಾಗಿವೆ. ಇವು (ಶ್ರಮ, ವೃತ್ತಿ) ಒಂದಕ್ಕೊಂದು ಪೂರಕವಾಗಿಯೂ ಪ್ರೇರಕವಾಗಿಯೂ ನಿಂತು ಅವನ ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿವೆ. ಪ್ರತಿಯೊಂದು ವೃತ್ತಿಗೂ ಶ್ರಮವೇ ಮೂಲ. ಆದುದರಿಂದ ಶ್ರಮವಿಲ್ಲದ ವೃತ್ತಿಗಳೇ ಇಲ್ಲವೆಂದು ಹೇಳಬಹುದು. ಶ್ರಮಭೇದದಿಂದ ವೃತ್ತಿಭೇದಗಳೂ ಉಂಟಾಗಿವೆ. ಈ ವೃತ್ತಿಗಳಿಗೆ ಗೌರವ ಸಂಪ್ರಾಪ್ತವಾಗುವುದಕ್ಕೆ 'ಶ್ರಮಗೌರವ'ವೇ ಕಾರಣವಾಗಿರಬೇಕು. ಒಟ್ಟಿನಲ್ಲಿ ಶ್ರಮ ಮತ್ತು ವೃತ್ತಿಗಳು ನಾಡಿನ ಆರ್ಥಿಕ ಜೀವನದ ನಾಡಿ ಎನಿಸಿದ್ದವು.

ವ್ಯಕ್ತಿ ಪ್ರಧಾನವಾಗಿರುವಂತೆ ವೃತ್ತಿ ಪ್ರಧಾನವೂ ಆಗಿದ್ದ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಮಾಜದಲ್ಲಿ ಇಂಥ ಅನೇಕ ವೃತ್ತಿಗಳು ಬೆಳೆದುಬಂದಿದ್ದವು.

ಕರ್ನಾಟಕದ ಈ ಎಲ್ಲ ವೃತ್ತಿಗಳನ್ನು ೧. ಉತ್ಪಾದಕ ವೃತ್ತಿ (Productive Professions) ೨. ವಿನಿಮಯ ವೃತ್ತಿ (Exchange Professions) ೩. ಉತ್ಪಾದಕ - ವಿನಿಮಯ ವೃತ್ತಿ (Productive cum Exchange Professiosn) ೪. ಇತರ ವೃತ್ತಿ (Other professions) ಎಂದು ವರ್ಗೀಕರಿಸಬಹುದು.

**೧. ಉತ್ಪಾದಕ ವೃತ್ತಿ :** ನೈಸರ್ಗಿಕ ಸಂಪನ್ಮೂಲ (Natural Resource)ಗಳಿಂದ ವಸ್ತುಗಳನ್ನು ಉತ್ಪಾದಿಸುವ ಕಸಬುಗಳೇ ಉತ್ಪಾದಕ ವೃತ್ತಿಗಳು. ಈ ವೃತ್ತಿಗಳನ್ನು ಮಾಡುವವರಿಗೆ ಭೂಮಿ (Land), ಶ್ರಮ (Labour), ಹಣರೂಪದ ಬಂಡವಾಳ (Money capital) ಮತ್ತು ಅವಶ್ಯವೆನಿಸುತ್ತವೆ. ಇವು ಇಲ್ಲದಿದ್ದರೆ ವಸ್ತುಗಳ ಉತ್ಪಾದನೆ ಆಗುವುದಿಲ್ಲ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಕಂಡುಬರುವ ಬೇಸಾಯ[1] ಮುಂತಾದ ವೃತ್ತಿಗಳು ಈ ಉತ್ಪಾದಕ ವೃತ್ತಿಯಲ್ಲಿ ಸಮಾವೇಶಗೊಳ್ಳುತ್ತವೆ. ಸಾಮಾಜಿಕ ನೆಮ್ಮದಿ, ಕೌಟುಂಬಿಕ ಜೀವನ, ನಾಡಿನ ಆರ್ಥಿಕ ಸುಭದ್ರತೆಗಳನ್ನು ಕಾಪಾಡಿಕೊಂಡು ಬರುವಲ್ಲಿ ಈ ಉತ್ಪಾದಕ ವೃತ್ತಿಗಳು ಹಿರಿದಾದ ಪಾತ್ರ ವಹಿಸಿವೆ.

**೨. ವಿನಿಮಯ ವೃತ್ತಿ :** ಉತ್ಪಾದಕ ವೃತ್ತಿಗಳು ಉತ್ಪಾದಿಸಿದ ವಸ್ತುಗಳನ್ನು ಜನರಿಗೆ (ಗ್ರಾಹಕರಿಗೆ) ಪೂರೈಕೆ (Distribution) ಮಾಡುವ ಕಾರ್ಯ ವಿನಿಮಯ ವೃತ್ತಿಗಳದು. ಇವು ಉತ್ಪಾದಕ (Producer) ಮತ್ತು ಗ್ರಾಹಕ (Consumer)ರ ನಡುವೆ ಸೇತುವೆಯಂತಿರುತ್ತವೆ. ಈ ಗುಂಪಿಗೆ ಸೇರುವಂತದು, ವ್ಯಾಪಾರವೃತ್ತಿ. ಈ ವೃತ್ತಿಯವರು ಶ್ರಮ (Labour), ಹಣರೂಪದ ಬಂಡವಾಳ (Money capital), ಸಂಘಟನೆ (Organization)ಗಳನ್ನು ಅವಲಂಬಿಸಬೇಕಾಗುತ್ತದೆ.

ಉತ್ಪಾದನೆಗೊಂಡ ವಸ್ತುಗಳು ಸರಿಯಾಗಿ ಪೂರೈಕೆಗೊಳ್ಳದಿದ್ದರೆ ಗ್ರಾಹಕರ ಬೇಡಿಕೆಗೆ ಪೆಟ್ಟು ಬಿದ್ದು ಸಮಾಜದಲ್ಲಿ ಅವ್ಯವಸ್ಥೆ, ನಾಡಿನಲ್ಲಿ ಆರ್ಥಿಕ ಬಿಕ್ಕಟ್ಟು ತಲೆದೋರಬಹುದು. ಆಗ ವಿನಿಮಯ ವೃತ್ತಿಗಳು ಈ ಪರಿಸ್ಥಿತಿಯ ವಿರುದ್ಧ ಹೋರಾಡಬೇಕಾಗುತ್ತಿತ್ತು. ಕಾರಣ ಈ ವಿನಿಮಯ ವೃತ್ತಿಗಳು ಒಂದು ತುದಿಯಲ್ಲಿ ಉತ್ಪಾದಕರ, ಇನ್ನೊಂದು ತುದಿಯಲ್ಲಿ ಗ್ರಾಹಕರ ಪ್ರಾಣ ಸ್ವರೂಪವಾಗಿರುತ್ತವೆಂದು ಹೇಳಬಹುದು.

**೩. ಉತ್ಪಾದಕ :** ವಿನಿಮಯ ವೃತ್ತಿ : ಉತ್ಪಾದನೆ ಹಾಗೂ ಪೂರೈಕೆ ಕಾರ್ಯಗಳೆರಡನ್ನೂ ಜೊತೆ ಜೊತೆಯಾಗಿ ನಿರ್ವಹಿಸುವ ವೃತ್ತಿಗಳಿವು. ಶಾಸನಗಳಲ್ಲಿ ಬರುವ ಕುರುಬ[2], ಮಾಲೆಗಾಂ[3], ತೆಲ್ಲಿಗ[4], ಪಟ್ಟಗಾರ[5], ಸಾಲಿಗ[6], ಜೇಡ[7], ಚಿಪ್ಪಿಗ[8], ಕಂಚಗಾರ[9], ಕುಂಬಾರ[10], ಕಂಬಾರ[11], ಬೋಗಾರ[12], ಅಕ್ಕಸಾಲಿ[13], ಮಾದಿಗ[14], ಮೇದ[15], ಸಮಗಾರ[16], ಬಡಗಿ[17] ಪದಗಳು ಉತ್ಪಾದಕ - ವಿನಿಮಯ ವೃತ್ತಿಯವರನ್ನು ವೃತ್ತಿಗಳನ್ನು ಸೂಚಿಸುತ್ತವೆ. ಉತ್ಪಾದನೆ ಮತ್ತು ವಿನಿಮಯವೆಂಬ ಉಭಯಘಟ್ಟಗಳಲ್ಲಿಯೂ ಕಾರ್ಯನಿರತರಾದ ಈ

ವೃತ್ತಿಯವರು ಮತ್ತು ವೃತ್ತಿಗಳು (ಉತ್ಪಾದಕ, ವಿನಿಮಯ ವೃತ್ತಿಗಳಿಗಿಂತ) ಅಧಿಕ ಲಾಭ ಪಡೆಯಲು ಸಾಧ್ಯ. ಈ ವೃತ್ತಿಯವರಿಗೂ ಭೂಮಿ (Land), ಶ್ರಮ (Labour), ಹಣರೂಪದ ಬಂಡವಾಳ (Money capital) ಮತ್ತು ಸಂಘಟನೆ (Organization)ಗಳೆಂಬ ನಾಲ್ಕು ಅಂಶಗಳ ಬೆಂಬಲ ಬೇಕಾಗುತ್ತಿತ್ತು.

ಒಟ್ಟಿನಲ್ಲಿ ಉತ್ಪಾದಕ ವೃತ್ತಿ, ವಿನಿಮಯ ವೃತ್ತಿ, ಉತ್ಪಾದಕ-ವಿನಿಮಯ ವೃತ್ತಿಗಳು ಒಂದಕ್ಕೊಂದು ಪೂರಕವಾಗಿರುತ್ತವೆಂದು ಹೇಳಬಹುದು. ಇವುಗಳಿಗೆ ಭಿನ್ನವಾದವುಗಳೇ ಇತರ ವೃತ್ತಿಗಳು.

೪. **ಇತರ ವೃತ್ತಿ :** ಉತ್ಪಾದಕ, ವಿನಿಮಯ, ಉತ್ಪಾದಕ-ವಿನಿಮಯ ವೃತ್ತಿಗಳಲ್ಲದೆ ಯೋಧ[18], ಅಗಸ[19], ನಾಯಿಂದ[20], ಶಿಲ್ಪಕರ್ಮ[21], ಸೂಳೆಗಾರಿಕೆ[22] ಮುಂತಾದ ಇತರ ವೃತ್ತಿಗಳು ಮಧ್ಯಯುಗೀನ ಕರ್ನಾಟಕದಲ್ಲಿದ್ದವು. ರಾಷ್ಟ್ರಕೂಟರ ಕಾಲದ ಶಾಸನಗಳಲ್ಲಿ ಈ ನಾಲ್ಕೂ ಬಗೆಯ ವೃತ್ತಿಗಳ ಉಲ್ಲೇಖ ಕಡಿಮೆಯಿದ್ದರೆ, ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಲ್ಲಿ ಅಧಿಕವಾಗಿದೆ.

ಹನ್ನೆರಡನೆಯ ಶತಮಾನದ ಶಿವಶರಣರು ಈ ಮತ್ತು ಇಂಥ ಬೇರೆ ನೂರಾರು ವೃತ್ತಿಗಳನ್ನು ಕಾಯಕದ ಮಟ್ಟಕ್ಕೇರಿಸಿ 'ವೃತ್ತಿ ಗೌರವ'ವನ್ನು ಒದಗಿಸಿಕೊಟ್ಟುದು ಐತಿಹಾಸಿಕ ಸಂಗತಿಯೆನಿಸಿದೆ.

ಇವುಗಳಲ್ಲಿ ಶರಣರ ಹೆಸರಿನ ಹಿಂದೆ ಇರುವ ಅಗ್ಘವಣಿ, ಅಂಬಿಗ, ಅವಸರ, ಆಯ್ದಕ್ಕಿ, ಉಗ್ಗಡಿಸು (ಕಾಯಕ), ಉಪ್ಪರಗುಡಿ (ಕಾಯಕ), ಎಚ್ಚರಿಕೆ (ಕಾಯಕ), ಎಲೆ ವ್ಯವಸಾಯ, ಒಕ್ಕಲುತನ, ಕದಿರು (ಕಾಯಕ), ಕನ್ನಡಿ (ಕಾಯಕ), ಕಿನ್ನರಿ, ಕೂಗು (ಕಾಯಕ), ಕೋಲು (ಕಾಯಕ), ಕೊತಾರ (ಕಾಯಕ), ಕೊಟ್ಟಣ, ಗಾಣ, ಢಕ್ಕೆ, ತಳವಾರ, ತುಱುಗಾಹಿ, ನಗೆನುಲಿ, ಬಹುರೂಪ, ಬಾಚಿ (ಕಾಯಕ), ಮಡಿವಳ, ಮಲಹರ, ಮಾದಾರ, ಮೇದಾರ, ರಾಯಸ. ವೈದ್ಯ, ಸತ್ತಿಗೆ (ಕಾಯಕ), ಸುಂಕ, ಸೂಜಿ (ಕಾಯಕ), ಹಡಪ - ಇವು ಶಿವಶರಣರ ವೃತ್ತಿಗಳನ್ನು ಸೂಚಿಸುವ ಪದಗಳಾಗಿವೆ. ಶಿವಶರಣರು ಈ ವೃತ್ತಿಗಳನ್ನು ಕಾಯಕದ ಮಟ್ಟಕ್ಕೇರಿಸಿದುದು ಈ ಕಾಯಕ ಜೀವಿಗಳು ರಚಿಸಿದ ವಚನಗಳಿಂದ ವ್ಯಕ್ತವಾಗುತ್ತದೆ.[23]

ಶಿವಶರಣರ ಈ ಕಾಯಕದ ಪ್ರಭಾವ ಅಂದಿನ ಮತ್ತು ಮುಂದಿನ ಕಾಲದ ಕೆಲವೊಂದು ವ್ಯಾಪಾರ ವೃತ್ತಿಯವರ ಮೇಲೆ ಆಗಿರಬಹುದು. ಕುರಗೋಡ ಶಾಸನದ[24]

**ಭಕ್ತಿಯ ಭಂಡಂ ಮೊದಲ್ ನಿಜ**
**ಭಕ್ತಿಯೆ ಕೋಟಾನುಕೋಟಿ ಲಾಭಂ ಶಿವಸ**
**ದ್ಭಕ್ತಿಯ ಬೆಳಸಿ...**
**ಭಕ್ತ ಕಲಿದೇಸೆಟ್ಟಿ ನೆಗಳ್ದಂ ಧರೆಯೊಳ್ ||**
**ಆತನ ಹೃದಯ ಕಮಲದೊಳ್ ಮನಃಪ್ರೇರಕಂ ಮಹಾದೇವಂ ಜೀವನಾಗಿರ್ಪ್ಪನೆನ್ತೆನೆ**
**ಚಿನ್ತಾಮಣಿ ಲಿಂಗಂ ಹೃದ**
**ಯಾನ್ತರದೊಳ್ನಿನ್ದು ಕಲ್ಲಿಸೆಟ್ಟಿಗೆ ದಯೆಯಿಂ**
**ದಿನ್ತು ನಡೆಯಿನ್ತು ನುಡಿಯೆಂ**
**ದಿನ್ತು ಸದಾ ಶಿಕ್ಷಿಸುತ್ತೆ ರಕ್ಷಿಸುತ್ತಿರ್ಪ್ಪಂ ||**

ಎಂಬ ಕಂದ, ಗದ್ಯ ಭಾಗಗಳು ಕ್ರಿ.ಶ. ೧೧೭೬ರಲ್ಲಿದ್ದ (ಕುರಗೋಡ) ಮುಂಮರಿದಂಡ ಕಲ್ಲಿಸೆಟ್ಟಿಯ ಮೇಲೆ ಶರಣರ ಕಾಯಕ ಆಂದೋಲನದ ದಟ್ಟ ಪ್ರಭಾವ ಆದುದನ್ನು ಹೇಳುತ್ತವೆ. ಇಂಥ ಉದಾಹರಣೆಗಳು ಶಾಸನಗಳಲ್ಲಿ ಲಭಿಸುವುದು ಅತ್ಯಂತ ವಿರಳ.

## 5.1. ವರ್ತಕರು ಮತ್ತು ವರ್ತಕ ಪ್ರಕಾರಗಳು :

ವ್ಯಾಪಾರವನ್ನು ಮತ್ತು ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡವರು ವರ್ತಕರು. ಭಾರತದಲ್ಲಿ ವೈದಿಕ ಸಾಹಿತ್ಯ ಮೊದಲುಮಾಡಿ ಇತಿಹಾಸದುದ್ದಕ್ಕೂ ಇವರ ಉಲ್ಲೇಖ ಕಂಡುಬರುತ್ತದೆ. ಆದರೆ ಕರ್ನಾಟಕದ ಶಾಸನಗಳಲ್ಲಿ ಮಾತ್ರ ಇವರ ಉಲ್ಲೇಖ ೭-ಅನೆಯ ಶತಮಾನದಿಂದ ಇಂದಿನವರೆಗೆ ವ್ಯಾಪಿಸಿ ನಿಂತಿದೆ. ಈ ಭಾರತೀಯ ವರ್ತಕರಲ್ಲಿಯಂತೆ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕರಲ್ಲಿಯೂ ಅನೇಕ ಪ್ರಕಾರಗಳಿದ್ದವು. ಇವರನ್ನು ವಿನಿಮಯ ವರ್ತಕರು ಮತ್ತು ಉತ್ಪಾದಕ-ವಿನಿಮಯ ವರ್ತಕರು ಎಂದು ವಿಭಾಗಿಸಿ, ವಿವೇಚಿಸಬಹುದು.

### ಅ. ವಿನಮಯ ವರ್ತಕರು

ಕೇವಲ ವ್ಯಾಪಾರ ವೃತ್ತಿಯನ್ನು ಮಾಡುವ ಶುದ್ಧ ವರ್ತಕರಿವರು. ಇವರಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಬರುವ "ಶ್ರೀಮದಯ್ಯಾವೊಳೆಯಯ್ನೂರ್ಬ್ಬಸ್ವಾಮಿಗಳುಮಾಮುಖ್ಯ ಶ್ರೀಮತು ಸಮಯ ಚಕ್ರವರ್ತಿ ಜಯ...ಯ್ಯ ಸೆಟ್ಟಿಯರುಂ ಸೋವಿಸೆಟ್ಟಿಯರುಂ ಮುಖ್ಯ ಎರಡುಱನೂಱಱೆಂಟುಂ ಪಟ್ಟಣದ ಸೆಟ್ಟಿಗುತ್ತರುಂ ಸ್ಥಳಸಮಸ್ತರುಂ ಮುಂಮಱಿದಂಡಂಗಳುಂ ಕೊಂಡಿ ಮೂಱುಸಾಸಿರದ ನಾಲ್ಕುಂ ಪಟ್ಟಣದ ಸೆಟ್ಟಿಗುತ್ತರುಂ ಸಮಸ್ತರುಂ ನಾನಾದೇಸಿಗ... ಗವಱಿಗಳುಂ ಗಾತ್ರಿಗರುಮಯ್ಯುತ್ತೊಕ್ಕಲುಂ ಸಮಸ್ತ ನಕರಂಗಳುಂ"[25] "ಶ್ರೀಮನ್ಮಹಾವಡ್ಡಬ್ಯವಹಾರಿಗಳುಂ... ನಾನಾದೇಸಿ ನಖರ.... ಮಿಂಡಗುದ್ದಲಿ..."[26] ".... ಕಾರೆಕಳದ ಹಲರುಂ ವುಭಯನಾನಾದೇಸಿಗಳುಂ"[27], "ಮೂಱುಕೇರಿಯ ಮೂವರು ಸೆಟ್ಟಿಕಾಱರೂ (ರುಂ), ನೂಱು ಅಯ್ವತ್ತು ಎಳಮೆ ಮುಂತಾಗಿ...."[28] ಎಂಬ ಉಲ್ಲೇಖಗಳಲ್ಲಿಯ 'ಉಂ' ಸಮುಚ್ಚಯದಿಂದ ಸೆಟ್ಟಿ ಸೆಟ್ಟಿಗುತ್ತ ನಕರ ಮುಂಮರಿದಂಡ ವಡ್ಡ ವ್ಯವಹಾರಿ ಗವಱೆ ಗಾತ್ರಿಗ ಸೆಟ್ಟಿಕಾಱ ಹಲರು ಎಳಮೆ ಬೇರೆಬೇರೆ ವಿನಿಮಯ ವರ್ತಕ ಪ್ರಕಾರದವರೆಂದು ಗೊತ್ತಾಗುತ್ತದೆ. ಆದುದರಿಂದ ಇವರೆಲ್ಲರನ್ನೂ ಪ್ರತ್ಯೇಕವಾಗಿ ಪರಿಗಣಿಸಬೇಕಾಗುತ್ತದೆ, ಪರಿಗಣಿಸಲಾಗಿದೆ.

ವೃತ್ತಿನಾಮದ ಮುಂದೆ ಸಂಖ್ಯೆ, ಸಂಘಸೂಚಿ ಪದಗಳಿಲ್ಲದ ಮೂಲಕ ಇವು ಸಂಘ ರಚಿಸಿಕೊಳ್ಳದ ವರ್ತಕ ಪ್ರಕಾರಗಳು. ಇಂಥ ಸೆಟ್ಟಿ-ಬಣಂಜಿಗ ಸೆಟ್ಟಿಗುತ್ತ ನಕರ ಮುಂಮುರಿದಂಡ ವಡ್ಡ ವ್ಯವಹಾರಿ ಗವರೆ ಗಾತ್ರಿಗ, ಸೆಟ್ಟಿಕಾರ, ಹಲರು ಎಳಮೆ ಸಾಲಿಕೆ ಬಲ್ಲಾಳು ಎಂಬ ವಿನಿಮಯ ವರ್ತಕ ಪ್ರಕಾರಗಳನ್ನು ಈಗ ಒಂದೊಂದಾಗಿ ಹೀಗೆ ಪರಿಶೀಲಿಸಬಹುದು:

ಸೆಟ್ಟಿ, ಬಣಂಜಿಗ : ಶ್ರೇಷ್ಠಿನ್, ವಣಿಜ ಸಂಸ್ಕೃತ ಪದಗಳ ಕನ್ನಡರೂಪ ಸೆಟ್ಟಿ, ಬಣಂಜಿಗ[29]. ಹೀಗಿದ್ದರೂ ಮೂಲದಲ್ಲಿ ಸೆಟ್ಟಿ, ಶ್ರೇಷ್ಠಿನ್ ಪ್ರತಿಷ್ಠಾಸೂಚಿ, ವಣಿಜ ವೃತ್ತಿ ಸೂಚಿ ಆಗಿರಬೇಕೆನಿಸುತ್ತದೆ. ಆಮೇಲೆ ಎರಡೂ ಪದಗಳು ವೃತ್ತಿವಾಚಿಯಾಗಿ ಪರಿಣಿಸಿರಬಹುದು. ಸೆಟ್ಟಿ, ಬಣಂಜಿಗ ಮೂಲತಃ ವೃತ್ತಿ ವಾಚಿಗಳಿದ್ದು ಕ್ರಮೇಣ ಜಾತಿಸೂಚಕವಾಗಿ ಬೆಳೆದವು. ಸೆಟ್ಟಿ, ಬಣಂಜಿಗ 'ವರ್ತಕ'ದ ಸಮಾನಾರ್ಥ ಶಬ್ದಗಳು. ವ್ಯಾಪಾರ ವೃತ್ತಿಯನ್ನು ಜೀವನೋಪಾಯದ ಸಾಧನವನ್ನಾಗಿಸಿಕೊಂಡವರು ಬಣಂಜಿಗ ಅಥವಾ ಸೆಟ್ಟಿಯರು. ಇವರು ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡೂ ತಲೆಯ ಮೇಲೆ ಹೊತ್ತುಕೊಂಡೂ ಹೋಗಿ ಸಂತೆ-ಪಟ್ಟಣಗಳಲ್ಲಿ ವ್ಯಾಪಾರ ಮಾಡುತ್ತಿದ್ದರು. ಸರಕನ್ನು ಎತ್ತಿನ ಮೇಲೆ ಹೇರಿಕೊಂಡು, ತಲೆಯ ಮೇಲೆ ಹೊತ್ತುಕೊಂಡು ಮಾರುವ ಸೆಟ್ಟಿಯರ ಚಿತ್ರವೊಂದು ಹೀಗಿದೆ.[30]

**ಸಾಕಾರವೆಂಬ ಶೆಟ್ಟಿ ಜೀವವೆಂಬ ಎತ್ತಿನ ಮೇಲೆ**
**ಎತ್ತಿ ಹೊಡೆಯಲಾಗಿ ಬಹುವಿಧ ಚರಿತ್ರದ**
**ಬೆವಹಾರದ ಒಡೆಯಂಗೆ ಕೊಡಿ,**
**ಕರಣಂಗಳೆಂಬ ಸರಕ ಹೊತ್ತು ಮಾರುವ ಸೆಟ್ಟಿಗಳೆಲ್ಲರೂ ಕೊಡಿ**
**ಬಂಕೇಶ್ವರಲಿಂಗಕ್ಕೆ ಸುಂಕವ**

ಸರಕು ಹೇರುತ್ತಿದ್ದುದರಿಂದ ಇವರು 'ಹೇಱುವ ಬಣಂಜಿಗ'[31], 'ಹೇಱುವ ಸೆಟ್ಟಿ'[32]ಯರೆನಿಸಿದರು. ಹೀಗೆ ಸರಕು ಹೇರುವ, ವ್ಯಾಪಾರ ಕಾರ್ಯ ನಿರ್ವಹಿಸುವ ವರ್ತಕರ ಗುಂಪಿಗೆ ಸೇರುತ್ತಾರೆ, ಸೆಟ್ಟಿ ಅಥವಾ ಬಣಂಜಿಗರು[33]. ಇದಲ್ಲದೆ ಎತ್ತಿನ ವಣಿಜರು[34], ಕೋಣನ ಸೆಟ್ಟಿ[35], ಕತ್ತೆಯ ಸೆಟ್ಟಿ[36], ಬಣಂಜಿಗ ಸೆಟ್ಟಿ[37]ಯರೆಂದೂ ಇವರು ಖ್ಯಾತರಾಗಿದ್ದಾರೆ.

ಈ ಸೆಟ್ಟಿಯರ ಉಗಮದ ಬಗೆಗೆ ವಾತುಲಾಗಮ ಹಾಗೂ ನಿರಂಜನವಂಶರತ್ನಾಕರಗಳು ನೀಡುವ ವಿವರಗಳನ್ನು ಹೀಗೆ ಸಂಗ್ರಹಿಸಬಹುದು. ಮೊದಲನೆಯದಾಗಿ ವಾತುಲಾಗಮದ ವಿಜಯ ಭೈರವಿ ಪಟಲದಲ್ಲಿ ಬರುವ ಪಂಚಸೆಟ್ಟಿ ಉತ್ಪತ್ತಿ:[38]

ಐಹೊಳೆ ಪಟ್ಟಣದ ಅಧಿಪತಿ ವೀರಗಂಧರ್ವ. ಸುಮತಾದೇವಿ ಈತನ ಪುಣ್ಯಾಂಗನೆ. ಈ ದಂಪತಿಗಳಿಗೆ ಹುಟ್ಟಿದ ಮಗಳು ಬಲಿದೇವಿ. ಗೋಮುಖಾಸುರನು ಒಂದು ಸಲ ಐಹೊಳೆ ಪಟ್ಟಣದ ಮೇಲೆ ದಂಡೆತ್ತಿ ಬಂದು ಮುತ್ತಿಗೆ ಹಾಕಿ, ವೀರಗಂಧರ್ವನನ್ನು ಬಂಧಿಸಿದನು. ಆಗ ವೀರಗಂಧರ್ವನ ಮಗಳಾದ ಬಲಿದೇವಿ ಗೋಮುಖಾಸುರನನ್ನು ಜಯಿಸಲು ಲಲಿತಾರಣ್ಯದಲ್ಲಿ ಉಗ್ರತಪಸ್ಸು ಕೈಕೊಂಡಳು. ಈಕೆಯ ತಪಸ್ಸಿಗೆ ಮೆಚ್ಚಿದ ಶಿವನು ತನ್ನ ಬಲದ ಕಂಕುಳದಲ್ಲಿ ಪಂಚಮುಖ ಗಣಾಧೀಶ್ವರನನ್ನು ಹುಟ್ಟಿಸಿದನು. ಆ ಪಂಚಮುಖ ಗಣಾಧೀಶ್ವರನು ತನ್ನ ಹುಟ್ಟಿನ ಕಾರಣವೇನೆಂದು ಶಿವನನ್ನು ಕೇಳಲು, ಶಿವನು "ಎಲೆ ಗಣಾಧೀಶ್ವರನೆ ಭೂಲೋಕದಲ್ಲಿ ವೀರಗಂಧರ್ವರಾಯನ ಮಗಳಾದ ಬಲಿದೇವಿ ಮಹಾರಾಣಿಯು ದಾನವನ ಜಯಿಸಲೆಂದು ಉಗ್ರ ತಪದಿಂದಲಿರುತಿಹಳು. ನೀನು ಆ ದಾನವನ ವಧಿಸಲಾಗಿ ವೀರಗಂಧರ್ವ ತನ್ನ ಪುತ್ರಿಯ ವಿವಾಹಂ ಮಾಡುವನವಳೊಡನೆ ಸುಖದಿಂದಿರು, ಶಿವಾಚಾರಮಂ ಪ್ರತಿಷ್ಠಾಪಿಸುವುದು" ಎಂದು ನಿಯಮಿಸಿ ಕಳುಹಿಸಿದನು.

ಆಮೇಲೆ ಗಣಾಧೀಶ್ವರನು ಶಿವನ ಆಜ್ಞೆಯಂತೆ ಭೂಲೋಕಕ್ಕೆ ಬಂದು ಗೋಮುಖಾಸುರನನ್ನು ಸಂಹರಿಸಿ, ವೀರಗಂಧರ್ವನನ್ನು ಬಂಧಮುಕ್ತಗೊಳಿಸಿದನು. ತರುವಾಯ ವೀರಗಂಧರ್ವ ತನ್ನ ಮಗಳಾದ ಬಲಿದೇವಿಯನ್ನು ಗಣಾಧೀಶ್ವರನಿಗೆ ಕೊಟ್ಟು ಮದುವೆ ಮಾಡಿದನು. ಸುಖದಿಂದ ಕಾಲ ಕಳೆಯುತ್ತಿದ್ದ ಪಂಚಮುಖಗಣೇಶ್ವರ, ಬಲಿದೇವಿಯರಿಗೆ ಮುಖಾಲಿಯೆಂಬ ಮಗ ಜನಿಸಿದನು. ಬೆಳೆದು ದೊಡ್ಡವನಾದ ಮುಖಾಲಿ ಒಂದು ದಿನ ತಾನು ನೆರವೇರಿಸುವ ಕಾರ್ಯಗಳಾವುವು ? ಎಂದು ತಂದೆಯನ್ನು ಪ್ರಶ್ನಿಸಿದ. ಆಗ ಗಣಾಧೀಶ್ವರನು "ಏ ಗಣಾಧೀಶ್ವರನೆ ನೀನೀ ಛಲವಾದಿಯಂ ಕೂಡಿಕೊಂಡು ನಾಗಲೋಕಕ್ಕೆ ಹೋಗಿ ಶುಭ ಕಾರ್ಯಗಳಿಗೆ ಮುಖ್ಯವಾದ ವಸ್ತುಗಳಂ ತಾರೆಂದೆನಲು ಅವಾವೆಂದರೆ ನಾಗವಲ್ಲಿ, ಕರತಾಳಿ, ಅಡಕೆ, ತೆಂಗು, ಅರಿಸಿನ". ತಂದೆಯ ಆಜ್ಞೆಯಂತೆ ಮುಖಾಲಿ ನಾಗಲೋಕಕ್ಕೆ ಹೋಗಿ ನಾಗರಾಜನೊಡನೆ ಯುದ್ಧಮಾಡಿ, ಆತನನ್ನು ಪರಾಜಯಗೊಳಿಸಿದನು. ಈತನ ಪರಾಕ್ರಮವನ್ನು ಮೆಚ್ಚಿದ ನಾಗರಾಜ (ಆದಿಶೇಷ)ನು ತನ್ನ ಮಗಳು ಫಣಾಮಣಿಯನ್ನು ಮುಖಾಲಿಗೆ ಕೊಟ್ಟು ಮದುವೆ ಮಾಡಿದನು. ಆಮೇಲೆ ನಾಗರಾಜನು ಮೇಲಿನ ಐದು ವಸ್ತುಗಳನ್ನು ಸಂತೋಷದಿಂದ ಕೊಟ್ಟು ಅಳಿಯನನ್ನು ಕಳಿಸಿದನು. ಹೀಗೆ ಮುಖಾಲಿಯು ಫಣಾಮಣಿಯೊಂದಿಗೆ ಭೂಲೋಕಕ್ಕೆ ಬಂದು ತಂದೆಗೆ ವಂದಿಸಿದನು. ಆಗ ತಂದೆ ಪಂಚಮುಖ ಗಣಾಧೀಶ್ವರನು "ಎಲೆ ಮುಖಾಲಿ ಗಣಾಧೀಶ್ವರನೇ ನೀ ಭೂಲೋಕದಲ್ಲಿ ಪ್ಯಾಟೆಪಟ್ಟಣಗಳಂ ಕಟ್ಟಿಸಿ, ಶಿವಾಚಾರಸಂಪನ್ನನಾಗಿ ಅಷ್ಟಾವರಣನಿಷ್ಠನಾಗಿ ಮಾಯಾವಾದಿಗಳ ಮಸ್ತಕಶೂಲನೆನಿಸಿ, ದುಷ್ಟನಿಗ್ರಹ ಶಿಷ್ಟಪರಿಪಾಲಕನಾಗಿ ಮಲೆತವರ ಮರ್ದಿಸಿ ಮರೆಹೊಕ್ಕವರ ಕಾಯ್ದು ಏಕವಾಕ್ಯ ಪರಿಪಾಲಕನಾಗಿರು" ಎಂದು ನಿರೂಪಿಸಿ ಕೈಲಾಸಕ್ಕೆ ಹೋದನು. ಅನಂತರ ಮುಖಾಲಿ-ಫಣಾಮಣಿ ದಂಪತಿಗಳಿಗೆ ನಾಡಾನಾಳುವ ಸೆಟ್ಟಿ, ಸೆಟ್ಟಿಗುತ್ತ, ಮಹಾಜನಸೆಟ್ಟಿ, ಪಟ್ಟಣಸೆಟ್ಟಿ, ಮಿಂಡಗುದ್ದಲಿಸೆಟ್ಟಿಯರೆಂಬ ಐದು ಜನ ಮಕ್ಕಳಾದರು.

ಇವರಲ್ಲಿ "ಹಿರಿಯಾತಂಗೆ ನಾಡನಾಳುವಸೆಟ್ಟಿಯೆಂದು ಹೆಸರಿಟ್ಟು ದೇಶದ ದೈವಕ್ಕೆ ಲೇಸು ಮೋಸದ ಪ್ರಸಂಗ ಬಿದ್ದಲ್ಲಿ ರಾಜಾಸ್ಥಾನಕ್ಕೆ ಹೋಗಿ ನಿರ್ವಹಿಸಿಕೊಂಡು ಇರು ಎಂದು ನಿಯಮಿಸಿದನು. ಎರಡನೆಯ ಪುತ್ರಂಗೆ ಸೆಟ್ಟಿಗುತ್ತನೆಂಬ ಹೆಸರಿಟ್ಟು ನೀನು ಕೌಲು ಕಾರ್ಯಮಂ ಕೊಟ್ಟು ವ್ಯಾಪ್ತಿ (ವಾಪಿ ?) ಪಟ್ಟಣಮಂ ಕಟ್ಟಿಸಿ ಹಿರಿಯತನವಂ ಮಾಡುತಿರುಯೆಂದು ನೇಮಿಸಿದರು. ಮೂರನೆಯಾತಂಗೆ ಮಹಾಜನಸೆಟ್ಟಿಯೆಂಬ ಹೆಸರಿಟ್ಟು ಸೆಟ್ಟಿಗೂಡ ದೈವಕ್ಕು ಮಾತು ಬಿದ್ದಲ್ಲಿ ಅವರವರ ಒಡಂಬಡಿಕೆ ಪ್ರಸಂಗದಲ್ಲಿರುವುದೆಂದು ನಿಯಮಿಸಿದನು. ನಾಲ್ಕನೆಯವನಿಗೆ ಪಟ್ಟಣ ಸೆಟ್ಟಿಯೆಂದು ಹೆಸರಿಟ್ಟು ದೈವದಿವಾಣದ ಬಿಟ್ಟಿಬಿರಾಡ ಬ್ಯಾಗಾರಿ ಮೊದಲಾದ ಊಳಿಗ ತೀರಿಸುತ್ತಿರುವೆಯೆಂದು ನಿಯಮಿಸಿದನು. ಐದನೆಯಾತಂಗೆ ಮಿಂಡಗುದ್ದಲಿಸೆಟ್ಟಿಯೆಂದು ಹೆಸರಿಟ್ಟು ನೀನು ತೋಟಗದ್ದೆ ಹೊಲ ಮೊದಲಾದವಂ ಬಿತ್ತಿ ಹದಿನೆಂಟು ಧಾನ್ಯ ಬೆಳೆವುದಕ್ಕೆ ಕಾರಣನಾಗಿರುಯೆಂದು ನಿಯಮಿಸಿದನು" ಪೂರ್ವೋಕ್ತ ಪಂಚಮುಖ ಗಣಾಧೀಶ್ವರನೇ ಕೋರಿಸೆಟ್ಟಿ, ಆತನ ಪುತ್ರ ಮುಖಾಲಿಗಣಾಧೀಶ್ವರನೇ ವಾಲಿಸೆಟ್ಟಿ. ಇವರದು ವಾಣಿಜ್ಯ ಕಾಯಕ, ಶಿವಕುಲ, ನಂದೀಶ್ವರಗೋತ್ರ, ವೀರಶೈವಾಚಾರ, ಪ್ರಥಮಗಣಂಗಳ ವರ್ತನೆ ಆಗಿದ್ದಿತು.

ಅಯ್ಯವಳ್ಳಿ ಪುರಾಧೀಶ್ವರನಾದ ಪಂಚವಕ್ತ್ರಗಣವರನಿಂದ ಪಂಚವಾಣಿಜರು ಜನಿಸಿದರು. ಇವರ ಹೆಸರು "ಕೋರಿಶೆಟ್ಟಿ ೧. ಮಹಾನಾಡಶೆಟ್ಟಿ ೨. ವಾಲಿಶೆಟ್ಟಿ ೩. ಪಟ್ಟಣಶೆಟ್ಟಿ ೪. ಮಿಂಡಗುದ್ದಲಿಶೆಟ್ಟಿ ೫. ಇವರಲ್ಲದೆ ಗಣವರನಿಂದ ಗುಡಾರಶೆಟ್ಟಿ, ಬಣಕಾರಶೆಟ್ಟಿ, ಗುಣಹಾರಿಶೆಟ್ಟಿ ಎಂಬ ಮೂರು ವಾಣಿಜರು ಹುಟ್ಟಿದರು. ಈ ಅಷ್ಟವಾಣಿಜರು ಅವರವರ ಕಸುಬುಗಳನ್ನು ಮಾಡುತ್ತ ಈಗ ಇದ್ದಾರೆ.... ಇವರೊಳಗೆ ಪಂಚವಾಣಿಜರೆ ಪ್ರಸಿದ್ಧರಾದರು. ಇವರ ಕಸುಬಿನ ವಿವರವು, ಕೋರಿಶೆಟ್ಟಿಯು ಬಸವನ ಮುದ್ರೆ, ಮುರಿಗೆದೊಣ್ಣೆ, ಸರ್ವಸಂಬಾರದ ಹಸುಬೆ ಇವುಗಳಿಂದ ವ್ಯಾಪಾರವಂ ಮಾಡಿ ತನ್ನ ಕುಟುಂಬ ಸಂರಕ್ಷಣೆ ಮುಂತಾದ ಜಂಗಮಾರ್ಚನೆ ತೃಪ್ತಿಮಾಡುವುದು. ಮಹಾನಾಡಶೆಟ್ಟಿಯು ದೇಸಾಯಿ, ದೇಶಮುಖ, ನಾಡಗೌಡ, ನಾಡಕರಣಿಗಳಾಗಿ ಕುಟುಂಬ ಸಂರಕ್ಷಣೆ ಜಂಗಮಾರ್ಚನೆ ತೃಪ್ತಿ ಮಾಡುವುದು. ವಾಲಿಶೆಟ್ಟಿಯು ಬಾಸಿಂಗ ಮಹಾಲು ಮಂಟಪ ಮುಂತಾದ ಚಿತ್ರಕೆಲಸಂಗಳಂ ಮಾಡಿ ಕುಟುಂಬ ರಕ್ಷಣೆ ಮುಂತಾದ ಗುರುಲಿಂಗಜಂಗಮಾರ್ಚನೆ ತೃಪ್ತಿಯಂ ಮಾಡುವುದು. ಮೆ (ಮಿ)ಡಗುದ್ದಲಿಶೆಟ್ಟಿಯು ಹೊಲತೋಟಗಳನ್ನು ಮಾಡಿ ಕುಟುಂಬ ರಕ್ಷಣೆಯಂ ಮಾಡಿ ಗುರುಲಿಂಗಜಂಗಮಾರ್ಚನೆ ತೃಪ್ತಿಯಂ ಮಾಡುವುದು. ಇನ್ನುಳಿದ ತ್ರಿವಾಣಿಜರಾದ ಗುಡಾರದ ಶೆಟ್ಟಿಯು ಶಾಲು, ಸಕಲಾತಿ ಮುಂತಾದ ಜವಳಿಗಳ ತರಿಸಿ ವ್ಯಾಪಾರವಂ ಮಾಡಿ ಕುಟುಂಬ ರಕ್ಷಣೆ ಮುಂತಾದ ಗುರುಲಿಂಗಜಂಗಮಾರ್ಚನೆ ತೃಪ್ತಿಯಂ ಮಾಡುವುದು. ಬಣಕಾರನೆಂಬ ಬಣಜಿಗಸೆಟ್ಟಿಯು ಕುಲಾಲ ರಜಕ ಮುಂತಾದ ೧೮ ಕುಲದ ಬಣಕ್ಕೆ ಸಖನಾಗಿ ಕೋಮಟಗಿ ಬೋಗಾರ ಪಾಂಚಾಳದವರು ಮುಂತಾದ ಒಂಬತ್ತು ಬಣದವರಿಗೆ ವಿರೋಧಿಯಾಗಿ ೧೮ ಕುಲ, ನೂರಾ ಒಂದು ಜಾತಿ, ನಾಲ್ಕು ವರ್ಣದವರಿಗೆ ನಿಷ್ಪಕ್ಷಪಾತಿಯಾದ ನ್ಯಾಯಾಧೀಶನಾಗಿ ಅನೇಕ ವ್ಯವಹಾರದಿಂದ ತನ್ನ ಕುಟುಂಬ ರಕ್ಷಣೆ ಮುಂತಾದ ಗುರುಲಿಂಗಜಂಗಮಾರ್ಚನೆ ತೃಪ್ತಿಯಂ ಮಾಡುವುದು. ಈ ಬಣದಶೆಟ್ಟಿಗೆ ಜನಿಸಿದ ಶೆಟ್ಟಿಗಳಿಗೆ ಬಣಜಿಗರೆಂಬ ನಾಮವಾಯಿತು. ಗುಣಹಾರಿಶೆಟ್ಟಿಯು ಸದ್ಗುಣಸಂಪನ್ನನಾದ ಕಾರಣ ಇವನಿಗೆ ಪಂಚಮರಾದ ಶೆಟ್ಟಿಗಳು ತಮ್ಮೊಳಗೆ ಯಜಮಾನತ್ವವಂ ಕೊಟ್ಟರು. ಈ ಯಜಮಾನನಾದ ಶೆಟ್ಟಿಯು ವ್ಯವಹಾರವಂ ಮಾಡಿ ತನ್ನ ಕುಟುಂಬವ ರಕ್ಷಿಸಿಕೊಂಡು ಗುರುಲಿಂಗಜಂಗಮಾರ್ಚನೆ ಗಣ ತೃಪ್ತಿಯಂ ಮಾಡುವುದು. ಕಾರಣ ಪೇಟೆ ಮನೆಗಳಲ್ಲಿ ಶೆಟ್ಟಿ ಯಜಮಾನರೆಂಬವರು ಇದ್ದಾರೆ. ಸಕಲ ಸೀಮೆಗಳಲ್ಲಿ ಗಣವರನ ವಂಶಸ್ಥರಾದ ಅಷ್ಟವಾಣಿಜರ ವಂಶಸ್ಥರು ತಮ್ಮ ತಮ್ಮ ಕಸುಬುಗಳ ಮಾಡುತ್ತ ದೇಶಗಳಲ್ಲಿರುವುದೇ ಸಾಕ್ಷಿಯು"

ಮೇಲಿನ ಎರಡೂ ಕತೆಗಳು ಒಂದೇ ಆಗಿದ್ದರೂ ವಿವರಣೆಯಲ್ಲಿ ಗಮನಾರ್ಹ ವ್ಯತ್ಯಾಸ ಹೊಂದಿದುದು ಕಂಡುಬರುತ್ತದೆ. ಈ ಕತೆಗಳಲ್ಲಿ ಬರುವ ವೀರಗಂಧರ್ವ, ಬಲಿದೇವಿ, ಪಂಚ ಮುಖಗಣಾಧೀಶ್ವರ, ಮುಖಾಲಿ, ಫಣಾಮಣಿಯರು ಐತಿಹಾಸಿಕ ವ್ಯಕ್ತಿಗಳಲ್ಲ. ಹೀಗಾಗಿ ಸೆಟ್ಟಿ ಅಥವಾ ಬಣಜಿಗರ ಪ್ರಾಚೀನತೆಯನ್ನು ಹೇಳಲು ಹುಟ್ಟಿಕೊಂಡ ಕಥೆಗಳಿವೆಂದು ಅನಿಸುತ್ತದೆ. ಹೀಗಿದ್ದರೂ ಕಥೆ ಹುಟ್ಟಿದ ಕಾಲದಲ್ಲಿದ್ದ ನಾಡನಾಳುವ ಸೆಟ್ಟಿ,

ಸೆಟ್ಟಿಗುತ್ತ, ಪಟ್ಟಣಸೆಟ್ಟಿ, ಮಹಾಜನಸೆಟ್ಟಿ, ಮಿಂಡಗುದ್ದಲಿಸೆಟ್ಟಿ, ಕೋರಿಸೆಟ್ಟಿ, ವಾಲಿಸೆಟ್ಟಿ, ಗುಡಾರದ ಸೆಟ್ಟಿ, ಬಣಕಾರಸೆಟ್ಟಿ, ಗುಣಹಾರಿಸೆಟ್ಟಿಯರ ಸಾಮಾಜಿಕ ಸ್ಥಾನಮಾನ-ಕರ್ತವ್ಯಗಳು ಮಾತ್ರ ವಾಸ್ತವವೆನಿಸುತ್ತವೆ.

ಜೊತೆಗೆ ಶಿವನ ಸದ್ಯೋಜಾತಮುಖದಿಂದ ಹಸುಬೆಸೆಟ್ಟಿ, ವಾಮದೇವಮುಖದಿಂದ ವಾಲಿಸೆಟ್ಟಿ, ಅಘೋರಮುಖದಿಂದ ಸಂಗಮಸೆಟ್ಟಿ, ತತ್ಪುರುಷಮುಖದಿಂದ ಭೂಸುರಸೆಟ್ಟಿ, ಈಶಾನ್ಯ ಮುಖದಿಂದ ಭಾರಮಾರ್ಗದ ಸೆಟ್ಟಿಯರು ಹುಟ್ಟಿದರೆಂಬ ಇನ್ನೊಂದು ಬಗೆಯ ಪೌರಾಣಿಕ ಕತೆಯೂ ಹಸ್ತಪ್ರತಿಯೊಂದರಲ್ಲಿದೆ.[39]

ಒಟ್ಟಿನಲ್ಲಿ ಇವು ವೀರಶೈವದ ಹಿನ್ನೆಲೆಯಲ್ಲಿ ಸೆಟ್ಟಿಯರ ಉಗಮದ ಪ್ರಾಚೀನತೆಯನ್ನು ಕಂಡುಕೊಳ್ಳಲು ನಡೆಸಿದ ಪ್ರಯತ್ನಗಳಿವು. ಹೀಗಾಗಿ ಈ ಕತೆಗಳ ಆಧಾರಗಳಿಂದ ಸೆಟ್ಟಿಯರ ನಿಜವಾದ ಮೂಲ ಮತ್ತು ಮೂಲಪುರುಷರನ್ನು ಗುರುತಿಸುವುದು ಸಾಧುವೂ ಅಲ್ಲ, ಸಮಂಜಸವೂ ಅಲ್ಲವೆನಿಸುತ್ತದೆ. ಆದರೆ ಆ ಸಮಯದಲ್ಲಿದ್ದ ವರ್ತಕ ಪ್ರಭೇದ, ಅವರು ಸಮಾಜದಲ್ಲಿ ಹೊಂದಿದ್ದ ಸ್ಥಾನಮಾನ, ನಿರ್ವಹಿಸುತ್ತಿದ್ದ ಕಸಬುಗಳ ಮಾಹಿತಿ ಮಾತ್ರ ಬೆಲೆಯುಳ್ಳುದಾಗಿದೆ.

'ಬಣಂಜಿಗ' ಪದಕ್ಕೆ ಸಂಬಂಧಿಸಿದ ವೀರಬಣಂಜಿಗ ಮತ್ತು ವೀರವಣಿಗ ಸಮಾನಾರ್ಥಪದಗಳೆಂದು ತೋರುತ್ತದೆ. ಶೈವಕ್ಕೆ ಉಪಾಧಿಯಾಗಿದ್ದಂತೆ ಬಣಂಜುಪದಕ್ಕೂ 'ವೀರ' ಎಂಬುದು ಉಪಾಧಿಯಾಗಿದೆ. ಇದನ್ನು ಗಮನಿಸಿ ವೀರಬಣಂಜುದವರೇ ವೀರಶೈವರಾದರೆಂದು ಕೆಲವರು ಊಹಿಸುತ್ತಾರೆ.[40] ಇದಕ್ಕೆ ಹೇಳಿಕೊಳ್ಳುವ ಆಧಾರಗಳಿಲ್ಲ. ಆದರೆ 'ವೀರಬಣಂಜು' ಶಬ್ದ ಶರಣರ ಕಾಲವಾದ ೧೨ನೆಯ ಶತಮಾನದ ಎಡಬಲದಲ್ಲಿ ದಟ್ಟವಾಗಿ ಉಲ್ಲೇಖಗೊಂಡಿರುವುದನ್ನು ಗಮನಿಸಬೇಕು. ಶಾಸನಗಳಲ್ಲಿ ಬೀರವಣಿಗರ ಹೆಸರಿನ ಮುಂದೆ 'ನಾಯಕ' ಎಂಬುದು ಬರುವುದರಿಂದ ಇವರು ವ್ಯಾಪಾರಿಗಳಾಗಿರದೆ, ಅಧಿಕಾರಿಗಳಾಗಿದ್ದರೆಂದೂ ಅದರಲ್ಲಿಯೂ "ಇಱೆದವನೆ ಬೀರವಣಿಗ"[41] ಎಂಬ ಶಾಸನವಾಕ್ಯದಿಂದ ವೀರವೃತ್ತಿಯುಳ್ಳವರಾಗಿದ್ದರೆಂದೂ ಊಹಿಸಬಹುದಾಗಿದೆ. ಶಾಸನಗಳಲ್ಲಿ ಉಕ್ತರಾದ ಮಲ್ಲಿದೇವ[42], ದೊಹೆಯ ನಾಯಕ[43], ದೊಳರಸ, ಬಾಚೆಯ ನಾಯಕ, ಹಬ್ಬೆಯ ನಾಯಕ ಬೀರವಣಿಗರಾಗಿದ್ದಾರೆ.

'ವಣಿಜಸ್ವಾಮಿಯ್ನೂರ್ವರು'[44], 'ಬಣಂಜಿಗರಯ್ನೂರ್ವರು'[45] ಎಂಬಿವು ಕುರಗೋಡ, ನಲಗುಂದ ಗ್ರಾಮಗಳ ಬಣಂಜಿಗರು ಕಟ್ಟಿಕೊಂಡ ಸಂಘವನ್ನೂ ಅದರ ಸದಸ್ಯರನ್ನೂ ಸೂಚಿಸುವಂತಿವೆ. ಹೀಗೆ ಶಾಸನಗಳಲ್ಲಿ ಇಂಥ ಉಲ್ಲೇಖಗಳು ಅಲ್ಪಸಂಖ್ಯೆಯಲ್ಲಿವೆ. (೨ ಮಾತ್ರ). ಕಾರಣ ಇವು ಸಾರ್ವತ್ರಿಕ ವರ್ತಕ ಸಂಘಗಳಲ್ಲ, ಗ್ರಾಮಸೀಮಿತ ಬಣಜಿಗರ ಸಂಘ. ಇಲ್ಲವೆ ಬಣಂಜಿಗರು 'ಅಯ್ಯಾವೊಳೆ ಐನೂರ್ವರು' ವರ್ತಕಸಂಘದ ವಂಶಸ್ಥರೋ, ಸಂಪ್ರದಾಯದವರೋ ಎಂಬುದನ್ನು ಇವು ಹೇಳುತ್ತಿರಬಹುದು.

ಬಣಜ[46], ಬಳಂಜು[47], ಬಳಂಜಿಗರು[48] ರೂಪಗಳೂ ಶಾಸನಗಳಲ್ಲಿವೆ. 'ತಳಬಣಂಜಿಗರು', 'ತಳದ ಬಣಂಜಿಗರು', 'ಸ್ಥಾನ ಬಣಂಜಿಗರು', 'ತಳದ ಸೆಟ್ಟಿಯರು', 'ತಲಸೆಟ್ಟಿಯರು'[49] ಎಂಬ ಪ್ರಯೋಗಗಳು ಸ್ಥಳೀಯ

ವರ್ತಕರನ್ನು ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ 'ತಳದೊಕ್ಕಲು'[50], 'ತಳದವರು'[51] ಎಂಬ ಪದಗಳೂ ಇವರನ್ನೇ ನಿರ್ದೇಶಿಸುತ್ತಿರಬೇಕೆನಿಸುತ್ತದೆ.

'ನಾಲ್ಕು ಪಟ್ಟಣದ ಸೆಟ್ಟಿಯರು' (ಬೆಳಗಲೆ ಮುಖ್ಯ) ನಾಲ್ಕು ಪಟ್ಟಣದ ಪಟ್ಟಣಿಗರು'[52] ಎರಡು ಸಾವಿರ ವರ್ತಕರು' ಪಟ್ಟಣದ ವರ್ತಕರು'[53] ಎಣ್ಬರ್ ಸೆಟ್ಟಿಯರು'[54], 'ನಾಲ್ಕೂರ ಸೆಟ್ಟಿ'[55], 'ಅಯ್ವರ್ ಸೆಟ್ಟರು'[56] ಉಲ್ಲೇಖಗಳಿಂದ ಆಯಾ ಗ್ರಾಮ ಮತ್ತು ಪ್ರದೇಶಗಳ ವರ್ತಕರ ಸಂಖ್ಯೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

'ಪದಿನಜುವರುಂ'[57], 'ಎಂಟುನಾಡ ಪದಿನಜುವರುಂ'[58] ಶಬ್ದಗಳು ಎಂಟುನಾಡಿನ ೧೬ ಜನ ಸೆಟ್ಟಿಯರನ್ನು ಹೇಳುತ್ತವೆ. ಧಾರವಾಡ ಜಿಲ್ಲೆಯ ಹನಮನಹಾಳ[59], ಸಂಸಿ, ಹುಯಿಲ ಗೋಳ[60], ಹಾನಗಲ್ಲ[61]; ವಿಜಾಪುರ ಜಿಲ್ಲೆಯ ಕಡ್ಲೇವಾಡ[62], ಮನಗೂಳಿ, ಅಗರಖೇಡ[63], ಯರಗಲ್ಲ[64], ಬೆಳಗಾವಿ ಜಿಲ್ಲೆಯ ಬೆಡಕಿಹಾಳ[65]; ಬಳ್ಳಾರಿ ಜಿಲ್ಲೆಯ ಹೊಳಲ[66]; ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ[67]; ಕೋಲಾರ ಜಿಲ್ಲೆಯ ಸೋಮಾಂಬುಧಿ[68], ಮಹಾರಾಷ್ಟ್ರದ ಮಿರಜ[69] ಶಾಸನಗಳಲ್ಲಿ ಮಾತ್ರ ಈ 'ಎಂಟುನಾಡ ಪದಿನಜುವರು' ಪದವಿದೆ.

ಶಾಸನಗಳು ಹೇಳುವ ಕಂನಿಸೆಟ್ಟಿ[70], ಮಾಧವಸೆಟ್ಟಿ[71], ಅಯಣಸೆಟ್ಟಿ[72], ಕೇತಮಲ್ಲಸೆಟ್ಟಿ[73], ತ್ರೈಲೋಕ್ಯಮಲ್ಲಸೆಟ್ಟಿ[74], ಬಮ್ಮಿಸೆಟ್ಟಿ[75], ವೆಸಪಯ್ಯಸೆಟ್ಟಿ[76], ಬಾಚಿಸೆಟ್ಟಿ[77], ಭೂತಿಸೆಟ್ಟಿ[78], ಬೀಚಿಸೆಟ್ಟಿ[79], ಬೆಟಪ್ಪಸೆಟ್ಟಿಯರು[80] ಅನುಕ್ರಮವಾಗಿ ಗಂಗ, ನೊಳಂಬ, ಕಲ್ಯಾಣ ಚಾಲುಕ್ಯ (ತೈಲಪ, ತ್ರೈಲೋಕ್ಯಮಲ್ಲ) ಶಿಲಾಹಾರ (ಗಂಡರಾದಿತ್ಯ), ಯಾದವ (ಸಿಂಗಣ, ಪೆರ್ಮಾಡಿ ೧೧೪೧), ಹೊಯ್ಸಳ (ವಿಷ್ಣುವರ್ಧನ), ವಿಜಯನಗರ (ಕೃಷ್ಣದೇವರಾಯ) ಅರಸರಲ್ಲಿ ವರ್ತಕರಾಗಿದ್ದರು.

ಕೆಲವರು ವರ್ತಕರು ವಿವಿಧ ಅಧಿಕಾರ - ಹುದ್ದೆಗಳ ಹೊಣೆ ಹೊತ್ತುಕೊಂಡಿರುವುದನ್ನು ಶಾಸನಗಳು ಸೂಚಿಸುತ್ತವೆ. ಉಂಡಿಗೆ[81], ವಜ್ರಭಂಡಾರ[82], ಮುದ್ರಾವಣ[83], ಅಚ್ಚಿನಕೇಣಿ[84], ಬೊಕ್ಕಸ[85], ಮಳಿಗೆ[86], ದುಗ್ಗಾಣಿ (?)[87] ಇವುಗಳ ಅಧಿಕಾರಿಗಳಾಗಿದ್ದವರು ದಮ್ಮಿಸೆಟ್ಟಿ, ಲಕಿಮಿಸೆಟ್ಟಿ, ಕೇಸಿಮಯ್ಯ (ದಂಡನಾಯಕ), ಭಾಗ್ಯೋದಯ, ಲೊಕ್ಕಿಸೆಟ್ಟಿ, ಲಕ್ಕಿಸೆಟ್ಟಿ, ಚಿಕ್ಕಣಸೆಟ್ಟಿಯರು.

ಸೆಟ್ಟಿಯರಿಗೆ ತ್ರಿಭುವನಮಲ್ಲ, ತ್ರೈಲೋಕ್ಯಮಲ್ಲ, ಜಗದೇಕಮಲ್ಲ, ಚಲದಂಕರಾಮ ಹೆಸರು (ಬಿರುದು) ಧರಿಸುವುದು ಅಥವಾ ಪಡೆಯುವುದು ಗೌರವ, ಪ್ರತಿಷ್ಠೆಯ ಪ್ರತೀಕವೆನಿಸಿದ್ದಿತು. ಕೋಣವತ್ತಿಯ ವೇಣ್ಣಲಸೆಟ್ಟಿಕವ್ವೆ[88], ಹರಿಯಮಸೆಟ್ಟಿ[89], ಹೆಂಮಾಡಿಸೆಟ್ಟಿ[90], ಅಂಗಡಿಸೆಟ್ಟಿ[91], ಪಾಲಿಸೆಟ್ಟಿ[92], ನೇಮಿಸೆಟ್ಟಿ[93], ಕೀರ್ತಿನಾರಾಯಣಸೆಟ್ಟಿಯರು[94] ಇಂಥ ಗೌರವಯೋಗ್ಯ ವರ್ತಕರಾಗಿರುವರು.

ವೆಣ್ಣಲಸೆಟ್ಟಿಕವ್ವೆ[95], ಬೊಮ್ಮಯ[96], ಕಾಮಿಸೆಟ್ಟಿ[97], ಪೃಥ್ವಿಸೆಟ್ಟಿಯರೂ ಚಟ್ಟರಸ, ನಾಗಿಸೆಟ್ಟಿ[98], ಮಹಾಪೃಥ್ವಿಸೆಟ್ಟಿಯರೂ ಆಗಿದ್ದಾರೆ. ಪೃಥ್ವಿಸೆಟ್ಟಿ, ಮಹಾಪೃಥ್ವಿಸೆಟ್ಟಿ ದೊಡ್ಡದರ್ಜೆಯ ಹಾಗೂ ಪ್ರಾಂತೀಯ ವರ್ತಕರೆಂಬರ್ಥದಲ್ಲಿವೆ. ಇದು ವರ್ತಕರ ಉಗಮ ವಿಕಾಸ ಮತ್ತು ಸ್ಥಾನಮಾನಗಳ ಸಂಕ್ಷಿಪ್ತ ವಿವರಣೆ.

## 5.2. ವಿಜಯನಗರ ಕಾಲದಲ್ಲಿ ಶ್ರೇಣಿಗಳು

ಮಧ್ಯಕಾಲೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯಲ್ಲಿ ಶ್ರೇಣಿಗಳ ಪಾತ್ರ ಪ್ರಮುಖವಾದುದು. ವಿಜಯನಗರ ಕಾಲದ ಆರ್ಥಿಕ ವ್ಯವಸ್ಥೆಯೂ ಇದರಿಂದ ಹೊರತಾಗಿರಲಿಲ್ಲ. ಒಂದೇ ವೃತ್ತಿ ಇಲ್ಲವೆ ಜೀವನೋಪಾಯಕ್ಕೆ ಸಮಾನವನ್ನು ಅವಲಂಬಿಸಿರುವ ವ್ಯಕ್ತಿಗಳು ಹಾಗೂ ಸ್ವಯಂ ಸೇವಾಸಂಸ್ಥೆಗಳು ಇಲ್ಲವೆ ಅದರಿಂದ ಅಧಿಕಾರ ಪಡೆದವರ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ಹಿತರಕ್ಷಣೆಗಾಗಿ ವರ್ತಕಶ್ರೇಣಿ ಅಥವಾ ಕುಲವೃತ್ತಿಯ ಶ್ರೇಣಿಗಳನ್ನು ಕೊಂಡರು. ಒಂದು ಉದ್ಯೋಗದ ಅಥವಾ ವೃತ್ತಿಯ ಶ್ರೇಣಿಯು ಸಮಾನ್ಯವಾಗಿ ಒಂದೇ ಜಾತಿ ಅಥವಾ ಸಮುದಾಯ ಸೇರಿದ್ದಾಗಿರುತ್ತಿತ್ತು. ಅದರ ಸದಸ್ಯರು ಬಹುಮಟ್ಟಿಗೆ ಆಯಾ ಕಸುಬಿನಲ್ಲಿ ಪ್ರಾವೀಣ್ಯತೆಯನ್ನು ಪಡೆದವರಾಗಿರುತ್ತಿದ್ದು ಅದು ಒಂದು ಜಾತಿಶ್ರೇಣಿಯೇ ಆಗಿರುತ್ತಿದ್ದಿತು.

ಶಾಸನಗಳು ಇಂತಹ ಕುಶಲವೃತ್ತಿಯ ಶ್ರೇಣಿಗಳ ಬಗೆಗೆ ಹೆಚ್ಚು ಪ್ರಭಾವ ಬೀರುತ್ತವೆ. ಸುಮಾರು ೧೮ ಪಣಗಳು ಅಥವಾ ವಿಭಾಗಗಳನ್ನು ಅವು ಗುರುತಿಸಿ ಪಾಂಚಾಲರು ಅಂದರೆ ಐದು ಬಗೆಯ ಕುಶಲಕರ್ಮಿಗಳನ್ನು (ಕಮ್ಮಾರ, ಕಂಚುಗಾರ, ಬಡಗಿ ಹಾಗೂ ಶಿಲ್ಪಿ) ವೀರಪಾಂಚಾಲರು ಎಂದು ಗುರುತಿಸಿ ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ತಮ್ಮ ವೃತ್ತಿಗಳನ್ನು ನಡೆಸುತ್ತಿದ್ದರೆಂದು ತಿಳಿಸುವ ವ್ಯಾರಹಾರಿಕರು, ಪಾಂಚಾಲರು, ಕುಂಭಾಲಿಕರು (ಕುಂಬಾರರು) ತಂತುವಾದ್ಯ (ನೇಕಾರರು), ವಸ್ತ್ರಭೇದಿಕರು (ಬಟ್ಟೆಗೆ ಬಣ್ಣ ಹಾಕುವವರು), ಕುರಂತಕರು (ಚಮ್ಮಾರರು), ವಸ್ತ್ರರಕ್ಷಕರು (ಚಿಪ್ಪಿಗರು), ದೇವಾಂಗ ಪರಿಕೇಲಿತಿ (ಗೂಳಿ ಸಾಕುವವರು), ಗೋರಕ್ಷಕರು, ಕಿರಾತರು (ಬೇಡರು), (ಅಗಸರು) ಹಾಗೂ ಕ್ಷೌರಿಕರು 'ಆಮುಕ್ತಮಾಲ್ಯ'ದ ತೆಲುಗು ಗ್ರಂಥದಲ್ಲಿ ನೇಕಾರರು, ಹತ್ತಿಬಟ್ಟೆ ನೇಕಾರರು, ಸ್ವರ್ಣಕಾರರು ಗೋಣಿಚೀಲ ತಯಾರಿಸುವವರು ಹಾಗೂ ಬುಟ್ಟಿ ಹೆಣೆಯುವವರು ಇಂತಹ ಕುಶಲಕರ್ಮಿಗಳ ಶ್ರೇಣಿಗಳನ್ನು ಹೇಳಲಾಗಿದೆ.[99]

ಕುಶಲಕರ್ಮಿಗಳ ಶ್ರೇಣಿಗಳ ಜೊತೆಗೆ ಇತರ ವಣಿಕರೂ ತಮಗೆ ಸಂಬಂಧಿಸಿ ತಮ್ಮದೇ ಆದ ಸಂಸ್ಥೆಗಳನ್ನು ರಚಿಸಿಕೊಂಡು ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುತ್ತಿದ್ದರು. ವರ್ತಕರ ಇಲ್ಲವೆ ಕುಶಲಕರ್ಮಿಗಳ ಅಂಗಡಿಗಳು ಪರಸ್ಪರ ಹತ್ತಿರದಲ್ಲಿಯೇ ಇರುತ್ತಿದ್ದವೆಂದು ಪ್ರವಾಸಿ ಅಬ್ದುಲ್‌ರಜಾಕ್ ಹೇಳಿದ್ದಾನೆ.[100] ಮತ್ತೊಬ್ಬ ಪ್ರವಾಸಿ ಪೇಸ್ ಸಹ ಇಂತಹುದೇ ಅಭಿಪ್ರಾಯವನ್ನು ಕೊಡುತ್ತಾನೆ.[101] ಬಣಜಿಗ, ನಾದಿಶಿ, ಉಭರ್ಯ ನಾನಾದೇಶಿ, ನಗರ, ನಕರ, ವೈಶ್ಯ, ಶೆಟ್ಟಿ, ಶೆಟ್ಟಿಗುಟ್ಟ, ಬಣಜಿಗ, ಅಯ್ಯಾವೊಳೆ, ಮಣಿಗ್ರಾಮಂ, ಎಲಮೆ, ಹಂಜಮಾನ, ಶಾಲಿಕೇಯ .... ಶೆಟ್ಟಿಕಾರ, ವೀರಪಾಂಚಾರು, ಕೈಕ್ಕೋಲರು ಇತ್ಯಾದಿ ವರ್ತಕ ಗೆಣಿಗಳನ್ನು ನಾವು ಕಾಣುತ್ತೇವೆ. ಅಲ್ಲದೆ ಗಾಣಿಗರು[102] ಉಪ್ಪಾರರು[103] ಹಾಗೂ ಕಂಬಾರರು[104] ಇದ್ದರು.

ನಕರ ಹಾಗೂ ಹಂಜಮಾನ ವರ್ಗಗಳ ಬಗೆಗೆ ವಿಜಯನಗರ ಕಾಲದ ಬಾರಕೂರು ಹಾಸನಗಳಲ್ಲಿ ಹೆಚ್ಚು ಪ್ರಸ್ತಾಪಿಸಲಾಗಿದೆ. ಅವು ಬಹಳ ಪ್ರಭಾವಶಾಲೀ ಗುಂಪುಗಳೆಂದು ತಿಳಿದುಬರುತ್ತದೆ. ಶೆಟ್ಟಿ ಎಂಬ ಬೇರೊಂದು ವರ್ತಕಶ್ರೇಣಿಯು ಹಲವು ಪರಭಾವಯುತವೂ ಆಗಿದ್ದು, ಉತ್ತಮ ವ್ಯವಸ್ಥೆಯಿಂದ ಕೂಡಿದ್ದಿತು.

ವೀರಬಣಜಿಗ ಎಂಬ ಸಮೂಹವು ಪ್ರಭಾವಯುತ ವರ್ತಕಶ್ರೇಣಿಯಾಗಿದ್ದು ಸುಮಾರು ೨೭ ಸ್ಥಳಗಳಲ್ಲಿ ತನ್ನ ಕೇಂದ್ರಗಳನ್ನು ಸ್ಥಾಪಿಸಿದ್ದ ವಿವರಗಳು ತಿಳಿದುಬರುತ್ತವೆ. ಶೆಟ್ಟಿಕಾರ ಎಂಬ ಮತ್ತೊಂದು ಪ್ರಮುಖ ಶ್ರೇಣಿಯು ಹೊಸ ಚೈತನ್ಯಗಳು ಜೀರ್ಣೋದ್ಧಾರ ಮಾಡುವುದು ಮುಂತಾದ ಕೆಲಸಗಳಲ್ಲಿ ನಿರತವಾಗಿದ್ದ ವಿವರಗಳು ದೊರೆಯುತ್ತವೆ. ಶೆಟ್ಟಿಕಾರರು ಜೈನರಾಗಿದ್ದು ಬಹುಮಟ್ಟಿಗೆ ಕರಾವಳಿ (ದಕ್ಷಿಣ ಕನ್ನಡ) ಪ್ರದೇಶದಲ್ಲಿ ವಾಸಿಸುತ್ತಿದ್ದರು. ಮತ್ತೊಂದು ಪ್ರಮುಖ ಶ್ರೇಣಿಯೆಂದರೆ ಅಲೆಮಾರಿ ವರ್ತಕರದು. ಅಯ್ಯಾವೊಳೆಯೆಂದು ಪ್ರಸಿದ್ಧವಾಗಿದ್ದ ದಕ್ಷಿಣಭಾಗದಲ್ಲಿ ಈ ಶ್ರೇಣಿಗೆ ಸೇರಿದ ವಣಿಕರು ತಮ್ಮ ವಾಣಿಜ್ಯ ಪದಾರ್ಥಗಳನ್ನು ಜೊತೆಯಲ್ಲಿಯೇ ಒಯ್ಯುತ್ತಾ ಹಲವು ಪ್ರದೇಶಗಳನ್ನು ಸುತ್ತುತ್ತಿದ್ದರು.[105] ಅವರು ಸುಸಂಘಟಿತರೂ ಪ್ರಭಾವಶಾಲಿಗಳೂ ಆಗಿದ್ದು ದಕ್ಷಿಣ ಪ್ರಾಂತ್ಯದಾದ್ಯಂತ ಹಬ್ಬಿದ್ದರು. ಚಾಮರಾಜನಗರದಲ್ಲಿ ದೊರೆತಿರುವ ಒಂದು ಶಿಲಾಶಾಸನವು (ಕ್ರಿ.ಶ. ೧೪೦೮), ಇವರು ವಿಜಯನಗರ ಕಾಲದಲ್ಲಿ ಹೆಚ್ಚು ಚಟುವಟಿಕೆಯಿಂದ ಕೂಡಿದ್ದ ಒಂದು ವರ್ತಕ ತಂಡವೆಂದು ಗುರುತಿಸಿದೆ.[106] ಇಂತಹ ಅನೇಕ ವಣಿಕಶ್ರೇಣಿಗಳ ಹೆಸರುಗಳು ನಮಗೆ ಹಲವು ಶಾಸನಗಳಲ್ಲಿ ದೊರೆತಿದ್ದರೂ ಅವುಗಳ ರಚನೆ, ವ್ಯವಸ್ಥೆ ಅಥವಾ ಕಾರ್ಯವಿಧಾನಗಳ ಬಗೆಗೆ ಯಾವ ಶಾಸನಗಳೂ ಹೆಚ್ಚಿನ ವಿವರವನ್ನು ದೊರಕಿಸಿಕೊಡುತ್ತಿಲ್ಲ.

ಪಟ್ಟಣಸ್ವಾಮಿ[107], ಶೆಟ್ಟಿಪಟ್ಟಣಸ್ವಾಮಿ[108], ಮಹಾವಡ್ಡ ವ್ಯವಹಾರಿ, ವಡ್ಡವ್ಯವಹಾರಿ[109], ಶೆಟ್ಟಿ[110], ಪೃಥ್ವೀಶೆಟ್ಟಿ[111], ನಗರೇಶ್ವರ[112], ಪಟ್ಟಣಾಧೀಶ್ವರ[113], ಮಹಾಪ್ರಭು[114] ಮುಂತಾದವರು ಈ ಶ್ರೇಣಿಗಳ ಮುಖ್ಯಸ್ಥರಾಗಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಈ ನಾಯಕರು ತಮ್ಮ ಶ್ರೇಣಿಗಳಲ್ಲೂ ಆಯಾ ಪ್ರದೇಶಗಳಲ್ಲೂ ಹೆಚ್ಚಿನ ಪ್ರಭಾವಶಾಲಿಗಳಾಗಿರುತ್ತಿದ್ದರು. ಮೂಲತಃ ಅವರು ಒಂದು ಶ್ರೇಣಿಯ ಮುಖ್ಯಸ್ಥರಾಗಿದ್ದರೂ ನಗರದ ಇಲ್ಲವೆ ಗ್ರಾಮದ ಒಡೆತನ ಪಡೆದವರೂ ಆಡಳಿತದಲ್ಲಿ ಉನ್ನತ ಅಧಿಕಾರಿಗಳಿಗೆ ಸಲಹೆ ನೀಡುವವರೂ ಆಗಿರುತ್ತಿದ್ದರು. ಉತ್ಸವ, ಜಾತ್ರೆಗಳನ್ನು ವ್ಯವಸ್ಥೆ ಮಾಡುವುದರಲ್ಲಿ ಹಾಗೂ ವಿವಾದಗಳನ್ನು ಬಗೆಹರಿಸುವಲ್ಲಿ ಅವರು ಪ್ರಮುಖ ಪಾತ್ರ ವಹಿಸುತ್ತಿದ್ದರು.

ಕುಶಲಕಲೆಯ ಅಥವಾ ಯಾವುದೇ ವ್ಯಾಪಾರದ ಏಕಸ್ವಾಮ್ಯವು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿದ್ದು, ಅಂದರೆ ಒಂದು ಕುಟುಂಬಕ್ಕೆ ಇಲ್ಲವೆ ಒಂದು ವಂಶಕ್ಕೆ ಸೇರಿದ್ದಿತು. ಕಾಲಕ್ರಮದಲ್ಲಿ ಅವು ಬೇರ್ಪಟ್ಟು ಕಟ್ಟುನಿಟ್ಟಾದ ಜಾತಿಗಳು ಹಾಗೂ ಸಮುದಾಯದವರಾದುದರಿಂದ ಪರಸ್ಪರ ಸುಲಭವಾಗಿ ವ್ಯವಹರಿಸುವುದು, ಕಲೆತು, ಬೆರೆತು ದುಡಿಯುವುದು ಮುಂತಾದುವಕ್ಕೆ ಅಡ್ಡಿಯಾದುವು. ಇದರಿಂದ ಮಧ್ಯಮವರ್ಗದವರಿಗೆ ತೊಂದರೆಯಾಯಿತು. ಪ್ರಚಲಿತವಿದ್ದ ಅಂದಿನ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಅದು ಮುರಿದುಹಾಕಿತೆಂದೇ ಹೇಳಬೇಕು. ಇಂತಹ ಸಾಮಾಜಿಕ ಹಾಗೂ ಜಾತೀಯ ವ್ಯವಸ್ಥೆಯು ಮತ್ತಷ್ಟು ಬಲಗೊಂಡಿತು. ಅನಗತ್ಯ ಪ್ರತಿಷ್ಠೆ ಹಾಗೂ ಹುರುಳಿಲ್ಲದ ಔದ್ಯೋಗಿಕ ಆಧಾರಗಳ ಮೇಲೆ ನಿಂತ ಈ ವರ್ಗವು ಎಷ್ಟು ಬಲಶಾಲಿಯಾಯಿತೆಂದರೆ, ಯೂರೋಪಿನಲ್ಲಿ ನಡೆದಂತೆ ಪಾಳೆಯಗಾರಿಕೆಯನ್ನು ಒಡೆಯುವ ಸಲುವಾಗಿ

ಸಜ್ಜಾದ ಇಂದಿನ ಸಾಮಾಜಿಕ, ಆರ್ಥಿಕ ವ್ಯವಸ್ಥೆಯಂತಾಗದೆ, ಪಂಗಡಗಳು ಉಪಪಂಗಡಗಳಾಗಿ ಒಡೆದು ಅಪ್ಪಟವಾದ ಜಾತೀಯತೆಯ ಗುಂಪುಗಳಾಗಿ ಪೂರ್ಣ ಸ್ಥಿತ್ಯಂತರವನ್ನು ತಲುಪದಿದ್ದರೂ ಮಂದಗತಿಯಲ್ಲಿ ಸಾಗುವಂತೆ ಮಾಡಿತು.

ಪ್ರೊ|| ರೊಮಿಲಾ ಥಾಪರ್ ಅವರು ಶ್ರೇಣಿಗಳ ಉದಯ ಹಾಗೂ ಅವುಗಳ ಪ್ರಮುಖ ಪಾತ್ರವನ್ನು ಕುರಿತು, "ವಣಿಕಶ್ರೇಣಿಗಳಿಗಿದ್ದ ಆರ್ಥಿಕ ಬಲವು ಅವುಗಳಿಗೆ ದೇಶದ ರಾಜಕೀಯ ಪ್ರಾಮುಖ್ಯತೆಯನ್ನು ತಂದುಕೊಟ್ಟಿತು. ಆಸ್ಥಾನದಲ್ಲಿ ಅದು ಬೀರಿರುವ ಪ್ರಭಾವ ಸ್ಪಷ್ಟವಾಗಿದೆ. ಉದಾಹರಣೆಗೆ, ಕಂದಾಯ ಪದ್ಧತಿಯನ್ನು ಮಾರ್ಪಡಿಸುವ ಅಥವಾ ಅದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಶ್ರೇಣಿಯ ಮುಖಂಡರೊಡನೆ ಚರ್ಚಿಸಿ ಸಲಹೆ ಪಡೆಯಲಾಗುತ್ತಿತ್ತು. ಕ್ರಮೇಣ ಅವರು ಸಾರ್ವಜನಿಕರ ಪ್ರತಿನಿಧಿಗಳಾದರು. ವಣಿಕಶ್ರೇಣಿಗಳ ಇಂತಹ ಅಧಿಕಾರವು ಜಮೀನುದಾರರ ಹಾಗೂ ರಾಜನ ಆಸ್ಥಾನದ ಅಧಿಕಾರಿಗಳ ಮಧ್ಯೆ ಸಮಸ್ಥಿತಿಗೆ ಬಂದು ನಿಲ್ಲುವಂತಾಯಿತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[115] ಟಿ.ವಿ. ಮಹಾಲಿಂಗಂ ಅವರು ಶ್ರೇಣಿಗಳು ಒಗ್ಗಟ್ಟಿನಿಂದ ನಡೆಸಿದ ಚಟುವಟಿಕೆಗಳಿಂದ ತಮ್ಮದೇ ಆದ ಸುವ್ಯವಸ್ಥಿತ ಸಂಸ್ಥೆಗಳನ್ನು ಸ್ಥಾಪಿಸಿ ಸರಕಾರದೊಡನೆ ತಮ್ಮ ಹಿತದೃಷ್ಟಿಗಾಗಿ ಸಂಧಾನ ನಡೆಸಲು ಪ್ರಾರಂಭಿಸಿದವು. ಸಲ್ಲಿಸಬೇಕಾದ ಕರದ ಮೊಬಲಗನ್ನು ತಾವೇ ನಿಗದಿಗೊಳಿಸುತ್ತಾ ಬಂದವು" ಎಂದು ಬರೆದಿರುವರು.[116]

ಇಂತಹ ವ್ಯವಸ್ಥೆಯು ಶ್ರೇಣಿಗಳ ಹಿತರಕ್ಷಣೆಯನ್ನೂ ಸಾಮೂಹಿಕ ಕೊಸರಾಟದ ಬಲವನ್ನೂ ಹೆಚ್ಚು ಮಾಡಿದರೂ ಅವು ಸಾಮಾಜಿಕ, ಆರ್ಥಿಕ ವ್ಯವಸ್ಥೆಗಳಲ್ಲಿ ಮುನ್ನುಗ್ಗಲಾರದೆ ವಿಫಲವಾದವು. ಯೂರೋಪಿನಲ್ಲಿ ಇಂತಹ ಶ್ರೇಣಿ ತಲೆಯೆತ್ತಿದ ಪರಿಣಾಮವಾಗಿ ಅಧಿಕಾರಶಾಹಿ ಬಲವು ಕುಗ್ಗಿ ವಣಿಕ ಸಮುದಾಯವು ಬಲಗೊಂಡು, ಸಮಾಜದಲ್ಲಿ ಒಂದು ಮಧ್ಯಮವರ್ಗವು ಕಾಣಿಸಿಕೊಂಡು ಕಾಲಕ್ರಮದಲ್ಲಿ ಅದು ಬಂಡವಾಳಶಾಹಿಯ ಅಭಿವೃದ್ಧಿಗೆ ಹಾದಿ ಮಾಡಿಕೊಟ್ಟಿತು. ಆದರೆ ದುರದೃಷ್ಟವಶಾತ್, ಮಧ್ಯಕಾಲೀನ ಕರ್ನಾಟಕದ ಶ್ರೇಣಿಗಳಲ್ಲಿ ಅಂತಹ ವ್ಯವಸ್ಥಿತವಾದ ವೃತ್ತಿಗನುಗುಣವಾಗಿ ಪ್ರಾತಿನಿಧಿಕವಾದ ಒಂದು ಜಾತೀಯ ಶ್ರೇಣಿಯು ರೂಪುಗೊಂಡು, ಮತ್ತೆ ಅದು ಗುಂಪುಗಳಾಗಿ ಒಡೆಯುತ್ತಾ ಕಟ್ಟುನಿಟ್ಟಾದ ಜಾತೀಯ ವ್ಯವಸ್ಥೆಯಲ್ಲಿ ಬೆರೆತು, ಕಾಲಕ್ರಮದಲ್ಲಿ ಅಂತಹ ಶ್ರೇಣಿಯು ಶಿಥಿಲಗೊಳ್ಳುವಂತೆ ಮಾಡಿತು. ಹೀಗೆ ಹಳೆಯ ಪದ್ಧತಿಯನ್ನು ನಿರ್ಮೂಲನಗೊಳಿಸುವಲ್ಲಿ ತಮ್ಮದೇ ಆದ ಪಾತ್ರವನ್ನು ವಹಿಸಲು ಈ ಶ್ರೇಣಿಗಳು ವಿಫಲಗೊಂಡವೆನ್ನಬಹುದು.

**ಕೃಷಿ :** ಕೃಷಿಯು ಅಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದಿತ್ತು. ಹಾಗೂ ಅದು ಇಂದಿಗೂ ಸಹ ಅತ್ಯಂತ ಪ್ರಮುಖ ಪಾತ್ರವಹಿಸುತ್ತಿದೆ. ಕೃಷಿಯು ಆರ್ಥಿಕ ಚಟುವಟಿಕೆಗಳಿಗೆ ಮೂಲಾಧಾರವಾಗಿತ್ತು. ಕೃಷಿಯಿಂದ ಜನಸಾಮಾನ್ಯರ ಹಸಿವು ಮತ್ತು ಬಯಕೆಗಳು ಈಡೇರುತ್ತಿದ್ದುದಲ್ಲದೆ ರಾಜ್ಯದ ಬೊಕ್ಕಸಕ್ಕೆ ಸಾಕಷ್ಟು ಪ್ರಮಾಣದಲ್ಲಿ ಆದಾಯ ಬರುತ್ತಿತ್ತು. ವಿಜಯನಗರದ ಅರಸರು ಕೃಷಿಗೆ ಕೊಟ್ಟ ಪ್ರೋತ್ಸಾಹದಿಂದಾಗಿ ಅನೇಕ ರೈತರು ಕೃಷಿಯನ್ನು ಅವಲಂಬಿಸಿದ್ದರು. ಕೃಷಿಯು ಅನುವಂಶಿಕ

ವೃತ್ತಿಯಾಯಿತು. ಇದರಿಂದಾಗಿ ಅನೇಕ ಉಪಕಸಬುಗಳು ಹುಟ್ಟಿಕೊಂಡವು. ಹೀಗೆ ಕಸುಬು ಮತ್ತು ಜಾತಿಗಳು ಪರಸ್ಪರ ಪೂರಕವಾಗಿ ಹೋದವು. ಅನೇಕ ರೀತಿಯ ಉತ್ಪನ್ನಗಳಿಗಾಗಿ ರೈತನಿಗೆ ಸಹಾಯಕವಾಗುವ ಕಂಬಾರ, ಕುಂಬಾರ, ಬಡಿಗ ಹೀಗೆ ಅನೇಕ ವೃತ್ತಿಯಾಧಾರಿತ ಜಾತಿಗಳು ಹುಟ್ಟಿಕೊಂಡವು.

ಪ್ರಜೆಗಳಿಂದ ಹಿಡಿದು ಪ್ರಭುಗಳವರೆಗೆ ಕೃಷಿಯು ಅತ್ಯುಪಯುಕ್ತವಾಗಿತ್ತು. ಅದಕ್ಕಾಗಿಯೇ ಏನೋ ಅಂದಿನ ಜನ ಕೋಟಿ ವಿದ್ಯೆಯಲ್ಲಿ ಮೇಟಿ ವಿದ್ಯೆಯೇ ಮೇಲು ಎಂದು ತಿಳಿದಿದ್ದರು. ದಕ್ಷಿಣ ಭಾರತದಲ್ಲಿ ಕ್ರಿ.ಶ. ೪ನೇ ಶತಮಾನದಿಂದ ಸ್ಥಳೀಯ ಸ್ವತಂತ್ರ ರಾಜ್ಯಗಳ ಉಗಮದೊಂದಿಗೆ ಆರ್ಥಿಕ ಕ್ಷೇತ್ರವು ಬದಲಾವಣೆಯನ್ನು ಹೊಂದಿತು. ಇದಕ್ಕೂ ಮುಂಚೆ ಅಂದರೆ ಕ್ರಿ.ಪೂ. ೩-೨ನೇ ಶತಮಾನದಿಂದ ಕ್ರಿ.ಶ. ೩ನೇ ಶತಮಾನದವರೆಗೂ ದಕ್ಷಿಣ ಭಾರತದ ಪೂರ್ವ ಮತ್ತು ಪಶ್ಚಿಮ ಕರಾವಳಿ ತೀರ ಪ್ರದೇಶಗಳ ಮುಖಾಂತರ ದೊಡ್ಡ ಪ್ರಮಾಣದಲ್ಲಿ ಅಂತರರಾಷ್ಟ್ರೀಯ ವ್ಯಾಪಾರ (ರೋಮನ್) ನಡೆದು ಅದು ಇಲ್ಲಿಯ ಆರ್ಥಿಕ ಜೀವನದ ಮೇಲೆ ಹೆಚ್ಚಿನ ಪರಿಣಾಮ ಬೀರಿತ್ತು. ಆದರೆ ಕ್ರಿ.ಶ. ೫ನೇ ಶತಮಾನದಲ್ಲಿ ರೋಮನ್ ಸಾಮ್ರಾಜ್ಯವು ಭಾರತದೊಡನೆ ವ್ಯಾಪಾರವನ್ನು ನಿಷೇಧಿಸಿದಾಗ ಅಂತರರಾಷ್ಟ್ರೀಯ ವ್ಯಾಪಾರದ ಪ್ರಮಾಣ ಕುಗ್ಗತೊಡಗಿತು. ಇದರಿಂದಾಗಿ ವ್ಯಾಪಾರ ಕೇಂದ್ರಗಳು, ನಗರಗಳು ಸಹ ನಶಿಸತೊಡಗಿದವು. ನಗರಗಳಲ್ಲಿ ಕೇಂದ್ರಿತವಾಗಿದ್ದ ವ್ಯಾಪಾರೀ ಹಾಗೂ ಪುರೋಹಿತಶಾಹಿ ವರ್ಗ ನಗರ ಪಟ್ಟಣಗಳನ್ನು ತೊರೆದು ಹಳ್ಳಿಗಳಿಗೆ ವಲಸೆ ಹೋಗಲಾರಂಭಿಸಿದರು. ಇದಲ್ಲದೆ ಪ್ರಬಲವಾದ ಗುಪ್ತ ಸಾಮ್ರಾಜ್ಯದ ಅವಸಾನದೊಂದಿಗೆ ಸಣ್ಣ ಪುಟ್ಟ ಜಮೀನ್ದಾರರು, ಸಾಮಂತರು ಸ್ವತಂತ್ರ ರಾಜರಾಗಿ ಘೋಷಿಸಿಕೊಂಡು ರಾಜ್ಯ ಕಟ್ಟಿದರು. ಇದರಿಂದಾಗಿ ಕ್ರಿ.ಶ. ೫ನೇ ಶತಮಾನದಿಂದ ದಕ್ಷಿಣ ಭಾರತವು ಸೇರಿದಂತೆ ಇಡೀ ಭಾರತದ ಆರ್ಥಿಕ ಜೀವನದಲ್ಲಿ ಹಲವು ಮಾರ್ಪಾಟುಗಳಾದವು. ನಗರೀಕರಣ ಮತ್ತು ವ್ಯಾಪಾರೀಕರಣಗಳ ಬದಲು ಕೃಷಿ ಆಧಾರಿತ ನೆಲೆಗಳು / ಹಳ್ಳಿಗಳು (agrarian settlements) ಹೆಚ್ಚಾಗಿ ಅಸ್ತಿತ್ವಕ್ಕೆ ಬಂದವು. ಈ ರೀತಿ ಹೊಸದಾಗಿ ಅಸ್ತಿತ್ವಕ್ಕೆ ಬಂದ ರಾಜ್ಯಗಳು ವಲಸೆ ಬಂದ ಪುರೋಹಿತಶಾಹಿ ವರ್ಗದ ನೆರವಿನಿಂದ ಕೃಷಿಯನ್ನು ಅಭಿವೃದ್ಧಿಪಡಿಸಲವಾರಂಭಿಸಿದರು. ಕಾಡು-ಮೇಡುಗಳನ್ನು ಕಡಿದು ಕೃಷಿ ಚಟುವಟಿಕೆಗಳನ್ನು ವಿಸ್ತರಿಸಲಾಯಿತು.

ಕೃಷಿಯನ್ನು ಹಲವು ವಿಧಾನಗಳಿಂದ ಅಭಿವೃದ್ಧಿಪಡಿಸಲಾಗುತ್ತಿತ್ತು. ಅವುಗಳಲ್ಲಿ ಕೃಷಿಕರ ಪ್ರಮುಖವಾದವುಗಳೆಂದರೆ ೧) ಹೊಸ ಪ್ರದೇಶಗಳನ್ನು ಅಂದರೆ ಕಾಡು ಮತ್ತು ಹುಲ್ಲುಗಾವಲುಗಳನ್ನು ಸ್ವಚ್ಚಗೊಳಿಸಿ ಅವುಗಳನ್ನು ಉಳುಮೆಗೆ ಯೋಗ್ಯಪಡಿಸುವುದು. ೨) ಕೆರೆ, ಕಾಲುವೆ ಮತ್ತು ಬಾವಿ ಮುಂತಾದವುಗಳನ್ನು ಕಟ್ಟಿಸಿ ಅಲ್ಲಿಂದ ನೀರನ್ನು ದೂರದ ಒಣ ಜಮೀನಿಗೆ ಒಯ್ದು ಆ ಮುಖಾಂತರ ನೆಲವನ್ನು ಸಜ್ಜುಗೊಳಿಸಲಾಗುತ್ತಿತ್ತು. ಮೊದಲನೆಯ ವಿಧಾನಕ್ಕೆ ಸಂಬಂಧಿಸಿದಂತೆ ದಕ್ಷಿಣ ಭಾರತದಾದ್ಯಂತ ಸಾವಿರಾರು ಶಾಸನಗಳು ಹೆಚ್ಚು ಬೆಳಕು ಚೆಲ್ಲುತ್ತವೆ. ಉದಾಹರಣೆಗೆ ಕ್ರಿ.ಶ. ೬ನೇ ಶತಮಾನದ ಗೋವಾ ಕದಂಬರ ಶಾಸನವು ಓರ್ವ ಬ್ರಾಹ್ಮಣನು ತನಗೆ ದಾನ ಮಾಡಿದ ಅರಣ್ಯ ಭೂಮಿಯನ್ನು ನಾಲ್ಕು ಜನ ಪ್ರೇಶ್ಯಕುಲದವರಿಂದ

ಹಸನು ಮಾಡಿದ್ದನ್ನು ತಿಳಿಸುತ್ತದೆ. ಇದೇ ಶಾಸನವು ಕಡಲತೀರದಲ್ಲಿ ನೀರಿನಿಂದ ಆವೃತಗೊಂಡಿದ್ದ ಭೂಮಿಯನ್ನು ಗದ್ದೆಯಾಗಿ ಪರಿವರ್ತಿಸಿದ್ದನ್ನು ಸಹ ತಿಳಿಸುತ್ತದೆ. ಕ್ರಿ.ಶ. ೭೬೨ರ ಗೌರಿಬಿದನೂರಿನ ಶಾಸನವು ಓರ್ವ ಕಸ್ಯಪ ಬ್ರಾಹ್ಮಣನಿಗೆ ಫಲವತ್ತಾದ ಗದ್ದೆಯ ಜೊತೆಗೆ ಅರಣ್ಯ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಕಾಡು ನೆಲವನ್ನು ದಾನ ಮಾಡುವುದರ ಮುಖ್ಯ ಉದ್ದೇಶ ಅದನ್ನು ಹಸನು ಮಾಡಿ ಉಳುಮೆಗೆ ಒಳಪಡಿಸುವುದಾಗಿತ್ತು. ಕ್ರಿ.ಶ. ೯೦೪ರ ನಂಜನಗೂಡು ತಾಲೂಕಿನ ಶಾಸನವು ದೊಡ್ಡ ಕೆರೆಯೊಂದನ್ನು ಕಟ್ಟಿಸಿ ಅದರ ಹಿಂಭಾಗದ ಒಣ ಭೂಮಿಯನ್ನು ನೀರಾವರಿಗೊಳಪಡಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೯೩೫ರ ಶಿಕಾರಿಪುರದ ಶಾಸನವೊಂದು ಬನವಾಸಿ ೧೨.೦೦೦ರ ಅಧಿಕಾರಿಯೊಬ್ಬನು ತಾಳಗುಂದದಲ್ಲಿ ಕೆರೆಯನ್ನು ಕಟ್ಟಿಸಿ ಅದರ ಹಿಂಭಾಗದ ಭೂಮಿಯನ್ನು ಉಳುಮೆಗೆ ಒಳಪಡಿಸಿ ಅದನ್ನು ದೇವಾಲಯಕ್ಕೆ ದಾನ ಮಾಡಿದ್ದನ್ನು ತಿಳಿಸುತ್ತದೆ. ಸೇಲಂ ಜಿಲ್ಲೆಯ ಕೃಷ್ಣಗಿರಿ ತಾಲ್ಲೂಕಿನ ಪಲ್ಲವ ಸ್ಕಂದಶಿಷ್ಯನ ತಾಮ್ರಪಟಗಳು ವತ್ಸ ಬ್ರಾಹ್ಮಣನಿಗೆ ಗ್ರಾಮದ ಜೊತೆಗೆ ಪಾಳು ಮತ್ತು ಕಾಡು ಭೂಮಿಯನ್ನು ದಾನ ಮಾಡಿದಾಗ ಆ ಭೂಮಿಯನ್ನು ಬೆಂಕಿಯಿಂದ ಸುಟ್ಟು ಅದನ್ನು ಸ್ವಚ್ಛಗೊಳಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧ನೇ ಶತಮಾನದ ಸೊರಬ ತಾಲೂಕಿನ ಶಾಸನವು ಓರ್ವ ಶೆಟ್ಟಿಯು ಕುಪ್ಪಟೂರು ಅಗ್ರಹಾರದ ಬಳಿ ಅರಣ್ಯ ಭೂಮಿಯನ್ನು ಕೆರೆಯನ್ನು ಕಟ್ಟುವುದರ ಮೂಲಕ ಹಸನು ಮಾಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೪೮ ಮತ್ತು ೧೨೦೩ರಲ್ಲಿ ತಮಿಳುನಾಡಿನ ತಂಜಾವೂರು ಜಿಲ್ಲೆಯ ಶಿಯಾಲಿ ತಾಲ್ಲೋಕಿನಲ್ಲಿ ನೀರಿನಿಂದ ಆವೃತಗೊಂಡಿದ್ದ ಭೂಮಿಯನ್ನು ಒಂದು ಮಾ ಕ್ಕೆ ೫೦೦ ಕಾಸುಗಳ ವೆಚ್ಚದಲ್ಲಿ ಕೃಷಿಗೆ ಯೋಗ್ಯವಾಗುವಂತೆ ಮಾಡಿದ್ದನ್ನು ಅಲ್ಲಿಯ ಶಾಸನಗಳು ತಿಳಿಸುತ್ತವೆ.

ಎರಡನೆಯ ಪ್ರಮುಖ ವಿಧಾನವೆಂದರೆ ನೀರಾವರಿ ಸೌಕರ್ಯಗಳನ್ನು ಒದಗಿಸಿ ಕೃಷಿಯನ್ನು ಅಭಿವೃದ್ಧಿಪಡಿಸಲಾಗುತ್ತಿತ್ತು. ಮಳೆಯ ನೀರನ್ನು ಕೆರೆ ಕಟ್ಟೆಗಳನ್ನು ಕಟ್ಟುವುದರ ಮೂಲದ ಸಂಗ್ರಹಿಸಿ ತೂಬಿನ ಮತ್ತು ಕಾಲುವೆ ಮುಖಾಂತರ ಒಣ ಜಮೀನಿಗೆ ಒದಗಿಸಲಾಗುತ್ತಿತ್ತು. ಇದಕ್ಕೆ ಸಂಬಂಧಿಸಿದಂತೆ ದಕ್ಷಿಣ ಭಾರತದಾದ್ಯಂತ ಹಲವಾರು ಶಾಸನಗಳು ಸಾಕಷ್ಟು ಮಾಹಿತಿ ಒದಗಿಸುತ್ತವೆ. ಕೆರೆಗಳನ್ನು ಕಟ್ಟುವ ಪ್ರಕ್ರಿಯೆ ಪಲ್ಲವರು ಮತ್ತು ಕದಂಬರ ಕಾಲದಿಂದ ಪ್ರಾರಂಭವಾಯಿತೆನ್ನಬಹುದು. ಚಿತ್ರದುರ್ಗದ ಚಂದ್ರವಳ್ಳಿಯ ಶಾಸನವು ಕದಂಬ ಮಯೂರವರ್ಮನು ಅಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಕೆರೆಗಳಿಗೆ ತೂಬುಗಳನ್ನು ಇಡುತ್ತಿದ್ದುದನ್ನು ಕ್ರಿ.ಶ. ೭೫೦ರ ಮುಳಬಾಗಿಲು ತಾಲೂಕು ಶಾಸನವೊಂದು ತಿಳಿಸುತ್ತದೆ. ಕೆರೆಗಳಿಗೆ ನಾಲ್ಕು ತೂಬುಗಳು ಇದ್ದುದನ್ನು ಕ್ರಿ.ಶ. ೮೯೦ರ ಹಿರಿಯೂರು ತಾಲೂಕು ಶಾಸನವು ತಿಳಿಸುತ್ತದೆ. ಕೆರೆಗಳಿಗೆ ತೂಬುಗಳನ್ನು ಅಳವಡಿಸುವ ತಂತ್ರಜ್ಞಾನ ನೀರಾವರಿ ಕ್ಷೇತ್ರದಲ್ಲಿ ಗಣನೀಯ ಬದಲಾವಣೆಗಳನ್ನುಂಟು ಮಾಡಿತು. ಇದರಿಂದಾಗಿ ಮಳೆಗಾಲದಲ್ಲಿ ಸಂಗ್ರಹಿಸಲಾದ ನೀರನ್ನು ವ್ಯರ್ಥವಾಗದಂತೆ ದೂರದ ಭೂಮಿಗೆ ಒಯ್ಯಲಾಗುತ್ತಿತ್ತು. ಒಂದು ಕೆರೆಗೆ ನಾಲ್ಕು ತೂಬುಗಳಿದ್ದುದು ಆ ಕೆರೆಯ ಗಾತ್ರ ಮತ್ತು ವಿಸ್ತಾರವನ್ನು ಸೂಚಿಸುತ್ತದೆ. ಇಂತಹ ಭಾರೀ ಕೆರೆಗಳನ್ನು ಕ್ರಿ.ಶ. ೧೦ನೇ ಶತಮಾನದಿಂದ ದಕ್ಷಿಣ ಭಾರತದಾದ್ಯಂತ

ಕಟ್ಟಲಾಗಿದ್ದು ಕರ್ನಾಟಕದಲ್ಲಿ ಇವುಗಳನ್ನು ಸಮುದ್ರಗಳೆಂದು ಕರೆಯಲಾಗಿದೆ. ಇದಲ್ಲದೇ ನದಿಗಳಿಗೆ ಅಡ್ಡಲಾಗಿ ಒಡ್ಡನ್ನು ಕಟ್ಟಿ ನದಿಯ ನೀರಿನ ಹರಿವನ್ನು ತಿರುಗಿಸಿ ದೂರದ ಕೆರೆಗಳನ್ನು ತುಂಬಿಸಲಾಗುತ್ತಿತ್ತು. ಇದಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೭ನೇ ಶತಮಾನದ ಪಲ್ಲವರ ಶಾಸನಗಳು ಹಾಗೂ ಕ್ರಿ.ಶ. ೯೦೪ರ ನಂಜನಗೂಡು ತಾಲೂಕಿನ ಶಾಸನವು ತಿಳಿಸುತ್ತದೆ. ಎಲ್ಲಿ ಕೆರೆಗಳನ್ನು ಕಟ್ಟುವುದಕ್ಕೆ ಸಾಧ್ಯವಾಗುತ್ತಿರಲಿಲ್ಲವೋ ಅಂತಹ ಪ್ರದೇಶಗಳಲ್ಲಿ ಬಾವಿಗಳಲ್ಲಿ ತೋಡಿ ಅಲ್ಲಿಂದ ಅರಘಟ್ಟಗಳಿಗೆ ಎತ್ತು ಮತ್ತು ಕೋಣಗಳನ್ನು ಬಳಸಿ ನೀರನ್ನು ಎತ್ತಲಾಗುತ್ತಿತ್ತು.

ಕೆರೆಗಳನ್ನು ಕಟ್ಟಿಸುವಂತಹ ಕೆಲಸಗಳನ್ನು ಪುಣ್ಯದ ಕೆಲಸಗಳೆಂದು ಭಾವಿಸಲಾಗಿತ್ತು. ಇಂತಹಗಳನ್ನು ರಾಜರಲ್ಲದೇ ರಾಜ್ಯದ ಅಧಿಕಾರಿಗಳು, ಶ್ರೀಮಂತ ವರ್ತಕರು ಮತ್ತು ಜಮೀನ್ದಾರರು ಹೆಚ್ಚಾಗಿ ಕೈಗೆತ್ತಿಕೊಳ್ಳುತ್ತಿದ್ದರು. ಖಾಸಗಿಯವರು ಹೊಸದಾಗಿ ಕೆರೆ ಕಟ್ಟೆಗಳನ್ನು ಕಟ್ಟಿದಾಗ ಅಂತಹವರಿಗೆ ಅಲ್ಲಿಯ ಸಮುದಾಯ ಒಗ್ಗೂಡಿ ಭೂಮಿಯನ್ನು ಶಾಶ್ವತವಾಗಿ ದಾನ ಮಾಡುತ್ತಿದ್ದರು. ಅಂತಹ ದಾನಗಳಿಗೆ ಬಿತ್ತುವಟ್ಟ, ಕೆರೆಕೊಡುಗೆ ಎಂದು ಕರೆಯಲಾಗಿದೆ. ಹೊಸ ಕೆರೆಗಳನ್ನು ಕಟ್ಟುವುದಷ್ಟೆ ಮುಖ್ಯವಾಗಿರಲಿಲ್ಲ. ಅದನ್ನು ಕಾಪಾಡಿಕೊಳ್ಳುವುದು ಅಷ್ಟೇ ಮುಖ್ಯವಾದ ಕೆಲಸವಾಗಿತ್ತು. ಕೆರೆಗಳ ಹೂಳೆತ್ತುವುದು, ತೂಬನ್ನು ಹಾಕಿಸುವುದು, ಕೋಡಿಯನ್ನು ಸರಿಪಡಿಸುವುದು ಮತ್ತು ಏರಿಯನ್ನು ಭದ್ರಪಡಿಸುವುದರೊಂದಿಗೆ ಅವುಗಳನ್ನು ಸಂರಕ್ಷಿಸಲಾಗುತ್ತಿತ್ತು. ಇಂತಹ ಕೆಲಸಗಳಿಗಾಗಿ ದಕ್ಷಿಣ ಭಾರತದಲ್ಲಿ ಕೆರೆಯ ಸಮಿತಿಗಳಿದ್ದವು. ಸಾಮಾನ್ಯವಾಗಿ ಹಳ್ಳಿಯ ಸಭೆಗಳು ಮತ್ತು ಮಹಾಜನರು ಇದರ ಉಸ್ತುವಾರಿ ನೋಡಿಕೊಳ್ಳುತ್ತಿದ್ದವು. ಕೆರೆಗಳ ಹೂಳನ್ನೆತ್ತಲು ಈ ಸಮಿತಿಗಳು ಎತ್ತಿನ ಬಂಡಿ ಮತ್ತು ಅದನ್ನು ನೋಡಿಕೊಳ್ಳಲು ಓರ್ವ ವ್ಯಕ್ತಿಯನ್ನು ನೇಮಿಸಲಾಗುತ್ತಿತ್ತು. ಇಂತಹ ಕೆಲಸ ಕಾರ್ಯಗಳಿಗಾಗಿ ಸಮಾಜದ ವಿವಿಧ ವರ್ಗದ ಜನ ಹಲವು ರೀತಿಯ ಭೂದಾನ ಮಾಡಿದ್ದಾರೆ. ಇಂತಹ ಭೂದಾನವನ್ನು ಕರ್ನಾಟಕದಲ್ಲಿ 'ಬಿತ್ತುವಟ್ಟ' ಎಂದು ಕರೆಯಲಾಗಿದೆ. ಕೆರೆಗಳನ್ನು ಕಟ್ಟಲಾಗದಿದ್ದ ಸ್ಥಳಗಳಲ್ಲಿ ಬಾವಿಗಳನ್ನು ತೋಡಲಾಗುತ್ತಿತ್ತು. ಇದಲ್ಲದೆ ಹರಿಯುವ ನದಿಗಳಿಗೆ ಅಡ್ಡಲಾಗಿ ಸಣ್ಣ ಪ್ರಮಾಣದ ಒಡ್ಡುಗಳನ್ನು ಕಟ್ಟಿ ನದಿಯ ನೀರಿನ ಹರಿವನ್ನು ಬದಲಾಯಿಸಿ ಆ ಮೂಲಕ ಕೆರೆಗಳಿಗೆ ನೀರನ್ನು ತುಂಬಿಸಲಾಗುತ್ತಿತ್ತು.

ಕೃಷಿಯು ರಾಜ್ಯದ ಆದಾಯದ ಮೂಲ ಆಧಾರವಾಗಿದ್ದರಿಂದ ಅದನ್ನು ವೃದ್ಧಿಸಲು ರಾಜ್ಯವು ಸಾಕಷ್ಟು ಪ್ರಮಾಣದಲ್ಲಿ ಪ್ರೋತ್ಸಾಹ ಮತ್ತು ರಿಯಾಯಿತಿಯನ್ನು ಕೊಡುತ್ತಿತ್ತು. ಇದು ದಕ್ಷಿಣ ಭಾರತದಲ್ಲಿ ಒಂದೇ ರೀತಿ ಇರದೇ ರಾಜ್ಯದಿಂದ ರಾಜ್ಯಕ್ಕೆ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಬೇರೆಯಾಗಿತ್ತು. ಹೊಸದಾಗಿ ಸಾಗುವಳಿ ಮಾಡಿದ ವ್ಯಕ್ತಿಯು ಅಲ್ಲಿಯ ಕಂದಾಯವನ್ನು ಸಂಗ್ರಹಿಸುವ ಹಕ್ಕನ್ನು ಹೊಂದಿದ್ದನು. ಅಂತಹ ಭೂಮಿಯನ್ನು ಅವನೇ ಹೊಂದಿದ್ದರೆ ಕೆಲವು ವರ್ಷಗಳ ಕಾಲ ಕಂದಾಯ ಪಾವತಿಸುವಂತಿರಲಿಲ್ಲ. ವಿಜಯನಗರದ ಕಾಲದಲ್ಲಿ ಹೊಸದಾಗಿ ಸಾಗುವಳಿ ಮಾಡಿದ ಭೂಮಿಯನ್ನು ಸುಮಾರು ೨ರಿಂದ ೯ ವರ್ಷಗಳವರೆಗೆ ಕಂದಾಯವನ್ನು

ಪಾವತಿಸುವಂತಿರಲಿಲ್ಲ. ತಮಿಳುನಾಡಿನ ರಾಮನಾಡ್ ಜಿಲ್ಲೆಯ ೧೪ನೇ ಶತಮಾನದ ಎರಡು ಶಾಸನಗಳು ಹೊಸ ಭೂಮಿಯನ್ನು ಸಾಗುವಳಿಗೆ ಒಳಪಡಿಸಿದ್ದಕ್ಕಾಗಿ ನೀರಿನ ಮೇಲಿನ ಕಂದಾಯವನ್ನು ಭಾಗಶಃ ರಿಯಾಯಿತಿ ಕೊಟ್ಟಿದ್ದನ್ನು ತಿಳಿಸುತ್ತದೆ. ಯಾರು ಭೂಮಿಯನ್ನು ಹೊಸದಾಗಿ ಉಳುಮೆಗೆ ಒಳಪಡಿಸುತ್ತಿದ್ದರೋ ಅಂತಹವರಿಗೆ ಭೂಕಂದಾಯವನ್ನು ೧೦-೧೨ ವರ್ಷಗಳವರೆಗೆ ಮಾನ್ಯ ಮಾಡಿ ಅನಂತರ ಅಂತಹ ಭೂಮಿಯ ಮೇಲೆ ಸರ್ಕಾರ ಕಂದಾಯವನ್ನು ವಿಧಿಸುತ್ತಿತ್ತು. ಇದರಿಂದ ಪ್ರೇರಣೆಗೊಂಡ ಜನತೆ ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬಂದು ಹೆಚ್ಚು ಹೆಚ್ಚು ಹೊಸ ಮತ್ತು ಕಾಡು ಭೂಮಿಯನ್ನು ಉಳುಮೆಗೆ ಒಳಪಡಿಸಲಾರಂಭಿಸಿದರು. ಇದು ಎರಡು ರೀತಿಯಲ್ಲಿ ರಾಜ್ಯಕ್ಕೆ ಪ್ರಯೋಜನಕಾರಿಯಾಗಿತ್ತು. ಮೊದಲನೆಯದಾಗಿ ಹೆಚ್ಚುವರಿ ಜನಸಂಖ್ಯೆಯಿದ್ದ ಪ್ರದೇಶಗಳಿಂದ ಜನರನ್ನು ಹೊಸದಾಗಿ ಸ್ಥಾಪಿಸಿದ ಕೃಷಿ ನೆಲೆಗಳಿಗೆ ವರ್ಗಾಯಿಸಿ ಅಲ್ಲಿ ಜನಸಂದಣಿಯನ್ನು ತಡೆಯುವುದು. ಎರಡನೆಯದಾಗಿ ರಾಜ್ಯವು ತನ್ನ ಆದಾಯದ ವ್ಯಾಪ್ತಿಯನ್ನು ಗಣನೀಯ ಪ್ರಮಾಣದಲ್ಲಿ ವಿಸ್ತರಿಸಲು ಅನುಕೂಲವಾಯಿತು. ಭೂಕಂದಾಯವು ರಾಜ್ಯದ ಆದಾಯಗಳಲ್ಲಿ ಪ್ರಮುಖವಾದ ಅಂಶವಾಗಿತ್ತು. ನೀರಾವರಿ ಭೂಮಿ ಮತ್ತು ತೋಟಗಳ ಮೇಲೆ ಹೆಚ್ಚಿನ ಕರವನ್ನು (೧/೩, ೧/೫) ವಿಧಿಸಲಾಗುತ್ತಿತ್ತು.[117] ಆದರೆ ಇದು ಎಲ್ಲಾ ಕಾಲದಲ್ಲಿ ಮತ್ತು ಎಲ್ಲಾ ಪ್ರದೇಶಗಳಲ್ಲಿ ಒಂದೇ ರೀತಿಯದಾಗಿರಲಿಲ್ಲ. ಕಂದಾಯವನ್ನು ಧಾನ್ಯ ರೂಪದಲ್ಲಿ ಹೆಚ್ಚಾಗಿ ಸಂಗ್ರಹಿಸಲಾಗುತ್ತಿತ್ತು.[118]

ಈ ಮೇಲಿನ ಕ್ರಮಗಳಿಂದಾಗಿ ಇದುವರೆಗೂ ಮಳೆಯನ್ನೇ ನಂಬಿಕೊಂಡು ಕೇವಲ ಒಂದು ಬೆಳೆಯನ್ನು ಬೆಳೆಯುತ್ತಿದ್ದ ಕೃಷಿಕರು ಈಗ ಎರಡು ಬೆಳೆಯನ್ನು ಬೆಳೆಯಲಾರಂಭಿಸಿದರು. ಇದರಿಂದಾಗಿ ಆಹಾರ ಧಾನ್ಯಗಳ ಉತ್ಪಾದನಾ ಮಟ್ಟ ಅಧಿಕಗೊಂಡಿತು. ತಮ್ಮ ದಿನನಿತ್ಯದ ಅವಶ್ಯಕತೆಗಿಂತ ಹೆಚ್ಚಾಗಿದ್ದ ಆಹಾರ ಧಾನ್ಯಗಳನ್ನು (ಮಿಗುತೆಯ ಪ್ರಮಾಣ) ಮಾರುಕಟ್ಟೆಗೆ ಪೂರೈಸಲಾರಂಭಿಸಿದರು. ಈ ಮಿಗುತೆಯ ಉತ್ಪಾದನೆಯ (Surplus production) ಅಂದಿನ ಸಾಮಾಜಿಕ ಮತ್ತು ಆರ್ಥಿಕ ಜೀವನದ ಮೇಲೆ ಗಾಢವಾದ ಪರಿಣಾಮ ಬೀರಿತು. ಇದಲ್ಲದೇ ಆಹಾರ ಧಾನ್ಯಗಳ ಜೊತೆಗೆ ವಾಣಿಜ್ಯ ಬೆಳೆಗಳಾದ ಹತ್ತಿ, ಎಣ್ಣೆ ಕಾಳುಗಳು (ಎಳ್ಳು, ಸಾಸಿವೆ, ಹರಳು, ಶೇಂಗಾ), ಕಬ್ಬು, ತೆಂಗು, ಅಡಿಕೆ, ವೀಳ್ಯೆದೆಲೆ, ಶುಂಠಿ, ಅರಿಶಿನ, ಕಾಳುಮೆಣಸು ಮತ್ತು ಭತ್ತಗಳನ್ನು ಹೆಚ್ಚಾಗಿ ಬೆಳೆಯಲಾಯಿತು. ದಕ್ಷಿಣ ಭಾರತದ ಎರಡು ನದಿ ಪಾತ್ರಗಳಾದ ಕೃಷ್ಣಾ ಮತ್ತು ಕಾವೇರಿ ಪ್ರದೇಶದ ಮಣ್ಣು ಹೆಚ್ಚು ಫಲವತ್ತಾಗಿದ್ದರಿಂದ ಈ ಬೆಳೆಗಳನ್ನು ಬೆಳೆಯಲು ಹೆಚ್ಚು ಸಾಧ್ಯವಾಯಿತು. ಈ ಬೆಳೆಗಳು ಕಚ್ಚಾ ವಸ್ತುಗಳನ್ನು ಪೂರೈಸುತ್ತಿದ್ದುದರಿಂದ ವ್ಯಾಪಾರ ಬೆಳೆಯುವುದರ ಜೊತೆಗೆ ಕೆಲವು ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು ಸಹ ಅನುಕೂಲವಾಯಿತು.

ಶಾಸನಗಳು ಮುಖ್ಯವಾಗಿ ಮೂರು ರೀತಿಯ ಭೂಮಿಯನ್ನು ಉಲ್ಲೇಖಿಸುತ್ತವೆ. ಅವುಗಳೆಂದರೆ ನೀರಾವರಿ ಭೂಮಿ (ಗದ್ದೆ), ಮಳೆ ಆಧಾರಿತ ಭೂಮಿ (ಹೊಲ) ಮತ್ತು ತೋಟ. ಇದಲ್ಲದೆ ಕಾಡು ಭೂಮಿ, ಹುಲ್ಲುಗಾವಲು, ಗೋಮಾಳಗಳನ್ನು ತಿಳಿಸುತ್ತವೆ. ಈ ರೀತಿಯ ಭೂಮಿಯನ್ನು ಆಳುವ ವರ್ಗ, ವ್ಯಾಪಾರಿ

ವರ್ಗ ಮತ್ತು ಕೆಲವೊಮ್ಮೆ ಜಮೀನ್ದಾರರು ಸಹ ಬ್ರಾಹ್ಮಣರಿಗೆ, ದೇವಾಲಯಗಳಿಗೆ ಮತ್ತು ರಾಜ್ಯದ ಸೇವೆಯಲ್ಲಿರುವವರಿಗೆ ದಾನ ಮಾಡಿದ್ದರು. ಈ ಪ್ರಕ್ರಿಯೆಯಿಂದಾಗಿ ವಿವಿಧ ರೀತಿಯ ಭೂಮಾಲೀಕರು ಈ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದರು. ಭೂಮಿಯ ಮಾಲೀಕತ್ವದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಾದ ಅಭಿಪ್ರಾಯಗಳಿಲ್ಲ. ಕೆಲವರ ಪ್ರಕಾರ ರಾಜನೇ ಇಡೀ ಭೂಮಿಯ ಒಡೆಯನಾಗಿದ್ದನು. ಆದರೆ ಇನ್ನೂ ಕೆಲವರ ಪ್ರಕಾರ ರಾಜ್ಯದ ಒಡೆತನದ ಜೊತೆಗೆ ಖಾಸಗಿ / ವೈಯಕ್ತಿಕ ಒಡೆತನಗಳಿದ್ದವು. ಇದಕ್ಕೆ ಪುರಾವೆಯೆಂಬಂತೆ ಕ್ರಿ.ಶ. ೯ನೇ ಶತಮಾನದಿಂದೀಚೆಗೆ ದೇವಾಲಯಗಳಿಗೆ, ಬ್ರಾಹ್ಮಣರಿಗೆ ಮತ್ತಿತರಿಗೆ ಖಾಸಗಿ ವ್ಯಕ್ತಿಗಳು ತಮ್ಮ ಸ್ವಂತ ಭೂಮಿಯನ್ನು ದಾನ ಮಾಡಿದ ಮತ್ತು ಭೂಮಿಯಿಲ್ಲದವರು ಅದನ್ನು ಕ್ರಯಕ್ಕೆ ಕೊಂಡು ದಾನ ಮಾಡಿದ ವಿಷಯವನ್ನು ಹಲವಾರು ಶಾಸನಗಳು ತಿಳಿಸುತ್ತವೆ. ಭೂ ಹಿಡುವಳಿಗಳಲ್ಲಿ ಪ್ರಮುಖವಾದವುಗಳೆಂದರೆ ಖಾಸಗಿ ವೈಯಕ್ತಿಕ ಒಡೆತನ, ಜಂಟಿ ಒಡೆತನ ಮತ್ತು ಸಮುದಾಯದ ಒಡೆತನ. ಇವುಗಳಲ್ಲದೇ ಈ ಸಮಯದಲ್ಲಿ ಭೂಮಿಯನ್ನು ದೊಡ್ಡ ಪ್ರಮಾಣದಲ್ಲಿ ದೇವಾಲಯಗಳಿಗೆ, ಬ್ರಾಹ್ಮಣರಿಗೆ ಮತ್ತು ರಾಜ್ಯದ ಸೇವೆಯಲ್ಲಿರುವವರಿಗೆ ದಾನ ಮಾಡಿದ್ದರಿಂದ ದೇವಾದಾಯ, ಬ್ರಹ್ಮದೇಯ ಮತ್ತು ಸೇವಾ ಹಿಡುವಳಿಗಳು ಹುಟ್ಟಿಕೊಂಡವು. ಈ ಎಲ್ಲಾ ಹಿಡುವಳಿಗಳಲ್ಲೂ ಹೊಲ, ಗದ್ದೆ ಮತ್ತು ತೋಟ ಇದ್ದವು. ಆದರೆ ಕಾಡಿನ ಭೂಮಿ, ಹುಲ್ಲುಗಾವಲುಗಳು ರಾಜ್ಯದ ಅಧೀನದಲ್ಲಿದ್ದವೆಂದು ಹೇಳಬಹುದು.

## 5.3. ಗೃಹ / ಗುಡಿ ಕೈಗಾರಿಕೆಗಳು

ಬೇಸಾಯದಲ್ಲಾದ ಬದಲಾವಣೆಗಳು ಹಾಗೂ ಅಂದಿನ ರಾಜ್ಯದ ಮತ್ತು ಜನತೆಯ ಅವಶ್ಯಕತೆಗಳನ್ನು ಪೂರೈಸಲು ಕೆಲವು ಗುಡಿ ಕೈಗಾರಿಕೆಗಳು ಈ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು. ಅಂದಿನ ಪ್ರಮುಖ ಗುಡಿ ಕೈಗಾರಿಕೆಗಳೆಂದರೆ ಬಟ್ಟೆ, ಎಣ್ಣೆ, ಬೆಲ್ಲ, ಮಡಕೆ ತಯಾರಿಸುವುದು, ಬುಟ್ಟಿ ಹೆಣೆಯುವುದು, ಚರ್ಮ ಹದ ಮಾಡುವುದು, ಲೋಹದ ಕೆಲಸ (ಚಿನ್ನ, ಬೆಳ್ಳಿ, ತಾಮ್ರ, ಕಂಚು), ಮರಗೆಲಸ, ಬೆತ್ತದ ಕೆಲಸ, ಶಿಲ್ಪಗಾರಿಕೆ ಇತ್ಯಾದಿ. ಈ ಚಟುವಟಿಕೆಗಳ ಬಗ್ಗೆ ಕ್ರಿ.ಶ. ೧೦ನೇ ಶತಮಾನದ ನಂತರ ಶಾಸನಗಳು, ಸಮಕಾಲೀನ ಸಾಹಿತ್ಯ ಕೃತಿಗಳು ಮತ್ತು ವಿದೇಶಿ ಬರವಣಿಗೆಗಳು ಸಾಕಷ್ಟು ಬೆಳಕು ಚೆಲ್ಲುತ್ತವೆ. ಶಾಸನಗಳಲ್ಲಿ ಇವುಗಳ ಉತ್ಪಾದನಾ ರೀತಿ ಮತ್ತು ಮಟ್ಟದ ಬಗ್ಗೆ ಉಲ್ಲೇಖಗಳಿಲ್ಲ. ಆದರೆ ಉತ್ಪಾದನಾ ಸಲಕರಣೆಗಳ ಮೇಲೆ ವಿಧಿಸಿದ್ದ ತೆರಿಗೆಗಳನ್ನು ಇವು ತಿಳಿಸುತ್ತವೆ. ಅವುಗಳೆಂದರೆ ಮಗ್ಗದೆರೆ, ನೂಲುದೆರೆ, ಗಾಣದೆರೆ, ಅವುಗೆದೆರೆ, ಇತ್ಯಾದಿ. ಇದರಿಂದಾಗಿ ಎಣ್ಣೆ ಮತ್ತು ಬೆಲ್ಲವನ್ನು ತಯಾರಿಸಲು ಉಪಯೋಗಿಸುತ್ತಿದ್ದ ಗಾಣಗಳನ್ನು ಯಾವ ರೀತಿ ಬಳಸುತ್ತಿದ್ದರೆಂಬುದನ್ನು ತಿಳಿಯಬಹುದು.[119]

ಈ ಕಾಲದ ಅತ್ಯಂತ ಪ್ರಮುಖ ಗುಡಿ ಕೈಗಾರಿಕೆಯೆಂದರೆ ಬಟ್ಟೆ ತಯಾರಿಸುವುದು. ಇದಕ್ಕೆ ಕಾರಣ ಈ ಭಾಗದಲ್ಲಿ ಹೆಚ್ಚು ಕಪ್ಪು ಭೂಮಿಯಿದ್ದು ಅಧಿಕ ಪ್ರಮಾಣದಲ್ಲಿ ಹತ್ತಿಯನ್ನು ಬೆಳೆಯಲು ಯೋಗ್ಯವಾಗಿದ್ದರಿಂದ

ಸಾಕಷ್ಟು ಪ್ರಮಾಣದಲ್ಲಿ ಕಚ್ಚಾ ವಸ್ತುವನ್ನುಪೂರೈಸಲಾಗುತ್ತಿತ್ತು. ಹತ್ತಿಯ ಜೊತೆಗೆ ರೇಷ್ಮೆ ಮತ್ತು ಉಣ್ಣೆಯನ್ನು ಉಪಯೋಗಿಸಿ ಬಟ್ಟೆಯನ್ನು ತಯಾರಿಸುತ್ತಿದ್ದರು. ರೇಷ್ಮೆಯನ್ನು ಚೀನಾದಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ದಕ್ಷಿಣ ಭಾರತದ ಬಂದರುಗಳು ಈ ವ್ಯಾಪಾರದಲ್ಲಿ ನಿರತವಾಗಿದ್ದವು. ಉಣ್ಣೆಯನ್ನು ಕುರಿ ಸಾಕಾಣಿಕೆಯಿಂದ ಉತ್ಪಾದಿಸಿ ಕಂಬಳಿ ಮುಂತಾದ ಬೆಚ್ಚನೆಯ ಉಡುಪುಗಳನ್ನು ತಯಾರಿಸುತ್ತಿದ್ದರು. ಇದಲ್ಲದೆ ಈ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಹೊಸ ಆಡಳಿತ ವರ್ಗವು (ಸಾಮಂತರು, ದಂಡನಾಯಕರು, ಪೆರ್ಗಡೆಗಳು, ನಾಯಕರು, ಗಾವುಂಡರು ಇತ್ಯಾದಿ) ಆಧುನಿಕ ರೀತಿಯ ಮತ್ತು ದುಬಾರಿಯ ವಸ್ತ್ರಗಳನ್ನು ಹೊಂದಲು ಮುಂದಾದರು. ಈ ರೀತಿಯ ಸಂದರ್ಭಗಳು ನೇಕಾರರಿಗೆ ಹೆಚ್ಚು ಬಟ್ಟೆಯನ್ನು ಉತ್ಪಾದಿಸುವುದರ ಜೊತೆಗೆ ವಿವಿಧ ರೀತಿಯ ವಿನ್ಯಾಸದ ಬಟ್ಟೆಗಳನ್ನು ಸಹ ಉತ್ಪಾದಿಸಲು ಉತ್ತೇಜನ ನೀಡಿತು. ಇದಲ್ಲದೆ ಈ ಕಾಲದಲ್ಲಿ ಬಟ್ಟೆ ಹೊಲಿಯುವ (ಚಿಪ್ಪಿಗರು) ಮತ್ತು ಬಟ್ಟೆಗಳಿಗೆ ಬಣ್ಣ ಹಾಕುವ (ಬಣ್ಣಿಗರು) ಹೊಸ ವೃತ್ತಿಗಳು ಹುಟ್ಟಿಕೊಂಡವು.

ಅಂದಿನ ಇನ್ನೊಂದು ಪ್ರಮುಖ ಗುಡಿ ಕೈಗಾರಿಕೆಯೆಂದರೆ ಎಣ್ಣೆ ಉತ್ಪಾದನೆ. ಇಲ್ಲಿಯ ಮಣ್ಣು ಮತ್ತು ಹವಾಗುಣ ಉತ್ತಮವಾಗಿದ್ದರಿಂದ ಹಲವು ರೀತಿಯ ಎಣ್ಣೆ ಕಾಳುಗಳನ್ನು (ಎಳ್ಳು, ಸಾಸಿವೆ, ಹರಳು, ಶೇಂಗಾ) ಮತ್ತು ತೆಂಗಿನಕಾಯಿಯನ್ನು ಬೆಳೆಯಲಾಗುತ್ತಿತ್ತು. ಮೇಲಾಗಿ ಎಣ್ಣೆಯನ್ನು ಊಟಕ್ಕೆ ಮತ್ತು ಬೆಳಕಿನ ಇಂಧನವಾಗಿ ಹೆಚ್ಚಾಗಿ ಬಳಸುತ್ತಿದ್ದುದರಿಂದ ಅದರ ಬೇಡಿಕೆ ಹೆಚ್ಚಾಗಿತ್ತು. ಹೀಗಾಗಿ ಈ ಕಾಲದಲ್ಲಿ ಈ ವೃತ್ತಿಯು ಹೆಚ್ಚಾಗಿ ಬೆಳೆಯಿತು. ಎಣ್ಣೆ ಉತ್ಪಾದಿಸುವವರನ್ನು ತೆಲ್ಲಿಗ, ತೈಲಿ, ಗಾಣಿಗರೆಂದು ಶಾಸನಗಳಲ್ಲಿ ಕರೆಯಲಾಗಿದೆ. ತೆಲ್ಲಿಗರು ಎಣ್ಣೆ ಉತ್ಪಾದನೆಯ ಜೊತೆಗೆ ಅದರ ವಿತರಣೆಯಲ್ಲಿಯೂ ಪಾಲ್ಗೊಂಡಿದ್ದರಿಂದ ಅವರನ್ನು ತೆಲ್ಲಿಗಶೆಟ್ಟರೆಂದು ಕರೆಯಲಾಗಿದೆ. ಇದಲ್ಲದೆ ಶಾಸನಗಳು ವಿವಿಧ ರೀತಿಯ ಗಾಣಗಳನ್ನು ಸಹ ಉಲ್ಲೇಖಿಸುತ್ತವೆ. ಅವುಗಳೆಂದರೆ ಕೈಗಾಣ, ಮೆಟ್ಟುಗಾಣ ಮತ್ತು ಎತ್ತುಗಾಣ. ಇವುಗಳನ್ನು ಆಳುವ ವರ್ಗ ದೇವಾಲಯಗಳಿಗೂ ಮತ್ತು ಪುರೋಹಿತ ವರ್ಗದವರಿಗೂ ದಾನ ಮಾಡಿರುವ ವಿಷಯವನ್ನು ಶಾಸನಗಳು ತಿಳಿಸುತ್ತವೆ.[120]

ವೃತ್ತಿಯಲ್ಲಿ ವೈವಿಧ್ಯತೆಗಳು ಬೆಳೆದು ಹಲವು ರೀತಿಯ ಕರಕುಶಲ ಉಪ ಕಸುಬುಗಳು ಹುಟ್ಟಿಕೊಂಡವು. ಕೃಷಿಕ ಸಮಾಜದಲ್ಲಿ ಬಡಗಿ ಮತ್ತು ಕಮ್ಮಾರರ ಅವಶ್ಯಕತೆಗಳು ಹೆಚ್ಚಾದವು. ಬಡಗಿಯು ಮನೆ ಕಟ್ಟುವುದರಿಂದ ಹಿಡಿದು ರೈತರ ಆವಶ್ಯಕತೆಗಳಾದ ನೇಗಿಲು, ನೊಗ, ಬಂಡಿ ಇತ್ಯಾದಿ ಸಲಕರಣೆಗಳನ್ನು ಉತ್ಪಾದಿಸತೊಡಗಿದನು. ಅದೇ ರೀತಿಯಲ್ಲಿ ಕಮ್ಮಾರನು ಸಹ ಕೃಷಿಗೆ ಬೇಕಾದ ಸಲಕರಣೆಗಳನ್ನು ತಯಾರಿಸಿ ರೈತರ ಅವಶ್ಯಕತೆಗಳನ್ನು ಪೂರೈಸುತ್ತಿದ್ದನು. ಹಳ್ಳಿಯ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದ ಮತ್ತೊಂದು ಕರಕುಶಲ ವರ್ಗವೆಂದರೆ ಕುಂಬಾರರು. ಇವರ ಉತ್ಪನ್ನಗಳು ಹೆಚ್ಚಿನ ಬೇಡಿಕೆಯಲ್ಲಿದ್ದವು. ಸಮಾಜದ ಪ್ರತಿಯೊಂದು ವರ್ಗದವರಿಗೂ ಇವರ ಉತ್ಪನ್ನಗಳು ಅತ್ಯವಶ್ಯಕವಾಗಿದ್ದವು. ಲೋಹದ ಪಾತ್ರೆಗಳನ್ನು ಕೇವಲ ಪ್ರತಿಷ್ಠಿತ ವರ್ಗದವರು

ಉಪಯೋಗಿಸುತ್ತಿದ್ದುದರಿಂದ, ಹೆಚ್ಚಿನ ಜನತೆ ಮಣ್ಣಿನ ಪಾತ್ರೆಗಳನ್ನು ಹಲವು ರೀತಿಯ ಧಾನ್ಯಗಳನ್ನು, ಎಣ್ಣೆಯ ಉತ್ಪನ್ನಗಳನ್ನು, ನೀರನ್ನು ಸಂಗ್ರಹಿಸಿಡಲು ಹಾಗೂ ಅಡುಗೆ ಮಾಡಲು ಬಳಸುತ್ತಿದ್ದರು. ಇದರಿಂದಾಗಿ ಮಡಕೆ ಮಾಡುವುದು ಅತ್ಯಂತ ಪ್ರಮುಖ ವೃತ್ತಿಯಾಗಿ ಬೆಳೆಯಿತು. ಹಾಗಾಗಿ ಇವರ ಕಸುಬಿಗೆ ಮತ್ತು ಉತ್ಪನ್ನಗಳಿಗೆ ಸಮಾಜದಲ್ಲಿ ಹೆಚ್ಚಿನ ಬೇಡಿಕೆ ಮತ್ತು ಮಾನ್ಯತೆಯಿತ್ತು.

ಕಾಡಿನ ಉತ್ಪನ್ನಗಳನ್ನು ಆಧರಿಸಿ ಕೆಲವು ವೃತ್ತಿಗಳು ಹುಟ್ಟಿಕೊಂಡವು. ಅವುಗಳೆಂದರೆ ಬುಟ್ಟಿ ಹೆಣೆಯುವುದು, ಗಣಿಗಾರಿಕೆ, ಮರಗೆಲಸ ಮತ್ತು ಔಷಧಿ ತಯಾರಿಸುವುದು. ದಕ್ಷಿಣ ಭಾರತದಲ್ಲಿ ವಿವಿಧ ರೀತಿಯ ಕಲ್ಲು ಹೇರಳವಾಗಿ ದೊರೆಯುತ್ತಿದ್ದುದರಿಂದ ಕಲ್ಲುಕುಟಿಗರ ವರ್ಗವು ಅಸ್ತಿತ್ವಕ್ಕೆ ಬಂದಿತು. ಕಲ್ಲನ್ನು ಮುಖ್ಯವಾಗಿ ದೇವಾಲಯಗಳನ್ನು ಕಟ್ಟಲು ಹಾಗೂ ದೇವರ ವಿಗ್ರಹಗಳನ್ನು ಮಾಡಲು ಬಳಸುತ್ತಿದ್ದುದರಿಂದ ಕ್ರಮೇಣವಾಗಿ ಕಲ್ಲುಕುಟಿಗರು ಶಿಲ್ಪಿಗಳಾಗಿ ಮಾರ್ಪಾಟಾದರು. ಇವರು ದೇವಾಲಯಗಳನ್ನು ಕಟ್ಟುವುದರ ಜೊತೆಗೆ ವೀರಗಲ್ಲುಗಳು, ಸತಿಗಲ್ಲುಗಳು, ಧ್ವಜಸ್ತಂಭಗಳು ಇತ್ಯಾದಿ ಶಿಲ್ಪಗಳನ್ನು ಮಾಡುತ್ತಿದ್ದರು. ಪೂರ್ವಮಧ್ಯಯುಗೀನ ಮತ್ತು ಮಧ್ಯಯುಗೀನ ಕಾಲದಲ್ಲಿ ದಕ್ಷಿಣ ಭಾರತದ ಪ್ರತಿಯೊಂದು ರಾಜಮನೆತನವು ಸಹ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಮತ್ತು ತಮ್ಮ ಹೆಸರನ್ನು ಶಾಶ್ವತವಾಗಿಡಲು ಪುರೋಹಿತಶಾಹಿ ವರ್ಗದೊಡನೆ ಕೈಜೋಡಿಸಿ ದೇವಾಲಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಕಟ್ಟಲು ಮುಂದಾದರು. ಇದಕ್ಕಾಗಿ ದೇವಾಲಯ ಕಟ್ಟುವವರನ್ನು ಮತ್ತು ಶಿಲ್ಪಿಗಳನ್ನು ದೂರದ ಪ್ರದೇಶಗಳಿಂದ ಬರಮಾಡಿಕೊಂಡು ಅವರಿಗೆ ರಾಜಾಶ್ರಯ ನೀಡಿ ಪ್ರೋತ್ಸಾಹ ನೀಡುತ್ತಿದ್ದರು. ಇಂತಹ ಕೆಲಸಗಳನ್ನು ಹೆಚ್ಚಾಗಿ ಚಿನ್ನ, ಬೆಳ್ಳಿ ಮತ್ತು ತಾಮ್ರದ ಕೆಲಸ ಮಾಡುತ್ತಿದ್ದ ಆಚಾರಿಗಳು ಮಾಡುತ್ತಿದ್ದರು. ಇವರನ್ನು ಶಾಸನಗಳಲ್ಲಿ ತತ್ತಾರ, ಶಿಲ್ಪಿ, ಓಜ, ಆಚಾರಿ, ಆಚಾರ್ಯ ಮತ್ತು ವಿಶ್ವಕರ್ಮ ಎಂದು ಕರೆಯಲಾಗಿದೆ. ಇವರ ಉತ್ಪನ್ನಗಳು ಅಂದರೆ ಚಿನ್ನ ಮತ್ತು ಬೆಳ್ಳಿಯ ಆಭರಣಗಳು ಹೆಚ್ಚಾಗಿ ದೇವಾಲಯದ ಕೆಲಸಗಳಿಗಾಗಿ ಮತ್ತು ಸಮಾಜದ ಪ್ರತಿಷ್ಠಿತ ವರ್ಗದವರು ಉಪಯೋಗಿಸುತ್ತಿದ್ದುದರಿಂದ ಸಮಾಜದಲ್ಲಿ ಇವರ ಸ್ಥಾನಮಾನಗಳು ಹೆಚ್ಚಾದವು. ಇವರು ಕ್ರಿ.ಶ. ೫-೬ನೇ ಶತಮಾನದಿಂದಲೇ ಸಮಾಜದಲ್ಲಿ ಬ್ರಾಹ್ಮಣರಿಗೆ ಸಿಗುವ ಎಲ್ಲಾ ಸ್ಥಾನಮಾನಗಳು ತಮಗೆ ಸಿಗಬೇಕೆಂದು ಕೇಳಿಕೊಂಡಿದ್ದಾರೆ. ಇವರ ನಂತರ ಬರುವವರೆಂದರೆ ಕಂಚುಗಾರರು. ಕಂಚಿನ ಪಾತ್ರೆಗಳು, ವಿಗ್ರಹಗಳು ಮತ್ತು ಉಪಕರಣಗಳನ್ನು ಇವರು ತಯಾರಿಸುತ್ತಿದ್ದರು. ಚರ್ಮ ಹದ ಮಾಡುವುದು ಮತ್ತು ಅದರಿಂದ ಚಪ್ಪಲಿ, ಚೀಲ ಹಾಗೂ ಇನ್ನಿತರ ವಸ್ತುಗಳನ್ನು ತಯಾರಿಸುವುದು ಅಂದಿನ ಇನ್ನೊಂದು ಕಸುಬಾಗಿತ್ತು. ಇದು ಕನಿಷ್ಠ ಕೆಲಸವಾಗಿದ್ದರಿಂದ ಅಂತಹ ಕೆಲಸ ಮಾಡುವವರಿಗೆ ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನಗಳು ಇರಲಿಲ್ಲ.

**ಕರಕುಶಲ ಸಂಘಗಳು :** ಕರಕುಶಲ ಸಂಘಗಳನ್ನು ಸೇಣಿ, ಶ್ರೇಣಿ, ಕೊತ್ತಳಿ, ಸಮೂಹ, ಹಿಟ್ಟು ಮತ್ತು ಒಕ್ಕಲು ಎಂದು ಅಂದಿನ ಶಾಸನಗಳು ಉಲ್ಲೇಖಿಸುತ್ತವೆ. ವಿದ್ವಾಂಸರು ಇವುಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ. ಅವುಗಳೆಂದರೆ ಕೃಷಿಕರ ಸಂಘ ಮತ್ತು ಗುಡಿ ಕೈಗಾರಿಕಾ ಸಂಘಗಳು. ಕೃಷಿಕರ ಸಂಘಗಳಾವುವೆಂದರೆ

ಉಗುರ ಮುನ್ನೂರ್ವರು, ಕುರುಬರ ಶ್ರೇಣಿಗಳು, ತಾಂಬೂಲಿಗರೈನೂರ್ವರು, ಗಳೆ ಮುನ್ನೂರು, ಬಿಲ್ಲ ಮುನ್ನೂರ್ವರು, ಮೇಡರು, ಮೊತ್ತಕಾರರು, ಬಿದಿರು ಕೆಲಸಗಾರರು, ಬೋಜಾಂಗರು, ಮಾಲೆಕಾರರು ಮತ್ತು ಅರವತ್ತು ಒಕ್ಕಲುಗಳು. ಗುಡಿ ಕೈಗಾರಿಕೆಗಳ ಸಂಘಗಳಲ್ಲಿ ಪ್ರಮುಖವಾದವುಗಳೆಂದರೆ, ಗಾಣಿಗರು, ಮಗ್ಗದವರು, ಚಿಪ್ಪಿಗರು, ಓಜರು ಮತ್ತು ಲೋಹದ ಕೆಲಸಗಾರರು. ಮಗ್ಗದವರ ಸಂಘಗಳನ್ನು ಜೇಡಗೊತ್ತಳಿ ಮತ್ತು ಜಗತಿಕೊತ್ತಳಿಯೆಂದೂ, ಗಾಣಿಗರ ಸಂಘವನ್ನು ತೆಲ್ಲಿಗರೈವತ್ತೊಕ್ಕಲು / ಸಾಸಿರ್ವರು ಎಂದೂ, ಲೋಹದ ಕೆಲಸಗಾರರ ಸಂಘವನ್ನು ವೀರಪಾಂಚಾಲರೆಂದೂ ಶಾಸನಗಳಲ್ಲಿ ಕರೆಯಲಾಗಿದೆ. ಅಂದಿನ ಪ್ರಮುಖ ಮತ್ತು ಪ್ರಬಲ ಸಂಘವೆಂದರೆ ವೀರಪಾಂಚಾಲರ ಸಂಘ. ಈ ಸಂಘಗಳು ತಮ್ಮದೇ ಆದ ಕಾನೂನು ಕಟ್ಟಲೆಗಳನ್ನು ಹೊಂದಿದ್ದು, ದಿನನಿತ್ಯದ ಚಟುವಟಿಕೆಗಳ ಜೊತೆಗೆ ಆಯಾ ಸ್ಥಳದ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದವು. ಇದಕ್ಕೆ ಸಂಬಂಧಿಸಿದಂತೆ, ಅರಸೀಕೆರೆ ತಾಲ್ಲೂಕಿನ ಕಣಕಟ್ಟೆಯ ಕೆಲವು ಶಾಸನಗಳು ಅಲ್ಲಿ ಜಗತೇಶ್ವರ ಮತ್ತು ನೀಲೇಶ್ವರ ದೇವಾಲಯಗಳನ್ನು ಕಟ್ಟಿ ಅವುಗಳ ನಿರ್ವಹಣೆಗೆ ಕೆರೆಯ ಹಿಂಭಾಗದಲ್ಲಿ ಭೂಮಿಯನ್ನು ದಾನ ಮಾಡಿದ್ದಲ್ಲದೇ, ಆ ದೇವರುಗಳ ಹೆಸರಲ್ಲಿ ಭಂಡಾರಗಳನ್ನು ಸ್ಥಾಪಿಸಿದ್ದನ್ನು ತಿಳಿಸುತ್ತವೆ.

## 5.4. ವ್ಯಾಪಾರ

ವ್ಯಾಪಾರ ಚಟುವಟಿಕೆಗಳು ದಕ್ಷಿಣ ಭಾರತದಲ್ಲಿ ಕ್ರಿ.ಶ. ೫ನೇ ಶತಮಾನದಲ್ಲಿ ಚಿಕ್ಕ ಪ್ರಮಾಣದಲ್ಲಿದ್ದವು ಅವು ಕ್ರಿ.ಶ. ೮ನೇ ಶತಮಾನದ ನಂತರ ಚುರುಕುಗೊಂಡವು. ಅವಶ್ಯಕ ವಸ್ತುಗಳಾದ ಉಪ್ಪು ಮತ್ತು ಕಬ್ಬಿಣದ ವ್ಯಾಪಾರ ಎಲ್ಲಾ ಸಮಾಜದಲ್ಲಿ ಮತ್ತು ಎಲ್ಲಾ ಸಮಯದಲ್ಲೂ ನಡೆಯುತ್ತಿತ್ತು. ಆದರೆ ಕ್ರಿ.ಶ. ೧೦ನೇ ಶತಮಾನದಿಂದ ವ್ಯಾಪಾರವು ಕೇವಲ ಅವಶ್ಯಕ ವಸ್ತುಗಳಿಗೆ ಸೀಮಿತವಾಗಿರದೇ ಹಲವಾರು ವಸ್ತುಗಳನ್ನೊಳಗೊಂಡಿತು. ವ್ಯಾಪಾರದ ಮುಖ್ಯ ಉದ್ದೇಶ ಎಲ್ಲಿ ಕೆಲವು ಸರಕುಗಳು ಸಿಗುವುದಿಲ್ಲವೋ ಅಲ್ಲಿಗೆ ಅವುಗಳನ್ನು ಪೂರೈಸುವುದಷ್ಟೇ ಅಲ್ಲದೆ ಲಾಭ ಗಳಿಸುವುದು ಪ್ರಮುಖ ಉದ್ದೇಶವಾಗಿತ್ತು. ವ್ಯಾಪಾರಿಗಳು ಹೆಚ್ಚು ಲಾಭ ಗಳಿಸುವ ಉದ್ದೇಶದಿಂದ ದೂರದ ಪ್ರದೇಶಗಳಿಗೆ ಸರಕುಗಳನ್ನು ಒಯ್ದು ಅಲ್ಲಿ ಹೆಚ್ಚಿನ ಬೆಲೆಗೆ ಮಾರಿ ಲಾಭ ಗಳಿಸಲಾರಂಭಿಸಿದರು. ಈ ರೀತಿಯ ದೂರದ ಪ್ರಯಾಣ ಕೈಗೊಳ್ಳಲು ಒಬ್ಬಿಬ್ಬರಿಂದ ಸಾಧ್ಯವಾಗದ ಕಾರಣ ವರ್ತಕರು ತಮ್ಮ ಸಂಘವನ್ನು ಕಟ್ಟಿಕೊಂಡು ಅದಕ್ಕೆ ಕೆಲವು ನಿಯಮಗಳನ್ನು ರೂಪಿಸಿದರು. ಹೀಗಾಗಿ ಈ ಕಾಲದಲ್ಲಿ ಹಲವು ರೀತಿಯ ವ್ಯಾಪಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ಇಂತಹ ಸಂಘ ಸಂಸ್ಥೆಗಳಿಂದ ಸರಕಾರಕ್ಕೆ ಲಾಭದಾಯಕವಾದ್ದರಿಂದ ಅವುಗಳನ್ನು ಗುರುತಿಸಿ ಮಾನ್ಯ ಮಾಡಲಾರಂಭಿಸಿತು.[121] (ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್‌ಷನ್ಸ್ - ೧೫೭)

ದಕ್ಷಿಣ ಭಾರತವು ಪ್ರಾಚೀನ ಕಾಲದಲ್ಲಿ ಗ್ರೀಕ್, ರೋಮ್ ಮತ್ತಿತರ ಪಾಶ್ಚಿಮಾತ್ಯ ದೇಶಗಳೊಡನೆ ನಿಕಟ ವ್ಯಾಪಾರ ಸಂಬಂಧ ಹೊಂದಿತ್ತು. ಇದಕ್ಕೆ ಸಾಕ್ಷಿಯೆಂಬಂತೆ ದಕ್ಷಿಣ ಭಾರತದಲ್ಲಿ ಹಲವಾರು ಗ್ರೀಕ್

ಮತ್ತು ರೋಮ್ ನಾಣ್ಯದ ನಿಧಿಗಳು ಪತ್ತೆಯಾಗಿವೆ. ವ್ಯಾಪಾರ ಚಟುವಟಿಕೆಗಳು ತೀವ್ರಗೊಂಡಿದ್ದು ವರ್ತಕರ ಸಂಘಗಳ ಉಗಮದೊಂದಿಗೆ. ದಕ್ಷಿಣ ಭಾರತದಲ್ಲಿ ಮೊತ್ತ ಮೊದಲ ಬಾರಿಗೆ ಅಯ್ಯಾವೊಳೆ ಐನೂರ್ವರು ಎಂಬ ವ್ಯಾಪಾರಿ ಸಂಘವು ಬದಾಮಿ ಚಾಲುಕ್ಯರ ಮೊದಲ ರಾಜಧಾನಿ ಐಹೊಳೆಯಲ್ಲಿ ಕ್ರಿ.ಶ. ೭೮೮ರಲ್ಲಿ ಅಸ್ತಿತ್ವಕ್ಕೆ ಬಂದಿತು. ಅಂದಿನಿಂದ ಶಾಸನಗಳು ಹೆಚ್ಚಾಗಿ ವ್ಯಾಪಾರ ಮತ್ತು ವರ್ತಕರ ಚಟುವಟಿಕೆಗಳ ಬಗ್ಗೆ ಹೆಚ್ಚು ಬೆಳಕು ಚೆಲ್ಲುತ್ತವೆ. ಈ ಚಟುವಟಿಕೆಗಳು ವಿಜಯನಗರ ಕಾಲದಲ್ಲಿ ಅಧಿಕಗೊಂಡು ಅಂತರರಾಷ್ಟ್ರೀಯ ಮಟ್ಟವನ್ನು ತಲುಪಿತು. ಈ ರೀತಿಯ ವ್ಯಾಪಾರದ ಹೆಚ್ಚಳಕ್ಕೆ ಅನೇಕ ಕಾರಣಗಳಿದ್ದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ :

**ಅ. ಕೃಷಿಯಲ್ಲಾದ ಅಧಿಕ ಉತ್ಪನ್ನ :** ಕ್ರಿ.ಶ. ೧೨ನೇ ಶತಮಾನದ ನಂತರ ದಕ್ಷಿಣ ಭಾರತದಲ್ಲಿ ಅಗಾಧ ಪ್ರಮಾಣದಲ್ಲಿ ಕಾಡು ಭೂಮಿ, ಗುಡ್ಡಗಾಡಿನ ಭೂಮಿ ಮತ್ತು ಹುಲ್ಲುಗಾವಲುಗಳನ್ನು ಹಸನು ಮಾಡಿ ಬೇಸಾಯಕ್ಕೆ ಒಳಪಡಿಸಲಾಯಿತು. ಇದಲ್ಲದೆ ಈ ಕಾಲದಲ್ಲಿ ಕಬ್ಬಿಣದ ಸಲಕರಣೆಗಳನ್ನು ಹೆಚ್ಚು ಹೆಚ್ಚಾಗಿಯೂ ಹಾಗೂ ನೀರಾವರಿ ಸೌಕರ್ಯಗಳನ್ನು ಬಳಸಲಾರಂಭಿಸಿದರು. ಇದರಿಂದಾಗಿ ಬೇಸಿಗೆಯಲ್ಲಿಯೂ ರೈತರು ಆಹಾರ ಧಾನ್ಯಗಳ ಜೊತೆಗೆ ಆಹಾರೇತರ ಧಾನ್ಯಗಳನ್ನು ಬೆಳೆದು ಉತ್ಪನ್ನವನ್ನು (ಮಿಗುತೆಯ ಉತ್ಪನ್ನ) ಹೆಚ್ಚಿಸಿದರು. ದಿನ ನಿತ್ಯದ ಆವಶ್ಯಕತೆಗಿಂತ ಹೆಚ್ಚಾದ ಕೃಷಿ ಉತ್ಪನ್ನಗಳನ್ನು ಕೃಷಿಯೇತರ ಸಮಾಜದವರಿಗೆ ಮಾರುಕಟ್ಟೆಯಲ್ಲಿ ಮಾರಲು ಅವಕಾಶವಾಯಿತು. ಹೀಗಾಗಿ ವ್ಯಾಪಾರ ವಹಿವಾಟು ಬೆಳೆಯಲು ಅಧಿಕ ಕೃಷಿ ಉತ್ಪನ್ನಗಳು ಮೂಲ ಪ್ರೇರಣೆ ನೀಡಿದವು.

**ಆ. ಅಧಿಕ ಕರಕುಶಲ ಉತ್ಪನ್ನಗಳು :** ಈ ಕಾಲದಲ್ಲಿ ಕೃಷಿ ಕ್ಷೇತ್ರದಲ್ಲಾದಂತೆ ಗುಡಿಕೈಗಾರಿಕೆ / ಕರಕುಶಲ ಕ್ಷೇತ್ರದಲ್ಲಿಯೂ ಬದಲಾವಣೆಗಳು ಕಂಡುಬಂದವು. ಗುಡಿಕೈಗಾರಿಕೆ / ಕರಕುಶಲ ವಸ್ತುಗಳಾದ ಬಟ್ಟೆ, ನೂಲು, ಎಣ್ಣೆ ಪದಾರ್ಥಗಳು, ಬೆಲ್ಲ, ಮಡಕೆಗಳು, ಲೋಹದ ಆಯುಧಗಳು, ಬಿದಿರಿನ ವಸ್ತುಗಳು ಹಾಗೂ ಚರ್ಮದ ವಸ್ತುಗಳು ಹೆಚ್ಚಾಗಿ ಉತ್ಪಾದಿಸಲ್ಪಟ್ಟವು. ಇಂತಹ ವಸ್ತುಗಳನ್ನು ಹೆಚ್ಚಾಗಿ ಕೃಷಿಯೇತರ ಸಮಾಜದವರು ಉತ್ಪಾದಿಸಿದ್ದರಿಂದ ತಮ್ಮ ದಿನನಿತ್ಯದ ಅವಶ್ಯಕ ವಸ್ತುಗಳನ್ನು ಕೊಂಡುಕೊಳ್ಳಲು ಅವುಗಳನ್ನು ಮಾರುಕಟ್ಟೆಗೆ ಅನಿವಾರ್ಯವಾಗಿ ಒಯ್ಯಲೇಬೇಕಾದ ಪ್ರಸಂಗ ಒದಗಿ ಬಂದಿತ್ತು. ಈ ರೀತಿಯ ಅಧಿಕ (ಮಿಗುತೆಯ) ಉತ್ಪನ್ನವು ವ್ಯಾಪಾರದ ಬೆಳವಣಿಗೆಗೆ ಸಹಾಯಕವಾಯಿತು.

**ಇ. ಹಣದ / ನಾಣ್ಯದ ಬಳಕೆ :** ವ್ಯಾಪಾರವನ್ನು ಮೂರು ವಿಧಗಳಲ್ಲಿ ಬೆಳೆದದ್ದನ್ನು ನೋಡಬಹುದು. ಅವುಗಳೆಂದರೆ ಸಾಟಿ ಪದ್ಧತಿ, ಹಣ ಚಲಾವಣೆ ಮತ್ತು ಸಾಲದ ವ್ಯವಸ್ಥೆ. ಕ್ರಿ.ಶ. ೧೧ನೇ ಶತಮಾನದವರೆಗೂ ಸಾಟಿ ಪದ್ಧತಿಯು ಅಧಿಕ ಪ್ರಮಾಣದಲ್ಲಿದ್ದು ನಂತರ ನಾಣ್ಯಗಳ ಬಳಕೆ ಹೆಚ್ಚಾಯಿತು. ಹಣದ ಬಳಕೆಯು ಚಾಲ್ತಿಯಲ್ಲಿದ್ದರೂ ಸ್ಥಳೀಯ ವ್ಯವಹಾರಗಳು ಹೆಚ್ಚಾಗಿ ಸಾಟಿ ಪದ್ಧತಿಯಲ್ಲೇ ನಡೆಯುತ್ತಿದ್ದವು. ಹಣದ ಬಳಕೆಯೊಂದಿಗೆ ದೂರದ ಅಥವಾ ವಿದೇಶಿ ವ್ಯಾಪಾರವು ಬಹಳ ಸುಲಭವಾಯಿತು. ವರ್ತಕರು ಹಣವನ್ನು

ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಲಭವಾಗಿ ಒಯ್ದು ತಮಗೆ ಬೇಕಾದ ವಸ್ತುಗಳನ್ನು ಹಣದ ರೂಪದಲ್ಲಿ ಕೊಳ್ಳಲು ಅನುಕೂಲವಾಯಿತು. ಇದಲ್ಲದೆ ಈ ಸಮಯದಲ್ಲಿ ದೇವಾಲಯದ ಭಂಡಾರಗಳು / ಖಜಾನೆಗಳು ಮತ್ತು ವರ್ತಕರ ಕೆಲವು ಸಂಘಗಳು ತಮ್ಮಲ್ಲಿದ್ದ ಠೇವಣಿ ಹಣವನ್ನು ಕೆಲವು ವಸ್ತುಗಳ ಆಧಾರದ ಮೇಲೆ ಬಡ್ಡಿ ಸಾಲ ನೀಡಲಾರಂಭಿಸಿದವು. ಈ ವ್ಯವಸ್ಥೆಯಿಂದ ಸಾಮಾನ್ಯ ವರ್ತಕರು ಸಹ ಇಂತಹ ಸಂಸ್ಥೆಗಳಿಂದ ಸಾಲ ಪಡೆದು ವ್ಯಾಪಾರ ವಹಿವಾಟುಗಳಲ್ಲಿ ನಿರತರಾಗುವುದಕ್ಕೆ ಪ್ರೋತ್ಸಾಹ ದೊರಕಿತು. ಅಂದಿನ ಪ್ರಮುಖ ನಾಣ್ಯಗಳೆಂದರೆ ವರಾಹ, ಪಗೋಡ, ಗದ್ಯಾಣ, ನಿಷ್ಕ, ಕಳಂಜು, ಪಣ, ಹಾಗ, ವೀಸಾ, ಕಾಸು, ಪೊನ್, ಮಡ್ಡೆ, ಪರ್ದಾವೋ, ಅಕ್ಕಮ್, ಕಣಿ ಇತ್ಯಾದಿ. ವರಾಹವು ಅತ್ಯಂತ ಹೆಚ್ಚಿನ ಮೌಲ್ಯದ ನಾಣ್ಯವಾಗಿದ್ದು ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಯಾಯಿತು. ಅಂದಿನ ಪ್ರಸಿದ್ಧ ವಿದೇಶಿ ನಾಣ್ಯಗಳೆಂದರೆ ದಿನಾರ್ ಮತ್ತು ದ್ರಮ್ಮ.

**ಈ. ಸಾರಿಗೆ ಸಂಪರ್ಕದ ಸೌಲಭ್ಯಗಳು :** ಸಾರಿಗೆ ಸಂಪರ್ಕ ಸೌಕರ್ಯಗಳು ವ್ಯಾಪಾರದ ಬೆಳವಣಿಗೆಗೆ ಹೆಚ್ಚು ಪ್ರೋತ್ಸಾಹ ನೀಡುತ್ತವೆ. ಸಾರಿಗೆಯ ಬೆಳವಣಿಗೆಗೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಧಾರ್ಮಿಕ ಮತ್ತು ಆಡಳಿತ ಕಾರಣಗಳು. ಪೂರ್ವ ಮಧ್ಯಯುಗೀನ ಮತ್ತು ಮಧ್ಯಯುಗೀನ ಕಾಲದಲ್ಲಿ ಹೆಚ್ಚು ರಾಜ್ಯಗಳ ನಿರ್ಮಾಣವಾದಂತೆ ಅವುಗಳ ಅವಶ್ಯಕತೆಗಳನ್ನು ಪೂರೈಸಲು ಸಾರಿಗೆ ಸಂಪರ್ಕದ ಅವಶ್ಯಕತೆ ಹೆಚ್ಚಾಯಿತು. ಇವುಗಳ ಜೊತೆಗೆ ಕ್ರಿ.ಶ. ೧೧ನೇ ಶತಮಾನದಿಂದ ವ್ಯಾಪಾರದ ಅವಶ್ಯಕತೆಯು ಸಹ ರಸ್ತೆಗಳ ನಿರ್ಮಾಣಕ್ಕೆ ಸಹಕಾರಿಯಾಯಿತು. ಬಂದರುಗಳನ್ನು ಒಳನಾಡಿನ ಜೊತೆ ಸೇರಿಸುವುದಕ್ಕೂ ಹಾಗೂ ಅಂದಿನ ಯುದ್ಧಗಳು ಸಹ ಸಾರಿಗೆ ಸಂಪರ್ಕದ ಬೆಳವಣಿಗೆಗೆ ಹೆಚ್ಚು ಸಹಕಾರಿಯಾದವು. ಶಾಸನಗಳು ದಕ್ಷಿಣ ಭಾರತದಲ್ಲಿದ್ದ ರಸ್ತೆಗಳ ಬಗ್ಗೆ ಪರೋಕ್ಷವಾಗಿ ಬೆಳಕು ಚೆಲ್ಲುತ್ತವೆ.[122] ದಾನ ಮಾಡಿದ ಭೂಮಿಯ ಎಲ್ಲೆಯನ್ನು ತಿಳಿಸುವಾಗ ರಸ್ತೆಗಳ ಉಲ್ಲೇಖ ಬರುತ್ತದೆ. ಅಂದಿನ ರಸ್ತೆಗಳನ್ನು ರಾಜಪಥ, ರಾಜವೀಧಿ, ಹೆದ್ದಾರಿ, ಹಿರಿಯ ಹೆದ್ದಾರಿ, ಬಟ್ಟೆ, ದಾರಿ, ಅಡ್ಡದಾರಿ, ಓಣಿ ಇತ್ಯಾದಿ ಹೆಸರುಗಳಿಂದ ಕರೆಯಲಾಗಿದೆ.[123] ಕೆಲವು ಹೆದ್ದಾರಿಗಳಲ್ಲಿ ಪ್ರಯಾಣಿಕರ ಮತ್ತು ವ್ಯಾಪಾರಿಗಳ ಹಸಿವು ಮತ್ತು ಬಾಯಾರಿಕೆಯನ್ನು ಇಂಗಿಸುವುದಕ್ಕಾಗಿ 'ಅರವಟ್ಟಿಗೆ'ಗಳನ್ನು ಸ್ಥಾಪಿಸಿ ಅಲ್ಲಿ ಮಜ್ಜಿಗೆ, ನೀರು, ಗಂಜಿ ಮತ್ತು ವೀಳ್ಯದೆಲೆ ನೀಡಲಾಗುತ್ತಿತ್ತು.[124] ಇವುಗಳನ್ನು ನಡೆಸಲು ರಾಜರು ಮತ್ತು ಅವರ ಸಾಮಂತರು ಕೆಲವು ವೇಳೆ ಶ್ರೀಮಂತ ವರ್ತಕರು ಮತ್ತು ಜಮೀನ್ದಾರರು ವಿವಿಧ ರೀತಿಯ ದಾನ ಮಾಡಿದ್ದರು. ವ್ಯಾಪಾರವನ್ನು ಭೂಮಾರ್ಗ ಮತ್ತು ಜಲಮಾರ್ಗಗಳ ಮೂಲಕ ಮಾಡಲಾಗುತ್ತಿತ್ತು. ಇಂತಹ ಸೌಕರ್ಯಗಳಿಂದಾಗಿ ದಕ್ಷಿಣ ಭಾರತದುದ್ದಕ್ಕೂ ವ್ಯಾಪಾರ ಸಂಪರ್ಕ ಉನ್ನತ ಮಟ್ಟದಲ್ಲಿ ಬೆಳೆಯಿತು. ಈ ಅವಧಿಯಲ್ಲಿ ಕರ್ನಾಟಕ, ಚೋಳ, ಚೇರ ಮತ್ತು ಪಾಂಡ್ಯ ರಾಜ್ಯಗಳ ನಡುವೆ ಉನ್ನತ ವ್ಯಾಪಾರ ಸಂಪರ್ಕವಿತ್ತು. ಹನ್ನೊಂದನೆ ಶತಮಾನದಿಂದ ವ್ಯಾಪಾರಿಗಳು ಸತ್ಯಮಂಗಲದ ಸಂದಿಯ ಮುಖಾಂತರ ಕೊಂಗುದೇಶ ಮತ್ತು ಗಂಗರ ರಾಜಧಾನಿ ತಲಕಾಡಿನ ನಡುವೆ ವ್ಯಾಪಾರ

ನಡೆಸುತ್ತಿದ್ದರು. ಕಾವೇರಿಯ ಉಪನದಿಗಳಾದ ಸುವರ್ಣಾವತಿ ಮತ್ತು ಕಪಿಲಾ ನದಿಗಳು ದಕ್ಷಿಣ ಕರ್ನಾಟಕ ಮತ್ತು ಕೇರಳ ಹಾಗೂ ಕೊಯಮತ್ತೂರು ಮತ್ತು ಕರ್ನಾಟಕದ ನಡುವೆ ವ್ಯಾಪಾರ ನಿರಂತರವಾಗಿ ನಡೆಯುತ್ತಿತ್ತು. ಸಾರಿಗೆ ಸಂಪರ್ಕಗಳು ಒಂದು ರಾಜ್ಯದ ಸಂಪತ್ತನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಅದಕ್ಕಾಗಿಯೇ ಹೆಚ್ಚಿನ ಆಳರಸರು ಅದರಲ್ಲೂ ಚೋಳರು ಈ ವ್ಯಾಪಾರ ಮಾರ್ಗಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಹವಣಿಸುತ್ತಿದ್ದರು.

**ಉ. ರಾಜ್ಯದ ಪ್ರೋತ್ಸಾಹ :** ವ್ಯಾಪಾರವು ರಾಜ್ಯದ ಅವಶ್ಯಕತೆಗಳಾದ ಆನೆ, ಕುದುರೆ, ಆಯುಧಗಳು ಮತ್ತಿತರ ಐಷಾರಾಮದ ವಸ್ತುಗಳನ್ನು ಪೂರೈಸುವುದರ ಜೊತೆಗೆ ಅಧಿಕ ಪ್ರಮಾಣದ ನಗದು ಆದಾಯ ತರುತ್ತಿದ್ದುದರಿಂದ ಇದನ್ನು ಪ್ರೋತ್ಸಾಹಿಸುವುದು ರಾಜ್ಯಗಳಿಗೆ ಅತ್ಯವಶ್ಯಕವಾಗಿತ್ತು. ಇದಕ್ಕಾಗಿಯೇ ಆಳರಸರು ಶ್ರೀಮಂತ ವ್ಯಾಪಾರಿಗಳನ್ನು ಗೌರವಿಸಿ ಅವರನ್ನು ಪಟ್ಟಣಗಳ ಅಧಿಕಾರಿಗಳಾಗಿ (ಪಟ್ಟಣಸ್ವಾಮಿ) ನೇಮಿಸುತ್ತಿದ್ದರು. ಕೆಲವು ಮಲಯಾಳಿ ಮಹಾವಡ್ಡವ್ಯವಹಾರಿಗಳನ್ನು ಕರ್ನಾಟಕದ ಅರಸರಾದ ಕಲ್ಯಾಣಿ ಚಾಲುಕ್ಯರು ಮತ್ತು ಹೊಯ್ಸಳರು ಗೌರವಿಸಿ ಅವರನ್ನು ದಂಡನಾಯಕರನ್ನಾಗಿ ಮತ್ತು ಆಡಳಿತಗಾರರನ್ನಾಗಿ ನೇಮಿಸಿದ್ದರು. ಅವರನ್ನು ಬೆಂಬಲಿಸುವುದಕ್ಕಾಗಿ ವ್ಯಾಪಾರ ಮಾರ್ಗಗಳನ್ನು ತೆರೆಯುವುದು, ವಾರದ ಸಂತೆಗಳನ್ನು ಸ್ಥಾಪಿಸುವುದು ಮತ್ತು ಅವರು ಅಲ್ಲಿ ಶಾಶ್ವತವಾಗಿ ನೆಲೆಸಲು ಮನೆ, ಮನೆ ನಿವೇಶನ ಮತ್ತು ಕೆಲವು ಸರಕುಗಳ ಮೇಲೆ ರಿಯಾಯಿತಿ ನೀಡಿ ಪ್ರೋತ್ಸಾಹಿಸುತ್ತಿದ್ದರು. ಇದಲ್ಲದೆ ವರ್ತಕರ ಪ್ರಯಾಣದ ಸಮಯದಲ್ಲಿ ಭದ್ರತಾ ಸಿಬ್ಬಂದಿಯನ್ನು ಒದಗಿಸುತ್ತಿದ್ದರು. ಕೆಲವು ವಿದ್ವಾಂಸರ ಪ್ರಕಾರ ವರ್ತಕರು ಮತ್ತು ಆಳರಸರ ನಡುವೆ ಉತ್ತಮ ಸಂಬಂಧವಿತ್ತು.

**ಊ. ಕರಾವಳಿ ತೀರ ಪ್ರದೇಶ :** ದಕ್ಷಿಣ ಭಾರತವು ಭೌಗೋಳಿಕವಾಗಿ ಪರ್ಯಾಯ ದ್ವೀಪವಾದ್ದರಿಂದ ಮೂರು ಕಡೆಗಳಲ್ಲೂ ಬಹಳ ವಿಶಾಲವಾದ ಕಡಲನ್ನು ಹೊಂದಿದೆ. ಇದರಿಂದಾಗಿ ಈ ಪ್ರದೇಶದಲ್ಲಿ ಹಲವಾರು ನದಿಗಳು ಒಳನಾಡಿನಿಂದ ಹರಿದು ಬಂದು ಸೇರುವುದರಿಂದಲೂ ಹಾಗೂ ಸ್ವಾಭಾವಿಕ ಬಂದರುಗಳು ಇದ್ದುದರಿಂದ ಒಳನಾಡಿನ ಉತ್ಪನ್ನಗಳನ್ನು ಸುಲಭವಾಗಿ ನದಿಗಳ ಮೂಲಕ ಬಂದರುಗಳಿಗೆ ಸಾಗಿಸುವುದಕ್ಕೆ ಹಾಗೂ ವಿದೇಶದಿಂದ ಬಂದರುಗಳಿಗೆ ಬಂದ ಸರಕುಗಳನ್ನು ಒಳನಾಡುಗಳಿಗೆ ಒಯ್ಯುವುದಕ್ಕೆ ಬಹಳ ಅನುಕೂಲವಾಗಿತ್ತು. ಇದರಿಂದಾಗಿ ತೀರ ಪ್ರದೇಶಗಳಲ್ಲಿ ಹಲವಾರು ವ್ಯಾಪಾರ ಕೇಂದ್ರಗಳು ಅಸ್ತಿತ್ವಕ್ಕೆ ಬಂದವು. ಈ ಮೇಲೆ ತಿಳಿಸಿದ ಕಾರಣಗಳಿಂದಾಗಿ ವ್ಯಾಪಾರ ಮತ್ತು ವಹಿವಾಟು ಈ ಸಮಯದಲ್ಲಿ ಅಧಿಕಗೊಂಡಿತು.[125] (ಡಿಸ್‌ಪ್ಯಾಚಸ್ ಫ್ರಂ ಇಂಗ್ಲೆಂಡ್ ೧೭೧೭ ಟು ೧೭೨೧, ಪು. ೨೦)

## ಅ. ವ್ಯಾಪಾರದ ವಿಧಗಳು ಮತ್ತು ವಸ್ತುಗಳು

**ವಜ್ರಗಳು :** ವಿಜಯನಗರಕ್ಕೆ ಬಹುತೇಕ ವಜ್ರಗಳು ಬರುತ್ತಿದ್ದುದು ಗೂಟಿಯ ನೈರುತ್ಯಕ್ಕೆ ಸುಮಾರು ೨೦ ಮೈಲು ದೂರದಲ್ಲಿ ವಜ್ರಕುರೂರಿನಿಂದ ಗೂಟಿಯ ಗವರ್ನರನು ತೂಕದಲ್ಲಿ ಮಾಂಗೆಲಿನ್‌ಗಿಂತ ಹೆಚ್ಚಾದ

ಎಲ್ಲಾ ವಜ್ರಗಳನ್ನೂ ರಾಜನಿಗೆ ಕೊಟ್ಟುಬಿಡಬೇಕಾಗಿತ್ತು.[126] ೧೫೩೪ರಲ್ಲಿ ಭಾರತಕ್ಕೆ ಬಂದಿದ್ದ ಗಾರ್ಸಿಯ ಓರ್ಟಾ, ವಿಜಯನಗರದಲ್ಲಿ ಅನೇಕ ವಜ್ರಗಳನ್ನು ಕೊಡುತ್ತಿದ್ದ ೨ ಅಥವಾ ೩ ಬಂಡೆಗಳಿದ್ದುವು ಎಂದು ಹೇಳುತ್ತಾನೆ. ಅವನು ದಖ್ಖನಿನಲ್ಲಿ ಇನ್ನೂ ಒಂದು ವಜ್ರದ ಗಣಿಯನ್ನು ಪತ್ತೆ ಹಚ್ಚಿದನು. ನಕಲಿ ವಜ್ರಗಳು, ಕೆಂಪು ಮಾಣಿಕ್ಯಗಳು, ಗೋಮೇಧಿಕಗಳು ಮತ್ತು ಇಂದ್ರ ನೀಲಗಳು ತಯಾರಿಸಲಾಗುತ್ತಿದ್ದಿತು. ಇವು ನಿಜವಾದ ಪ್ರಶಸ್ತ ಶಿಲೆಗಳ ಬಹಳ ಉತ್ತಮವಾದ ನಕಲುಗಳಾಗಿದ್ದವು. ಇಂದ್ರನೀಲಗಳು ಕ್ಯಾಲಿಕಟ್ ಬಳಿ ದೊರಕುತ್ತಿದ್ದುವು.

**ಲೋಹಗಳು :** ವಿಜಯನಗರ ಪಟ್ಟಣದಲ್ಲಿ ಮಿಶ್ರಿತ ಹಾಗೂ ಅಮಿಶ್ರಿತ ಲೋಹಗಳು ವಿಪುಲವಾಗಿ ತಾಮ್ರ ಮತ್ತು ಪಾದರಸ ಕಂಡುಬಂದಿದ್ದುವು. ಹೇರುಗಟ್ಟಲೆ ಕಬ್ಬಿಣವನ್ನು ಭಟ್ಕಳದಿಂದ ರಫ್ತು ಮಾಡಲಾಗುತ್ತಿತ್ತು.[127]

**ಲೋಹದ ಕೆಲಸ :** ಅ) ಆಭರಣಗಳ ತಯಾರಿಕೆ ಆ) ಯುದ್ಧದ ಆಯುಧಗಳ ತಯಾರಿಕೆ ಮತ್ತು ಇ) ಮನೆ ಬಳಕೆಯ ವಸ್ತುಗಳು.

**ಅ) ಆಭರಣಗಳು :** ೧. ದೇವಾಲಯಗಳಿಗೆ, ೨. ರಾಜರ ಆಸ್ಥಾನಗಳಿಗೆ, ೩. ಯೋಧರಿಗೆ ೪. ಜನಸಾಮಾನ್ಯರಿಗೆ ಅಗತ್ಯವಾಗಿದ್ದುವು. ಕೃಷ್ಣದೇವರಾಯನು ದೇವಾಲಯಗಳಿಗೆ ಆಭರಣಗಳನ್ನು ಬಹು ಉದಾರವಾಗಿ ಅರ್ಪಿಸುತ್ತಿದ್ದನು. ಒಂದು ಉದಾಹರಣೆಯನ್ನು ಕೊಡಬಹುದು: ಕಾಳಹಸ್ತೀಶ್ವರನಿಗೆ ಅವನು ಅಮೂಲ್ಯವಾದ ಹರಳುಗಳನ್ನು ಕಟ್ಟಿದ ಒಂದು ಹಾರವನ್ನೂ, ಪೂಜಾ ಸಾಮಗ್ರಿಗಳನ್ನೂ, ಅಮೂಲ್ಯ ರತ್ನಗಳು ತುಂಬಿದ ಒಂದು ಚಿನ್ನದ ಪ್ರಭಾವಳಿಯನ್ನೂ ಅರ್ಪಿಸಿದನು.[128]

ಆಸ್ಥಾನಕ್ಕೆ ಸೇರಿದ ನೃತ್ಯ ಕಲಾವಿದೆಯರು ತುಂಬಾ ಶ್ರೀಮಂತರಾಗಿದ್ದರು. ಅವರು ಚಿನ್ನ, ರತ್ನ, ವಜ್ರ, ಮಾಣಿಕ್ಯ, ಮುತ್ತುಗಳಿಂದ ತಯಾರಿಸಿದ ಆಭರಣಗಳನ್ನು ತಲೆಯಿಂದ ಕಾಲಿನವರೆಗೆ ಅಲಂಕರಿಸಿಕೊಳ್ಳುತ್ತಿದ್ದರು. ಪ್ರತಿಯೊಂದು ಆಭರಣವನ್ನು ಸೂಕ್ಷ್ಮವಾಗಿ ವರ್ಣಿಸಿದ ಮೇಲೆ ಪೇಸ್ ಉದ್ಗರಿಸುತ್ತಾನೆ: "ಈ ಒಬ್ಬೊಬ್ಬ ಹೆಂಗಸೂ ತನ್ನ ಮೈಮೇಲೆ ಧರಿಸಿರುವ ಆಭರಣಗಳ ಮೌಲ್ಯವನ್ನು ಯಾರು ತಾನೆ ಅಳೆಯಬಲ್ಲರು?"

ದೇಹವನ್ನು ಅಲಂಕರಿಸಿಕೊಳ್ಳುವ ಅಭ್ಯಾಸ ಎಷ್ಟು ಬಲವಾಗಿತ್ತೆಂದರೆ, ಯೋಧರು, ಆನೆಗಳು ಮತ್ತು ಕುದುರೆಗಳನ್ನೂ ಸಹ ಅಲಂಕರಿಸುತ್ತಿದ್ದರು. ಕುದುರೆ ಮತ್ತು ಆನೆಗಳ ಹಣೆಯ ಮೇಲೆ ಬೆಳ್ಳಿ ಅಥವಾ ಚಿನ್ನದ ಪಟ್ಟಿಗಳನ್ನು ಕಟ್ಟುತ್ತಿದ್ದರು. ಅದರಲ್ಲಿ ದಪ್ಪ ಪ್ರಶಸ್ತ ಹರಳುಗಳನ್ನು ಕಟ್ಟಿರಲಾಗುತ್ತಿತ್ತು. ಅಶ್ವಾರೋಹಿಗಳ ಕವಚಗಳಿಗೆ ಒಳಗೂ ಹೊರಗೂ ಮೆರುಗು ಕೊಡಲಾಗುತ್ತಿದ್ದಿತು.

ಪುರುಷರು ಸಣ್ಣ ಮುತ್ತುಗಳಿಂದ ತಯಾರಿಸಿದ ಕರ್ಣಾಭರಣಗಳನ್ನು ಮಾತ್ರ ಧರಿಸುತ್ತಿದ್ದರು. ಆದರೆ ಮಹಿಳೆಯರು ಮೂಗುತಿ, ಕುಂಡಲ, ಚಿನ್ನದ ಸರಗಳು, ರತ್ನಾಭರಣಗಳು, ಬಹು ಸುಂದರವಾದ ಹವಳದ

ಮಣಿಗಳು, ಚಿನ್ನ ಹಾಗೂ ಪ್ರಶಸ್ತ ಶಿಲೆಗಳಿಂದ ತಯಾರಿಸಿದ ಕಂಕಣಗಳು ಮೊದಲಾದ ಆಭರಣಗಳನ್ನು ಧರಿಸುತ್ತಿದ್ದರು.[129]

**ಆ) ಆಯುಧಗಳು :** ಅಶ್ವಾರೋಹಿಗಳ ಆಯುಧ ಕತ್ತಿ, ಯುದ್ದಗೊಡಲಿ, ಭರ್ಜಿ ಮತ್ತು ಈಟಿಗಳು ಮುಖ್ಯವಾದವು. ಕೃಷ್ಣನ ಸೈನ್ಯದಲ್ಲಿದ್ದ ಮುಸ್ಲಿಂ ಯೋಧರ ಬಳಿ ಭರ್ಜಿಗಳು, ಟರ್ಕಿಯ ಬಿಲ್ಲು ಬಾಣಗಳು, ಅನೇಕ ಸಿಡಿಗುಂಡುಗಳು, ಈಟಿಗಳು ಮತ್ತು ಅಗ್ನಿ ಕ್ಷಿಪಣಿಗಳು ಇದ್ದುವು. ಬಿಲ್ಲುಗಳಿಗೆ ಚಿನ್ನ ಮತ್ತು ಬೆಳ್ಳಿಯ ಮೆರುಗು ಕೊಡಲಾಗಿತ್ತು. ಬಾಣಗಳು ನೀಟಾಗಿದ್ದುವು. ಉತ್ತಮವಾದ ಗರಿಗಳಿಂದ ಕೂಡಿದ್ದುವು. ಅವನ ಸೈನ್ಯವು ಸಾಮಾನ್ಯವಾಗಿ ಹತ್ತು ಲಕ್ಷ ಯೋಧರಿಂದ ಕೂಡಿರುತ್ತಿದ್ದಿತು. ಕೆಲವು ಸಂದರ್ಭಗಳಲ್ಲಿ ಸಂಖ್ಯೆಯು ಇಪ್ಪತ್ತು ಲಕ್ಷವಾಗುತ್ತಿದ್ದಿತು ಎಂಬುದನ್ನು ನೆನೆದಾಗ ಲೋಹಕಾರರಿಗೆ ಅಂದು ಎಷ್ಟು ಕೆಲಸವಿರುತ್ತಿದ್ದಿತು ಎನ್ನುವುದು ತಿಳಿಯುತ್ತದೆ.

**ಇ) ಮನೆ ಬಳಕೆಯ ವಸ್ತುಗಳು :** ಅಡುಗೆಗೆ ಲೋಹದ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಗ್ರಾಮೀಣ ಜನರು ಅಡುಗೆ ಪಾತ್ರೆ ಮತ್ತು ಇತರ ಪಾತ್ರೆಗಳಿಗಾಗಿ ತುಂಬಾ ತಾಮ್ರವನ್ನು ಉಪಯೋಗಿಸುತ್ತಿದ್ದರೆಂದು ಬಾರ್ಬೋಸಾ ಹೇಳುತ್ತಾನೆ. ದೇವರ ಪೂಜೆಗೂ ಲೋಹದ ಪಾತ್ರೆಗಳನ್ನು ಬಳಸಲಾಗುತ್ತಿತ್ತು.

ಸಣ್ಣ ಕೈಗಾರಿಕೆಗಳಲ್ಲೊಂದಾದ ಸುಗಂಧ ದ್ರವ್ಯಗಳೂ ತಯಾರಾಗುತ್ತಿದ್ದುವು. ಈ ಯುಗದ ಜನರಿಗೆ ಪರಿಮಳ ದ್ರವ್ಯಗಳು ಮತ್ತು ಹೂವುಗಳ ಮೇಲೆ ಅಪಾರ ಪ್ರೀತಿಯಿದ್ದಿತು. ಗುಲಾಬಿ ಪನ್ನೀರು, ಕರ್ಪೂರ, ಕಸ್ತೂರಿ ನತ್ತು ಸುವಾಸನಾ ದ್ರವ್ಯಗಳು ವಿಜಯನಗರದಲ್ಲಿ ದೊರಕುತ್ತಿದ್ದವು. ಗುಲಾಬಿ ಅತ್ತರನ್ನು ಪುಲಿಕಾಟ್‌ನಲ್ಲೂ ಪಡೆಯಬಹುದಾಗಿತ್ತು.

**ಈ. ಕೂಲಿಗಳು :** ಮುಸ್ಲಿಮರಲ್ಲಿ ಮತ್ತು ಹಿಂದೂಗಳಲ್ಲಿ ರೂಢಿಯಾಗಿದ್ದ ಪದ್ಧತಿ, ಕೆಲಸಗಾರರು ಬೆಳಗ್ಗೆ ಕೆಲಸ ಮಾಡಲು ಬಂದಾಗ ಮೊದಲು ಅವರಿಗೆ ತಿನ್ನಲು ಒಂದು ನಿರ್ದಿಷ್ಟ ಪ್ರಮಾಣದ ಅನ್ನವನ್ನು ಕೊಡುವುದು; ಆಮೇಲೆ ಕೆಲಸ ಮುಗಿಸಿ ರಾತ್ರಿ ಅವರು ಹಿಂದಿರುಗುವಾಗ ತಲಾ ಒಂದೊಂದು ಫನಂ ಕೊಡುವುದು ಎಂದು ಬಾರ್ಬೋಸಾ ಹೇಳುತ್ತಾನೆ. ಪ್ರತಿದಿನವೂ ಕೂಲಿಯನ್ನು ಪಾವತಿ ಮಾಡಲಾಗುತ್ತಿತ್ತು ಎಂದು ಬಾರ್ಬೋಸನ ಅಭಿಪ್ರಾಯವನ್ನು ನೂನಿಜ್ ಕೂಡ ಸ್ಥಿರಪಡಿಸುತ್ತಾನೆ: "ಅವನ ಬಳಿ ಕುದುರೆಗಳಿಗೆ ಮಾಲೀಸು ಮಾಡುವ ೧೬೦೦ ಜನರಿದ್ದಾರೆ, ತರಬೇತಿ ಕೊಡುವ ೩೦೦ ಜನರಿದ್ದಾರೆ ಮತ್ತು ೨೦೦೦ ಜನ ಕುಶಲಕರ್ಮಿಗಳಿದ್ದಾರೆ. ಅವರು ಕಮ್ಮಾರರು, ಗಾರೆಯವರು, ಬಡಗಿಗಳು ಹಾಗೂ ರಾಜನ ಬಟ್ಟೆಗಳನ್ನು ಒಗೆದು ಶುಚಿಪಡಿಸುವ ಅಗಸರು. ಇವರಿಗೆಲ್ಲ ರಾಜನು ಪ್ರತಿದಿನವೂ ಕೂಲಿಯನ್ನು ಪಾವತಿ ಮಾಡುತ್ತಾನೆ. ಅರಮನೆಯ ಹೆಬ್ಬಾಗಿಲ ಮುಂದೆ ಎಲ್ಲರಿಗೂ ಅವರವರ ಕೂಲಿಯನ್ನು ವಿತರಿಸುತ್ತಾನೆ.[130]

**೧೫ನೆಯ ಶತಮಾನದಲ್ಲಿ ದಕ್ಷಿಣ ಭಾರತದ ವಿದೇಶ ವ್ಯಾಪಾರ :** ಹದಿನೈದನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ನಡೆಯುತ್ತಿದ್ದ ವಿದೇಶ ವ್ಯಾಪಾರದ ಮುಖ್ಯ ಲಕ್ಷಣವೆಂದರೆ, ವ್ಯವಹಾರವು ಪಶ್ಚಿಮ

ಕರಾವಳಿಯಲ್ಲಿ ಕೇಂದ್ರೀಕರಿಸಿದುದು. ಅದರಲ್ಲೂ ಕಲ್ಲೀಕೋಟೆಯು ಪ್ರಮುಖವಾಗಿದ್ದ ಮಲಬಾರಿನ ಬಂದರು ಆಗಿದ್ದುದು. ದಕ್ಷಿಣ ಆಫ್ರಿಕಾ, ಅಬಿಸೀನಿಯ ಮತ್ತು ಅರೇಬಿಯಗಳ ವರ್ತಕರು ಭಾರತದಾದ್ಯಂತ ಹರಡುವುದಕ್ಕಾಗಿ ವಿವಿಧ ವಸ್ತುಗಳನ್ನು ಈ ಬಂದರಿಗೆ ತರುತ್ತಿದ್ದರು. ಪೆಗು ಮತ್ತು ಮಲಕ್ಕಾದಿಂದ ಹೊರಟು ಹಡುಗಳು ಕೆಂಪುಸಮುದ್ರದ ಹಾದಿಯಲ್ಲಿ ಕಲ್ಲೀಕೋಟೆಯಲ್ಲಿ ತಂಗುತ್ತಿದ್ದುವು, ಬೇರೆಬೇರೆ ದಿಕ್ಕುಗಳಿಗೆ ಹರಡುವ ಸಲುವಾಗಿ ಭಾರತೀಯ ಸರಕುಗಳನ್ನು ಒಯ್ಯುತ್ತಿದ್ದವು. ಹಾಗಾಗಿ ಮಲಬಾರ್ ಒಂದು ದೊಡ್ಡ ವಾಣಿಜ್ಯ ಕೇಂದ್ರವಾಗಿತ್ತು. ಈ ಇಡೀ ಮಾರ್ಗವು ಮುಸ್ಲಿಮರ ಕೈಯಲ್ಲಿತ್ತು. ಅವರು ಹಿಂದೂಮಹಾಸಾಗರದಲ್ಲಿ ಮಡಗಾಸ್ಕರಿನಿಂದ ಮಲಕ್ಕಾದವರೆಗೆ ಎಲ್ಲಾ ಪ್ರಮುಖ ಬಂದರುಗಳಲ್ಲೂ ನೆಲೆಸಿದ್ದರು. ಹದಿನೈನದೇ ಶತಮಾನವು ಮುಗಿಯುವ ವೇಳೆಗೆ ಪೋರ್ಚುಗೀಸರ ಆಗಮನದಿಂದಾಗಿ, ಭಾರತದ ವ್ಯಾಪಾರವನ್ನು ನಿರ್ವಹಿಸುತ್ತಿದ್ದ ಮುಸ್ಲಿಮರ ಏಕಸ್ವಾಮ್ಯವು ಮುರಿಯಿತು.

**ಊ. ೧೬ನೆಯ ಶತಮಾನದಲ್ಲಿ ವಿದೇಶ ವ್ಯಾಪಾರ :** ೧೫೦೪ ಮತ್ತು ೧೫೧೫ರ ನಡುವೆ ರಚಿತವಾದ ಬಾರ್ಬೋಸನ ನಿರೂಪಣೆಯು, ಹೇಗೆ ಭಾರತದ ವಾಣಿಜ್ಯವು ಮುಸ್ಲಿರ ಕೈಗಳಿಂದ ಪೋರ್ಚುಗೀಸರ ಕೈಗೆ ಸರಿಯುತ್ತಿತ್ತು ಎಂಬುದನ್ನು ವಿವರಿಸುತ್ತದೆ. "ಅರ್ಮಸ್ ಹಡಗುಗಳು ಇಲ್ಲಿಗೆ (ಭಟ್ಕಳ) ಪ್ರತಿವರ್ಷವೂ ಬರುತ್ತವೆ. ಬಹುಸಂಖ್ಯೆಯಲ್ಲಿ ಕುದುರೆಗಳನ್ನೂ ಮುತ್ತುಗಳನ್ನೂ ತರುತ್ತವೆ. ಅವುಗಳನ್ನು ಅವರು ನರಸಿಂಗನ ರಾಜ್ಯದಲ್ಲಿ ಮಾರಾಟ ಮಾಡುತ್ತಾರೆ. ಆದರೆ ಈಗ ನಮ್ಮ ಸೈನ್ಯ ಇರುವುದರಿಂದ ಇತರ ಹಲವು ಸರಕುಗಳೊಂದಿಗೆ ಅವುಗಳನ್ನು ಗೋವಾಕ್ಕ ಕೊಂಡೊಯ್ಯಲಾಗುತ್ತದೆ. ಮೂರರಿಗೆ ಸೇರಿದ ಕೆಲವು ಹಡಗುಗಳು ಸಂಬಾರ ಪದಾರ್ಥಗಳನ್ನು ಹೇರಿಕೊಳ್ಳಲು ಈ ಸ್ಥಳಕ್ಕೆ (ಭಟ್ಕಳ) ಬರುವ ಸಾಹಸ ಮಾಡುತ್ತವೆ. ಅವರು ಬರಕೂಡದೆಂದು ನಮ್ಮ ಜನರು ಕಟ್ಟಾಜ್ಞೆ ಮಾಡಿದ್ದರೂ ಅವರು ಬರುವುದುಂಟು."[131]

ಅಲ್ಬುಕರ್ಕ್‌ನು ಗೋವಾವನ್ನು ವಶಪಡಿಸಿಕೊಂಡದ್ದು ಮಲಬಾರ್ ಬಂದರುಗಳು ನಡೆಸುತ್ತಿದ್ದ ವಾಣಿಜ್ಯದ ಮೇಲೆ ದುಷ್ಪರಿಣಾಮವನ್ನು ಉಂಟುಮಾಡಿತು. ಬಿಜಾಪುರ ಮತ್ತು ವಿಜಯನಗರಗಳು ತಮ್ಮ ವಿದೇಶಿ ವಸ್ತುಗಳ ಬೇಡಿಕೆಗಾಗಿ ಸಂಪೂರ್ಣವಾಗಿ ಪೋರ್ಚುಗೀಸರನ್ನು ಅವಲಂಬಿಸುವಂತಾಯಿತು. ವಿಶೇಷವಾಗಿ ಅರೇಬಿಯ ಮತ್ತು ಪರ್ಷಿಯ ದೇಶಗಳ ಕುದುರೆಗಳನ್ನು ಅವರು ಒದಗಿಸುತ್ತಿದ್ದರು.

**ಆ. ವಿದೇಶ ವ್ಯಾಪಾರದ ವಸ್ತುಗಳು :**

**ಅ. ರಫ್ತು :** ಇಲ್ಲಿಂದ ರಫ್ತಾಗುತ್ತಿದ್ದ ಸರಕುಗಳೆಂದರೆ ಬಟ್ಟೆ, ಅಕ್ಕಿ, ಕಬ್ಬಿಣ, ಪೆಟ್ಲುಪ್ಪು, ಸಕ್ಕರೆ ಮತ್ತು ಸಂಬಾರ ಪದಾರ್ಥಗಳು. ಪೋರ್ಚುಗೀಸರು ವಿಜಯನಗರದ ವರ್ತಕರಿಂದ ಬಟ್ಟೆಯನ್ನು ಅಂಕೋಲಾದಲ್ಲಿ ಅಥವಾ ಹೊನ್ನಾವರದಲ್ಲಿ ಕೊಳ್ಳುತ್ತಿದ್ದರು. ಪುಲಿಕಾಟ್ ಅಧಿಕ ಪ್ರಮಾಣದಲ್ಲಿ ಮುದ್ರಿತ ಬಟ್ಟೆಯನ್ನು ಮಲಕ್ಕಾಗೆ ರಫ್ತು ಮಾಡುತ್ತಿತ್ತು. ಪೆಗು ಮತ್ತು ಸುಮಾತ್ರಾಗಳಿಗೂ ಅಲ್ಲಿಂದ ಬಟ್ಟೆ

ಹೋಗುತ್ತಿದ್ದಿತು. ಅಕ್ಕಿ (ಬಹುಮಟ್ಟಿಗೆ ದಪ್ಪಕ್ಕಿ) ಬಸರೂರು, ಬಾರಕೂರು ಮತ್ತು ಮಂಗಳೂರುಗಳಿಂದ ಮಲಬಾರ್, ಮಾಲ್ಡೀವ್ಸ್ ಅರ್ಮುಸ್ ಮತ್ತು ಏಡನ್‌ಗಳಿಗೆ ರವಾನೆಯಾಗುತ್ತಿತ್ತು. ಕಬ್ಬಿಣದ ಹೇರುಗಳನ್ನು ಮಲಬಾರಿನ ಜನ ಭಟ್ಕಳದಿಂದ ಕೊಳ್ಳುತ್ತಿದ್ದರು. ವಿಜಯನಗರದ ವರ್ತಕರಿಂದ ಪೋರ್ಚುಗೀಸರೂ ಕಬ್ಬಿಣವನ್ನು ಕೊಳ್ಳುತ್ತಿದ್ದರು. ಪುಡಿಮಾಡಿದ ಸಕ್ಕರೆಯನ್ನು ಭಟ್ಕಳದಿಂದ ಅರ್ಮುಸ್‌ಗೆ ಕಳುಹಿಸಲಾಗುತ್ತಿತ್ತು. ಮೆಕ್ಕಾದಿಂದ ಹಡಗುಗಳು ಸಂಬಾರ ಪದಾರ್ಥಗಳಿಗಾಗಿ ಭಟ್ಕಳಕ್ಕೆ ಬರುತ್ತಿದ್ದುವು.[132]

**ಆ. ಆಮದು :** ಕುದುರೆಗಳು, ಆನೆಗಳು, ಮುತ್ತುಗಳು, ತಾಮ್ರ, ಹವಳ, ಪಾದರಸ, ಕುಂಕುಮ, ಚೈನಾಸಿಲ್ಕ್ ಮತ್ತು ವೆಲ್ವೆಟ್ ಇವು ಸಾಮ್ರಾಜ್ಯಕ್ಕೆ ಆಮದಾಗಿ ಬರುತ್ತಿದ್ದ ವಸ್ತುಗಳು.

ಆನೆಗಳು ಸಿಲೋನಿನಿಂದ ಬರುತ್ತಿದ್ದವು. ಮುತ್ತುಗಳು ಆಮದಾಗುತ್ತಿದ್ದುದು ಅರ್ಮುಸ್‌ನಿಂದ. ಪೋರ್ಚುಗೀಸ್ ವರ್ತಕರು ತಾಮ್ರ, ಹವಳ, ಕುಂಕುಮ ಇವುಗಳನ್ನು ವಿಜಯನಗರಕ್ಕೆ ಪೂರೈಸುತ್ತಿದ್ದರು. ಚೈನಾ ರೇಷ್ಮೆ ಬಟ್ಟೆಗಳನ್ನು ಪೋರ್ಚುಗೀಸರ ಮುಖಾಂತರವಾಗಿಯೂ, ಸಂಬಾರಗಳು ಮತ್ತು ಔಷಧಿಗಳನ್ನು ಮುಸ್ಲಿಮರ ಮೂಲಕವಾಗಿಯೂ ಒದಗಿಸುತ್ತಿದ್ದಿತು. ಬಂಗಾಳ ಮತ್ತು ಮಲಕ್ಕಾಗಳು ವಿಜಯನಗರ್ಕೆಕ ಸಂಬಾರ ಮತ್ತು ಔಷಧಿಗಳನ್ನು ರಫ್ತು ಮಾಡುತ್ತಿದ್ದುವು. ವೆಲ್ವೆಟ್ ಬಟ್ಟೆಯು ಮೆಕ್ಕಾದಿಂದ ಬರುತ್ತಿದ್ದಿತು.[133]

**ಇ. ಕರಾವಳಿ ಮತ್ತು ಒಳನಾಡು ವ್ಯಾಪಾರ :** ಕರಾವಳಿ ಮತ್ತು ಒಳನಾಡುಗಳಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದವರಲ್ಲಿ ಪ್ರಮುಖರು ಮುಸ್ಲಿಮರು, ಮಲಬಾರಿಗಳು ಮತ್ತು ಚೆಟ್ಟಿಗಳು ಅಥವಾ ಸೆಟ್ಟಿಗಳು. ಮುಸ್ಲಿಮರೂ ಮಲಬಾರಿಗಳೂ ಕರಾವಳಿಯಲ್ಲಿ ಹೆಚ್ಚು ಚಟುವಟಿಕೆಯಿಂದಿದ್ದರೆ, ಚೆಟ್ಟಿ ಅಥವಾ ಸೆಟ್ಟಿಗಳು ಒಳನಾಡಿಗೆ ತಮ್ಮ ವಹಿವಾಟನ್ನು ಸೀಮಿತಗೊಳಿಸಿಕೊಂಡಿದ್ದರು.

ವರ್ತಕ ಜನಾಂಗವಾಗಿ ಮುಸ್ಲಿಮರಿಗೆ ಹಿನ್ನಡೆಯುಂಟಾದದ್ದು ಈ ಕಾಲದಲ್ಲಿ ಪೋರ್ಚುಗೀಸರು ಬಂದುದರಿಂದ. ಆದರೂ ಅವರು ಭಾರತದ ಕರಾವಳಿಯ ವ್ಯಾಪಾರ ವಹಿವಾಟನ್ನು ಬಹುಮಟ್ಟಿಗೆ ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಭಾರತೀಯ ಕರಾವಳಿಯ ಪ್ರತಿಯೊಂದು ಮುಖ್ಯ ಬಂದರಿನಲ್ಲೂ ಅವರನ್ನು ನೋಡಬಹುದಾಗಿತ್ತು. ಅವರು ಏಳಿಗೆ ಹೊಂದುತ್ತಿದ್ದ ಜನಾಂಗವಾಗಿದ್ದರು.[134] ಪಶ್ಚಿಮ ಕರಾವಳಿಯಲ್ಲಿ ವಿದೇಶಿ ವಾಣಿಜ್ಯವು ತಮ್ಮ ಕೈಯಿಂದ ವೇಗವಾಗಿ ಜಾರಿ ಹೋಗುತ್ತಿರಲು, ಪೂರ್ವ ಕರಾವಳಿಯಲ್ಲಿ ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಅವರು ಹೋರಾಡುತ್ತಿದ್ದರು. ಅವರು ಮಲಕ್ಕಾ, ಚೈನಾ ಮತ್ತು ಬಂಗಾಳಗಳಿಂದ ಕೋರಮಂಡಲ ಕರಾವಳಿಗೆ ಸರಕುಗಳನ್ನು ತರುತ್ತಿದ್ದರು.

ಮಲಬಾರಿಗಳು ಬಹಳ ಉದ್ಯಮಶೀಲರಾದ ಜನ. ತಮ್ಮ ಪ್ರದೇಶದಲ್ಲಿ ಬೆಳೆಯುವ ಸಂಬಾರ ವಸ್ತುಗಳು, ತೆಂಗಿನ ಉತ್ಪನ್ನಗಳು, ತಾಳೆ ಸಕ್ಕರೆ ಮತ್ತು ತಾಳೇ ಮದ್ಯ ಇವುಗಳನ್ನು ಕೆನರಾ ಕರಾವಳಿಗೆ ಒದಗಿಸಿ, ಅಲ್ಲಿಂದ ದಪ್ಪಕ್ಕಿಯನ್ನೂ, ಕಬ್ಬಿಣವನ್ನೂ ಒಯ್ಯುತ್ತಿದ್ದರು.

ಕನ್ನಡ ಮತ್ತು ತೆಲುಗು ದೇಶಗಳ ಸೆಟ್ಟಿಗಳು ಮತ್ತು ತಮಿಳುದೇಶದ ಚೆಟ್ಟಿಗಳು ಸಾಮ್ರಾಜ್ಯದ ಒಳನಾಡ ವ್ಯಾಪಾರವನ್ನು ನಿರ್ವಹಿಸುತ್ತಿದ್ದರು. ತಮಿಳುನಾಡಿನ ಚೆಟ್ಟಿಗಳು ಉತ್ತಮ ಮಟ್ಟದ ವರ್ತಕರು. ಅಮೂಲ್ಯವಾದ ಹರಳುಗಳು ಮತ್ತು ಮುತ್ತುಗಳನ್ನು ವಿಪುಲವಾಗಿ ಮಾರಾಟ ಮಾಡುತ್ತಿದ್ದರು. ಸರಕು ಸಾಗಣೆಯಲ್ಲಿ ಎಲ್ಲಾ ಬಗೆಯ ಚಾಣಾಕ್ಷತೆ, ಕುಟಿಲತೆಗಳಿಗೂ ಅವರು ಪ್ರಸಿದ್ಧರಾಗಿದ್ದರು.

**ಈ. ಒಳನಾಡ ವ್ಯಾಪಾರದ ವಸ್ತುಗಳು :** ಮುಖ್ಯವಾಗಿ ಆಹಾರ ವಸ್ತುಗಳು (ಅಕ್ಕಿಯನ್ನು ಹೊರತು), ಬೇಳೆ, ಕಾಳು, ಗೋಧಿ, ತರಕಾರಿ, ಉಪ್ಪು, ಹುಣಿಸೆಹಣ್ಣು, ಸಂಬಾರ ಪದಾರ್ಥಗಳು, ತೆಂಗಿನಕಾಯಿ, ತುಪ್ಪ, ಬೆಲ್ಲ, ಸಕ್ಕರೆ, ವೀಳೆಯದೆಲೆ, ಅಡಕೆ, ಡಾಮರ್ (dammer) ಮತ್ತು ಅಣಿಲೆಕಾಯಿಯಂತಹ ಬಣ್ಣ ಕೊಡುವ ವಸ್ತುಗಳು, ಕಬ್ಬಿಣ, ಸೀಸ, ತವರ ಮತ್ತು ತಾಮ್ರದಂತಹ ಲೋಹಗಳು, ಹತ್ತಿಯಂತಹ ಕಚ್ಚಾ ಸಾಮಗ್ರಿ, ಉಕ್ಕಿನ ಉಳಿಗಳು, ಹತ್ತಿನೂಲು ಮತ್ತು ಗೋಣಿಚೀಲಗಳು. ಒಳನಾಡಿನ ಪ್ರಮುಖ ವ್ಯಾಪಾರ ವಸ್ತುಗಳಾಗಿದ್ದವು.

## 5.5. ಸಂಪರ್ಕ ವಿಧಾನಗಳು ಮತ್ತು ರಸ್ತೆಗಳು

ವಿಜಯನಗರ ಕಾಲದಲ್ಲಿ ಗಾಡಿಗಳು ಪ್ರಸಿದ್ಧವಾಗಿದ್ದುವು. ಆದರೆ ರಸ್ತೆಗಳ ಕೆಟ್ಟಸ್ಥಿತಿಯಿಂದಾಗಿ ಅವು ಹೆಚ್ಚಾಗಿ ಉಪಯೋಗವಾಗುತ್ತಿರಲಿಲ್ಲ. ಬಂಡಿಚಕ್ರದ ಸಂಚಾರವಿದ್ದುದನ್ನು ಪೇಸ್ ಸ್ಥಿರಪಡಿಸುತ್ತಾನೆ: "ವಿಜಯನಗರ ಪಟ್ಟಣದ ಈ ಬಯಲಿನಲ್ಲಿ ಸರಕುಗಳನ್ನು ಇನ್ನೂ ಹಲವು ವಸ್ತುಗಳನ್ನು ತುಂಬಿದ ಬಂಡಿಗಳು ಮತ್ತು ಇತರ ಸಾಗಣೆಗಳು ಹಾದು ಹೋಗುತ್ತವೆ." ಹೇರು ಹೊತ್ತ ಪ್ರಾಣಿಗಳು ಮತ್ತು ಕೂಲಿಗಳು ಸಾಮಾನ್ಯವಾಗಿ ಸಾಗಣೆ ನಿರ್ವಹಿಸುತ್ತಿದ್ದರು. ಮೇಲೆ ಹೇಳಿದ ಕೊಂಡವೀಡು ಶಾಸನವು ಕಾವಡಿಗಳಲ್ಲಿ ಸರಕು ಸಾಗಣೆ ನಡೆಯುತ್ತಿದ್ದಿತು ಎಂದು ಹೇಳುತ್ತದೆ. ತಲೆಹೊರೆಗಳು, ಕುದುರೆ ಮತ್ತು ಎತ್ತುಗಳ ಮೇಲೆ ಹಾಗೂ ಕತ್ತೆಗಳ ಮೇಲೆ ಹೇರಿಕೊಂಡು ಮಲಬಾರಿನಿಂದ ವಿಜಯನಗರಕ್ಕೆ ಮೆಣಸನ್ನು ಸಾಗಿಸಿಕೊಂಡು ತರುತ್ತಿದ್ದರು ಎಂದು ಬಾರ್ಬೋಸಾ ಹೇಳುತ್ತಾನೆ. ಐದು ಸಾವಿರ ಎತ್ತಿನ ಹೇರುಗಳು, ವಿವಿಧ ಸರಕುಗಳನ್ನು ವಿಜಯನಗರದಿಂದ ಭಟ್ಕಳಕ್ಕೆ ಒಯ್ಯುತ್ತಿದ್ದುದನ್ನು ಪೇಸ್ ಹೇಳುತ್ತಾನೆ. ಇಂತಹ ೨೦ ಮತ್ತು ೩೦ ಎತ್ತುಗಳನ್ನು ನೋಡಿಕೊಳ್ಳಲು ಒಬ್ಬ ಚಾಲಕನಿರುತ್ತಿದ್ದನು.[135]

ವಿಜಯನಗರವು ದಕ್ಷಿಣ ಭಾರತದ ಕೇಂದ್ರವಾಗಿತ್ತು. ವಿಜಯನಗರದಿಂದ ಒಂದು ರಸ್ತೆಯು ಬಂಕಾಪುರದ ಮೂಲಕ ಗೋವಾಕ್ಕೆ ಹೋಗುತ್ತಿತ್ತು. ಇನ್ನೊಂದು ರಸ್ತೆಯು ಬಂಕಾಪುರದಿಂದ ಭಟ್ಕಳಕ್ಕೆ ಹೊನ್ನಾವರದ ಮೂಲಕ ಹೋಗುತ್ತಿತ್ತು. ಪೇಸ್ ಭಟ್ಕಳದಿಂದ ವಿಜಯನಗರಕ್ಕೆ ಬಂದನು; ಆದರೆ ನಡುವಣ ಸ್ಥಳಗಳಲ್ಲಿ ಯಾವುದನ್ನೂ ಅವನು ಸರಿಯಾಗಿ ಗುರುತಿಸಿಲ್ಲ. ವಿಜಯನಗರದಿಂದ ಮೈಲಾಪುರಕ್ಕೆ ಪೆನುಗೊಂಡಾ, ಚಂದ್ರಗಿರಿ, ತಿರುಪತಿ ಮತ್ತು ಪುಲಿಕಾಟ್‌ಗಳ ಮೂಲಕ ಹಾದುಹೋಗುವ ಒಂದು ಮುಖ್ಯ ಮಾರ್ಗವಿದ್ದಂತೆ ತೋರುತ್ತದೆ.

ಕೃಷ್ಣದೇವರಾಯನ ಸೇನಾ ಕಾರ್ಯಾಚರಣೆಗಳೂ ಧಾರ್ಮಿಕ ಪ್ರವಾಸಗಳೂ ಈ ಕೆಳಗಿನ ಸಂಚಾರ ಮಾರ್ಗಗಳಿದ್ದುದನ್ನು ಸೂಚಿಸುತ್ತವೆ:

೧. ವಿಜಯನಗರದಿಂದ ಶಿವನಸಮುದ್ರ ಮತ್ತು ಶ್ರೀರಂಗಪಟ್ಟಣಗಳಿಗೆ

೨. ವಿಜಯನಗರದಿಂದ ಆದವಾನಿ ಮತ್ತು ರಾಯಚೂರುಗಳಿಗೆ

೩. ವಿಜಯನಗರದಿಂದ ಉದಯಗಿರಿ, ಕೊಂಡವೀಡು, ಕೊಂಡಪಲ್ಲಿ ಮತ್ತು ಕರಾವಳಿಯ ಸಿಂಹಾಚಲ ಮತ್ತು ಶ್ರೀಕೂರ್ಮಂಗಳಿಗೆ

೪. ತಿರುಪತಿ ಮತ್ತು ಕಾಳಹಸ್ತಿಯಿಂದ ಕಾಂಚಿ, ಚಿದಂಬರಂ, ಮಧುರೆ, ರಾಮೇಶ್ವರ ಮತ್ತು ಧನುಷ್ಕೋಟಿಗಳಿಗೆ

ಬಾರ್ಬೋಸನ ಪ್ರಕಾರ ರಾಜಧಾನಿಯಲ್ಲಿ "ಅವಿರತವಾಗಿ ವ್ಯಾಪಾರ ನಡೆಯುತ್ತಿತ್ತು." ರಾಜ್ಯದಲ್ಲಿ, ಅನೇಕ ವಜ್ರಗಳು ಕಾಣಸಿಗುತ್ತವೆ. ಏಕೆಂದರೆ, ನರಸಿಂಗನ ರಾಜ್ಯದಲ್ಲಿ ವಜ್ರದ ಗಣಿಯೊಂದಿದೆ. ಇನ್ನೊಂದು ಗಣಿಯು ದಖ್ಖನಿ ರಾಜ್ಯದಲ್ಲಿದೆ. ಅನೇಕ ಮುತ್ತುಗಳು ಮತ್ತು ಸೀರಮುತ್ತುಗಳು (Seed pearls) ಅಲ್ಲಿ ದೊರಕುತ್ತವೆ. ಇವುಗಳನ್ನು ರೇಷ್ಮೆ ಬಟ್ಟೆಗಳು, ವೆಲ್ವೆಟ್ ಬಟ್ಟೆಗಳು ಹಾಗೂ ಹವಳಗಳನ್ನು ಆರ್ಮೆಜ್‌ನಿಂದ ತರಿಸಲಾಗುತ್ತದೆ.

ನದಿಗಳು ಮತ್ತು ತೊರೆಗಳು ಚಿನ್ನವನ್ನೂ ಪ್ರಶಸ್ತ ಶಿಲೆಗಳನ್ನೂ ಕೊಡುತ್ತಿದ್ದವು; ಕಣಿವೆಗಳಲ್ಲಿ ವಜ್ರಗಳನ್ನು ಅಗೆದು ತೆಗೆಯಲಾಗುತ್ತಿತ್ತು. ಈ ಎಲ್ಲಾ ಸಂಪತ್ತು ನೆರೆಯ ವಿಜಯನಗರ ಪಟ್ಟಣಕ್ಕೆ ಬಂದು ಸೇರುತ್ತಿತ್ತು. ಹದಿನೈದನೆಯ ಶತಮಾನಕ್ಕೆ ಸರಿಹೊಂದುವ ಕಾಲಾವಧಿಯು ವಿಜಯನಗರ ಚಕ್ರಾಧಿಪತ್ಯದ ಅತ್ಯುತ್ತಮವಾದ ಕಾಲ. ನೆತ್ತಮಲದ ತಪ್ಪಲಿನಲ್ಲಿ ಆಗ ವಜ್ರದ ಗಣಿಗಾರಿಕೆಯು ವ್ಯಾಪಕವಾಗಿ ನಡೆಯುತ್ತಿದ್ದಿತು. ಗಣಿಗಳು ಮುಖ್ಯವಾಗಿ ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳಲ್ಲಿದ್ದುವು. ವಿಶೇಷವಾಗಿ ವಜ್ರಕರೂರಿನಲ್ಲಿ ೧೫೮೩-೧೫೮೯ರ ಅವಧಿಯಲ್ಲಿ ದಖ್ಖನಿನಲ್ಲಿದ್ದ ಜಾನ್ ಹಿಂಗೆನ್ ಲಿನ್ಸ್ಕೋಟೆನ್ ಹೀಗೆ ಬರೆದನು:

"ಅವು (ವಜ್ರಗಳು) ದಖ್ಖನಿನ ದೇಶಗಳಲ್ಲಿ ಬಲ್ಲಾಗೇಟ್‌ನ ಹಿಂದೆ ಬೆಳೆಯುತ್ತವೆ. ಬಿಸ್ನಗರದ ತಿರುವಿನಲ್ಲಿ ಎರಡೋ ಮೂರೋ ಬೆಟ್ಟಗಳಿವೆ. ಅಲ್ಲಿ ಅವನ್ನು ಅಗೆಯಲಾಗುತ್ತದೆ. ಅದರಿಂದ ಬಿಸ್ನಾಗರದ ರಾಜನು ತುಂಬಾ ಲಾಭ ಮಾಡಿಕೊಳ್ಳುತ್ತಾನೆ. ಏಕೆಂದರೆ ಅವುಗಳನ್ನು ಎಚ್ಚರಿಕೆಯಿಂದ ಕಾವಲು ಕಾಯಲು ಆಮೇಲೆ ಅವುಗಳನ್ನು ಸರಿಯಾದ ರೂಪಕ್ಕೆ ತರಲು ಅವನು ಏರ್ಪಾಟು ಮಾಡಿದ್ದಾನೆ. ಇಪ್ಪತ್ತೈದು ಮಾಂಗೆಲಿನ್‌ಗಳಿಗಿಂತ ಹೆಚ್ಚಿನ ತೂಕವಿರುವ ವಜ್ರಗಳೆಲ್ಲ ರಾಜನ ಸ್ವಂತ ಉಪಯೋಗಕ್ಕೆ ಹೋಗುತ್ತವೆ." (ಒಂದು ಮಾಂಗೆಲಿನ್ ನಾಲ್ಕು ಗ್ರೇನ್ ತೂಗುತ್ತದೆ)

೧೫೩೪ರಲ್ಲಿ ದಕ್ಷಿಣದಲ್ಲಿದ್ದ ಗಾರ್ಸಿಯ ಕೋಸ್ತ, ವಿಜಯನಗರದಲ್ಲಿ ಒಂದು ಕೋಳಿಮೊಟ್ಟೆಯ ಗಾತ್ರದ ವಜ್ರವಿತ್ತು ಎಂದು ಹೇಳಿದ್ದಾನೆ. ಇತರ ಮೂರು ವಜ್ರಗಳು ೧೨೦, ೧೭೮, ೨೫೦ ಮಾಂಗೆಲಿನ್ ತೂಗುತ್ತಿದ್ದುವು. ಇವು ಕ್ರಮವಾಗಿ ೧೫೦, ೧೭೫ ಮತ್ತು ೩೧೨೧/೨ ಕ್ಯಾರೆಟ್ ತೂಕವಾಗುತ್ತಿತ್ತು.

೧೫೬೫ರಲ್ಲಿ ರಾಜಧಾನಿ ಪತನಹೊಂದಿದ ಮೇಲೆಯೂ ಚಕ್ರವರ್ತಿಯೂ ಚಂದ್ರಗಿರಿಯಲ್ಲಿ ಮೂರು ದೊಡ್ಡ ಪೆಟ್ಟಿಗೆಗಳ ತುಂಬ ವಜ್ರಗಳನ್ನು ಇಟ್ಟುಕೊಂಡಿದ್ದನು.

ವಿಜಯನಗರದ ಅತ್ಯಂತ ಮುಖ್ಯವಾದ ಆಮದುಗಳೆಂದರೆ, ಅರೇಬಿಯ ಮತ್ತು ಪರ್ಷಿಯಾದಿಂದ ಕುದುರೆಗಳು, ಸಿಲೋನ್ ಮತ್ತು ಬರ್ಮಾಗಳಿಂದ ಆನೆಗಳು, ಈಸ್ಟ್ ಇಂಡೀಸ್‌ನಿಂದ ಸಂಬಾರ ವಸ್ತುಗಳು, ಜಿದ್ದಾ-ಏಡನ್ ಮತ್ತು ಚೈನಾಗಳಿಂದ ವೆಲ್ವೆಟ್, ದಮಾಸ್ ಮತ್ತು ಸ್ಯಾಟಿನ್ ಅಂತಹ ಭಾರವಾದ ಬಟ್ಟೆಗಳು. ಮುಖ್ಯವಾಗಿ ರಫ್ತಾಗುತ್ತಿದ್ದ ವಸ್ತುಗಳೆಂದರೆ, ಹತ್ತಿಬಟ್ಟೆ, ಮುದ್ರಣ ಮಾಡಿದ ಚೀಟಿಬಟ್ಟೆ, ನೀಲಿ ಮತ್ತು ಮೈರೋಬಾಲಿನ್‌ನಂತಹ ರಂಗುಗಳು, ಅಕ್ಕಿ, ಸಕ್ಕರೆ, ತೆಂಗಿನಕಾಯಿ ತೇಗ ಮತ್ತು ಶ್ರೀಗಂಧದ ಮರ; ಇವಲ್ಲದೆ ಮೆಣಸು, ಲವಂಗ, ಶುಂಠಿ ಮತ್ತು ದಾಲಚಿನ್ನಿಯಂತಹ ಸಂಬಾರ ಪದಾರ್ಥಗಳು, ಸಂಬಾರ ವಸ್ತುಗಳನ್ನು, ಹತ್ತಿಬಟ್ಟೆಗಳನ್ನು ತರಿಸಿ ಮತ್ತೆ ಕಳಿಸಲಾಗುತ್ತಿತ್ತು. ಆಮದು - ರಫ್ತುಗಳ ನಡುವಣ ಅಂತರವು ಭಾರತಕ್ಕೆ ಅನುಕೂಲಕರವಾಗಿದ್ದುದರಿಂದ ಚಿನ್ನ ಮತ್ತು ಬೆಳ್ಳಿಗಟ್ಟಿಗಳೂ ನಮ್ಮ ಆಮದಿನ ಭಾಗವಾಗಿದ್ದುವು.

ಆಮುಕ್ತಮಾಲ್ಯದ ಗ್ರಂಥವು ವಿಜಯನಗರದ ಬಂದರುಗಳಿಗೆ ಕುದುರೆಗಳು, ಆನೆಗಳು, ಅಮೂಲ್ಯವಾದ ರತ್ನಗಳು, ಶ್ರೀಗಂಧ ಮತ್ತು ಮುತ್ತುಗಳು ಆಮದಾಗಿ ಬರುತ್ತಿದ್ದುದನ್ನು ಉಲ್ಲೇಖಿಸುತ್ತದೆ.

ವೆನಿಸ್ಸಿನ ಪ್ರವಾಸಿ ಸೀಸರ್ ಫ್ರೆಡರಿಕ್ ೧೫೬೭-೧೫೮೧ರಲ್ಲಿ ವಿಜಯನಗರದಲ್ಲಿದ್ದನು. ಸಾಮ್ರಾಜ್ಯವು ನಡೆಸುತ್ತಿದ್ದ ವಿಪುಲವಾದ ವಿದೇಶಿ ವ್ಯಾಪಾರವನ್ನು ಅವನು ಹೀಗೆ ವರ್ಣಿಸಿದ್ದಾನೆ:

"ಗೋವಾದಿಂದ ಬೆಜೆನಗರಕ್ಕೆ ಹೋಗುತ್ತಿದ್ದ ವಸ್ತುಗಳು ಅರೇಬಿಯದ ಕುದುರೆಗಳು, ವೆಲ್ವೆಟ್, ದಮಾಸ್ ಮತ್ತು ಸ್ಯಾಟಿನ್ ಬಟ್ಟೆಗಳು, ಪೋರ್ಚುಗಲ್ಲಿನಿಂದ ಆರ್ಮೆಸಿಂಕ್ (Armesinc) ಚೈನಾದಿಂದ ಕೇಸರಿ ಮತ್ತು ಕೆಂಪುರತ್ನಗಳು ಬೆಜೆನಗರದಿಂದ ಆಭರಣಗಳನ್ನು, ಪಗೋಡಗಳನ್ನು ತರಿಸಿಕೊಳ್ಳುತ್ತಿದ್ದರು."[136]

ನಾಗಪಟ್ಟಣದಿಂದ ವಿಶಾಖಪಟ್ಟಣದವರೆಗೆ ಹಾದುಹೋಗಿದ್ದ ಕೋರಮಂಡಲ ಕರಾವಳಿಯು ಸಮೃದ್ಧವೂ ಅಭಿವೃದ್ಧಿಶೀಲವೂ ಆದ ವ್ಯಾಪಾರದಲ್ಲಿ ತೊಡಗಿತ್ತು. ಬಾರ್ಬೋಸಾ ಬರೆಯುತ್ತಾನೆ: "ಮಲಬಾರಿನಿಂದ ಅನೇಕ ಹಡಗುಗಳು ಅಕ್ಕಿಯನ್ನು ತುಂಬಿಕೊಳ್ಳಲು ಇಲ್ಲಿಗೆ ಬರುತ್ತವೆ. ಅವು ಕ್ಯಾಂಬೆಯಿಂದ ಅನೇಕ ಪದಾರ್ಥಗಳನ್ನು ತರುತ್ತವೆ: ತಾಮ್ರ, ಪಾದರಸ, ಕುಂಕುಮ, ಮೆಣಸು ಮತ್ತಿತರ ವಸ್ತುಗಳು. ಈ ಕೋಲ್ಯಾಂಡರ ಉದ್ದಕ್ಕೂ (ಚೋಳಮಂಡಲ ಅಥವಾ ಕೋರಮಂಡಲ) ಬಹುಪಾಲು ಸಂಬಾರ ವಸ್ತುಗಳು ಮತ್ತು ಔಷಧಿಗಳು, ಮಲಕ್ಕಾ ಚೈನಾ ಮತ್ತು ಬಂಗಾಳಗಳಿಂದ ವಿವಿಧ ಪದಾರ್ಥಗಳು ಬೇರೆ ಬೇರೆ ದೇಶಗಳಿಂದ ಮೂರರ ಹಡಗುಗಳಲ್ಲಿ ಇಲ್ಲಿಗೆ ಬರುತ್ತವೆ. ಪೋರ್ಚುಗೀಸರ ಹೆದರಿಕೆಯಿಂದಾಗಿ ಅವರು ಮಲಬಾರನ್ನು ದಾಟಿ ಹೋಗುವ ಸಾಹಸ ಮಾಡುವುದಿಲ್ಲ.

ನೆಲ್ಲೂರಿನ ದಕ್ಷಿಣಕ್ಕಿದ್ದ ಪುಲಿಕಾಟ್ ನಡೆಸುತ್ತಿದ್ದ ವ್ಯಾಪಾರ ವಹಿವಾಟು ಉನ್ನತ ಮಟ್ಟದ್ದಾಗಿತ್ತು. ಹತ್ತಿ ಬಟ್ಟೆಗಳು ಮಲಕ್ಕಾ, ಪೆಗು ಸುಮಾತ್ರಾಗಳಲ್ಲೂ ಗುಜರಾತು ಮತ್ತು ಮಲಬಾರ್‌ಗಳಲ್ಲೂ ಅಪಾರ

ಪ್ರಮಾಣದ ಲಾಭವನ್ನು ದೊರಕಿಸಿಕೊಡುತ್ತಿದ್ದುವು. ಇವಲ್ಲದೆ ತಾಮ್ರ, ಪಾದರಸ, ಕುಂಕುಮ, ರಂಗುಗಳು, ವೆಲ್ವೆಟ್ ಹಾಗೂ ಗುಲಾಬಿ ಅತ್ತರುಗಳನ್ನು ದೂರದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.

ಹೊರದೇಶದೊಂದಿಗೆ ವ್ಯಾಪಾರವನ್ನು ನಿರ್ವಹಿಸಲು ವಿಜಯನಗರದ ರಾಜರು ವಿಫಲವಾದುದರಿಂದ ಹಿಂದೂಮಹಾಸಾಗರದಲ್ಲಿ ಪೋರ್ಚುಗೀಸರು ಕ್ರಮೇಣ ಪ್ರಾಧಾನ್ಯ ಪಡೆದರು. ಕಡಲುಗಳ್ಳತನದಲ್ಲಿ ಅವರು ನಿಪುಣರಾಗಿದ್ದರು. ಭಾರತೀಯ ನೌಕೆಗಳನ್ನೂ ಹಡಗುಗಳನ್ನೂ ಲೂಟಿ ಮಾಡಿ ಮುಳುಗಿಸಿಬಿಡುತ್ತಿದ್ದರು. ನಾವಿಕರನ್ನು ಅಪಹರಿಸಿಕೊಂಡು ಹೋಗಿ ಕೊಂದುಹಾಕುತ್ತಿದ್ದರು, ಇಲ್ಲವೆ ಗುಲಾಮರನ್ನಾಗಿ ಮಾರುತ್ತಿದ್ದರು. ಅವರ ಅನುಮತಿಯಿಲ್ಲದೆ ಯಾವುದೇ ಹಡಗು ಸಮುದ್ರದಲ್ಲಿ ಚಲಿಸುವಂತಿರಲಿಲ್ಲ. ಈಸ್ಟ್ ಇಂಡೀಸಿಗೂ ನುಗ್ಗಿ ಅಲ್ಲಿಯ ವ್ಯಾಪಾರ - ವಾಣಿಜ್ಯವನ್ನು ತಮ್ಮದಾಗಿಸಿಕೊಂಡರು. ಕರಾವಳಿಯಲ್ಲೇ ಮುಂದೆ ಸಾಗಿ ಚೈನಾದ ತೀರವನ್ನು ಅವರು ತಲುಪಿದರು.

ವಿಜಯನಗರದ ಅರಸರು ಕುದುರೆಗಳನ್ನು ಸಂಗ್ರಹಿಸಿಕೊಳ್ಳುವ ಆತುರದಲ್ಲಿ ಪೋರ್ಚುಗೀಸರ ವಿಸ್ತರಣೆಯ ಹಂಚಿಕೆಗಳನ್ನು ಅರ್ಥಮಾಡಿಕೊಳ್ಳದಾದರು. ತಮ್ಮ ಶತ್ರುಗಳನ್ನು ನಾಶಮಾಡಲು ಹೋಗಿ ತಮ್ಮ ಚಕ್ರಾಧಿಪತ್ಯವನ್ನೇ ಅವರು ಕಳೆದುಕೊಂಡರು. ತಮ್ಮ ಬಂದರುಗಳಲ್ಲಿ ಅತ್ಯಂತ ಮುಖ್ಯವಾದುವನ್ನು ಒಪ್ಪಿಸಿಕೊಟ್ಟರು, ಕರಾವಳಿ ವ್ಯಾಪಾರದ ಮೇಲೆ ತಮ್ಮ ಹಿಡಿತವನ್ನು ಕಳೆದುಕೊಂಡರು, ತಮ್ಮ ಪ್ರಜೆಗಳ ಪ್ರಾಣವನ್ನು ಆಸ್ತಿಪಾಸ್ತಿಗಳನ್ನು ರಕ್ಷಿಸುವಲ್ಲಿ ವಿಫಲರಾದರು. ಅವರ ಧರ್ಮಕ್ಕೆ ಪೋಷಣೆಯನ್ನು ನೀಡಿದರು. ಪರದೇಶದ ಲೂಟಿಕೋರರಾದ ಅವರನ್ನು ತಮ್ಮ ಸರಿಸಮಾನರನ್ನಾಗಿಸುವಂತಹ ಒಂದು ಒಪ್ಪಂದವನ್ನು ಮಾಡಿಕೊಂಡರು. ಒಪ್ಪಂದಕ್ಕೆ ಸಹಿಮಾಡಿದವರು ಪೋರ್ಚುಗಲ್ಲಿನ ರಾಜ ಹಾಗೂ ವಿಜಯನಗರದ ಚಕ್ರವರ್ತಿ. ಇಬ್ಬರೂ "ಮಿತ್ರರಲ್ಲಿ ಮಿತ್ರರಾಗಿ, ಶತ್ರುಗಳಲ್ಲಿ ಶತ್ರುಗಳಾಗಿ ಇರಲು ಒಡಂಬಟ್ಟರು. ಅಗತ್ಯ ಬದಾಗ ಭಾರತದ ಎಲ್ಲಾ ರಾಜರ ಮತ್ತು ಪ್ರಭುಗಳ ಎದುರಾಗಿ ಪರಸ್ಪರ ಸೇನಾಸಹಾಯ ಮಾಡಲು ಒಪ್ಪಿದರು" ಇದರ ಪರಿಣಾಮವಾಗಿ ವಿಜಯನಗರವು ಆಮದು ಮತ್ತು ರಫ್ತುಕಾರನಾಗಿ ಅಪಾರ ನಷ್ಟವನ್ನು ಅನುಭವಿಸಿತು. ಪೋರ್ಚುಗಲ್ ಆದರೋ ರಫ್ತು ಮತ್ತು ಆಮದು ವ್ಯವಹಾರದಲ್ಲಿ ಏಕಸ್ವಾಮ್ಯವನ್ನು ಸ್ಥಾಪಿಸಿಕೊಂಡಿತು.

ಹೀಗೆ ನಗರಗಳು ರಾಜಕೀಯ ಶಕ್ತಿಯ ಕೇಂದ್ರಗಳಾಗಿದ್ದುವಲ್ಲದೆ ವ್ಯಾಪಾರ ಮತ್ತು ಕೈಗಾರಿಕೆಗಳ ಕೇಂದ್ರಗಳೂ ಆಗಿದ್ದುದನ್ನು ನೋಡುತ್ತೇವೆ. ಅನೇಕ ಹಳ್ಳಿಗಳು ಸರಕಾರಕ್ಕೆ ತೆರಿಗೆ ಸಲ್ಲಿಸುತ್ತಾ ತಮಗಾಗಿ ಬೆಳೆಯುವುದಕ್ಕೆ ಬದಲಾಗಿ ಮಾರುಕಟ್ಟೆಗೋಸ್ಕರವಾಗಿ ಉತ್ಪಾದಿಸುವುದನ್ನು ನೋಡುತ್ತೇವೆ. ಅಲವಕೊಂಡದ ರಾಯರೇಖಾದ ಉಲ್ಲೇಖವನ್ನು ಬೇರೊಂದು ಕಡೆ ಮಾಡಿದೆ. ಅದರಲ್ಲಿ ಸರಕಾರಕ್ಕೆ ತೆರಿಗೆಯನ್ನು ಪಾವತಿ ಮಾಡುತ್ತಿದ್ದ ಅಂಗಡಿಗಳು ಮತ್ತು ಮಗ್ಗಗಳ ಬಗೆಗೆ ವಿವರಗಳು ದೊರಕುತ್ತವೆ. ಸ್ಥಳದಲ್ಲಿದ್ದ ಹನ್ನೆರಡು ಗ್ರಾಮಗಳು ಒಟ್ಟು ೪೫೩ ಮಗ್ಗಗಳಿದ್ದುವು. ಬಣ್ಣದ ಬಟ್ಟೆಗಳನ್ನು ಇಲ್ಲಿ ನೇಯಲಾಗುತ್ತಿತ್ತು. ಗ್ರಾಹಕರಿಗೆ ವಸ್ತುಗಳನ್ನು ಮಾರುತ್ತಿದ್ದ ೪೩ ಅಂಗಡಿಗಳಿದ್ದುವು. ಸ್ಥಳದ ಒಟ್ಟು ವರಮಾನದಲ್ಲಿಅರ್ಧಕ್ಕಿಂತ ಹೆಚ್ಚು ಭಾಗವು

ಅಂಗಡಿಗಳು ಮತ್ತು ಕೈಮಗ್ಗಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯಿಂದ ಬರುತ್ತಿದ್ದಿತು. ಭೂಕಂದಾಯವು ಒಟ್ಟು ವರಮಾನದ ಕೇವಲ ಆರನೆಯ ಒಂದು ಪಾಲಿತ್ತು.

ಉಪ್ಪಿನ ಕೈಗಾರಿಕೆಯು ಕರಾವಳಿಯಲ್ಲಿ ಮಾತ್ರವಲ್ಲದೆ ಒಳನಾಡಿನಲ್ಲೂ ಹಲವು ಜನರನ್ನು ಒಳಗೊಂಡಿದ್ದಿತು. ಅದು ಸರಕಾರದ ಏಕಸ್ವಾಮ್ಯವಾಗಿಯೇ ಮುಂದುವರಿಯಿತು. ಬಳ್ಳಾರಿ ಜಿಲ್ಲೆಯ ಆಲೂರು ತಾಲೂಕಿನ ೧೫೨೧ರ ಒಂದು ಶಾಸನವು ಆ ಪ್ರದೇಶದಲ್ಲಿ ಉಪ್ಪು ತಯಾರಿಸುವುದನ್ನು ಕುರಿತು ಇಬ್ಬರು ಅಧಿಕಾರಿಗಳು ಹೊರಡಿಸಿದ ಆಜ್ಞೆಗಳನ್ನು ದಾಖಲಿಸುತ್ತದೆ.[137] ಅದೇ ಜಿಲ್ಲೆಯ ಬೇರೊಂದು ತಾಲೂಕಿನ ಮತ್ತೊಂದು ಶಾಸನವು ಒಂದು ಧರ್ಮಸಂಸ್ಥೆಗೆ ನಿರ್ದಿಷ್ಟ ಉಪ್ಪುತಯಾರಕರು ವರ್ಷಕ್ಕೆ ಎರಡು ಚೀಲ ಉಪ್ಪನ್ನು ಕೊಡಲು ನಿರ್ಧರಿಸಿದುದನ್ನು ಹೇಳುತ್ತದೆ. ಉಪ್ಪು ತಯಾರಕರು ಬಂಜರು ಭೂಮಿಯಿಂದ ಉಪ್ಪು ಮಣ್ಣನ್ನು ತೆಗೆದು, ಇದಕ್ಕಾಗೇ ತಯಾರಿಸಿದ ವಿಶೇಷವಾದ ರೀತಿಯ ತಟ್ಟೆಗಳ ಮೇಲೆ ಹರಡಿ ಅವುಗಳ ಮೇಲೆ ನೀರು ಹಾಯಿಸುತ್ತಿದ್ದರು. ಕ್ರಮೇಣ ನೀರು ಇಂಗಿ, ಉಪ್ಪಿನ ಹರಳುಗಳು ರೂಪುಗೊಳ್ಳುತ್ತಿದ್ದವು.

ಕೈಗಾಣದಲ್ಲಿ ಕಬ್ಬನ್ನು ಹಿಂಡಿ, ರಸವನ್ನು ಕುದಿಸಿ ಬೆಲ್ಲವನ್ನೂ ಸಕ್ಕರೆಯನ್ನೂ ತಯಾರಿಸುತ್ತಿದ್ದರು. ತಾಳೆಮರಗಳಿಂದ ತಾಳೆಸಕ್ಕರೆಯನ್ನು ತಯಾರಿಸಲಾಗುತ್ತಿತ್ತು. ಅತ್ಯಂತ ಕಡಿಮೆ ವೆಚ್ಚ ಕಾರಣವಾಗಿ ಇದು ಬಹಳ ಜನಪ್ರಿಯವಾಗಿದ್ದಿರಬೇಕು. ಶ್ರಮ ಮತ್ತು ಬಂಡವಾಳ ಎರಡೂ ದೃಷ್ಟಿಗಳಿಂದ ಇದು ಅಗ್ಗವಾಗಿತ್ತು.

ಕಬ್ಬಿಣದ ಅದಿರು ಇರುವ ಕಲ್ಲುಗಳಿಂದಲೂ, ನದೀ ಪಾತ್ರಗಳಲ್ಲಿ ಸಂಚಯಗೊಂಡ ಕಣಗಳಿಂದಲೂ ಕಬ್ಬಿಣವನ್ನು ಉತ್ಪಾದಿಸಲಾಗುತ್ತಿತ್ತು. ಈ ಉತ್ಪಾದನಾ ಕಾರ್ಯವನ್ನು ಕಾಡುಗಳಲ್ಲಿ ಅಧಿಕ ಪ್ರಮಾಣದಲ್ಲಿ ನಡೆಸಲಾಗುತ್ತಿತ್ತು. ಕೃಷಿ ಉಪಕರಣಗಳು, ಯುದ್ಧದ ಆಯುಧಗಳು ಮತ್ತು ಕಟ್ಟಡ ಸಾಮಗ್ರಿಗಳಿಗಾಗಿ ಕಬ್ಬಿಣ ಉಪಯೋಗವಾಗುತ್ತಿತ್ತು.

ರಾಜಾಶ್ರಯವನ್ನು ಪಡೆದ ವರ್ತಕರು ಶ್ರೀಮಂತರಾಗಿದ್ದ ಉದ್ಯಮಶೀಲರಾಗಿದ್ದರು. ಸಮಾಜದಲ್ಲಿ ಅಪಾರವಾದ ಪ್ರಭಾವವನ್ನು ಬೀರುತ್ತಿದ್ದರು. ಆರ್ಥಿಕ ಶಕ್ತಿಯು ಅವರಿಗೆ ರಾಜಕೀಯ ಶಕ್ತಿಯನ್ನು ಕೊಟ್ಟಿತ್ತು. ಅವರು ಸಂಘಗಳನ್ನು ರಚಿಸಿಕೊಂಡಿದ್ದರು. ರಾಜಸಭೆಗಳಲ್ಲೂ ಅವರಿಗೆ ಮುಖ್ಯವಾದ ಸ್ಥಾನವಿರುತ್ತಿತ್ತು. ಅವರ ಈ ಅಧಿಕಾರವು ಅವರ ಸಂಚಾರಶೀಲತೆಯ ಕಷ್ಟವನ್ನು ನೀಗಿಸುವಂಥದಾಗಿತ್ತು. ಕುಶಲಕರ್ಮಿಗಳೂ ಕೂಡ ಸಂಘಟಿತರಾಗಿದ್ದರು. ಆದರೆ ಅವರದು ಕೆಳಮಟ್ಟದ ಸ್ಥಾನವಾಗಿತ್ತು. ಏಕೆಂದರೆ ಅವರು ತಯಾರಿಸಿದ ವಸ್ತುಗಳ ಮೇಲೆ ವರ್ತಕ ಸಂಘಗಳು ಪರಿಣಾಮಕಾರಿಯಾದ ಪ್ರಭಾವ ಹೊಂದಿದ್ದುವು. ನಗರದಲ್ಲಿ ಎರಡು ಬಗೆಯ ಸಂಘಗಳಿದ್ದುದನ್ನು ಅಬ್ದುಲ್‌ರಜಾಕ್ ಗಮನಿಸಿದನು.

"ಬೇರೆ ಬೇರೆ ಸಂಘಗಳ ಅಥವಾ ಕಸಬುಗಳ ವರ್ತಕರು ತಮ್ಮ ವ್ಯಾಪಾರ ಮಳಿಗೆಗಳನ್ನು ಪಕ್ಕ ಪಕ್ಕದಲ್ಲೇ ಇಟ್ಟುಕೊಂಡಿರುತ್ತಾರೆ." ಎಂದು ಬರೆದಿದ್ದಾನೆ.

ಡೊಮಿಂಗೋ ಪೇಸ್, "ಎಲ್ಲಾ ಕಸಬುಗಳ ಮತ್ತು ವರ್ತಕರ ಸಂಘಗಳು, ನಮ್ಮ ಕಡೆ ಇರುವ ಕನ್‌ಫ್ರಾಟಿಮಿಟೋಗಳಂತೆ (Confratemitoes) ಇಲ್ಲೂ ಇವೆ ಎಂದಿದ್ದಾನೆ."

ವರ್ತಕ ಸಂಘಗಳಿಗೆ ಒಳ್ಳೆಯ ಹೆಸರು ಪಡೆದ ವ್ಯಕ್ತಿಗಳು ಅಧ್ಯಕ್ಷರಾಗಿರುತ್ತಿದ್ದರು. ಇವರನ್ನು ಸೆಟ್ಟಿ ಪಟ್ಟಣಸ್ವಾಮಿಗಳೆಂದು ಕರೆಯಲಾಗುತ್ತಿತ್ತು.[138] ಅಹೋಬಲದ ಒಂದು ಶಾಸನವು, ದೇವಾಲಯದ ಕೆಲವು ಅಗತ್ಯಗಳನ್ನು ಒಂದು ವರ್ತಕ ಸಂಘವು ಪೂರೈಸಿದುದನ್ನು ಹೇಳುತ್ತದೆ. ಆ ಸಂಘದ ಸದಸ್ಯರು ವಾಸವೀ ಕನ್ಯೆಯ ಭಕ್ತರಾಗಿದ್ದರು. ಅವರ ಮುಂದಾಳುಗಳಾಗಿದ್ದ ಒಂದುನೂರ ಐವತ್ತು ಜನರಿಗೆ ಪುಣ್ಯ ಬರಲೆಂದು ಈ ಧರ್ಮಕಾರ್ಯವನ್ನು ಮಾಡಲಾಯಿತು. ಸಂಘದ ಅಧ್ಯಕ್ಷನೇ ಅದರ ಕಾರ್ಯನಿರ್ವಾಹಕನೂ ಆಗಿದ್ದನು. ಸಂಘವು ಸಾಮಾನ್ಯವಾಗಿ ದೇವಾಲಯದಲ್ಲಿ ಸಭೆ ಸೇರಿ ಕಲಾಪಗಳನ್ನು ನಡೆಸುತ್ತಿದ್ದಿತು. ಸದಸ್ಯರ ನಡುವೆ ಅಹಿತಕರ ಸ್ಪರ್ಧೆನ್ನು ತಪ್ಪಿಸುವುದು, ಶಿಸ್ತಿನ ಕೆಲವು ನಿಯಮಗಳನ್ನು ಜಾರಿಗೆ ತರುವುದು, ಸದಸ್ಯರ ಸಮಾನ ಹಿತಾಸಕ್ತಿಗಳನ್ನು ಕಾಪಾಡುವುದು ಇವಕ್ಕಾಗಿ ಸಂಘವು ಶ್ರಮಿಸುತ್ತಿದ್ದಿತು. ತನ್ನದೇ ನಾಣ್ಯಗಳನ್ನು ಟಂಕಿಸಿಕೊಳ್ಳಲು ಕೂಡ ಸಂಘಕ್ಕೆ ಅಧಿಕಾರವಿದ್ದಿತು. ತನ್ನ ಸದಸ್ಯರಿಂದ ಸರಕಾರಕ್ಕೆ ಸಲ್ಲಬೇಕಾದ ತೆರಿಗೆಯನ್ನು ಸಂಗ್ರಹಿಸಿಕೊಡುವ ಹೊಣೆಯೂ ಸಂಘದ್ದೇ. ಅಧ್ಯಕ್ಷನು ಅವುಗಳನ್ನು ಸಂಗ್ರಹಿಸಿ ಭಂಡಾರಕ್ಕೆ ಕಟ್ಟಿಬಿಡುತ್ತಿದ್ದರು. ರಾಜನೋ ಅಥವಾ ಅವನ ಅಧೀನ ಅಧಿಕಾರಿಯೋ ಈ ತೆರಿಗೆಗಳನ್ನು ಯಾವುದಾದರೊಂದು ದೇವಾಲಯಕ್ಕೆ ದಾನಮಾಡಲು ಇಚ್ಛಿಸಿದರೆ ಅವನು ವರ್ತಕ ಸಂಘದ ಅಥವಾ ಅದರ ಅಧ್ಯಕ್ಷನ ಅನುಮತಿಯನ್ನು ಪಡೆಯಬೇಕಾಗಿತ್ತು. ಒಬ್ಬ ಮಂತ್ರಿಯ ಪ್ರತಿನಿಧಿಯಾಗಿದ್ದ ಅಬ್ಬರಾಜ ತಿಮ್ಮಪ್ಪನೆನ್ನುವವನು, ದೇವಾಲಯಕ್ಕೆ "ಗ್ರಾಮಗಳ ಸೆಟ್ಟಿ ಪಟ್ಟಣಸ್ವಾಮಿಗಳ ಅನುಮತಿಯನ್ನು ಪಡೆದು" ಮೂಲವೀಸವನ್ನು ದಾನಮಾಡಿದನು. ಬಳ್ಳಾರಿಜಿಲ್ಲೆಯ ಕುರುಗೋಡದ ಇನ್ನೊಂದು ಶಾಸನವು "ಗೌಡ, ಸೇನಬೋವ ಮತ್ತು ಪಟ್ಟಣಸ್ವಾಮಿಗಳ ಅನುಮತಿಯಿಂದ" ಮಾಡಿದ ದಾನವನ್ನು ಉಲ್ಲೇಖಿಸುತ್ತದೆ.

ವರ್ತಕ ಸಂಘಗಳು ತಮ್ಮ ಸದಸ್ಯರು ಮಾರಾಟ ಮಾಡುತ್ತಿದ್ದ ವಸ್ತುಗಳ ಮೇಲೆ ತೆರಿಗೆಯನ್ನು ವಿಧಿಸಬಹುದಾಗಿತ್ತು. ಗುತ್ತಿ ತಾಲೂಕಿನ ವೆಲ್ಪಮಡುಗದ ಒಂದು ಶಾಸನವು ಸೆಟ್ಟಿಗಳು, ಸೇನಬೋವರು ಮತ್ತು ಸ್ಥಳೀಯ ಹಾಗೂ ಪರಸ್ಥಳದ ವರ್ತಕರಿಗೆ "ಹೊಸ ಅಂಗಡಿ ಬೀದಿಯಲ್ಲಿ ಕೊಡಬೇಕಾದ ತೆರಿಗೆಗಳನ್ನು ನಿಗದಿಪಡಿಸಿ" ಸಂಘವು ಆದೇಶ ಹೊರಡಿಸಿದುದನ್ನು ಹೇಳುತ್ತದೆ. ಬಹುಸಂಖ್ಯೆಯಲ್ಲಿ ವರ್ತಕರು ಗುಂಪುಗೂಡಿ ಕಾಡುಗಳ ಮೂಲಕ ಪ್ರಯಾಣ ಮಾಡುವ ಸಂದರ್ಭವಿದ್ದರೆ ಅವರು ತಮ್ಮ ಪ್ರಾಣ ಮತ್ತು ಸೊತ್ತುಗಳ ರಕ್ಷಣೆಗಾಗಿ ಕಾವಲುಗಾರರು ಇಲ್ಲವೆ ಪಾಳೇಗಾರರೊಂದಿಗೆ ಕರಾರು ಮಾಡಿಕೊಳ್ಳುತ್ತಿದ್ದರು.

ವರ್ತಕ ಸಂಘಗಳಿಗೆ ನ್ಯಾಯಾಧಿಕಾರವೂ ಇದ್ದಿತು. ಮೊಕದ್ದಮೆಗಳನ್ನು ವಿಚಾರಣೆ ಮಾಡಿ, ವ್ಯಾಜ್ಯ ಪರಿಹಾರ ಮಾಡುತ್ತಿದ್ದರು. ಅಪರಾಧಿಗೆ ಶಿಕ್ಷೆಯನ್ನು ವಿಧಿಸುತ್ತಿದ್ದರು. ಅನಂತಪುರ ಜಿಲ್ಲೆಯ ಕದಿರಿಯ ಒಂದು ಶಾಸನವು, ನರಸಿಂಹದೇವರ ದೇವಸ್ಥಾನದಲ್ಲಿ ಸಭೆ ಸೇರಿದ ಒಂದು ವರ್ತಕ ಸಂಘವು ಅಸ್ಪೃಶ್ಯರಾದ ಮಾಲರು ಮತ್ತು ಮಾದಿಗರಿಗೂ ಸ್ಥಳೀಯ ರೈತರಿಗೂ ಉಂಟಾಗಿದ್ದ ವ್ಯಾಜ್ಯವನ್ನು ಹೇಗೆ ಪರಿಹರಿಸಿತು ಎಂಬುದನ್ನು ವರ್ಣಿಸುತ್ತದೆ. ಮಾಲರಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ದೊರಕಿತು. ವಿವಾಹ ಸಂದರ್ಭಗಳಲ್ಲಿ

ಚಪ್ಪರ ಹಾಕುವ ಕೆಲಸಕ್ಕೆ ಮಾದಿಗರಿಕೆ ಅನುಮತಿ ನೀಡಲಾಯಿತು. ನ್ಯಾಯದ ಪರಿಣತ ಜ್ಞಾನದ ಅವಶ್ಯಕತೆಯುಂಟಾದಾಗ, ಸ್ಥಳೀಯ ನಾಯಕನು ಅಥವಾ ಅಧಿಕಾರಿಯು ಒಂದು ಧರ್ಮಾಸನವನ್ನು, ಅಂದರೆ ನ್ಯಾಯಪೀಠವನ್ನು ನೇಮಿಸುತ್ತಿದ್ದನು. ಅದರಲ್ಲಿ ಅಗ್ರಹಾರದವರು, ಹಳ್ಳಿಯ ಅಧಿಕಾರಿಗಳು ಮತ್ತು ವರ್ತಕ ಸಂಘದ ಮುಖ್ಯಸ್ಥರು ಇರುತ್ತಿದ್ದರು.

ಕಸುಬು ಮಂಡಳಿಗಳನ್ನು ಕುರಿತು ಆಮುಕ್ತಮಾಲ್ಯದವು ರೇಷ್ಮೆ ನೇಕಾರರ, ಹತ್ತಿ ನೇಕಾರರ ಮತ್ತು ಅಕ್ಕಸಾಲಿಗರ ಸಂಘಗಳನ್ನೂ ಚೀಲ ತಯಾರಿಸುವವರ ಮತ್ತು ಬುಟ್ಟಿ ಹೆಣೆಯುವವರ ಸಂಘಗಳನ್ನೂ ಉಲ್ಲೇಖಿಸುತ್ತದೆ. ಅನೇಕ ಶಾಸನಗಳು ಪಾಂಚಾಲಯರು ಎಂಬ ಹೆಸರಿನ ಕುಶಲಕರ್ಮಿಗಳ ಸಂಘಗಳನ್ನು ಹೇಳುತ್ತವೆ. ಐದು ತೆರನಾದ ಕಸಬುದಾರರ ಸಂಘಗಳು ಅವು. ಅನಂತಪುರ ಜಿಲ್ಲೆಯ ಗುನಿವಾರಿಪಲ್ಲಿಯ ೧೪೧೮ರ ಒಂದು ಶಾಸನವು, ಎತ್ತುಗಳ ಮೇಲೆ, ಎಮ್ಮೆಗಳ ಮೇಲೆ ಹಾಗೂ ಬಂಡಿಗಳ ಮೇಲೆ ಕೊಡುವ ತೆರಿಗೆಯನ್ನು ಸಂಘವು ಕೊಡಬೇಕಾಗಿಲ್ಲವೆಂದು ವಿನಾಯಿತಿ ಕೊಟ್ಟಿದ್ದನ್ನು ಸ್ಥಿರೀಕರಿಸುತ್ತದೆ.[139] (ನ್ಯೂನಿಜ್, ಸಿವೆಲ್ ಪು. ೩೬೬ MAR 1934 ಪು. 120 ಕೆಡಿ) ರಾಜನ ಸಿಂಹಾಸನವನ್ನು ತಯಾರಿಸಿಕೊಟ್ಟಿದ್ದಕ್ಕೆ ಉಡುಗೊರೆಯಾಗಿ ಇದನ್ನು ಘೋಷಿಸಲಾಯಿತು.

ನೇಯ್ಗೆಯು ಅತ್ಯಂತ ವ್ಯಾಪಕವಾಗಿ ಹರಡಿದ್ದ ಉದ್ಯಮಗಳಲ್ಲಿ ಒಂದು. ಭಾರೀ ಸಂಖ್ಯೆಯಲ್ಲಿ ಜನಸಾಮಾನ್ಯರ ಅಗತ್ಯಗಳನ್ನು ಅದು ಪೂರೈಸುತ್ತಿತ್ತು. ಪ್ರತಿಯೊಂದು ನೇಕಾರ ಕುಟುಂಬವೂ, ತಾನು ನಡೆಸುತ್ತಿದ್ದ ಕೈಮಗ್ಗಳ ಸಂಖ್ಯೆಗೆ ಅನುಗುಣವಾಗಿ ಲೆಕ್ಕ ಹಾಕಿ ರಾಜ್ಯದ ಸರಕಾರಕ್ಕೆ ತೆರಿಗೆಯನ್ನು ಸಲ್ಲಿಸುತ್ತಿದ್ದಿತು. ಇದನ್ನು ಮಗ್ಗದರಿ ಎಂದು ಕರೆಯುತ್ತಿದ್ದರು. ಅಥರ್ವಣತಂತ್ರದ ಪ್ರಕಾರ ಪ್ರತಿ ಮಗ್ಗದ ಮೇಲಿನ ತೆರಿಗೆಯು ನೇಕಾರನ ಜಾತಿಯನ್ನು ಅವಲಂಬಿಸಿರುತ್ತಿತ್ತು. ಎಣ್ಣೆ ತೆಗೆಯುವವರು ಕೊಡುವ ತೆರಿಗೆಗೆ ಗಾಣುಗರಿ ಎಂಬ ಹೆಸರು

ಹೀಗೆಯೇ ಚಿನಿವಾರರು, ಕುಂಬಾರರು, ಕಮ್ಮಾರರು, ಹೆಂಡ ಇಳಿಸುವವರು ಇವರೆಲ್ಲರೂ ಸರಕಾರಕ್ಕೆ ತೆರಿಗೆಯನ್ನು ಕೊಡುತ್ತಿದ್ದರು. ವರ್ತಕ ಸಂಘಗಳು ಕಸಬು ಸಂಘಗಳ ಮೇಲೆ ಒಂದು ರೀತಿಯ ಅಧಿಕಾರವನ್ನು ಚಲಾಯಿಸುತ್ತಿದ್ದವು ಎಂಬುದನ್ನು ಕೆಲವು ಶಾಸನಗಳು ಸೂಚಿಸುತ್ತವೆ. ಬಹುಶಃ ವರ್ತಕ ಸಂಘವು ಕಸಬುದಾರರಿಗೆ ಹಣವನ್ನು ಸಾಲವಾಗಿ ಕೊಟ್ಟು, ನಿರ್ದಿಷ್ಟ ಪ್ರಮಾಣ ವಸ್ತುಗಳನ್ನು ನಿರ್ದಿಷ್ಟ ಸಮಯದೊಳಗೆ ಪೂರೈಸಬೇಕೆಂದು ವಿಧಿಸುತ್ತಿದ್ದಂತೆ ತೋರುತ್ತದೆ.

ವರ್ತಕರು ವ್ಯಕ್ತಿಗತವಾಗಿ ಹಾಗೂ ಸಂಘದ ಸದಸ್ಯರಾಗಿ, ದೇವಾಲಯಗಳಿಗೆ ಅಪಾರವಾದ ದಾನಧರ್ಮಗಳನ್ನು ಮಾಡುತ್ತಿದ್ದರು. ತಮ್ಮ ಲಾಭದ ಒಂದು ಭಾಗವನ್ನು ಪುಣ್ಯ ಸಂಪಾದನೆಗಾಗಿ ಮೀಸಲಾಗಿಡುತ್ತಿದ್ದರು. ಸರಕಾರಕ್ಕೆ ಬಗೆಬಗೆಯಾದ ತೆರಿಗೆಯನ್ನು ಸಲ್ಲಿಸುತ್ತಾ ಸಾಮ್ರಾಜ್ಯದ ಸಂಪತ್ತಿಗೂ ಅಭ್ಯುದಯಕ್ಕೂ ತಮ್ಮ ಕೊಡುಗೆಯನ್ನು ಸಲ್ಲಿಸುತ್ತಿದ್ದರು.

ವರ್ತಕರು ಸರಕಾರಕ್ಕೆ ಕೊಡುತ್ತಿದ್ದ ತೆರಿಗೆಗೆ ಮೂಲವೀಸೆ ಎಂದು ಹೆಸರು. ಅದು ಬಂಡವಾಳದ ೧/೧೬ ಭಾಗ. ಇದನ್ನು ಒಂದು ಮೊತ್ತವಾಗಿ ಸಂಗ್ರಹಿಸುವುದಕ್ಕೆ ಬದಲಾಗಿ ಮಾರುಕಟ್ಟೆಯಲ್ಲಿ ಮಾರುತ್ತಿದ್ದ ವಸ್ತುಗಳ ಮೇಲಿನ ಸುಂಕದ ರೂಪದಲ್ಲಿ ಸಂಗ್ರಹಿಸುತ್ತಿದ್ದರು. ರಾಜನೋ ಅವನ ಅಧೀನಾಧಿಕಾರಿಯೋ ತೆರಿಗೆಯನ್ನು ಒಂದು ದೇವಾಲಯಕ್ಕೋ ಮಠಕ್ಕೋ ದಾನ ಮಾಡಿದಾಗ ಅದಕ್ಕೆ ವರ್ತಕರ ಅನುಮತಿಯನ್ನು ಪಡೆಯುತ್ತಿದ್ದನು. ಸುಂಕವೆನ್ನುವುದು ಒಂದು ಸ್ಥಳದಿಂದ ಇನ್ನೊಂದಕ್ಕೆ ಸಾಗುತ್ತಿದ್ದ ಎಲ್ಲಾ ಚಿಲ್ಲರೆ ಮಾರಾಟದ ಮೇಲೂ ಕೊಡಬೇಕಾಗಿದ್ದ ಎಕ್ಸೈಸ್ ತೆರಿಗೆ. ಬೇರೊಂದು ಕಡೆಯಿಂದ ಆಮದು ಮಾಡಿಕೊಂಡ ವಸ್ತುಗಳ ಮೇಲೆ ವಿಧಿಸುತ್ತಿದ್ದ ಎಕ್ಸೈಸ್ ತೆರಿಗೆಯೇ ಸ್ಥಳಸುಂಕ. ಇವು ಏಕರೂಪದ್ದಾಗಿರಲಿಲ್ಲ. ಏಕೆಂದರೆ, ತೆರಿಗೆ ಕೊಡುತ್ತಿದ್ದ ರೈತರು ವರ್ತಕರೊಂದಿಗೆ ಸೇರಿಕೊಂಡು ತಮಗೆ ಅನುಕೂಲಕರವಾದ ರೀತಿಯಲ್ಲಿ ದರವನ್ನು ನಿಗದಿಪಡಿಸುತ್ತಿದ್ದರು.

ಲೋಹಗಳ ಪೈಕಿ ಕಬ್ಬಿಣ ಮತ್ತು ಉಕ್ಕಿನ ಮೇಲಿನ ತೆರಿಗೆಯು ಸೀಸದ ಮತ್ತು ತಾಮ್ರ ಹಾಗೂ ತವರದ ಮೇಲಿನ ತೆರಿಗೆಯ ಮೂರನೆ ಒಂದರಷ್ಟಿತ್ತು. ಇದರಿಂದ ಕೊನೆಯ ಮೂರೂ ತುಂಬಾ ವಿರಳವಾಗಿ ದೊರಕುತ್ತಿದ್ದುವು ಎಂಬುದು ಸೂಚಿತವಾಗುತ್ತದೆ. ಕಾಳು-ಬೇಳೆಗಳ ಮೇಲೆ ತೆರಿಗೆ ಹಗುರವಾಗಿತ್ತು. ಹತ್ತಿಗೆ ತೆರಿಗೆ ಕಡಮೆಯಿತ್ತು (ಒಂದು ಚೀಲಕ್ಕೆ ಒಂದು ಪೆರಿಕಾ) ಆದರೆ ಹತ್ತಿಯ ನೂಲಿಗೆ ಬಹುಪಟ್ಟು ಹೆಚ್ಚಾಗಿತ್ತು. (ಚೀಲಕ್ಕೆ ನಾಲ್ಕು ದಮ್ಮುಗಳು) ಎಲ್ಲ ಕಡೆಯೂ ಚೀಲದ ಅಳತೆ ಒಂದೇ ರೂಪದಲ್ಲಿದ್ದಿತೆ ಎನ್ನುವುದು ನಮಗೆ ತಿಳಿಯದು.

ಈ ಸುಂಕಗಳನ್ನು ನೀರಿನ ನೆಲೆಗಳು, ಮಾರುಕಟ್ಟೆಗಳು, ಯಾತ್ರಾಸ್ಥಳಗಳಿಗೆ ಹೋಗುವ ರಸ್ತೆಗಳು ಮೊದಲಾದ ಅನುಕೂಲವಾದ ಎಡೆಗಳಲ್ಲಿ ವಸೂಲು ಮಾಡುತ್ತಿದ್ದರು. ಮಾಳಿಗೆ ಸುಂಕ, ಅಡ್ಡಗದ ಸುಂಕ, ಕಾರಸುಂಕ, ಮಾರ್ಗಾದಾಯ, ವಿರಳಂ ಇತ್ಯಾದಿ ಅನೇಕ ತೆರಿಗೆಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಸಂಗ್ರಹಿಸುತ್ತಿದ್ದ ತೆರಿಗೆಗಳ ವೈವಿಧ್ಯವನ್ನೂ ಬಾಹುಳ್ಯತೆಯನ್ನು ಕುರಿತು ವೆಂಕಟರಮಣಯ್ಯ ಹೇಳುತ್ತಾರೆ: "ಮೇಲೆ ಹೇಳಿದ ಮಾತುಗಳಿಂದ, ಜನರ ಆರ್ಥಿಕ ಜೀವನವು ಸಂಪೂರ್ಣವಾಗಿ ಬೆಗಡುಗೊಳಿಸುವ ತೆರಿಗೆಗಳ ವೈವಿಧ್ಯ ಬಾಹುಳ್ಯತೆಯ ಅಡ್ಡಗೋಡೆಗಳಿಂದ ಆವೃತ್ತವಾಗಿತ್ತು ಎಂಬುದು ತಿಳಿಯುತ್ತದೆ. ಈ ಪರಿಸ್ಥಿತಿಯಲ್ಲೂ ವ್ಯಾಪಾರ ವಹಿವಾಟು ವಿಪುಲವಾಗಿದ್ದುದು ಹೇಗೆ ಎನ್ನುವುದೇ ಆಶ್ಚರ್ಯದ ಸಂಗತಿಯಾಗಿದೆ."[140]

## 5.6. ಕೃಷಿ ಉತ್ಪನ್ನಗಳ ವ್ಯಾಪಾರ

೧೩೩೬-೧೬೬೧ ಈ ಅವಧಿಯಲ್ಲಿ ಜನತೆಯ ಬಹುಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ವಾಸಮಾಡುತ್ತಿದ್ದಿತು. ಹಳ್ಳಿಯು ಬಹುಮಟ್ಟಿಗೆ ಸ್ವಯಂಪೂರ್ಣವಾಗಿದ್ದಿತು, ಜೀವನದ ಅಗತ್ಯಗಳನ್ನೆಲ್ಲ

ತಾನೇ ಪೂರೈಸಿಕೊಳ್ಳುತ್ತಿದ್ದಿತು. ಆದರೂ ಕೃಷಿ ಉತ್ಪನ್ನಗಳಿಗೆ ವ್ಯಾಪಕವಾದ ಮಾರುಕಟ್ಟೆಯಿದ್ದಿತು. ವಾಸ್ತವವಾಗಿ ಕಾಲಾವಧಿಯಲ್ಲಿ ಕೃಷಿ ಉತ್ಪನ್ನಗಳ ವ್ಯಾಪಾರ ವಹಿವಾಟು ಒಂದು ಮುಖ್ಯವಾದ ಪರಿವರ್ತನೆಯನ್ನು ಕಂಡಿತು. ಈ ಬದಲಾವಣೆಗೆ ಕಾರಣ ಹಣದ ಪ್ರಸರಣವು ಹೆಚ್ಚಾದುದು, ಸಂಬಾರ ಪದಾರ್ಥಗಳು ಅದರಲ್ಲೂ ಮುಖ್ಯವಾಗಿ ಮೆಣಸು, ಕಬ್ಬು ಮತ್ತು ಹತ್ತಿ ಮೊದಲಾದ ನಗದು ಬೆಳೆಗಳ ಉತ್ಪಾದನೆ ಅಧಿಕಗೊಂಡುದು ಮತ್ತು ಕರ್ನಾಟಕದ ಕರಾವಳಿಗೆ ಯೂರೋಪಿಯನ್ ವರ್ತಕರು ಬಂದಿಳಿದುದು ಅದರಿಂದಾಗಿ ವಿಶಾಲ ಮಾರುಕಟ್ಟೆಗಳ ಬೆಳವಣಿಗೆ ಇದರ ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳೀಯ ಮಾರುಕಟ್ಟೆಗಳಿದ್ದುದನ್ನು ಶಾಸನಗಳು ಮತ್ತು ಸಾಹಿತ್ಯಕ ಮೂಲಗಳು ಸ್ಥಿರಪಡಿಸುತ್ತವೆ. ಇವುಗಳಿಂದ ರೈತರಿಗೂ ವರ್ತಕರಿಗೂ ನಡುವೆ ಕೃಷಿ ಉತ್ಪನ್ನಗಳು ಧಾರಾಳವಾಗಿ ವಿನಿಮಯಗೊಳ್ಳಲು ಅವಕಾಶವಾಯಿತು. ಸಕ್ರಿಯವಾಗಿದ್ದ ಈ ವ್ಯಾಪಾರದಿಂದಾಗಿ, ಹಳ್ಳಿಗಳಿಗೆ ನಗದು ಹಣವು ಹರಿದುಬಂದಿತು. ರೈತರಿಗೆ ಸರಕಾರಕ್ಕೆ ಕಂದಾಯವನ್ನು ಜಮೀನುದಾರರಿಗೆ ಬಾಡಿಗೆಯನ್ನು ನಗದಾಗಿ ಪಾವತಿ ಮಾಡಲು ರೈತರಿಗೆ ಸಾಧ್ಯವಾಯಿತು. ತಾವು ಹಳ್ಳಿಗಳಲ್ಲಿ ಉತ್ಪಾದಿಸಲು ಸಾಧ್ಯವಿರದಿದ್ದ ಉಪ್ಪು ಬಟ್ಟೆಗಳು ಮತ್ತು ಸಾಂಪ್ರದಾಯಿಕ ಚಿನ್ನಾಭರಣಗಳು ಇತ್ಯಾದಿಗಳನ್ನು ಅವರು ನಗದು ಹಣಕೊಟ್ಟು ಕೊಂಡುಕೊಳ್ಳುವ ಹಾಗಾದರು. ಎಲ್ಲಕ್ಕಿಂತ ಮಿಗಿಲಾಗಿ ಅನ್ಯಥಾ ರಾಜಕೀಯ ಅನೈಕ್ಯದ ಚಿತ್ರವನ್ನು ಕೊಡುತ್ತಿದ್ದ ಕರ್ನಾಟಕದ ಬೇರೆ ಬೇರೆ ಪ್ರದೇಶಗಳ ನಡುವೆ ಈ ವ್ಯಾಪಾರ ವಹಿವಾಟು ಒಂದು ಪರಿಣಾಮಕಾರಿಯಾದ ಕೊಂಡಿಯಂತೆ ವರ್ತಿಸಿತು.

ಒಳ್ಳೆಯ ರಸ್ತೆ, ಸಮೃದ್ಧವಾಗಿ ನೀರು, ಇತ್ಯಾದಿ. ಸಂತೆಗೆ ಸಂಬಂಧಪಟ್ಟ ವೆಚ್ಚಗಳನ್ನು ನಿರ್ವಹಿಸಲು ಸುಂಕವನ್ನು ಸಂಗ್ರಹಿಸಲಾಗುತ್ತಿದ್ದಿತು. ಕೆಲವು ವೇಳೆ ವಸ್ತುಗಳು ಊರಿಗೆ ಪ್ರವೇಶ ಮಾಡುವಾಗ ವಸ್ತುರೂಪದಲ್ಲಿ ಅಥವಾ ನಗದಾಗಿಯೇ ಪಡೆದುಕೊಳ್ಳಲಾಗುತ್ತಿತ್ತು. ಇನ್ನು ಕೆಲವು ಸಂದರ್ಭಗಳಲ್ಲಿ ಮಾರಿದ ಮತ್ತು ಕೊಂಡ ವಸ್ತುಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು. ವರ್ತಕರು ಈ ಸುಂಕಗಳನ್ನು ಪಾವತಿ ಮಾಡುತ್ತಿದ್ದರು. ಹೀಗೆ ಸಂತೆಯನ್ನು ಏರ್ಪಡಿಸುವ ವ್ಯಕ್ತಿಗಳಿಗೆ ರೈತರು ಮತ್ತು ವರ್ತಕರು ಸೇರಿ ಭೂಮಿಯನ್ನು ಬಿಟ್ಟುಕೊಡುತ್ತಿದ್ದರು ಅಥವಾ ಕೆಲವು ರಿಯಾಯಿತಿಗಳನ್ನು ಘೋಷಿಸುತ್ತಿದ್ದರು. ಕೆಲವೊಮ್ಮೆ ವರ್ತಕ ಸಂಘದ ಮುಖ್ಯಸ್ಥನಿಗೆ ಸಂತೆಯನ್ನು ಏರ್ಪಡಿಸುವಂತೆ ಕೋರಿ ಒಂದು ತುಂಡು ಜಮೀನನ್ನು ನೀಡುತ್ತಿದ್ದುದುಂಟು. ಮಾರುಕಟ್ಟೆಯನ್ನು ಪೇಟೆ, ಸಂತೆ ಅಥವಾ ಸಂತೆಪೇಟೆ ಎಂದು ಕರೆಯುತ್ತಿದ್ದರು. ಇವುಗಳನ್ನು ನಾಡಗೌಡರು ಪ್ರಾರಂಭಿಸುತ್ತಿದ್ದರು ಅಥವಾ ನಿಂತುಹೋಗಿದ್ದರೆ ಮತ್ತೆ ಚಾಲನೆಗೊಳಿಸುತ್ತಿದ್ದರು. ಪ್ರಾಂತೀಯ ಗವರ್ನರ್‌ನ ಅಥವಾ ಮಂತ್ರಿಯ ಆದೇಶದಂತೆ ಗೌಡನು ತಾನೇ ಹಳೆಯ ಸಂತೆಯನ್ನು ಚಾಲ್ತಿಗೆ ತರುತ್ತಿದ್ದುದೂ ಉಂಟು.

ಒಂದು ಮುಖ್ಯ ವರ್ತಕ ಸಮುದಾಯವಾದ ಸಾಲುಮೂಲೆ ಬಣಜಿಗ ವರ್ತಕರು ಕೃಷಿ ಉತ್ಪನ್ನಗಳ ವಹಿವಾಟನ್ನೇ ಮುಖ್ಯವಾಗಿ ನಿರ್ವಹಿಸುತ್ತಿದ್ದರು. ಇವರು ವಿಜಯನಗರ ಸಾಮ್ರಾಜ್ಯದ ೨೬ ನಗರಗಳಲ್ಲಿ ಸಂತೆಗಳನ್ನು ಸ್ಥಾಪಿಸಿದ್ದರು: ಅವು, ೧. ವಿಜಯನಗರಿ, ೨. ಹಸ್ತಿನಾವತಿ, ೩. ದೋರಸಮುದ್ರ, ೪. ಗುತ್ತಿ, ೫.

ಪೆನುಕೊಂಡಾ, ೬. ಆದವಾನಿ, ೭. ಉದಯಗಿರಿ, ೮. ಚಂದ್ರಗಿರಿ, ೯. ಮುಳುವಾಯಿ ಅಥವಾ ಮುಳಬಾಗಿಲು, ೧೦. ಕಂಚಿ, ೧೧. ಪಡೆವೀಡು, ೧೨. ಚದುರಂಗಪಟ್ಟಣ, ೧೩. ಮಂಗಳೂರು, ೧೪. ಹುಲಿಗೆರೆ, ೧೫. ಹೊನ್ನಾವರ, ೧೬. ಚಂದಾವರ, ೧೭. ಚಂದ್ರಗುತ್ತಿ, ೧೮. ಅಣ್ಣಿಗೇರಿ, ೧೯. ಹುಲಿಗೆರೆ, ೨೦. ನಿಡುಗಲ್ಲು, ೨೧. ಚಿಮತನಕಲ್ಲು, ೨೨. ತರಿಯಕಲ್ಲು, ೨೩. ಆನೆವಿಡ್ಡ, ೨೪. ಸರಿಕಲ್ಡೆಯ, ೨೫. ತೆಲಕಲಾಂಬಿ ಅಥವಾ ತೆರಕಣಾಂಬಿ ಮತ್ತು ೨೬. ಸಿಂಗಪಟ್ಟಣ. ಈ ಪಟ್ಟಿಯಿಂದ ನಾವು ಬಳ್ಳಾರಿ, ಹಾಸನ, ಕೋಲಾರ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಶಿವಮೊಗ್ಗ, ಧಾರವಾಡ, ತುಮಕೂರು, ಚಿತ್ರದುರ್ಗ ಮತ್ತು ಮೈಸೂರು ಜಿಲ್ಲೆಗಳು. ಇವು ವಿಜಯನಗರ ಕಾಲದಲ್ಲಿ ಬಹುಮುಖ್ಯ ವ್ಯಾಪಾರ ಕೇಂದ್ರಗಳಾಗಿದ್ದುವು ಎಂದು ಹೇಳಬಹುದು. ಕರ್ನಾಟಕವಲ್ಲದೆ, ಸಾಲುಮೂಲೆ ಬಣಜಿಗರು ತಮಿಳುನಾಡು ಮತ್ತು ಆಂಧ್ರಗಳೊಂದಿಗೂ ಸಂಪರ್ಕವಿರಿಸಿಕೊಂಡಿದ್ದರು.

ಈ ಇಪ್ಪತ್ತಾರು ನಗರಗಳ ಸಂತೆಗಳು ಬತ್ತ, ಜೋಳ, ರಾಗಿ, ಬಾರ್ಲಿ, ಬರಗು, ಸಾವೆ, ಗೋಧಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರು, ಉದ್ದು, ತೊಗರಿ, ಹುರುವಳ್ಳಿ, ಅಕ್ಕಿ, ಸಕ್ಕರೆ, ಎಣ್ಣೆ, ತುಪ್ಪ, ಉಪ್ಪು, ಬೆಲ್ಲ, ಅಡಕೆ, ವೀಳ್ಯದೆಲೆ, ಮೆಣಸು, ಅರಿಶಿನ, ಈರುಳ್ಳಿ, ಜೀರಿಗೆ, ಮೆಂತ್ಯ, ಸಬ್ಬಸಿಗೆ, ಸಾಸಿವೆ ಮತ್ತು ಕಬ್ಬು ಮೊದಲಾದ ಕೃಷಿ ಉತ್ಪನ್ನಗಳ ಹಂಚಿಕೆ ಮತ್ತು ಸಂಗ್ರಹಣೆಗಳ ಸಂದರ್ಭ ಮತ್ತು ವಿಧಾನಗಳಾಗಿದ್ದುವು. ಈ ಸಂತೆಗಳಲ್ಲಿ ವಸ್ತುಗಳು ಭಾರೀ ಪ್ರಮಾಣದಲ್ಲಿ ವಿನಿಯಮವಾಗುತ್ತಿದ್ದುವು. ಸುತ್ತಮುತ್ತಲ ಗ್ರಾಮಾಂತರ ಪ್ರದೇಶಗಳಿಂದ ಬಂದ ರೈತಾಪಿ ಜನರು ಕರ್ನಾಟಕದ ದೂರದೂರದ ಸ್ಥಳಗಳಿಂದ ಬಂದು, ವಿಧವಿಧವಾದ ಉಡುಗೆಗಳಿಂದ ಆಕರ್ಷಿತರಾಗಿದ್ದ ಮಾರಾಟಗಾರರನ್ನು ನೋಡುತ್ತಿದ್ದರು. ಅವರು ಮಾರುತ್ತಿದ್ದ ಬಟ್ಟೆಗಳು, ಧಾನ್ಯಗಳು, ಸಂಬಾರ ವಸ್ತುಗಳು ಮತ್ತು ಸುಗಂಧ ದ್ರವ್ಯಗಳು ಅವರ ಮನ ಸೆಳೆಯುತ್ತಿದ್ದವು. ಹಳ್ಳಿಯಿಂದ ಎಷ್ಟೋ ಮೈಲಿಗಳಾಚೆ ನಡೆಯುತ್ತಿದ್ದ ಘಟನೆಗಳ ಬಗೆಗೆ ಅಲ್ಲಿ ಅವರಿಗೆ ತಿಳಿಯುತ್ತಿತ್ತು. ತಮ್ಮಲ್ಲೂ ನೆರೆಹೊರೆಯಲ್ಲೂ ದೊರಕದ ವಸ್ತುಗಳನ್ನು ಕೊಳ್ಳಲು ಈ ಸಂತೆಗಳು ಅವರಿಗೆ ಏಕೈಕ ಅವಕಾಶವಾಗಿದ್ದುವು. ಅದಕ್ಕಿಂತ ಮುಖ್ಯವಾಗಿ, ರೈತರು ಹಳ್ಳಿಗಳಲ್ಲಿ ನಡೆಸುತ್ತಿದ್ದ ತಮ್ಮ ಜೀವನಕ್ಕಿಂತ ಹೊರಗಿನ ವ್ಯವಹಾರಗಳ ಬಗೆಗೆ ತಿಳುವಳಿಕೆ ಪಡೆಯುತ್ತಿದ್ದರು.

ಕೃಷಿ ಉತ್ಪನ್ನಗಳ ಮಾರಾಟದ ಪ್ರಮಾಣ ಎಷ್ಟಿತೆಂದರೆ, ಅದು ವರ್ತಕ ಸಂಘಗಳ ಬೆಳವಣಿಗೆಗೆ ಮಹತ್ವದ ಕೊಡುಗೆಯನ್ನು ನೀಡಿತ್ತು. ಇಂತಹ ಸಂಘಗಳ ಅಸ್ತಿತ್ವವನ್ನು ರಜಾಕ್ ಮತ್ತು ಪೇಸ್ ಅಂತಹ ವಿದೇಶೀ ಪ್ರವಾಸಿಗರು ಸಮರ್ಥಿಸಿದ್ದಾರೆ.[141] ಅವರಿಗೆ ಬೇರೆ ಬೇರೆ ಹೆಸರುಗಳಿದ್ದುವು. ಬಣಜಿಗರು, ನಾನಾದೇಶಿಗಳು, ಉಭಯ-ನಾನಾದೇಶಿಗರು, ನಖರರು, ವೈಶ್ಯರು, ಸೆಟ್ಟಿಗಳು, ಸೆಟ್ಟಿಗುತ್ತರು, ವೀರಬಣಜಿಗರು ಇತ್ಯಾದಿ. ಈ ಸಂಘಗಳ ಮುಖ್ಯಸ್ಥರು ವಾಣಿಜ್ಯ ಕೇಂದ್ರಗಳ ಮುಖ್ಯಸ್ಥರೂ ಆಗಿರುತ್ತಿದ್ದು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದ್ದರು. ಉಭಯ ನಾನಾದೇಸಿ, ಪಟ್ಟಣಸ್ವಾಮಿ, ಮಹಾ ವಡ್ಡವ್ಯವಹಾರಿ,

ವಡ್ಡವ್ಯವಹಾರಿ, ಪಟ್ಟಣ ವ್ಯಾಪಾರಿ, ಸೆಟ್ಟಿ, ಸ್ವಾಮಿ, ಪೃಥ್ವೀಸೆಟ್ಟಿ, ಸೆಟ್ಟಿ ಪಟ್ಟಣಸ್ವಾಮಿ, ಸೆಟ್ಟಿತನ, ಪುರಪತಿ, ನಗರೇಶ್ವರ, ಪಟ್ಟಣಾಧೀಶ್ವರ ಹಾಗೂ ಮಹಾಪ್ರಭು.[142] ಈ ವರ್ತಕ ಸಮುದಾಯಗಳಲ್ಲಿ, ಸಾಲುಮೂಲೆ ಬಣಜಿಗರು ಮುಖ್ಯರಾಗಿದ್ದರು. ಅವರ ಸಂಘಟನೆಯನ್ನು ಕುರಿತು ಸ್ವಾರಸ್ಯವಾದ ವಿವರಗಳು ನಮಗೆ ದೊರಕುತ್ತವೆ.

ವಿಜಯನಗರ ಕಾಲದ ಶಾಸನಗಳು ವಿಶೇಷವಾಗಿ ಸಾಲುಮೂಲೆ ಬಣಜಿಗರನ್ನು ಉಲ್ಲೇಖಿಸುತ್ತವೆ. 'ಸಾಲುಮೂಲೆ' ಎಂಬ ಪದವು ಬಹುಶಃ 'ಬಣಜಿಗ' ಸಮುದಾಯದಲ್ಲೇ ಬಹು ಪ್ರಧಾನವಾಗಿದ್ದ ಉಪಜಾತಿಯೊಂದನ್ನು ಸೂಚಿಸುತ್ತಿರಬಹುದು. ಅದು ಒಪ್ಪಂದ ಮಾಡಿಕೊಳ್ಳುತ್ತಿದ್ದ ಸಮಯದಲ್ಲಿ "ಅವರನ್ನು ಅವಲಂಬಿಸಿದ್ದ ವಿವಿಧ ಪಂಗಡ"ಗಳನ್ನು ಸೂಚಿಸುತ್ತದೆ. ಬಣಜಿಗ ಸಮುದಾಯವು ಅನೇಕ ಉಪಪಂಗಡಗಳನ್ನು ಹೊಂದಿದ್ದಿತು ಎಂಬುದನ್ನು ಸಾಲುಮೂಲೆ ಬಣಜಿಗರು ಅವರಲ್ಲಿ ಬಹುಮುಖ್ಯರಾಗಿದ್ದರು ಎಂಬುದನ್ನೂ ಇದು ತೋರಿಸುತ್ತದೆ. ಇದಕ್ಕೆ ಕಾರಣ ಸಾಲುಮೂಲೆ ಬಣಜ ಸಮುದಾಯದಲ್ಲಿ ಅಪಾರ ಧನವಿದ್ದುದೋ ಇತರರು ಅವರನ್ನು ತಮ್ಮ ಮುಖಂಡರನ್ನಾಗಿ ಆರಿಸಿಕೊಂಡುದೋ ಆಗಿರಬಹುದು. ಅವರು ಮೂಲ ಭದ್ರೇಶ್ವರನ ಸಂತತಿಯವರಾದುದರಿಂದ ಸಾಲುಮೂಲೆ ಎಂಬ ವಿಶೇಷಣವು ಬಂದಿರಬಹುದು. ವೀರಬಣಜಿಗರು ೧೧ ಮತ್ತು ೧೨ನೆಯ ಶತಮಾನಗಳಲ್ಲಿ ವಿಶೇಷತಃ ಉತ್ತರ ಕರ್ನಾಟಕದಲ್ಲಿ ಪ್ರಧಾನರಾಗಿದ್ದರು. ೧೪ನೆಯ ಶತಮಾನದ ಅನಂತರ ಸಾಲುಮೂಲೆ ಬಣಜಿಗರು ಮಹತ್ವವನ್ನು ಪಡೆದರು. ಆದ್ದರಿಂದ ಅವರು ಆ ಕಾಲದ ಶಾಸನಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತಾರೆ. ಸಾಲುಮೂಲೆ ಬಣಜಿಗರು ವಿಜಯನಗರ ಸಾಮ್ರಾಜ್ಯದ ೨೬ ನಗರಗಳಲ್ಲಿ ಸಂತೆಗಳನ್ನು ಸ್ಥಾಪಿಸಿದ್ದರು, ಕೃಷಿ ಉತ್ಪನ್ನಗಳ ಮಾರಾಟವನ್ನು ಹೆಚ್ಚಿಸುವ ಸಲುವಾಗಿ.[143]

೨ನೇ ಹರಿಹರನ ಬೇಲೂರು ಶಾಸನವು ಸಾಲುಮೂಲೆ ಬಣಜಿಗ ವರ್ತಕರ ದೊಡ್ಡದೊಂದು ಸಭೆಯನ್ನು ದಾಖಲಿಸುತ್ತದೆ. ಅವರನ್ನು ಅವಲಂಬಿಸಿದ್ದ ಹೊಲಿಯರು, ನಖರ ಪರಿವಾರದವರು, ಮುಮ್ಮರಿದಂಡರು, ಪಟ್ಟಣಸೆಟ್ಟಿಗಳು, ಬಿಲ್ಲರು ಇವರುಗಳನ್ನು ಒಳಗೊಂಡ ಆ ಮಹಾಸಭೆಯು ವಿಜಯನಗರ ಪಟ್ಟಣದಲ್ಲಿ ಕ್ರಿ.ಶ. ೧೩೮೨ರಲ್ಲಿ ನಡೆಯಿತು. ಇದಕ್ಕೆ ಅಧ್ಯಕ್ಷನಾಗಿದ್ದವನು ವಿಜಯನಗರ ಸರಕಾರದಲ್ಲಿ ತೆರಿಗೆಗಳ ಮೇಲ್ವಿಚಾರಕ ಅಧಿಕಾರಿಯಾಗಿದ್ದ ಮುದ್ದೆಯ ದಣ್ಣಾಯಕನೆಂಬುವನು. ಸಭೆಯ ಉದ್ದೇಶ, ಸಾಲುಮೂಲೆ ಬಣಜಿಗರು ಸಂಗ್ರಹಿಸಿ ವಿಜಯನಗರ ಸರಕಾರಕ್ಕೆ ಸಲ್ಲಿಸಬೇಕಾದ ತೆರಿಗೆಯ ದರವನ್ನು ನಿಗದಿಪಡಿಸುವುದು. ವಿಸ್ತಾರವಾಗಿ ಚರ್ಚೆ ನಡೆಸಿದ ಮೇಲೆ ಸಾಲುಮೂಲೆ ಬಣಜಿಗರು ಒಪ್ಪಂದ ಮಾಡಿಕೊಂಡರು. ಔಷಧಿಗಳು, ಬಿಡಿ ವಸ್ತುಗಳು, ಧಾನ್ಯಗಳು, ಪ್ರಾಣಿಗಳು, ವೇಶ್ಯೆಯರು ಅಥವಾ ದಾಸಿಯರ ಮೇಲೆ ಕೊಡಬೇಕಾದ ತೆರಿಗೆಯನ್ನು ನಿರ್ಧರಿಸಿದರು. ತೆರಿಗೆ ವಿಭಾಗದಲ್ಲಿ ಅತ್ಯುನ್ನತ ಅಧಿಕಾರಿಯಾಗಿದ್ದ ಮುದ್ದೆಯ ದಣ್ಣಾಯಕನಿಗೆ ಪೃಥ್ವೀಸೆಟ್ಟಿತನದ ಬಿರುದನ್ನು ನೀಡಿ ಗೌರವಿಸಿದರು. ಇದು ಸರಕಾರದ ಅತ್ಯುನ್ನತ ಅಧಿಕಾರಕ್ಕೆ ಅವರು ಸೂಚಿಸುವ ಮರ್ಯಾದೆಯ ಕುರುಹಾಗಿತ್ತು.

ಒಪ್ಪಂದವಾಗುತ್ತಿದ್ದ ಸಮಯದಲ್ಲಿ ಹೊಲೆಯರು ಹಾಜರಿದ್ದರು ಎಂದು ಶಾಸನವು ಹೇಳುತ್ತದೆ. ಬಣಜಿಗ ಸಮುದಾಯವು ಮಾಡಿಕೊಂಡ ಈ ಒಪ್ಪಂದವು ಸಾಮಾನ್ಯ ಸ್ವರೂಪದ್ದಾಗಿದ್ದುದರಿಂದ, ಸಮಾಜದ ಪ್ರತಿಯೊಂದು ವರ್ಗದ ಮೇಲೂ ಅದರ ಪರಿಣಾಮವಾಗುತ್ತಿದ್ದುದರಿಂದ, ಎಲ್ಲ ಜನರೂ ಉಪಯೋಗಿಸುವ ಕೃಷಿ ವಸ್ತುಗಳ ಮೇಲೆ ತೆರಿಗೆ ದರ ನಿಗದಿಪಡಿಸುವಾಗ ಎಲ್ಲ ವರ್ಗಗಳ ಪ್ರತಿನಿಧಿಗಳೂ ಹಾಜರಿದ್ದರೆಂದು ಭಾವಿಸಬಹುದು. ಆದ್ದರಿಂದ ಹೊಲೆಯರು ಎಂಬ ಪದವು ವಿಶಾಲಾರ್ಥದಲ್ಲಿ ರೈತರು, ಕುಶಲಕರ್ಮಿಗಳು ಮತ್ತು ಇತರರನ್ನು ಒಳಗೊಳ್ಳುತ್ತಿತ್ತು ಎಂದು ತೋರುತ್ತದೆ.[144]

ಸಾಲುಮೂಲೆ ಬಣಜಿಗರು ವಿಜಯನಗರ ಸರಕಾರದೊಂದಿಗೆ ಮಾಡಿಕೊಂಡ ಈ ಒಪ್ಪಂದದ ಒಂದು ಪ್ರತಿಯು ಇದ್ದ ತಾಮ್ರಫಲಕವು ದೊರಕಿದೆ. ಇದಕ್ಕೆ ಮಹತ್ವವಿದೆ. ರಾಜಧಾನಿಯಲ್ಲಿ ಬಣಜಿಗರ ಮುಖ್ಯಸ್ಥರು ಮಾಡಿಕೊಂಡ ಈ ಒಪ್ಪಂದವನ್ನು ಹಲವಾರು ತಾಮ್ರಫಲಕಗಳ ಮೇಲೆ ಪ್ರತಿಮಾಡಿಸಿ ವಿವಿಧ ವ್ಯಾಪಾರ ಕೇಂದ್ರಗಳಿಗೆ ಕಳುಹಿಸಲಾಯಿತೆಂದು ತೋರುತ್ತದೆ (೨೬ ವ್ಯಾಪಾರ ಕೇಂದ್ರಗಳನ್ನು ಶಾಸನದಲ್ಲಿ ಹೇಳಿದೆ). ತೆರಿಗೆಯ ದರಗಳನ್ನು ಕುರಿತು ಇತ್ತೀಚೆಗೆ ಮಾಡಿಕೊಂಡ ಕರಾರಿನ ಮಾಹಿತಿಯು ಎಲ್ಲಾ ವ್ಯಾಪಾರ ಕೇಂದ್ರಗಳಿಗೆ ತಿಳಿದಿರಬೇಕೆನ್ನುವುದು ಅದರ ಉದ್ದೇಶ. ಅಲ್ಲಿಂದ ಮುಂದಕ್ಕೆ ಆ ಹೊಸದರದಲ್ಲಿ ಜನರಿಂದ ತೆರಿಗೆಗಳನ್ನು ಅವರು ಸಂಗ್ರಹಿಸಬೇಕಾಗಿತ್ತು. ಹಾಸನಜಿಲ್ಲೆ ಬೇಲೂರಿನ ಬಳಿಯ ದೋರಸಮುದ್ರವು ಅಂಥದೊಂದು ವ್ಯಾಪಾರ ಕೇಂದ್ರವಾಗಿತ್ತೆಂದು ಶಾಸನವು ಹೇಳುತ್ತದೆ.[145]

ವಿಜಯನಗರ ಕಾಲದಲ್ಲಿ ಸಾಲುಮೂಲೆ ಬಣಜಿಗರು ಉತ್ತಮ ರೀತಿಯಲ್ಲಿ ಸಂಘಟಿತರಾಗಿದ್ದರು. ಅವರು ಒಟ್ಟುಗೂಡಿ ಸರಕಾರದೊಂದಿಗೆ ಒಪ್ಪಂದ ಮಾಡಿಕೊಂಡರು. ವರ್ತಕನೊಬ್ಬನು ವೈಯಕ್ತಿಕವಾಗಿ ಸರಕಾರದೊಂದಿಗೆ ಸಂಪರ್ಕವಿರಿಸಿಕೊಳ್ಳುವುದಕ್ಕೆ ಬದಲಾಗಿ, ಈ ಸಂದರ್ಭದಲ್ಲಿ, ಇಡೀ ಸಮುದಾಯವೇ ಸಂಪರ್ಕವನ್ನು ಸ್ಥಾಪಿಸಿಕೊಂಡಿತು. ವ್ಯಕ್ತಿಗತವಾಗಿ ಹೋದರೆ ಅಧಿಕಾರಿಗಳು ಅಷ್ಟಾಗಿ ಮರ್ಯಾದೆ ಕೊಡುತ್ತಿರಲಿಲ್ಲವೋ ಏನೋ, ಆದರೆ ಈಗ ಸಮುದಾಯದಲ್ಲಿ ಒಬ್ಬನಾದ್ದರಿಂದ ಅಧಿಕಾರಿಗಳ ಕಣ್ಣಿನಲ್ಲಿ ಅವನ ಗೌರವ ಹೆಚ್ಚಿತು. ಹೀಗೆ ಕರ್ನಾಟಕದ ಇಡೀ ವ್ಯಾಪಾರ - ವಹಿವಾಟು ಸುಸಂಘಟಿತವಾಗಿದ್ದುದನ್ನೂ, ಸ್ವ-ನಿಯಂತ್ರಿತವಾಗಿದ್ದುದನ್ನೂ ಆ ಕಾಲದಲ್ಲಿ ನೋಡಬಹುದಾಗಿತ್ತು. ೨೬ ವ್ಯಾಪಾರ ಕೇಂದ್ರಗಳಿಗೆ ಸೇರಿದ ಬಣಜಿಗ ವರ್ತಕರು ತಮ್ಮ ಹಿತವನ್ನು ರಕ್ಷಿಸಿಕೊಳ್ಳುವ ಸಲುವಾಗಿ ಹಾಗೂ ವಿಜಯನಗರ ಸರಕಾರದೊಂದಿಗೆ ವ್ಯವಹರಿಸುವ ಸಲುವಾಗಿ ಒಕ್ಕೂಟವನ್ನು ಮಾಡಿಕೊಂಡದ್ದು ಮಧ್ಯಕಾಲದ ಜರ್ಮನಿಯಲ್ಲಿ ಹೆಚ್ಚು ಕಡಮೆ ಇದೇ ಉದ್ದೇಶದಿಂದ ಅಸ್ತಿತ್ವಕ್ಕೆ ಬಂದಿದ್ದ ಹನ್ಸಿಯಾಟಿಕ್ ಲೀಗ್ ಅನ್ನು ನೆನಪಿಗೆ ತರುತ್ತದೆ. ಬಣಜಿಗ ಸಮುದಾಯವು ಶ್ರೀಮಂತವಾಗಿತ್ತು, ಬಲಿಷ್ಠವಾಗಿತ್ತು. ವಿಜಯನಗರಿಯಲ್ಲಿ ಸಭೆ ಸೇರಿದ ವರ್ತಕರು ಒಟ್ಟಾಗಿ ವಿರೂಪಾಕ್ಷದೇವರಿಗೆ ನವರತ್ನಗಳು ಮೆಟ್ಟಿದ ಒಂದು ಅಮೂಲ್ಯವಾದ ಚಾಮರವನ್ನು ಅರ್ಪಿಸಿದರು ಎನ್ನುವುದರಿಂದ ಈ ಸಮುದಾಯದ ಶ್ರೀಮಂತಿಕೆಯ ಸೂಚನೆ ನಮಗೆ ದೊರಕುತ್ತದೆ. ಅದು ೧೪ರಿಂದ ೧೬ನೆಯ ಶತಮಾನದವರೆಗೂ ಪ್ರಮುಖವಾಗಿ ಕಾಣಿಸಿಕೊಳ್ಳುತ್ತಿತ್ತು.

ರಾಜಧಾನಿಯಾಗಿದ್ದುದಲ್ಲದೆ ವಿಜಯನಗರ ಪಟ್ಟಣವು ದೊಡ್ಡ ವ್ಯಾಪಾರಕೇಂದ್ರವೂ, ಕರ್ನಾಟಕದ ವಾಣಿಜ್ಯ ಚಟುವಟಿಕೆಗಳಿಗೆ ಕೇಂದ್ರಸ್ಥಾನವೂ ಆಗಿತ್ತು. ಇದನ್ನು ರಷ್ಯಾ, ಪರ್ಷಿಯಾ, ಇಟಲಿ ಮತ್ತು ಪೋರ್ಚುಗಲ್ಲುಗಳಿಂದ ೧೫ ಮತ್ತು ೧೬ನೆಯ ಶತಮಾನಗಳಲ್ಲಿ ಬಂದ ಪ್ರವಾಸಿಗರು ಸ್ಥಿರಪಡಿಸಿದ್ದಾರೆ. ಪೇಸ್‌ನ ಪ್ರಕಾರ "ಈ ನಗರದಲ್ಲಿ ಜಗತ್ತಿನ ಪ್ರತಿಯೊಂದು ರಾಷ್ಟ್ರದಿಂದ ಬಂದ ವಿವಿಧ ಜನರನ್ನು ನೋಡಬಹುದು. ಅದಕ್ಕೆ ಕಾರಣ ಅಲ್ಲಿ ನಡೆಯುವ ಭಾರೀ ಪ್ರಮಾಣದ ವ್ಯಾಪಾರ-ವಹಿವಾಟು" ಬೇರೊಂದು ಕಡೆ ಅವನೇ ಹೇಳುತ್ತಾನೆ, ವಿಜನಯಗರದಲ್ಲಿ ೧೦೦,೦೦೦ ಮನೆಗಳಿದ್ದುವು; ಸರಾಸರಿ ಒಂದು ಮನೆಗೆ ಐದು ಜನರಂತೆ ಲೆಕ್ಕ ಹಾಕಿದರೆ, ೧೬ನೆಯ ಶತಮಾನದ ಪ್ರಾರಂಭದಲ್ಲಿ ಈ ವ್ಯಾಪಾರಿ ಕೇಂದ್ರದ ಜನಸಂಖ್ಯೆ ೫೦೦,೦೦೦ ಆಗುತ್ತಿತ್ತು. ಕೃಷಿ ಉತ್ಪನ್ನಗಳ ವ್ಯಾಪಾರವನ್ನು ಮುಖ್ಯವಾಗಿ ನಿರ್ವಹಿಸುತ್ತಿದ್ದ ಸಾಲುಮೂಲೆ ಬಣಜಿಗರ ಸಭೆಯ ಬಗೆಗೆ ಹೇಳುವ ಶಾಸನವು ವಿಜಯನಗರ ಪಟ್ಟಣವು ಒಂದು ದೊಡ್ಡ ವ್ಯಾಪಾರ ಕೇಂದ್ರವಾಗಿತ್ತು ಎನ್ನುವುದನ್ನೂ ದಾಖಲಿಸುತ್ತದೆ.

ನಗರದಲ್ಲಿ ಬೇರೆ ಬೇರೆ ಬಡಾವಣೆಗಳಿದ್ದುವು. ಪ್ರತಿ ಬಡಾವಣೆಯೂ ಸ್ವಯಂಪೂರ್ಣವಾದ ಘಟಕವಾಗಿತ್ತು. ಮುಖ್ಯವಾದೊಂದು ದೇವಾಲಯ, ಸಂತೆಬೀದಿ, ಅದರದೇ ನೀರು ಸರಬರಾಜು ವ್ಯವಸ್ಥೆ ಇತ್ಯಾದಿಗಳಿದ್ದುವು. ವಿರೂಪಾಕ್ಷ ದೇವಾಲಯದ ಎದುರಿಗೆ ಒಂದು ಸಂತೆಪೇಟೆಯಿತ್ತು. ಅನೇಕ ವೇಳೆ ದೇವಾಲಯವು ಕರ್ನಾಟಕದ ವಿವಿಧ ಭಾಗಗಳಿಂದ ಬಂದ ವರ್ತಕರು ಸಂಧಿಸುವ ಸ್ಥಳವಾಗುತ್ತಿತ್ತು. ವಿಜಯನಗರ ಪಟ್ಟಣದ ಒಂದು ಪೇಟೆಬೀದಿಗೆ ಅಚ್ಯುತರಾಯನ ಹೆಸರಿನ ಮೇಲಿದ್ದು, ಅಲ್ಲಿ ಧಾನ್ಯಗಳ ಅಂಗಡಿಗಳಿದ್ದುವೆಂದು ಶಾಸನವು ಹೇಳುತ್ತದೆ. ಇದೆಲ್ಲ ಕೃಷಿ ಉತ್ಪನ್ನಗಳ ಮಾರಾಟ ವಿಷಯದಲ್ಲಿ ವಿಜಯನಗರದ ಅರಸರು ಹೊಂದಿದ್ದ ತೀವ್ರವಾದ ಆಸಕ್ತಿಯನ್ನು ತೋರಿಸುತ್ತದೆ. ನಗರ ಪ್ರದೇಶಗಳ ಪೇಟೆ ಬೀದಿಗಳು ಗ್ರಾಮ ಪ್ರದೇಶಗಳ ಸಂತೆಗಳಿಗೆ ಸಂವಾದಿಯಾಗಿದ್ದುವು ಎಂದು ಹೇಳಬಹುದು.

೧೬ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿ ನ್ಯೂನಿಜ್, ಈ ಮಾರುಕಟ್ಟೆಗಳಲ್ಲಿ ಸದಾಕಾಲವೂ ಸಮೃದ್ಧವಾಗಿ ಹಣ್ಣು ಹಂಪಲುಗಳು ತುಂಬಿದ್ದುದನ್ನು ಗಮನಿಸಿದನು. ದ್ರಾಕ್ಷಿ, ಕಿತ್ತಳೆ, ನಿಂಬೆ, ದಾಳಿಂಬೆ, ಹಲಸು ಮತ್ತು ಮಾವಿನ ಹಣ್ಣುಗಳು ಸಮೃದ್ಧವಾಗಿದ್ದವು ಮತ್ತು ಈ ಹಣ್ಣುಗಳು ತುಂಬಾ ಅಗ್ಗವೂ ಆಗಿದ್ದುವು. ವಿಜಯನಗರ ಪಟ್ಟಣದಲ್ಲಿ ಪ್ರತಿ ಸಂಜೆಯೂ ಸಂತೆ ನಡೆಯುತ್ತಿತ್ತು. ಈ ಎಲ್ಲಾ ವಸ್ತುಗಳು ಅಲ್ಲಿ ದೊರಕುತ್ತಿದ್ದುವು. ವಸ್ತುಗಳ ಪ್ರಮಾಣ ನ್ಯೂನಿಜ್‌ನನ್ನು ಬೆರಗಾಗಿಸಿತು. ಪ್ರತಿದಿನವೂ ಮಾರುಕಟ್ಟೆಯಲ್ಲಿ ದೊರಕುತ್ತಿದ್ದ ಬೆಣ್ಣೆ, ಹಾಲು ಮತ್ತು ಎಣ್ಣೆಗಳ ಉತ್ತಮ ಗುಣಮಟ್ಟವನ್ನು ವಿಶೇಷವಾಗಿ ಉಲ್ಲೇಖಿಸದೆ ಇರಲು ಅವನಿಗೆ ಸಾಧ್ಯವಾಗಲಿಲ್ಲ.[146] (ಅದೇ ಪು. ೩೯೦)

ಕೃಷಿ ಉತ್ಪನ್ನಗಳ ಮೇಲೆ ವಿಧಿಸುತ್ತಿದ್ದ ಸಾರಿಗೆ ಸುಂಕವು ಕರ್ನಾಟಕದಲ್ಲಿ ರಾಜ್ಯ ವರಮಾನದ ಮುಖ್ಯವಾದೊಂದು ಮೂಲವಾಗಿತ್ತು. ಎತ್ತುಗಳ ಮೇಲೆ ಹೇರಿಕೊಂಡು ಮೆಣಸು, ಅಡಕೆ, ರೇಷ್ಮೆ, ಮರಮುಟ್ಟು,

ಅಕ್ಕಿ, ಬತ್ತ, ರಾಗಿ, ಉಪ್ಪು, ಧಾನ್ಯ, ಎಣ್ಣೆ, ತುಪ್ಪ, ಬೇಳೆಕಾಳುಗಳು, ಬೆಲ್ಲ, ಹಣ್ಣುಗಳು, ತೆಂಗಿನ ತಿರುಳು, ಹತ್ತಿ ಬಟ್ಟೆ, ಹೊಗೆಸೊಪ್ಪು, ಜೀರಿಗೆ, ಸಾಸಿವೆ, ಈರುಳ್ಳಿ, ಬೆಳ್ಳುಳ್ಳಿ, ಅರಿಶಿನ, ಶುಂಠಿ ಮತ್ತಿತರ ವಸ್ತುಗಳನ್ನು ಸಾಗಿಸುತ್ತಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಎಲ್ಲಾ ಬಗೆಯ ಕೃಷಿ ಉತ್ಪನ್ನಗಳ ಮೇಲೂ ಈ ಸಾಗಣೆ ಸುಂಕವನ್ನು ವಿಧಿಸಿದ್ದರು. ಹೀಗೆ ಕರ್ನಾಟಕದಲ್ಲಿ ಕೃಷಿ ಉತ್ಪನ್ನಗಳ ಅನೇಕ ವ್ಯಾಪಾರ ಕೇಂದ್ರಗಳು ಬೆಳೆದುದು ಒಳನಾಡ ವ್ಯಾಪಾರಕ್ಕೆ ತುಂಬಾ ಅನುಕೂಲಕರವಾಗಿ ಪರಿಣಮಿಸಿತು. ಆ ಕೇಂದ್ರಗಳಲ್ಲಿ ರೈತರು ತಂದ ವಸ್ತುಗಳು ಮಾರಾಟವಾಗುತ್ತಿದ್ದವು, ಕೆಲವೊಮ್ಮೆ ವಿನಿಮಯಗೊಳ್ಳುತ್ತಿದ್ದುವು. ಆದರೆ ಹೆಚ್ಚುವರಿ ಉತ್ಪಾದನೆಯ ಬಹುಪಾಲನ್ನು ನಗರಗಳಲ್ಲಿದ್ದ ವರ್ತಕನಿಗೆ ಒದಗಿಸಲಾಗುತ್ತಿತ್ತು. ಅಲ್ಲಿಂದ ಕರ್ನಾಟಕದ ಇತರ ವ್ಯಾಪಾರಕೇಂದ್ರಗಳಿಗೆ ರವಾನೆಯಾಗುತ್ತಿದ್ದಿತು, ಇಲ್ಲವೆ ಬೇರೆ ದೇಶಗಳಿಗೆ ರಫ್ತಾಗುತ್ತಿದ್ದಿತು.

ಕೃಷಿ ಉತ್ಪಾದನೆಗಳ ವಿದೇಶ ವ್ಯಾಪಾರಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಕರ್ನಾಟಕದ ಭಟ್ಕಳ, ಮಂಗಳೂರು, ಹೊನ್ನಾವರ ಬಂದರುಗಳಿಂದ ರಫ್ತಾಗುತ್ತಿದ್ದ ಅತ್ಯಂತ ಮುಖ್ಯವಾದ ವಸ್ತು ಮೆಣಸು, ಅದಕ್ಕೆ ಭಾರತದಲ್ಲೂ ಹೊರದೇಶದಲ್ಲೂ ಒಳ್ಳೆಯ ಮಾರುಕಟ್ಟೆಯಿದ್ದಿತು.

ಒಳನಾಡ ವ್ಯಾಪಾರದಲ್ಲೂ ಪಶ್ಚಿಮ ದೇಶಗಳೊಂದಿಗೆ ಸಾಗರೋತ್ತರ ವಾಣಿಜ್ಯದಲ್ಲೂ ಕರ್ನಾಟಕವು ವಿಶಿಷ್ಟವಾದ ಪಾತ್ರವನ್ನು ನಿರ್ವಹಿಸುತ್ತಿದ್ದಿತು. ಹೀಗೆ ವ್ಯಾಪಾರವಾಗುತ್ತಿದ್ದ ಕೃಷಿ ಉತ್ಪನ್ನಗಳ ಬಹುಪಾಲು ಮೆಣಸು ಮತ್ತು ಇತರ ಸಂಬಾರ ವಸ್ತುಗಳು, ಪರ್ಯಾಯದ್ವೀಪದ ಪಶ್ಚಿಮದಲ್ಲಿ ಸೊಗಸಾದ ಉದ್ದನೆಯ ಕರಾವಳಿಯಿದ್ದು ಕರ್ನಾಟಕವು ಪಶ್ಚಿಮ ದೇಶಗಳೊಂದಿಗೆ ಸಂಪರ್ಕ ಕಲ್ಪಿಸುವ ಸಮುದ್ರಮಾರ್ಗಗಳ ಮೇಲೆ ಹಿಡಿತವನ್ನಿಟ್ಟುಕೊಂಡಿದ್ದವು. ಕರ್ನಾಟಕವು ವಿದೇಶಗಳೊಂದಿಗೆ ನಡೆಸುತ್ತಿದ್ದ ವಾಣಿಜ್ಯವು ತುಂಬಾ ಹೆಚ್ಚಿತ್ತು ಎಂದು ಕಾಣುತ್ತದೆ. ಅಬ್ದುಲ್ ರಜಾಕನ ಪ್ರಕಾರ, ವಿಜಯನಗರ ಸಾಮ್ರಾಜ್ಯದಲ್ಲಿ ೩೦೦ ಬಂದರುಗಳಿದ್ದುವು. ಹಿಂದೂಮಹಾಸಾಗರದ ದ್ವೀಪಗಳು, ಮಲಯ, ಬರ್ಮಾ, ಚೈನಾ, ಅರೇಬಿಯ, ಪರ್ಷಿಯ, ದಕ್ಷಿಣ ಆಫ್ರಿಕಾ, ಅಬಿಸೀನಿಯ ಮತ್ತು ಪೋರ್ಚುಗಲ್‌ಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಬೆಳೆಸಿಕೊಂಡಿದ್ದಿತು.

ಒಳಭಾಗಗಳಿಂದ ಪಶ್ಚಿಮ ಕರಾವಳಿಯ ಅಂಕೋಲ, ಮಿರ್ಜಾನ್, ಹೊನ್ನಾವರ, ಭಟ್ಕಳ, ಬೈಂದೂರು, ಬಾರಕೂರು, ಬಸ್ರೂರು, ಮಂಗಳೂರು ಮತ್ತು ಕುಂಬ್ಳೆ ಮೊದಲಾದ ಪಟ್ಟಣಗಳಿಗೆ ಕೃಷಿ ಉತ್ಪನ್ನಗಳು ಕಾವಡಿಗಳ ಮೂಲಕ ಸಾಗುತ್ತಿದ್ದುವು. ಒಂದು ಉದ್ದನೆಯ ಕೋಲಿಗೆ ಎರಡೂ ತುದಿಗಳಲ್ಲಿ ಹಗ್ಗದಿಂದ ಸರಕನ್ನು ನೇತುಹಾಕಿ, ಹೆಗಲ ಮೇಲೆ ಹೊತ್ತು ಒಯ್ಯುವುದೇ ಕಾವಡಿ. ತಲೆ ಹೊರೆಗಳು, ಕುದುರೆ ಹೇರುಗಳು, ಎತ್ತಿನ ಹೇರುಗಳು, ಬಂಡಿಗಳು ಮತ್ತು ಹೇರು ಕತ್ತೆಗಳೂ ಉಪಯೋಗವಾಗುತ್ತಿದ್ದುವು. ಕರ್ನಾಟಕದ ಈ ಬಂದರುಗಳಲ್ಲಿ ಪೋರ್ಚುಗೀಸ್ ವರ್ತಕರು ಅಕ್ಕಿ, ಸಕ್ಕರೆ, ಸಂಬಾರ ವಸ್ತುಗಳು, ಹತ್ತಿಯ ಬಟ್ಟೆ ಮೊದಲಾದವನ್ನು ಕೊಂಡು ವಿದೇಶಿಗಳಿಗೆ ಹಡಗುಗಳ ಮೂಲಕ ರವಾನಿಸುತ್ತಿದ್ದರು. ಬಸ್ರೂರು, ಬಾರಕೂರು ಮತ್ತು ಮಂಗಳೂರು

ಬಂದರುಗಳಿಂದ ಮಾಲ್ಡೀವ್ ದ್ವೀಪಗಳು, ಏಡನ್ ಮತ್ತು ಆರ್ಮುಜ್‌ಗಳಿಗೆ ಅಕ್ಕಿಯು ರಫ್ತಾಗುತ್ತಿತ್ತು. ಕೃಷ್ಣದೇವರಾಯನ ಸಮಕಾಲೀನರಾದ ಕನಕದಾಸರು ತಮ್ಮ ಮೋಹನತರಂಗಿಣಿಯಲ್ಲಿ, ಕೃಷಿ ಉತ್ಪನ್ನಗಳನ್ನು ವಿದೇಶಗಳಿಗೆ ಕಳಿಸಿ ವ್ಯಾಪಾರ ಮಾಡುತ್ತಿದ್ದವರ ಸಂಪತ್ತು ಎಷ್ಟಿರುತ್ತಿದ್ದಿತೆಂದರೆ, ಅವರು ಕುಬೇರನಿಗೂ ಸಾಲ ಕೊಡಬಲ್ಲವರಾಗಿದ್ದರು, ತಮ್ಮ ಅಂಗಡಿ ಮಳಿಗೆಗಳಲ್ಲಿ ಚಿನ್ನದ ಮತ್ತು ಹಣದ ರಾಶಿಯ ಮೇಲೆ ಕುಳಿತಿರುತ್ತಿದ್ದರು ಎಂದು ಹೇಳುತ್ತಾರೆ.[147]

ಸಂಬಾರ ಪದಾರ್ಥಗಳೇ ಪ್ರಮುಖವಾಗಿದ್ದ ವಿದೇಶ ವ್ಯಾಪಾರ ವಹಿವಾಟು ಹೆಚ್ಚು ಕಡಮೆ ಪೂರ್ತಿಯಾಗಿ, ವಿಜಯನಗರ ಕಾಲದಲ್ಲಿ (೧೩೩೬-೧೫೬೫) ಅರಬ್ಬರು ಮತ್ತು ಪೋರ್ಚುಗೀಸರ ಕೈಗಳಲ್ಲಿತ್ತು. ಭಾರತೀಯ ಮಾರುಕಟ್ಟೆಯಿಂದ ಪೋರ್ಚುಗೀಸರು ಅರಬ್ಬರನ್ನು ಯಶಸ್ವಿಯಾಗಿ ಓಡಿಸಿದರು. ಪೋರ್ಚುಗೀಸರಿಗೆ ಮಂಗಳೂರು, ಬಾರ್ಸೆಲೂರು ಮತ್ತು ಹೊನ್ನಾವರಗಳಲ್ಲಿ ಗೋದಾಮುಗಳಿದ್ದುವು. ಪೇಸ್ ತನ್ನ ವರದಿಯಲ್ಲಿ ಹೀಗೆ ಬರೆಯುತ್ತಾನೆ: "ಈ ರಾಜ್ಯಕ್ಕೆ ಭಾರತದ ಕರಾವಳಿಯಲ್ಲಿ ಹಲವು ಬಂದರುಗಳಿವೆ. ನಾವು ಶಾಂತಿಯಿಂದಿರುವ ಕೆಲವು ಬಂದರುಗಳಿವೆ, ಇನ್ನು ಕೆಲವದರಲ್ಲಿ ನಮ್ಮ ಫ್ಯಾಕ್ಟರಿಗಳಿವೆ. ಅಂಕೋಲ, ಮಿರ್ಜಿಯೋ, ಹೊನೋರ್, ಬೆಟೆಕಲ್ಲ, ಮಂಗಳೂರು, ಬಾರ್ಸೆಲೂರು ಮತ್ತು ಬಾಕನೂರು ಇತ್ಯಾದಿ."

೧೫೦೩ರಲ್ಲಿ ವಾಸ್ಕೋಡಗಾಮನು ಅನೇಕ ಮೂರಿಷ್ ಹಡಗುಗಳು ಭಟ್ಕಳ ಬಂದರಿನಲ್ಲಿ ಲಂಗರು ಹಾಕಿ ನಿಂತಿರುವುದನ್ನು ಗಮನಿಸಿದನು. ಅದು ಭಾರತದ ಎಲ್ಲಾ ಕಡೆಗೂ ಅಕ್ಕಿ ಮತ್ತು ಸಕ್ಕರೆಗಳನ್ನು ರಫ್ತುಮಾಡುವ ಸ್ಥಳ. ವಾಸ್ಕೋಡಗಾಮನು ಮೂರರನ್ನು ಓಡಿಸಿ, ಭಟ್ಕಳದಲ್ಲಿ ಅಗಾಧ ಪ್ರಮಾಣದ ಅಕ್ಕಿಯನ್ನೂ ಸಕ್ಕರೆಯನ್ನೂ ಪಡೆದನು. ಭಟ್ಕಳದ ನಾಯಕನ ಪ್ರತಿನಿಧಿಗೆ ಅವನು ವಿಧಿಸಿದ ನಾಲ್ಕು ಷರತ್ತುಗಳು ಹೀಗಿದ್ದುವು: ೧) ಅವನು ಪೋರ್ಚುಗೀಸರಿಗೆ ಕಪ್ಪವನ್ನು ಕೊಡಬೇಕು, ೨) ಅವನು ಬೇರೆ ಯಾರೊಂದಿಗೂ ಮೆಣಸನ್ನು ವ್ಯಾಪಾರ ಮಾಡಕೂಡದು, ೩) ನಾಯಕನು ಟರ್ಕರನ್ನು ಕರೆತರಬಾರದು, ೪) ಅವನು ಕಲ್ಲೀಕೋಟೆಯೊಂದಿಗೆ ಯಾವುದೇ ಸಂಪರ್ಕ ಇರಿಸಿಕೊಳ್ಳಕೂಡದು. ವಾಸ್ಕೋಡಗಾಮ ವಿಧಿಸಿದ ಎರಡನೆ ಷರತ್ತು ಸ್ವಾರಸ್ಯವಾಗಿದೆ. ಏಕೆಂದರೆ ಅತ್ಯಂತ ಅಮೂಲ್ಯವಾಗಿದ್ದು ಅಪಾರ ಲಾಭವನ್ನು ತರುತ್ತಿದ್ದ ಮೆಣಸನ್ನು ಸಂಗ್ರಹಿಸಿಕೊಳ್ಳಲು ಹೇಗೆ ಪೋರ್ಚುಗೀಸರು ಮೊದಲಿನಿಂದಲೂ ಕಾತರರಾಗಿದ್ದರು ಎಂಬುದನ್ನು ಅದು ಸೂಚಿಸುತ್ತದೆ. ಆದ್ದರಿಂದ ಭಾರತದ ಪಶ್ಚಿಮ ಕರಾವಳಿಯಲ್ಲಿ ಮೆಣಸಿನ ವ್ಯಾಪಾರದ ಏಕಸ್ವಾಮ್ಯವನ್ನು ಸ್ಥಾಪಿಸುವುದೇ ಪೋರ್ಚುಗೀಸರ ನೀತಿಯಾಗಿತ್ತು. ಆದರೆ ಅವರೇ ಪ್ರಧಾನ ಶಕ್ತಿಗಳಾಗಿರುವವರೆಗೆ ಇದು ನಡೆಯಿತು. ಡಚ್ ಮತ್ತು ಇಂಗ್ಲಿಷರೂ ಮೆಣಸನ್ನು ಸಂಗ್ರಹಿಸಲು ಕರ್ನಾಟಕದ ಕರಾವಳಿಗೆ ಭೇಟಿ ಕೊಡಲು ತೊಡಗಿದಾಗ ಸ್ಪರ್ಧೆ ಅನಿವಾರ್ಯವಾಯಿತು. ಅನೇಕ ವೇಳೆ ಈ ಸ್ಪರ್ಧೆಗೆ ಕರ್ನಾಟಕದ ರಾಜಕಾರಣವೂ ಸೇರಿಕೊಂಡುಬಿಟ್ಟಿತು.

ವರ್ತೆಮನೂ ೧೫೦೫ರಲ್ಲಿ ಅಕ್ಕಿ ಮತ್ತು ಸಕ್ಕರೆ ಭಟ್ಕಳದಿಂದ ರಫ್ತಾಗುತ್ತಿದ್ದುದನ್ನು ಗಮನಿಸಿದ್ದನು. ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ಪೋರ್ಚುಗೀಸರು ಅಕ್ಕಿ ಮತ್ತು ಲವಂಗಗಳನ್ನು ಹೇರಳವಾಗಿ

ಉತ್ಪಾದಿಸುವ ಭಟ್ಕಳದೊಂದಿಗೆ ನಿಕಟವಾದ ಸಂಪರ್ಕವನ್ನು ಹೊಂದಿದ್ದರು. ಅವರ ಹಡಗುಗಳ ಮೂಲಕ ಈ ವಸ್ತುಗಳು ಮತ್ತು ಭಟ್ಕಳದಿಂದ ಹಲವು ಬಗೆಯ ವಸ್ತುಗಳು ಮಾರಾಟವಾಗುತ್ತಿದ್ದವು; ಮೂರರು ಮತ್ತು "ಹೀದನರು" ವ್ಯಾಪಾರದಲ್ಲಿ ನಿರತರಾಗಿದ್ದರು. ಪ್ರತಿವರ್ಷವೂ ಕರ್ನಾಟಕದ ಅತ್ಯಂತ ಪ್ರಸಿದ್ಧವಾದ ಈ ಬಂದರಿನಿಂದ ಮೆಣಸು, ಸಂಬಾರ ವಸ್ತುಗಳು, ಹುಡಿ ಮಾಡಿದ ಸಕ್ಕರೆ ಮತ್ತು ಬಿಳಿ ಅಕ್ಕಿಗಳನ್ನು ಕೊಂಡೊಯ್ಯಲು ಆರ್ಮುಸ್‌ನಿಂದ ಹಡಗುಗಳು ಬರುತ್ತಿದ್ದುವು. ಬಂದರಿನಲ್ಲಿ ಈ ವಸ್ತುಗಳು ಭಾರೀ ಪ್ರಮಾಣದಲ್ಲಿ ದಾಸ್ತಾನಾಗಿದ್ದುವು. ಮೈರೋಬಲಮಂ ಅವನ್ನು ಭಟ್ಕಳದ ವರ್ತಕರು ವಿಶೇಷವಾಗಿ ಕೂಡಿಡುತ್ತಿದ್ದರು. ಏಕೆಂದರೆ ಅದಕ್ಕೆ ಅರೇಬಿಯ ಮತ್ತು ಪರ್ಷಿಯಗಳಲ್ಲಿ ಒಳ್ಳೆಯ ಮಾರುಕಟ್ಟೆಯಿದ್ದಿತು. ಮೂರರು ಈ ವ್ಯಾಪಾರಕ್ಕೆ ದಲ್ಲಾಳಿಗಳಾಗಿದ್ದರು. ಪೋರ್ಚುಗೀಸರು ಬರುವುದಕ್ಕೆ ಮುಂಚೆ ಕರ್ನಾಟಕದ ವರ್ತಕರಿಗೂ ವಿದೇಶಿ ಗ್ರಾಹಕರಿಗೂ ನಡುವೆ ಅವರು ಮಧ್ಯವರ್ತಿಗಳಾಗಿದ್ದರು.[148] ೧೫೩೦ರಲ್ಲಿ ಕೊಚ್ಚಿಯ ಕ್ಯಾಪ್ಟನ್ ಆಗಿದ್ದ ಅಫಾನ್ಸೋ ಮೆಕ್ಸಿಯಾ ಬರೆದ ವರದಿಯ ಒಂದು ಭಾಗವನ್ನು ಉದ್ಧರಿಸುವುದು ಸೂಕ್ತವಾಗುತ್ತದೆ. ಅವನು ೧೫೩೦ ಜನವರಿ ೧೫ರಂದು ಪೋರ್ಚುಗಲ್ಲಿನ ರಾಜನಿಗೆ ಬರೆದನು: "ಬೆಟಿಕಾಲಿಯ ಮತ್ತು ಗೋವಾ ನಡುವೆ ಓನೋರ್, ಮೆರ್ಜೆನ್ ಮತ್ತು ಅಂಕೋಲಾ ಎಂಬ ಹೆಸರಿನ ಸ್ಥಳಗಳಿವೆ. ಇಲ್ಲಿಂದ ಪ್ರತಿವರ್ಷವೂ ೫೦೦೦ ಕ್ರುಸೆಡೋ ಬೆಲೆಯ ಮೆಣಸು, ದಿಯೂ ಆರ್ಮೆಜ್ ಮತ್ತು ಜೆಡ್ಡಾಗಳಿಗೆ ಹಡಗಿನಲ್ಲಿ ಹೋಗುತ್ತದೆ. ಮೂರರ ಹಡಗುಗಳು ಅದನ್ನು ಒಯ್ಯುತ್ತವೆ. ಈ ಸ್ಥಳಗಳು ಗೇರುಸೊಪ್ಪೆಯ ರಾಣಿಯ ಅಧಿಕಾರಕ್ಕೆ ಒಳಪಟ್ಟಿವೆ. ಅವಳು ನರಸಿಂಗರಾಜನ (ವಿಜಯನಗರ) ಅಧೀನಳಾಗಿದ್ದಾಳೆ. ಈ ಮೆಣಸು ಕೊಚ್ಚಿನ್‌ನಲ್ಲಿ ದೊರಕುವುದಕ್ಕಿಂತಲೂ ದೊಡ್ಡದು, ಆದರೆ ಅದರಷ್ಟು ಖಾರವಿಲ್ಲ. ನಾವು ಇದನ್ನು ಸಂಗ್ರಹಿಸಬೇಕೆಂದು ತೋರುತ್ತದೆ ಎಂದು ಬರೆದನು. ರಾಣಿಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡು ಅದನ್ನು ಮಾಡಬಹುದು. ಹೀಗೆ ಪೋರ್ಚುಗೀಸರು ಮೊದಲಿನಿಂದಲೂ ಕರ್ನಾಟಕದ ರಾಜಕೀಯ ಶಕ್ತಿಗಳೊಂದಿಗೆ ಸಂಪರ್ಕವಿರಿಸಿಕೊಂಡಿದ್ದರು. ಅವರ ಉದ್ದೇಶ ಮೆಣಸು ವ್ಯಾಪಾರದ ಸ್ವಾಮ್ಯವನ್ನು ಸಾಧಿಸಿಕೊಳ್ಳುವುದು. ಕರ್ನಾಟಕದ ವರ್ತಕರಿಂದ ಅತ್ಯಂತ ಕಡಮೆ ಬೆಲೆಗೆ ಮೆಣಸನ್ನು ಕೊಂಡು ಭಾರತದ ಇತರ ಭಾಗಗಳಲ್ಲೂ ಪರ್ಷಿಯಾದಲ್ಲೂ ಅದನ್ನು ಅತಿ ಹೆಚ್ಚು ಬೆಲೆಗೆ ಮಾರುತ್ತಿದ್ದರು.

ಸಾಮಾನ್ಯವಾಗಿ ಕರ್ನಾಟಕದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮೆಣಸು, ಏಲಕ್ಕಿ ಮತ್ತಿತರ ಸಂಬಾರ ಪದಾರ್ಥಗಳ ಉತ್ಪಾದನೆಗೆ ಪ್ರಸಿದ್ಧವಾಗಿದ್ದುವು. ಈ ಸ್ಥಳಗಳ ಹವೆಯು ಮೆಣಸಿನ ಬೆಳೆಗೆ ಅನುಕೂಲಕರವಾಗಿದ್ದಿತು. ಹಾಗಾಗಿ ಈ ಪ್ರದೇಶಗಳಿಂದ ಮುಖ್ಯವಾಗಿ ಈ ವಸ್ತುಗಳು ರಫ್ತಾಗುತ್ತಿದ್ದುವು. ಉತ್ತರ ಕನ್ನಡ ಜಿಲ್ಲೆಯ ಸೂಂದಾ ಹದಿನೇಳನೆಯ ಶತಮಾನದ ಇಂಗ್ಲಿಷರ ಕೋಠಿಯ ವರದಿಗಳಲ್ಲಿ ಮೆಣಸು ಬೆಳೆಯುವ ಪ್ರಸಿದ್ಧ ಕೇಂದ್ರವಾಗಿ ಕಾಣಿಸಿಕೊಳ್ಳುತ್ತದೆ. ಕೆನರಾದ ಹಾಗಲ್ಲದೆ ಇಲ್ಲಿ ಮೆಣಸು ಸೂಂದಾ ರಾಜರ

ಸ್ವಾಮ್ಯವಾಗಿರಲಿಲ್ಲ. ತಮಗೆ ಇಚ್ಛೆ ಬಂದ ಕಡೆಗೆ ಅದನ್ನು ಸಾಗಿಸಲು ವರ್ತಕರಿಗೆ ಮುಕ್ತ ಅವಕಾಶವಿದ್ದಿತು. ಅದರ ಮೇಲೆ ಸುಂಕವನ್ನು ಕೊಟ್ಟರೆ ತೀರಿತು ಅಷ್ಟೆ. ಹಾಗೆಯೇ ಮೆಣಸಿನ ಉತ್ಪಾದನೆಗೂ, ಯಾವುದೇ ಮಿತಿಯನ್ನು ವಿಧಿಸಿರಲಿಲ್ಲ. ಮೆಣಸು ಬೆಳೆಯುವ ಪ್ರದೇಶವು ಉತ್ತರ ಕನ್ನಡದ ಸೂಂದಾ ನಾಯಕನಿಗೆ ಪ್ರತಿವರ್ಷವೂ ೧,೦೦,೦೦೦ ಡಾಲರು (೩೦ ಲಕ್ಷ ಪಗೋಡಗಳು) ವರಮಾನ ಬರುತ್ತಿದ್ದಿತು. ಫ್ರೈಯರ್ ಹೇಳುತ್ತಾನೆ: "ಜಗತ್ತಿನಲ್ಲಿ ಅತ್ಯುತ್ತಮವಾದ ಮೆಣಸು ಸೂಂದಾದಲ್ಲಿ ಬೆಳೆಯುವಂಥದ್ದು" ಮೆಣಸಿನ ರಫ್ತು ಒಂದರಿಂದಲೇ ಸೂಂದಾದ ರಾಜನಿಗೆ ಅಗಾಧವಾದ ಲಾಭವನ್ನು ತಂದುಕೊಟ್ಟಿದರಲ್ಲಿ ಏನೂ ಆಶ್ಚರ್ಯವಿಲ್ಲ.

ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿದ್ದ ಇನ್ನೊಂದು ಮುಖ್ಯವಾದ ಬಂದರು ಕಾರವಾರ. ಇದು ಅತ್ಯಂತ ಪ್ರಸಿದ್ಧವಾದ ಬಂದರಾಗಿತ್ತು. ಯೂರೋಪಿನ ದೇಶಗಳಲ್ಲಿ, ಅದರಲ್ಲೂ ಇಂಗ್ಲೆಂಡಿನಲ್ಲಿ ಕಾರವಾರದ ಮೆಣಸು ಎಷ್ಟು ಪ್ರಸಿದ್ಧವಾಗಿತ್ತೆಂದರೆ, "ಕಾರವಾರ್ ಪೆಪ್ಪರ್" ತುಂಬಾ ಜನಪ್ರಿಯವಾಗಿತ್ತು. ತುಂಬಾ ಬೆಲೆ ಸಿಕ್ಕಿರುದರಿಂದ ಸೂಂದಾದ ರಾಜನು ತನ್ನ ಬಳಿ ದಾಸ್ತಾನಿದ್ದ ಮೆಣಸೆಲ್ಲವನ್ನೂ ಮಾರಿಬಿಟ್ಟನು. ಅದರಿಂದ ಯೂರೋಪಿನಲ್ಲಿ ಅದರ ಅಭಾವ ಉಂಟಾಯಿತು. ೧೬೬೦ರಲ್ಲಿ ಮುಂಬಯಿ ಮತ್ತು ಸೂರತ್‌ಗಳಲ್ಲಿ ಉಂಟಾದ ಮಹಾ ಕುಸಿತದಿಂದಾಗಿ ಕಾರವಾರವು ಸಂಪದ್ಭರಿತವಾದಂತೆ ತೋರುತ್ತದೆ. ಮೊದಲನೆಯ ಸಾರಿಗೆ ಅದು ಇಂಗ್ಲೆಂಡಿನೊಂದಿಗೆ ವ್ಯಾಪಾರವನ್ನು ನಿರ್ವಹಿಸಿತು. ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳಲ್ಲಿ ಕಾರವಾರವು ಮೆಣಸು ವ್ಯಾಪಾರದ ಪ್ರಸಿದ್ಧ ಕೇಂದ್ರವಾಗಿ ಕಂಡುಬರುತ್ತದೆ. ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ಇಂಗ್ಲಿಷರು ಕಾರವಾರದೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿದ್ದರು.[149]

ವಿಜಯನಗರ ಕಾಲದಲ್ಲಿ ಕರ್ನಾಟಕವು ಹಲವು ಬಗೆಯ ಮೆಣಸನ್ನು ಉತ್ಪಾದಿಸುತ್ತಿದ್ದಿತು. ಹದಿನೇಳನೆಯ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಪ್ರವಾಸಿ ಟ್ರಾವರ್ನಿಯರ್ ಚಿಕ್ಕದು ಮತ್ತು ದಪ್ಪನೆಯ ಎಂದು ಎರಡು ಬಗೆಯಾಗಿ ಮೆಣಸು ಇದ್ದಿತೆಂದು ಹೇಳುತ್ತಾನೆ. ಮುಖ್ಯವಾಗಿ ಅವನ್ನು ಪಶ್ಚಿಮ ಕರಾವಳಿಯಿಂದಲೂ (ಕರ್ನಾಟಕದ ಬಂದರುಗಳೂ ಸೇರಿದಂತೆ) ಬಿಜಾಪುರ ರಾಜ್ಯದಿಂದಲೂ ಸಂಗ್ರಹಿಸಲಾಗುತ್ತಿತ್ತು. ಅದು ರಾಜಾಪುರದಲ್ಲಿ (ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆ) ಮಾರಾಟವಾಗುತ್ತಿತ್ತು. ಅದು ದಪ್ಪಮೆಣಸು, ಗುಣಮಟ್ಟ ಬಹಳ ಉತ್ತಮವಾಗಿದ್ದ ಅದನ್ನು ಯೂರೋಪಿಗೆ ರಫ್ತು ಮಾಡಲಾಗುತ್ತಿತ್ತು. ಡಚ್ಚರು ನೇರವಾಗಿ ಮಲಬಾರಿಗಳಿಂದ ಕೊಂಡುಕೊಳ್ಳುತ್ತಿದ್ದರು. ಅವರು ಬಹುಶಃ ಕರ್ನಾಟಕದ ಬಂದರುಗಳಿಂದ ಕೊಂಡೊಯ್ದು ಡಚ್ಚರಿಗೆ ಮಾರುತ್ತಿದ್ದಂತೆ ತೋರುತ್ತದೆ.

ಕರ್ನಾಟಕದಿಂದ ಪಡೆಯಬಹುದಾಗಿದ್ದ ವಸ್ತುಗಳಲ್ಲಿ ಮೆಣಸು ಎಷ್ಟು ಅಮೂಲ್ಯವಾದ ವಸ್ತುವಾಗಿತ್ತೆಂದರೆ ಅದಕ್ಕಾಗಿ ಪೋರ್ಚುಗೀಸರು, ಇಂಗ್ಲಿಷರು, ಡಚ್ಚರು, ಕೊನೆಗೆ ಫ್ರೆಂಚರು ಕೂಡ ದೇಶೀಯ ಅರಸರೊಂದಿಗೆ ಸ್ನೇಹಯುತ ವ್ಯಾಪಾರ ಸಂಬಂಧಗಳನ್ನು ಹೊಂದಿರಲು ಉತ್ಸುಕರಾಗಿದ್ದರು. ಈ ನೀತಿಯೇ

ಮುಂದುವರಿದು ಒಬ್ಬರ ವಿರುದ್ದವಾಗಿ ಇನ್ನೊಬ್ಬರಿಗೆ ಸಶಸ್ತ್ರ ಸೇನಾ ಸಹಾಯ ಕೊಡುವುದರವರೆಗೂ ಹೋಗುತ್ತಿತ್ತು.

ಹದಿನೇಳನೆಯ ಶತಮಾನದ ಮೊದಲ ಪಾದದಲ್ಲಿ ಪೋರ್ಚುಗೀಸರು ಇನ್ನಿಬ್ಬರು ಪಾಶ್ಚಿಮಾತ್ಯ ಶಕ್ತಿಗಳನ್ನು, ಅಂದರೆ ಇಂಗ್ಲಿಷರು ಮತ್ತು ಡಚ್ಚರನ್ನು ಮೀರಿಸಿ ಮೆಣಸಿನ ವ್ಯಾಪಾರದ ಸ್ವಾಮ್ಯವನ್ನು ಪಡೆಯಲು ಕಾತರರಾಗಿದ್ದರು. ಇಕ್ಕೇರಿಯ ನಾಯಕನಿಂದ ಆ ಸ್ವಾಮ್ಯವನ್ನು ಅವರು ಪಡೆಯಬೇಕಾಗಿತ್ತು. ಈ ಉದ್ದೇಶದಿಂದ ಪೋರ್ಚುಗೀಸ್ ವೈಸರಾಯಿಯು ೧೬೨೩ರಲ್ಲಿ ವೆಂಕಟಪ್ಪನಾಯಕನ ಬಳಿಗೆ ಒಂದು ರಾಯಭಾರವನ್ನು ಕಳುಹಿಸಿದನು. ವಾಸ್ತವವಾಗಿ ಪೋರ್ಚುಗೀಸರು "ಮೆಣಸಿನ ರಾಣಿ (pepper queen) ಎಂದು ಕರೆಯುತ್ತಿದ್ದ ಗೇರುಸೊಪ್ಪೆಯ ರಾಣಿಯ ಮೇಲೆ ವೆಂಕಟಪ್ಪನಾಯಕನು ಆಕ್ರಮಣ ಮಾಡಿದ ಉದ್ದೇಶವೇ ಅವಳ ಅಧೀನದಲ್ಲಿದ್ದು ಒಳ್ಳೆಯ ಮೆಣಸನ್ನು ಕೊಡುತ್ತಿದ್ದ ಫಲವತ್ತಾದ ಭೂಪ್ರದೇಶವನ್ನು ತನ್ನ ಅಧೀನಪಡಿಸಿಕೊಳ್ಳುವುದು. ಗೇರುಸೊಪ್ಪೆಯ ಈ ರಾಣಿ ಭೈರಾದೇವಿಯು ಬಿಜಾಪುರ ರಾಜ್ಯದ ಸಾಮಂತ ರಾಣಿಯಾಗಿದ್ದಳು. ಇಕ್ಕೇರಿಯ ವೆಂಕಟಪ್ಪನಾಯಕನು ಒಬ್ಬರ ಮೇಲೆ ಇನ್ನೊಬ್ಬರನ್ನು ಬಿಟ್ಟು ಆಟವಾಡುತ್ತಿದ್ದನು. ಮೆಣಸಿನ ವ್ಯಾಪಾರದ ಏಕಸ್ವಾಮ್ಯವನ್ನು ಪೋರ್ಚುಗೀಸರಿಗೆ ಕೊಡಲು ಇಚ್ಛೆ ತೋರಿಸುತ್ತಿದ್ದರು ರಹಸ್ಯವಾಗಿ ಇಂಗ್ಲಿಷರೊಂದಿಗೆ ಅದೇ ವಿಷಯವಾಗಿ ವ್ಯವಹಾರ ನಡೆಸಿದ್ದನು. ವಿಲಿಯಂ ಹೋರ್ ಎನ್ನುವವನು ಕಂಪನಿಗೆ ಬರೆದ ಒಂದು ಪತ್ರದಿಂದ ಇದು ವ್ಯಕ್ತಪಡುತ್ತದೆ.[150]

ಕರ್ನಾಟಕ ಕರಾವಳಿಯಲ್ಲಿ ವ್ಯಾಪಾರ ನಿರತರಾಗಿದ್ದ ವಿದೇಶಿ ವರ್ತಕರ ಸಾಲಿಗೆ ಇಂಗ್ಲಿಷರು ಸೇರಿಕೊಂಡುದರಿಂದ ಅವರ ನಡುವೆ ವೈರವು ಹೊಸರೂಪವನ್ನು ಪಡೆಯಿತು. ಇಂಗ್ಲಿಷರೂ ಡಚ್ಚರೂ ಮಲಬಾರ್ ಅರಸರ ಮತ್ತು ಕೆಳದಿಯ ನಾಯಕರ ನಡುವೆ ಪಕ್ಷ ಬದಲಾಯಿಸುತ್ತಿದ್ದರು. ಉದಾಹರಣೆಗೆ ಸೋಮಶೇಖರನಾಯಕನ ಆಳಿಕೆಯಲ್ಲಿ (೧೬೬೪-೧೬೭೧) ಡಚ್ಚರಿಗೆ ಕೆಳದಿಯ ಆಸ್ಥಾನದಲ್ಲಿ ಹೆಚ್ಚಿನ ಪಕ್ಷಪಾತ ದೊರಕಿದ್ದಂತೆ ತೋರುತ್ತದೆ. ಆದರೆ ಯುದ್ಧದಲ್ಲಿ ಡಚ್ಚರು ಮಲಬಾರಿನ ಅರಸನಿಗೆ ಟೇಬಲ್ ತೋರಿಸಿರುವುದರಿಂದ ನಾಯಕನು ಅವರನ್ನು ತಿರಸ್ಕರಿಸಿದನು. ಮತ್ತೆ ಬಸವಪ್ಪನಾಯಕನ ಕಾಲದಲ್ಲಿ (೧೬೯೬-೧೭೧೪) ಮೆಣಸು ಮತ್ತು ಅಕ್ಕಿ ವ್ಯಾಪಾರದ ಸ್ವಾಮ್ಯವನ್ನು ಪಡೆಯಲು ಬಹಳ ತೀವ್ರವಾದ ಪ್ರಯತ್ನ ಮಾಡಿದರು. ಇದು ಬಸವಪ್ಪನಾಯಕನು ಗೋವಾದ ಗವರ್ನರನೊಂದಿಗೆ ೧೭೦೭ರಲ್ಲಿ ಮಾಡಿಕೊಂಡ ಒಪ್ಪಂದದಿಂದ ತಿಳಿದುಬರುತ್ತದೆ. ಅವನ ಮಗ ಸೋಮಶೇಖರನೂ (೧೭೧೪-೧೭೩೯) ಡಚ್ ಮತ್ತು ಇಂಗ್ಲಿಷರ ನಡುವಣ ವ್ಯಾಪಾರ ವೈಮನಸ್ಸುಗಳನ್ನು ಎದುರಿಸಬೇಕಾಯಿತು.

ಈ ಅವಧಿಯಲ್ಲಿ ಅಕ್ಕಿಯು ವಿಪುಲವಾಗಿ ಉತ್ಪಾದನೆಯಾಗುತ್ತಿತ್ತು. ಅವು ಇತರ ದೇಶಗಳಿಗೆ ಅಕ್ಕಿಯನ್ನು ರಫ್ತು ಮಾಡುತ್ತಿದ್ದುವು. ಮಂಗಳೂರು, ಭಟ್ಕಳ, ಕಾರವಾರ ಮತ್ತು ಹೊನ್ನಾವರ ಬಂದರುಗಳಿಂದ ಈ ವ್ಯಾಪಾರ ನಡೆಯುತ್ತಿದ್ದಿತು. ಬಡಜನರು ಉಪಯೋಗಿಸುತ್ತಿದ್ದ ಒರಟಾದ ದಪ್ಪ ಅಕ್ಕಿಗೆ ಹದಿನಾರನೆಯ ಶತಮಾನದಲ್ಲಿ

ಮಲಬಾರಿಗಳಿಂದ ಅಪಾರವಾಗಿ ಬೇಡಿಕೆಯಿದ್ದಿತು. ಮಲಬಾರಿಗಳು ಮಿರ್ಜಾನ್‌ನಿಂದ ಆ ಅಕ್ಕಿಯನ್ನು ಒಯ್ಯುತ್ತಿದ್ದರು. ಈ ಕಪ್ಪು ಅಕ್ಕಿಗೆ ಪ್ರತಿಯಾಗಿ ಅವರು ತೆಂಗಿನಕಾಯಿ ತೆಂಗಿನೆಣ್ಣೆಗಳನ್ನು, ಬೆಲ್ಲವನ್ನು ತರುತ್ತಿದ್ದರು. ಸ್ಥಳೀಯ ಉತ್ಪಾದನೆ ಸಾಲುತ್ತಿರಲಿಲ್ಲವಾದ್ದರಿಂದ ಈ ವಸ್ತುಗಳನ್ನು ಮಲಬಾರಿನಿಂದ ತರಿಸಿಕೊಳ್ಳುತ್ತಿದ್ದಂತೆ ತೋರುತ್ತದೆ. ಮೆಣಸು, ತಾಳೆ ಸಕ್ಕರೆ, ತಾಳೆ ಮದ್ಯ ಮೊದಲಾದ ವಸ್ತುಗಳನ್ನು ಹೊರದೇಶಗಳಿಗೆ ಹೊನ್ನಾವರದಿಂದ ಕಳಿಸಿಕೊಡಲಾಗುತ್ತಿತ್ತು. ಉತ್ಪಾದನೆಯ ಬಹುಪಾಲನ್ನು ಮಲಬಾರ್ ಪಡೆಯುತ್ತಿದ್ದಿತು. ವ್ಯಾಪಾರ ವಹಿವಾಟಿನ ಇನ್ನೊಂದು ಮುಖ್ಯಕೇಂದ್ರ ಉತ್ತರ ಕನ್ನಡದ ಅಂಕೋಲಾ. ೧೬ನೆಯ ಶತಮಾನದಲ್ಲಿ ವ್ಯಾಪಾರ ಉದ್ದೇಶದಿಂದ ಪೋರ್ಚುಗೀಸರು ಅಂಕೋಲಕ್ಕೆ ಬರುತ್ತಿದ್ದರು. ಬುಕನನ್ ೧೮೦೦ರಲ್ಲಿ ಅಂಕೋಲ ಹಾಳಾಗಿದ್ದ ಸ್ಥಿತಿಯನ್ನು ನೋಡಿದನು. ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳಲ್ಲಿ, ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಮಂಗಳೂರು ದೇಶದ ಇತರ ಭಾಗಗಳಿಗೆ ಅಕ್ಕಿಯನ್ನು ರಫ್ತು ಮಾಡುತ್ತಿದ್ದ ಕೇಂದ್ರವಾಗಿ ಕಂಡುಬರುತ್ತದೆ. ಆದರೆ ಹದಿನೆಂಟನೆಯ ಶತಮಾನದಲ್ಲಿ ಕೂಡ ಪಶ್ಚಿಮ ಕರಾವಳಿಯಲ್ಲಿ ಫ್ರೆಂಚರು ಅಕ್ಕಿ ಮತ್ತು ಇತರ ವಸ್ತುಗಳನ್ನು ಸಂಗ್ರಹಿಸುವುದರಲ್ಲಿ ಚುರುಕಾಗಿ ಕೆಲಸ ಮಾಡುತ್ತಿದ್ದರು.

ಒಟ್ಟಾರೆ ನೋಡುವುದಾದರೆ ಈ ಕೆಲಸ ಮಾಡುತ್ತಿದ್ದ ಅನೇಕ ವ್ಯಾಪಾರ ಕೇಂದ್ರಗಳಿದ್ದುವು. ವಾರಕ್ಕೊಮ್ಮೆ ನಡೆಯುತ್ತಿದ್ದ ಸಂತೆಗಳು ರೈತರಿಗೆ ತಮ್ಮಲ್ಲಿರುವ ಹೆಚ್ಚುವರಿ ಉತ್ಪಾದನೆಯನ್ನು ಮಾರಲು ಅವಕಾಶ ಮಾಡಿಕೊಟ್ಟಿದ್ದುವು. ಅವರು ಅನೇಕ ವೇಳೆ ತಮ್ಮ ಕೃಷಿ ಉತ್ಪನ್ನಗಳನ್ನು ಇತರ ಕೆಲವು ವಸ್ತುಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಆದರೆ ಕೃಷಿ ಮತ್ತು ಮಾರಾಟವು ಹಳ್ಳಿಯ ಸಂತೆಗಳಿಗೆ ಮಾತ್ರವೇ ಸೀಮಿತವಾಗಿರಲಿಲ್ಲ. ನಗರಗಳು ಮತ್ತು ಪಟ್ಟಣಗಳೂ ಹೆಚ್ಚುವರಿ ವಸ್ತುಗಳ ವಿತರಕಗಳಾಗಿ ವರ್ತಿಸುತ್ತಿದ್ದುವು. ಹೀಗೆ ಹೆಚ್ಚುವರಿ ಕೃಷಿ ಮತ್ತು ಮಾರಟದಲ್ಲಿ ನುರಿತಿದ್ದ ವಿಶಿಷ್ಟ ವರ್ಗದ ವರ್ತಕರೇ ಇದ್ದರು. ಆದರೆ ಪರಿಣಾಮಕಾರಿಯಾದ ಸಾರಿಗೆಯಾಗಲಿ, ಸಂಪರ್ಕವಾಗಲಿ ಇರದುದರಿಂದ ಹೆಚ್ಚುವರಿ ವಸ್ತುಗಳ ಸಾಗಣೆ ಕುಂಠಿತವಾಗುತ್ತಿತ್ತು. ಆಗ ಇದ್ದ ಏಕೈಕ ಸಾಗಣೆ ವಿಧಾನವೆಂದರೆ ಪ್ರಾಣಿ ಹೇರುಗಳು. ಆದ್ದರಿಂದ ಇದ್ದದ್ದರಲ್ಲಿ ಹಗುರವೂ ಬೆಲೆ ಬಾಳುವುದೂ ಆದ ಕೃಷಿ ಉತ್ಪಾದನೆಗಳನ್ನು ಮಾತ್ರ ದೂರದ ಸ್ಥಳಗಳಿಗೆ ಹೇರುಗಳ ಮೂಲಕ ಸಾಗಿಸುತ್ತಿದ್ದರು.

ಕೃಷಿ ವಸ್ತುಗಳ ವಿದೇಶ ವ್ಯಾಪಾರ - ವಹಿವಾಟಿನ ಬಹುಪಾಲನ್ನು ಕಾರವಾರ, ಹೊನ್ನಾವರ, ಮಂಗಳೂರು ಮತ್ತು ಭಟ್ಕಳಗಳು ನಿರ್ವಹಿಸುತ್ತಿದ್ದುವು. ಕರ್ನಾಟಕದ ಕರಾವಳಿ ಜಿಲ್ಲೆಗಳಾದ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸಂಬಾರ ಪದಾರ್ಥಗಳು, ವಿಶೇಷವಾಗಿ ಮೆಣಸು ಮತ್ತು ಅಕ್ಕಿ ಬೆಳೆಯುತ್ತಿದ್ದುವು. ತುಂಬಾ ಬೇಡಿಕೆಯಿದ್ದ ವಸ್ತುಗಳಾಗಿದ್ದುದರಿಂದ ಈ ಎರಡು ವಸ್ತುಗಳನ್ನು ಕರ್ನಾಟಕದ ಹೊರಗೆ ಬೇರೆ ಸ್ಥಳಗಳಿಗೆ ಮಾತ್ರವಲ್ಲದೆ ವಿದೇಶಗಳಿಗೂ ರಫ್ತು ಮಾಡಲಾಗುತ್ತಿತ್ತು. ಕರ್ನಾಟಕದ ಮೆಣಸು ಯೂರೋಪಿನ ದೇಶಗಳಲ್ಲಿ

ತುಂಬಾ ಜನಪ್ರಿಯವಾಗಿದ್ದಿತು. ಈ ಅಮೂಲ್ಯವಾದ ವಸ್ತುವನ್ನು ಪಡೆಯಲು ಪೋರ್ಚುಗೀಸ್, ಡಚ್, ಇಂಗ್ಲಿಷ್ ಮತ್ತು ಫ್ರೆಂಚ್ ಈ ಯೂರೋಪಿಯನ್ ಜನರುಗಳು ಕರ್ನಾಟಕದ ಕರಾವಳಿಯ ಬಂದರುಗಳಿಗೆ ಪದೇ ಪದೇ ಭೇಟಿ ನೀಡುತ್ತಿದ್ದರು. ಅನೇಕ ಸಮಯಗಳಲ್ಲಿ ಅವರ ನಡುವೆ ಬಹು ತೀವ್ರವಾದ ಪೈಪೋಟಿಯಿರುತ್ತಿದ್ದಿತು. ಈ ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಸಂಪಾದಿಸಿಕೊಳ್ಳುವ ಕಾತರದಲ್ಲಿ ಈ ಪಾಶ್ಚಾತ್ಯರು ರಾಜಕೀಯ ಚಾಣಾಕ್ಷತೆಯನ್ನೂ ಮುತ್ಸದ್ದಿತನವನ್ನೂ ಬಳಸಲು ಹಿಂಜರಿಯುತ್ತಿರಲಿಲ್ಲ. ಒಬ್ಬರ ಮೇಲೊಬ್ಬರು ಅಥವಾ ದೇಶೀಯ ಅರಸರ ವಿರುದ್ಧವಾಗಿ ಯುದ್ಧ ಮಾಡುತ್ತಿದ್ದುದೂ ಉಂಟು.

ಆದರೆ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದ ಬಂದರುಗಳ ಚಟುವಟಿಕೆಗಳಲ್ಲಿ ಕುಸಿತವುಂಟಾಯಿತು. ಆಗಿನ ವಿನಾಶಕಾರಕ ಯುದ್ಧಗಳು, ರಾಜಮನೆತನಗಳ ಆತ್ಮಘಾತಕ ನೀತಿ, ಭಯಂಕರ ಸೇನಾಚಲನೆ ಮತ್ತು ಅಗತ್ಯಕ್ಕಿಂತ ಹೆಚ್ಚಾದಲ್ಲಿ ಇನ್ನೊಬ್ಬನನ್ನು ಅಳೆಯುವಿಕೆ - ಇವೆಲ್ಲ ಒಂದುಗೂಡಿ ಕರ್ನಾಟಕದ ಕೃಷಿವಸ್ತು ಮಾರಾಟದ ವಿರುದ್ಧವಾಗಿ ಕೆಲಸ ಮಾಡಿದುವು. ಹಿಂದೊಮ್ಮೆ ಸಂಪದ್ಭರಿತವಾದ್ದ ಬಂದರುಗಳು ಮತ್ತು ನಗರಗಳು ಸಂಪೂರ್ಣವಾಗಿ ನಾಶವಾದುವು. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಸಂಭವಿಸಿದ ಈ ಆಘಾತದಿಂದ ಮತ್ತು ಭಯಾನಕ ಸ್ಥಿತಿಯಿಂದ ಚೇತರಿಸಿಕೊಳ್ಳಲು ತುಂಬಾ ಸಮಯ ಬೇಕಾಯಿತು. ಕೊನೆಯದಾಗಿ, ಭಾರತೀಯ ವ್ಯಾಪಾರ - ವಾಣಿಜ್ಯಗಳಿಗೆ ಕರ್ನಾಟಕದ ಕೊಡುಗೆ ತೃಪ್ತಿಕರವಾಗಿದ್ದುದರಲ್ಲಿ ಸಂದೇಹವೇ ಇಲ್ಲ. ಅನೇಕ ದೃಷ್ಟಿಗಳಿಂದ ಕರ್ನಾಟಕವು, ಪರಿಶೀಲನಾವಧಿಯಲ್ಲಿ ಹೆಚ್ಚುವರಿ ಉತ್ಪಾದನೆಯ ಸ್ಥಿತಿಯಲ್ಲಿತ್ತು ಮತ್ತು ಆ ಹೆಚ್ಚುವರಿಯನ್ನು ವ್ಯಾಪಾರ ವಿಧಾನಗಳ ಮೂಲಕ ಜಾಣತನದಿಂದ ವಿನಿಯೋಗಪಡಿಸುತ್ತಿತ್ತು ಎಂದು ಹೇಳಬಹುದು.[151]

**ಅ. ಸಾಗರೋತ್ತರ ವ್ಯಾಪಾರ :** ಹದಿನಾಲ್ಕನೆಯ ಶತಮಾನದ ಮಧ್ಯಾವದಿಯಲ್ಲಿ ಬೆಳಕಿಗೆ ಬಂದ ವಿಜಯನಗರ ಸಾಮ್ರಾಜ್ಯವು ಕರಾವಳಿ ಪ್ರದೇಶಗಳನ್ನು ಒಳಗೊಂಡಿತ್ತು. ಈ ರಾಜ್ಯದಲ್ಲಿ 300ಕ್ಕೂ ಹೆಚ್ಚಿನ ರೇವುಗಳಿದ್ದು ಇವುಗಳ ಮುಖಾಂತರ ಸಾಗರೋತ್ತರ ವ್ಯಾಪಾರ ನಡೆಯುತ್ತಿತ್ತೆಂದು ಸಮಕಾಲೀನ ವಿದೇಶಿ ಪ್ರವಾಸಿ ಅಬ್ದುಲ್ ರಝಾಕ್ ತನ್ನ ವರದಿಯಲ್ಲಿ ತಿಳಿಸಿದ್ದು ಇಲ್ಲಿ ಗಮನಿಸುವ ಅವಶ್ಯಕತೆ ಇದೆ. ಪಶ್ಚಿಮ ಕರಾವಳಿಯಲ್ಲಿ ವಿಜಯನಗರದ ಪ್ರಭಾವವು ಎರಡು ರೀತಿಯಲ್ಲಿದೆ. ಪ್ರತ್ಯಕ್ಷ ವಿಜಯನಗರದ ಪ್ರಭಾವವಿದ್ದ ಪ್ರದೇಶ ಮತ್ತು ಈ ಅರಸರ ಅಪ್ರತ್ಯಕ್ಷ ವರ್ಚಸ್ಸಿರುವ ಪ್ರದೇಶ. ಒಂದನೆ ವಿಭಾಗದಲ್ಲಿ ದಕ್ಷಿಣಕ್ಕೆ ಕಾಸರಗೋಡಿನಿಂದ ಉತ್ತರಕ್ಕೆ ಚವುಟವರೇಗಿನ ಪ್ರದೇಶ.[152] ಎರಡನೇ ವಿಭಾಗದಲ್ಲಿ ಕಾಸರಗೋಡಿನ ದಕ್ಷಿಣದಿಂದ ಕನ್ಯಾಕುಮಾರಿಯ ಉತ್ತರದವರೆಗೆ ಒಳಗೊಂಡಿದೆ. ಈ ಪ್ರದೇಶವು ಕೇರಳವಾಗಿದ್ದು ವಿಜಯನಗರ ಅರಸರ ಸಾಗರೋತ್ತರ ಕ್ಷೇತ್ರದ ವಿಸ್ತರಣೆಯಲ್ಲಿ ಸಹಭಾಗಿಯಾಗಿತ್ತು.

ಕೆಲವು ಶಾಸನಗಳು ಸಾಹಿತ್ಯ ಕೃತಿಗಳು ಮತ್ತು ಜಾನಪದೀಯ ಕಾವ್ಯಗಳು ಮುಖ್ಯ ಆಧಾರವಾಗಿದ್ದರೆ ವಿದೇಶಿ ದಾಖಲೆಗಳು ಸಮರ್ಥನೀಯ ಆಕರಗಳಾಗಿವೆ.

ಇಲ್ಲಿ ಸಾಗರೋತ್ತರ ವ್ಯಾಪಾರಗಳನ್ನು ವರ್ತಕ ಸಂಘಗಳಾದ ನಖರ, ಹಂಜಮಾನ ನಾನಾದೇಶಿಯ ವರ್ತಕರು ನಡೆಸುತ್ತಿದ್ದರು. ಹಲವಾರು ಕಡೆಗಳಲ್ಲಿ ನಾನಾ ದೇಶಿ, ಮನೆಯಾಳ ವಡ್ಡ ವ್ಯವಹಾರಿ, ನಾನಾದೇಶಿ ಹೊರಹಿನವರ ಉಲ್ಲೇಖಗಳು ಕರಾವಳಿಯ ರೇವುಗಳಲ್ಲಿ ಸಿಕ್ಕ ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಹೀಗಿದ್ದರೂ ವಿಜಯನಗರ ಅರಸರ ಸಾಗರೋತ್ತರ ವ್ಯಾಪಾರ ನೀತಿಯ ಸ್ಪಷ್ಟ ವಿವರ ಸಿಗುವುದು ಹದಿನಾರನೇ ಶತಮಾನದಲ್ಲಿ ಕೃಷ್ಣದೇವರಾಯನಿಂದ ರಚಿತವಾದ 'ಆಮುಕ್ತಮಾಲ್ಯ'ದಲ್ಲಿ. ಇದರಂತೆ ಅರಸನು ಕರಾವಳಿಗಳಲ್ಲಿರುವ ರೇವುಗಳನ್ನು ಅಭಿವೃದ್ಧಿಗೊಳಿಸಬೇಕು. ಅಲ್ಲಿನ ವಾಣಿಜ್ಯವನ್ನು ಪ್ರೋತ್ಸಾಹಿಸಬೇಕು. ಇಲ್ಲಿಂದ ಕುದುರೆ, ಆನೆ ಮತ್ತು ಇನ್ನಿತರ ಸರಕುಗಳ ವಿನಿಮಯ ಮುಕ್ತವಾಗಿರುವಂತೆ ನೋಡಿಕೊಳ್ಳಬೇಕು. ಇಷ್ಟಲ್ಲದೆ ರಾಜನು ವಿದೇಶದಿಂದ ಬಂದ ನಾವಿಕರನ್ನು ಯೋಗ್ಯ ರೀತಿಯಲ್ಲಿ ನೋಡಿಕೊಳ್ಳಬೇಕು. ಸರಕುಗಳ ಸಂರಕ್ಷಣೆಗಳಿಗೆ ಯೋಗ್ಯ ರೀತಿಯ ಕ್ರಮವನ್ನು ಅರಸನು ಕೈಗೊಳ್ಳಬೇಕು. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಯಾವುದೆಂದರೆ ಈ ಎಲ್ಲಾ ವ್ಯವಸ್ಥಾಕ್ರಮಗಳು ವಿಜಯನಗರ ಅರಸರ ಅಪ್ರತ್ಯಕ್ಷ ವರ್ಚಸ್ಸಿಗೊಳಗಾದ ಕೇರಳದಲ್ಲಿರುವ ಕಲ್ಲಿಕೋಟೆ ಬಂದರಿನಲ್ಲಿದ್ದವೆಂದು ಹದಿನೈದನೇ ಶತಮಾನದ ದಾಖಲೆಯಿಂದ ತಿಳಿದುಬರುತ್ತದೆ.[153]

ವಿಜಯನಗರ ಅರಸರ ಆಳ್ವಿಕೆಯಲ್ಲಿ ಸಾಗರೋತ್ತರ ವ್ಯವಹಾರ ನಡೆಸಿದ ದಾಖಲೆಯು ಹುಂಚ ಬಸದಿಯಲ್ಲಿರುವ ಒಂದು ತಾಮ್ರ ಶಾಸನದಲ್ಲಿ ಹೇಳಿದೆ. ಇದರ ಕಾಲ ೧೩೧೭-೧೪೫೦ ಇದು ಇಲ್ಲಿರುವ ಹುಂಚ ಮಠದಲ್ಲಿ ರಕ್ಷಿತವಾಗಿದೆ.[154] ಇದರಂತೆ ಭೋಜ ಸಂಘನ ಮಗ ಅಜಸಾಹು ಮಲಯಾ, ಕಾಂಬೋಜ ರಾಲಿ, ದ್ವೀಪಗಳನ್ನು ಸಂಧಿಸಿ ಹಡಗುಯಾನ ಮುಖಾಂತರ ಸಿಂಹಳಕ್ಕೆ ಬಂದು, ಅಲ್ಲಿಂದ ತನ್ನ ನಾವೆಯ ಮುಖಾಂತರ ಗುಜರಾತಿಗೆ ಬಂದು ಅಲ್ಲಿಂದ ದೀರ್ಘಕಾಲ ಸಮುದ್ರಯಾನ ನಡೆಸಿ ಕೊನೆಗೆ ಬಾರಕೂರಿಗೆ ಬಂದು ನೆಲಸಿದನು. ಇಷ್ಟಲ್ಲದೆ, ಈ ಸಮುದ್ರ ಯಾನದಲ್ಲಿ 'ಮಹಮುದಾ' ಮತ್ತು 'ಮರಕಾಲರು' ಆಸಕ್ತಿ ವಹಿಸಿದ್ದರೆಂದು ಈ ತಾಮ್ರ ಶಾಸನದ ಅಧ್ಯಯನದಿಂದ ಸೂಚಿತವಾಗಿದೆ. ಆದರೆ ಈ ಶಾಸನವು ಅಜಸಾಹುವಿನ ನೌಕೆಯ ಸ್ವರೂಪವನ್ನು ತಿಳಿಸುವುದಿಲ್ಲ.

ಚೀನಾ ಮತ್ತು ವಿಜಯನಗರ ಅರಸುಗಳೊಂದಿಗೆ ಸಾಗರೋತ್ತರ ವ್ಯಾಪಾರ ಸಂಪರ್ಕವಿರುವುದನ್ನು ಸಮಕಾಲೀನ ಚೀನಿ ದಾಖಲೆಗಳಿಂದ ತಿಳಿದುಬರುತ್ತದೆ. ಉದಾ: ಚೀನಿ ದಾಖಲೆಗಳಂತೆ ಇದರ ನೌಕೆಗಳು ಪಶ್ಚಿಮ ಕರಾವಳಿಯ ರೇವುಗಳನ್ನು ಸಂದರ್ಶಿಸಿ ವ್ಯಾಪಾರ ನಡೆಸುತ್ತಿರುವುದನ್ನು ಹೇಳಿದೆ. ಇದನ್ನು ಸಮರ್ಥಿಸುವ ಸ್ಥಳೀಯ ಜನಪದ ಆಕರಗಳಿವೆ. ಉದಾ: ಶರದು ಗಣಪತಿ ಮಹಿಮೆಯಂತೆ ಚೀನಿ ಹಡಗುಗಳು ಭಿನ್ನ ಮಿಶ್ರಿತ ಮಣ್ಣನ್ನು ತಂದು ಮಂಗಳೂರಿನಲ್ಲಿ ವ್ಯಾಪಾರ ಮಾಡುತ್ತಿದ್ದವು. ಇನ್ನೊಂದು ಜನಪದ ಹೇಳಿಕೆಯು ಚೀನಿ ಹಡಗುಗಳು ಆಶಾಢ ಮಾಸದಲ್ಲಿ ಬಸ್ರೂರು ರೇವಿಗೆ ಬಂದು ಇಲ್ಲಿಂದ ಕಬ್ಬು, ಶುಂಠಿ ಮತ್ತು ಅಕ್ಕಿಗಳನ್ನು ತೆಗೆದುಕೊಂಡು ಹೋಗುತ್ತಿದ್ದುದನ್ನು ತಿಳಿಸುತ್ತವೆ.

ವಿದೇಶಿಯ ಕೆಲವು ಸಾಹಿತ್ಯಕೃತಿಗಳು ವಿಜಯನಗರದ ಸಾಗರೋತ್ತರ ಸಂಪರ್ಕಗಳನ್ನು ತಿಳಿಸುತ್ತವೆ. ಹಿರೆಯಪ್ ಮಹಾರಾಜ ಎಂಬ ಮಲಯದ ಚಾರಿತ್ರಕದಂತೆ ದಕ್ಷಿಣದಲ್ಲಿರುವ ವಿಜಯನಗರದಿಂದ ಇಬ್ಬರು ನೌಕೆಯ ಮುಖ್ಯಾಧಿಕಾರಿಗಳು ಮಲಯಾ ದ್ವೀಪಕ್ಕೆ ಬಂದರು. ಇವರೊಂದಿಗೆ ಇಬ್ಬರು ಹುಡುಗರು ಬಂದಿದ್ದರು. ಒಂದು ನೌಕೆಯ ಮುಖ್ಯಾಧಿಕಾರಿ ಮಲಯದ ಅರಸನ ಅಸ್ಥಾನದಲ್ಲಿ ಇರುವ ಕಾಲದಲ್ಲಿ ಹಡಗಿನಲ್ಲಿದ್ದ ಹುಡುಗರು ಹಡಗಿಗೆ ಲಂಘುರು ಹಾಕಿ ಕಾಯುತ್ತಿದ್ದರು. ಇನ್ನೊಂದು ಮಲಯದ ಚಾರಿತ್ರಿಕ ದಾಖಲೆಯಂತೆ ಕಾದರನ ಪ್ರವಾದಿ ಐಸ್ಕಂದರನು ನೌಕಾಯಾನವನ್ನು ಚೀನಾದವರೆಗೆ ನಡೆಸಿ ಮಲಯಾಕ್ಕೆ ಬಂದು ವಿಜಯನಗರದ ಕಡೆಗೆ ಹಿಂದೆ ತಿರುಗಿ ಹೋದನು.[155] ಇವುಗಳಿಂದ ತಿಳಿದು ಬರುವ ಸಂಗತಿಯೇನೆಂದರೆ ವಿಜಯನಗರ ಸಾಮ್ರಾಜ್ಯದಲ್ಲಿ ಸಾಗರೋತ್ತರ ಯಾನಕ್ಕೆ ಪ್ರೋತ್ಸಾಹವಿದ್ದಿತ್ತು. ಎರಡನೆಯದಾಗಿ ಇದರಲ್ಲಿ ಮುಸ್ಲಿಂ ವರ್ತಕರು ಹೆಚ್ಚಿನ ಆಸಕ್ತಿ ವಹಿಸಿ ಈ ಸಾಮ್ರಾಜ್ಯದ ಸಾಗರೋತ್ತರ ಸೀಮೆಯನ್ನು ವಿಸ್ತರಿಸುತ್ತಿದ್ದರು.

**ಆ. ಸಾಗರೋತ್ತರ ವ್ಯಾಪಾರ ಕೇಂದ್ರಗಳು :** ಕೆಲವು ಐತಿಹಾಸಿಕ ದಾಖಲೆಗಳಂತೆ ಪಶ್ಚಿಮ ಕರಾವಳಿಯಲ್ಲಿ ಸಾಗರೋತ್ತರ ವ್ಯಾಪಾರ ನಡೆಸುತ್ತಿರುವ ರೇವುಗಳು ಇದ್ದಿದ್ದವು. ಅವುಗಳ ವ್ಯಾಪಾರ ಕ್ಷೇತ್ರವು ಪಶ್ಚಿಮದಲ್ಲಿ ಕೆಂಪು ಸಮುದ್ರದಿಂದ ಪೂರ್ವದಲ್ಲಿ ಚೀನಾದವರೆಗೂ ಹಬ್ಬಿತ್ತು. ಚೀನಿಯರ ವಿಶಿಷ್ಟವಾದ ನೌಕೆ 'ಜುಂಕ್' ಪಶ್ಚಿಮ ಕರಾವಳಿಯ ರೇವುಗಳಾದ ಕೊಲ್ಲಂ, ಕೊಳಂಗನೂರು, ಕಲ್ಲಿಕೋಟೆ, ವಳಪಟ್ಟಣ, ಇಳಿಮಲೆ, ಮಂಜೇಶ್ವರ, ಮಂಗಳೂರು, ಬಾರಕೂರು, ಬಸ್ರೂರು, ಭಟ್ಕಳ, ಹೊನ್ನಾವರ ಮತ್ತು ಗೋವೆಗಳನ್ನು ಸಂದರ್ಶಿಸಿ ವ್ಯಾಪಾರದಲ್ಲಿ ನಿರತವಾಗಿದ್ದುವೆಂದು ಚೀನಿ ಐತಿಹಾಸಿಕ ದಾಖಲೆಗಳು[156] ಉಲ್ಲೇಖಿಸುತ್ತದೆ.

ವಿಜಯನಗರ ಆಳ್ವಿಕೆಯ ಪರಿಣಾಮವಾಗಿ ಪಶ್ಚಿಮ ಕರಾವಳಿಯ ಪ್ರದೇಶ ವ್ಯಾಪಾರದ ಪ್ರಾಂತ್ಯವಾಗಿತ್ತು. ಇಲ್ಲಿರುವ ರೇವುಗಳನ್ನು ಅತ್ಯಂತ ಪ್ರಮುಖವಾದದ್ದು ಗೋವೆಯ ಬಂದರು. ಇದು ವಿಜಯನಗರ ಅರಸರ ಆಳ್ವಿಕೆಯ ಅವಧಿಯಲ್ಲಿ ರೈಯ್ ಬಂದರ ಎಂದು ಕರೆಯುತ್ತಿತ್ತು. ಇದು ವಿಜಯನಗರದ ವ್ಯಾಪಾರ ಕೇಂದ್ರಗಳಲ್ಲಿ ಅಗ್ರಗಣ್ಯಸ್ಥಾನವನ್ನು ಹೊಂದಿತ್ತು. ಪರ್ಶಿಯಾ ಎಡ್‌ನ್ ಮತ್ತು ಆಫ್ರಿಕಾದೊಂದಿಗೆ ನಿಕಟ ಸಾಗರೋತ್ತರ ವ್ಯಾಪಾರ ನಡೆಸುತ್ತಿತ್ತು. ವಿಜಯನಗರ ಅರಸರಿಗೆ ಅಗತ್ಯವಿದ್ದ ಕುದುರೆಗಳು ಈ ರೇವಿನಿಂದ ಬರುತ್ತಿತ್ತು. ಅಕ್ಕಿ, ಜನಸು, ಬಟ್ಟೆಗಳು ಕಾಯಿ ಬಂದರಿನಿಂದ ರಫ್ತಾಗುತ್ತಿತ್ತು. ಕ್ರಿ.ಶ. ೧೪೦೬ರ ದಾಖಲೆಯಂತೆ ಬಹ್ಮನಿ ಸುಲ್ತಾನ ವಾರ್ಷಿಕವಾಗಿ ಹಡಗುಗಳನ್ನು ಈ ರೇವಿಗೆ ಕಳುಹಿಸಿ ಇಲ್ಲಿಂದ ತನ್ನ ರಾಜ್ಯಕ್ಕೆ ಬೇಕಾಗಿರುವ ವಸ್ತುಗಳನ್ನು, ಆಹಾರ ಧಾನ್ಯಗಳನ್ನು ವಿವಿಧ ದೇಶಗಳ ಮುಖಾಂತರ ತರಿಸಿಕೊಳ್ಳುತ್ತಿದ್ದನು. ಈ ರೇವುಗೆ ಕರಾವಳಿ ಕರ್ನಾಟಕದಲ್ಲಿರುವ ರೇವುಗಳೊಂದಿಗೂ ಮತ್ತು ಕೇರಳದಲ್ಲಿರುವ ರೇವುಗಳೊಂದಿಗೂ ನಿಕಟ ಸಾಗರೋತ್ತರ ವ್ಯಾಪಾರ ನಡೆಯುತ್ತಿತ್ತು. "ಇದೇ ರೀತಿಯಲ್ಲಿ ಮಲಬಾರು ಮತ್ತು ಕರಾವಳಿ ಕರ್ನಾಟಕದ ವ್ಯಾಪಾರಸ್ಥ ಮತ್ತು ಗೋವೆಯ ವರ್ತಕರೊಂದಿಗೆ ಸಾಗರೋತ್ತರ ವ್ಯಾಪಾರ ನಡೆಯುತ್ತಿತ್ತು.[157] ಈ ರೇವಿನ ಇರುವಿಕೆ ಸಾಗರೋತ್ತರ ವ್ಯಾಪಾರಕ್ಕೆ ಪ್ರೋತ್ಸಾಹದಾಯಕವಾಗಿತ್ತು. ಅಫಾನ್ ಸೊ ಅಲಬುಕರ್‌ನ ಪತ್ರದಂತೆ

ಈ ರೇವು ಸುತ್ತಲು ಸಮುದ್ರದಿಂದ ಆವರಿತವಾಗಿತ್ತು. ಬಿರುಗಾಳಿ ಮತ್ತು ಇನ್ನಿತರ ಅನಾಹುತಗಳನ್ನು ತಡೆಗಟ್ಟುವ ಸ್ಥಿತಿಯಲ್ಲಿದ್ದಿತು. ಬಂದರಿನಲ್ಲಿರುವ ನೀರು ಶಾಂತವಾಗಿದ್ದು ಬಂದ ಹಡಗುಗಳಿಗೆ ಸಂರಕ್ಷಣೆ ನೀಡಿತ್ತು. ಇದರಿಂದಾಗಿ ಮೆಕ್ಕಾ, ಉಡನ್ ಬಿರಮಜ್‌ನಿಂದ ಮುಸ್ಲಿಂರ ಹಡಗುಗಳು ಕ್ಯಾಂಬೆ ಮತ್ತು ಮಲಬಾರಿನ ಹಡಗುಗಳು ಇಲ್ಲಿ ವ್ಯಾಪಾರ ನಡೆಸಲು ಬರುತ್ತಿದ್ದವು.

ದೇಶಿಯ ಮತ್ತು ವಿದೇಶಿಯರ ಬಂಡಶಾಲೆಗಳು ಗೋವೆರ್‍ರೈ ಬಂದರಿನಲ್ಲಿದಿದ್ದವು. ವೀರಬಣಜಿಗ, ಸೆಟ್ಟಿ ಮತ್ತು ಲಿಂಗಾಯತ ವರ್ತಕ ವ್ಯಾಪಾರಗಳು ಇಲ್ಲಿ ನಡೆಯುತ್ತಿದ್ದವು. ಕ್ರಿ.ಶ. ೧೪೭೨ರ ನಂತರ ಇಲ್ಲಿನ ವ್ಯಾಪಾರವು ಕರಾವಳಿ ಕರ್ನಾಟಕ ಮತ್ತು ಮಲಬಾರಿನ ಮುಸ್ಲಿಂ ವರ್ತಕರ ವಶಕ್ಕೆ ಬಂದು ಹದಿನಾರನೆ ಶತಮಾನದ ಆರಂಭದಲ್ಲಿ ಮಿರ್ಜಾನ ಹೊನ್ನಾವರ, ಭಟ್ಕಳ, ಬೈಂದೂರು, ಬಸರೂರು, ಬಾರಕೂರು, ಮಂಗಳೂರು, ಮಂಜೇಶ್ವರ ಮತ್ತು ಕುಂಬಳ ಪ್ರಮುಖ ಸಾಗರೋತ್ತರ ವ್ಯಾಪಾರ ಕೇಂದ್ರಗಳಾಗಿದ್ದವು. ಇದೇ ಶತಮಾನದ ಮಧ್ಯಾವದಿಯಲ್ಲಿ ಉಳ್ಳಾಲ, ಕಾರ್ಣಟೆ ಮತ್ತು ಅಂಕೋಲಗಳಲ್ಲೂ ವಿಜಯನಗರದವರ ಮೇಲ್ವಿಚಾರಣೆಯಲ್ಲಿ ಸಾಗರೋತ್ತರ ವ್ಯಾಪಾರ ನಡೆಯುತ್ತಿದ್ದವು. ಈ ಹಿಂದೆ ತಿಳಿಸಿದಂತೆ ಚೀನಿಯರೊಂದಿಗೆ ಪಶ್ಚಿಮ ಕರಾವಳಿ ರೇವುಗಳೊಂದಿಗೆ ಸಾಗರೋತ್ತರ ವ್ಯಾಪಾರವು ನಡೆಯುತ್ತಿತ್ತು. ಇವರ ಪ್ರಮುಖ ವ್ಯಾಪಾರ ಕೇಂದ್ರ ಬಸರೂರು, ಅರಬ, ಪರ್ಶಿಯ, ಯೆಮನ್ ಮತ್ತು ಬರ್ಮಜ (rmus)ಗಳ ಹಡಗುಗಳು ಹೊನ್ನಾವರ, ಭಟ್ಕಳ, ಮಂಗಳೂರಿಗೆ ಬಂದು ಈ ರೇವುಗಳಿಂದ ಶುಂಠಿ, ತೆಂಗಿನಕಾಯಿ, ಕಾಯಿ ಕತ್ತ ಕರಿ ಮೆಣಸು, ವಿವಿಧ ತರದ ಕಬ್ಬುಗಳನ್ನು ಹಡಗುಗಳ ಮುಖಾಂತರ ಸಾಗಿಸುತ್ತಿದ್ದರು. ಈ ಹಡಗುಗಳನ್ನು 'ಮೂರರು' (ಮುಸ್ಲಿಂ)ರು ಹೊಂದಿದ್ದರು.

ಭಟ್ಕಳದಲ್ಲಿ ನುರಿತ ವ್ಯಾಪಾರಸ್ಥರಿದ್ದರು. ಇವರು ತಮ್ಮ ಸಂಪತ್ತಿನಿಂದ ಈ ನಗರದ ವ್ಯಾಪಾರ ವೈಭವವನ್ನು ಹೆಚ್ಚಿಸಿದರು ಮತ್ತು ಭವ್ಯವಾದ ಕಟ್ಟಡ, ಬಸದಿ ಮತ್ತು ದೇವಾಲಯಗಳನ್ನು ರಚಿಸಿದರು ಎಂದು ಇಲ್ಲಿನ ಭಂಡಾರ ಬಸದಿಯ ಒಂದು ಶಾಸನವು ಹೇಳುತ್ತದೆ. ಇದರ ಕಾಲ ೧೫೪೭ ಅರೇಬಿಯಾ, ಪರ್ಶಿಯಾ, ಬರ್ಮಗಳಿಂದ ಸರಕು ಹೊತ್ತ ಹಡಗುಗಳು ಈ ರೇವಿಗೆ ಬರುತ್ತಿದ್ದು ಇಲ್ಲಿ ಬಿರುಸಿನ ವ್ಯಾಪಾರ ನಡೆಯುತ್ತಿತ್ತು. ವಿಜಯನಗರ ಸಾಮ್ರಾಜ್ಯದ ಅಂತ್ಯ ಕಾಲದಲ್ಲಿ ಭಟ್ಕಳದ ಕರಿ ಮೆಣಸು ಮತ್ತು ಕುದುರೆಗಳ ಸಾಗರೋತ್ತರ ವಿನಿಮಯ ವ್ಯಾಪಾರ ಕೇಂದ್ರವಾಗಿತ್ತೆಂದು ಕ್ರಿ.ಶ. ೧೫೪೯ರ ಪೋರ್ಚುಗೀಸರ ದಾಖಲೆಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ.[158]

**ಇ. ವ್ಯಾಪಾರಸ್ಥರು :** ಸ್ಥಳೀಯ ಮತ್ತು ವಿದೇಶಿಯ ದಾಖಲೆಗಳ ಅಧ್ಯಯನದಿಂದ ತಿಳಿದು ಬರುವ ಮುಖ್ಯ ಸಂಗತಿಯೆಂದರೆ, ಸಾಗರೋತ್ತರ ವ್ಯಾಪಾರದಲ್ಲಿ ಕರಾವಳಿಯಲ್ಲಿದ್ದ ಮುಸ್ಲಿಂ ವರ್ತಕರ ಪಾತ್ರವು ಗಣನೀಯವಾಗಿತ್ತು. ಇವರ ವ್ಯಾಪಾರ ಸಂಸ್ಥೆ 'ಹಂಜಮಾನ' ಚಟುವಟಿಕೆಗಳು ಉಳ್ಳಾಲ, ಮಂಗಳೂರು, ಬಾರಕೂರು, ಭಟ್ಕಳ, ಕಾಲ್ಕುಣಿ ಮತ್ತು ಗೋವೆಯಲ್ಲಿದ್ದು ವಿಜಯನಗರದ ಸಾಗರೋತ್ತರ ವ್ಯಾಪಾರವನ್ನು

ಪ್ರಗತಿ ಪಥದಲ್ಲಿ ತೆಗೆದುಕೊಂಡು ಹೋಗಿದ್ದರು. ನಾನಾ ದೇಶಿ 'ಉಭಯ ನಾನಾ ದೇಶಿ' ಪರದೇಶಿ ನಖರ, ಮುಂತಾದ ಸಂಘ ಸಂಸ್ಥೆಗಳು ಅಲ್ಲಲ್ಲಿ ಸಾಗರೋತ್ತರ ವ್ಯಾಪಾರದಲ್ಲಿ ನಿರತರಾಗಿದ್ದರು. ವೆಣಜಿಗರು 'ವಳಂಜಿಯಾದ', ಚೆಟ್ಟಿಯರು ಕರಾವಳಿ ಕರ್ನಾಟಕದಲ್ಲಿ ಸಾಗರೋತ್ತರ ವ್ಯಾಪಾರ ನಡೆಸಿದ ವಿಚಾರ ಅಲ್ಲಲ್ಲಿ ಬರುತ್ತದೆ. ತುಳು ವಾಙ್ಮಯದಲ್ಲಿ 'ತಂಡೆಲ'ರ ವಿಚಾರ ಬರುತ್ತದೆ. ಇವರು ಹಡಗುಗಳ ಮುಖ್ಯಸ್ಥರಾಗಿರಬೇಕು. ಆದರೆ ಇವರು ಸ್ವಂತ ಹಡಗು ಹೊಂದಿದ್ದ ಬಗ್ಗೆ ಯಾವ ದಾಖಲೆಗಳು ನಮಗೆ ಸಿಕ್ಕಿಲ್ಲ. ಇವರು ಹಡಗು ನಡೆಸಲು ನುರಿತರಾದ ಕಾರಣ, ಇವರನ್ನು ಹಡಗುಗಳ ಮಾಲಿಕರು ನೇಮಿಸಿಕೊಂಡಿದ್ದರು. ಮರಕಾಲ, ಮೋಗೆರರು ಮತ್ತು ಖಾರ್ವಿ ಹರಿಕಂತರು ಸಾಗರ ಯಾನದ ಪರಿಚಯವನ್ನು ಪಡೆದಿದ್ದುದ್ದರಿಂದ ಇವರ ಸಹಾಯವು ಹಡಗು ಮಾಲಿಕರಿಗೆ ಅಗತ್ಯವಿದ್ದಿತ್ತು. ವಿಜಯನಗರದ ಕಾಲದ (೧೫೬೫) ಅಂತ್ಯದಲ್ಲಿ ಗೋವೆಯಿಂದ ವಲಸೆ ಬಂದ ಪ್ರಭು, ರೆಣೆ, ಶೆಣೈ ಪಡಿಯಾರ ನಾಮಾಂಕಿತವುಳ್ಳ ಗೌಡ ಸ್ವಾರಸ್ವತರು ಸಾಗರೋತ್ತರ ವ್ಯಾಪಾರದಲ್ಲಿ ನಿರತರಾಗಲು ಆರಂಭಿಸಿದರೆಂದು ಭಟ್ಕಳದ ಪರಿಸರದ ಶಾಸನಗಳಿಂದ ತಿಳಿದು ಬರುತ್ತದೆ.[159]

ಸಾಗರೋತ್ತರ ಯಾನದಲ್ಲಿ ನಿರತರಾದ ವಿವಿಧ ಹೆಸರಿನ ಹಡಗುಗಳ ಪರಿಚಯವು ಕನ್ನಡ ತುಳು ಮತ್ತು ಮಲೆಯಾಳಿ ಜಾನಪದಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಕಲ್ಲಡ ಪಡವು, ಮರದ ಪಡವು ಹಾಡಿ ಹಡಗು, ಹಾಯಿ ದೋಣಿ, ದೋಣಿಗಳನ್ನು ಸಾಗರೋತ್ತರ ವ್ಯಾಪಾರದಲ್ಲಿ ಉಪಯೋಗಿಸುತ್ತಿದ್ದರು. ಮಂಜಿ, ಮಬೆವೆ, ಪಟ್ಟಮಾರು, ಪೇರು ಇತ್ಯಾದಿ ಹೆಸರಿರುವ ಹಡಗುಗಳು ಮಲಬಾರ ರೇವಿನಿಂದ ಮಂಗಳೂರು, ಭಟ್ಕಳಕ್ಕೆ ಸಾಗರೋತ್ತರ ವ್ಯಾಪಾರ ನಡೆಸಲು ಬರುತ್ತಿದ್ದವು. 'ನಾಕುದಾ' ಎಂಬ ಅಡ್ಡ ಹೆಸರಿರುವ ಮುಸ್ಲಿಂ ವರ್ತಕರು ನೌಕೆಯೆಂಬ ವಿಶಿಷ್ಟವಾದ ಹಡಗುಗಳನ್ನು ಹೊಂದಿದ್ದರು. ವಿಜಯನಗರ ಅರಸರ ಸಾಗರೋತ್ತರ ವ್ಯಾಪಾರದಿಂದ ಹೆಚ್ಚಿನ ಲಾಭ ಪಡೆದವರು ಮಲೆಯಾಳದ ವರ್ತಕರು. ಇದಕ್ಕೆ ಮುಖ್ಯ ಕಾರಣ ಅಲ್ಲಿನ ಭೌಗೋಳಿಕ ಪರಿಸ್ಥಿತಿ ಮತ್ತು ಜನರ ಪ್ರವೃತ್ತಿ. ಕೇರಳದ ಭೌಗೋಳಿಕ ಪರಿಸ್ಥಿತಿ ಅಲ್ಲಿನವರಿಗೆ ಬೇರೆಕಡೆ ವಲಸೆ ಹೋಗುವಂತೆ ಪ್ರೇರೇಪಿಸಿತು. ಸಮಕಾಲೀನ ಚೀನಿ ದಾಖಲೆಯನ್ನು ನಂಬುವುದಾದರೆ ಕೇರಳೀಯರು ಕೃಷಿ ಅಭಿವೃದ್ಧಿಗೊಳಿಸುವಲ್ಲಿ ಒಂದು ರೀತಿಯಲ್ಲಿ ಸೋಮಾರಿಗಳಾಗಿದ್ದರು. ಇಷ್ಟಲ್ಲದೆ ಇಲ್ಲಿ ಜನಸಂಖ್ಯೆ ಹೆಚ್ಚುತ್ತಾ ಇತ್ತು ಇದರಿಂದಾಗಿ ಆಹಾರ ಸಾಮಗ್ರಿಗಾಗಿ ಕೇರಳದವರು ಕರ್ನಾಟಕ ಕರಾವಳಿ ಪ್ರದೇಶವನ್ನೆ ಅವಲಂಬಿಸಬೇಕಾಗಿತ್ತು.ಮಲಬಾರಿನ ಹಡಗುಗಳು ಮಿರ್ಜಾನ, ಹೊನ್ನಾವರ, ಭಟ್ಕಳ, ಬಸ್ರೂರು, ಬಾರಕೂರು, ಮಂಗಳೂರು, ಮಂಜೇಶ್ವರ ಮತ್ತು ಕುಂಬಳಕ್ಕೆ ಬಂದು ಇಲ್ಲಿಂದ ಅವರಿಗೆ ಬೇಕಾಗಿದ್ದ ಆಹಾರ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗುತ್ತಿರುವುದು ಸಮಕಾಲೀನ ಪ್ರವಾಸಿಗರ ವರದಿಗಳಿಂದ ತಿಳಿಯುತ್ತದೆ.[160]

ಎರಡನೆಯದಾಗಿ ವಿಜಯನಗರದ ಅರಸರು ಕೇರಳದ ರೇವುಗಳ ಶಕ್ಯತೆಗಳನ್ನು ತಿಳಿದಿದ್ದರು. ಇದಲ್ಲದೆ ಈ ಅರಸುಗಳಿಗೆ ಬೇಕಾಗಿರುವ ಕುದುರೆಗಳನ್ನು ತರಿಸಿಕೊಳ್ಳಲು ಕರಾವಳಿ ಕರ್ನಾಟಕದ ರೇವುಗಳಿಗಿಂತ ಮಲಬಾರಿನಲ್ಲಿರುವ ರೇವುಗಳು ಉತ್ತಮ ಭೌಗೋಳಿಕ ಸನ್ನಿವೇಶ, ಸೌಕರ್ಯ ಮತ್ತು ವ್ಯಾಪಾರ ಕುಶಲತೆಯನ್ನು

ಹೊಂದಿದ ವರ್ತಕರು ಇದ್ದುದ್ದರಿಂದ ಇಲ್ಲಿನ ಬಂದರುಗಳಾದ ಧರ್ಮಪಟ್ಟಣ, ಕಣ್ಣನೂರು, ಕಲ್ಲಿಕೋಟೆ ಮತ್ತು ಮುರ್ಝುರಿಸ್‌ಗಳು ವಿಜಯನಗರ ರಾಜ್ಯಕ್ಕೆ ಬೇಕಾಗಿರುವ ಕುದುರೆಗಳ ಸ್ಥಾನಪಲ್ಲಟಗೊಳಿಸುವ (Re-placement) ರಾಜ್ಯಗಳಾಗಿದ್ದವು.

ಸಮಕಾಲೀನ ದಾಖಲೆಗಳಂತೆ ಕಣ್ಣಾನೂರಿನಲ್ಲಿ ವರ್ತಕರು ವಿಜಯನಗರ ಅರಸರ ಕಾರ್ಯಭಾರಿಗಳಾಗಿ (Agents) ಬರ್ಮಜನಲ್ಲಿರುವ ವರ್ತಕರೊಂದಿಗೆ ಕುದುರೆ ವ್ಯಾಪಾರ ವ್ಯವಹಾರವನ್ನು ಕುದುರಿಸುತ್ತಿದ್ದರು. ಇದರಿಂದಾಗಿ ಕರಾವಳಿ ಕರ್ನಾಟಕ ಮತ್ತು ಕೇರಳ ಕರಾವಳಿಯಲ್ಲಿ ಸಾಗರೋತ್ತರ ವ್ಯಾಪಾರವು ಒಂದು ಹೊಸ ವ್ಯವಸ್ಥೆಯನ್ನು ಕಂಡಿತು. ವಿಜಯನಗರ ಸಾಮ್ರಾಜ್ಯದ ವಾಣಿಜ್ಯ ಹಿತಾಸಕ್ತಿಗೆ ಪಶ್ಚಿಮ ಕರಾವಳಿ ಪ್ರದೇಶ (ಮುಖ್ಯವಾಗಿ ಮಲಬಾರ ಕರಾವಳಿ) ಹೊಸ ಸಂಪನ್ಮೂಲಗಳನ್ನು ಒದಗಿಸಿತ್ತು. ಇದರಿಂದಾಗಿ ಈ ಕರಾವಳಿಯ ವ್ಯಾಪಾರ ಸಂಪನ್ಮೂಲಗಳು ಈ ಪ್ರದೇಶದ ಒಂದು ರಾಜಕೀಯ ಆಸ್ತಿಯಾಗಿ ಪರಿಣಮಿಸಿದವು ಎಂಬ ವಾದವು ಇದೆ. ಇದರಿಂದಾಗಿ ಮಲಬಾರಿ ಮಾಪಾಳ್ಳಿ ಮತ್ತು ಇಲ್ಲಿನ ಇನ್ನಿತರ ವರ್ತಕರ ಸಾಗರೋತ್ತರ ವ್ಯಾಪಾರ ಭದ್ರಗೊಂಡು ಇವರು ಮಂಗಳೂರು ಮತ್ತು ಅದರ ದಕ್ಷಿಣಕ್ಕಿರುವ ರೇವುಗಳಲ್ಲಿ ಭದ್ರವಾಗಿ ನೆಲೆಗೊಂಡು ಇಲ್ಲಿನ ಸಾಗರೋತ್ತರ ವ್ಯಾಪಾರಗಳಲ್ಲಿ ಏಕಸ್ವಾಮ್ಯವನ್ನು ಪಡೆದರು.

ವಿಜಯನಗರದ ಸಾಗರೋತ್ತರ ಚಟುವಟಿಕೆಯ ವಿಷಮ ಸ್ಥಿತಿ ಉಟಾದದ್ದು ಹದಿನಾರನೆ ಶತಮಾನದ ಆರಂಭ ಕಾಲದಲ್ಲಿ. ಇದರ ನೇತೃತ್ವವನ್ನು ಪೋರ್ಚುಗೀಸರು ವಹಿಸಿದ್ದರು. ಈ ಪೋರ್ಚುಗೀಸರು ಸ್ಥಳೀಯ ವರ್ತಕರ ವ್ಯಾಪಾರವನ್ನು ಛಿದ್ರಗೊಳಿಸಿದರು. ವಿಜಯನಗರ ಸಾಮ್ರಾಜ್ಯಕ್ಕೆ ಒಳಗಾಗಿದ್ದ ಎಲ್ಲ ಪಶ್ಚಿಮ ಕರಾವಳಿಯ ರೇವುಗಳನ್ನು ಪೋರ್ಚುಗೀಸರು ಧಾಲಿ ಮಾಡಿ ಕೊಳ್ಳೆ ಹೊಡೆದರು.[161] ಇದನ್ನು ಎದುರಿಸಲು ವಿಜಯನಗರ ಅರಸರ ಸಾಗರೋತ್ತರ ಧೋರಣೆ ಸಮರ್ಪಕವಾಗಿಲ್ಲವೆಂದು ತೋರುತ್ತದೆ. ಇದರ ಪರಿಣಾಮವಾಗಿ ಕರಾವಳಿ ಕರ್ನಾಟಕ ಮತ್ತು ಮಲಬಾರ ಸಾಗರೋತ್ತರ ವ್ಯಾಪಾರದಲ್ಲಿ ನಿಕಟತೆಗೆ ಬಂದುವು ಗಮನಾರ್ಹ ಸಂಗತಿ.

ವಿಜಯನಗರ ಅರಸರ ಸಾಗರೋತ್ತರ ವ್ಯಾಪಾರ ತಮ್ಮ ಹಿಡಿತವಿರುವ ಪಶ್ಚಿಮ ಕರಾವಳಿಯಲ್ಲಿ ರಭಸದಿಂದ ನಡೆಯುತ್ತಿತ್ತು. ಇದರ ಲಾಭವನ್ನು ಪಡೆದವರಲ್ಲಿ ಮಲಬಾರಿ ಮತ್ತು ಕೊಂಕಣ ಪ್ರದೇಶದ ವರ್ತಕರು. ಅರೇಬಿಯಾ ಪರ್ಶಿಯಾದಿಂದ ಚೀನಾದವರೆಗೆ ವಿಜಯನಗರ ಅರಸರ ಸಾಗರೋತ್ತರ ವ್ಯಾಪಾರ ಕ್ಷೇತ್ರವಿದ್ದರೂ ಇದನ್ನು ಸಂಘಟಿಸುವ ಕೆಲಸದಲ್ಲಿ ವಿಜಯನಗರದವರು ಹಿಂದೆ ಬಿದ್ದಿದ್ದರು. ಇದಕ್ಕೆ ಮುಖ್ಯ ಕಾರಣ ಈ ಅರಸರು ಸಮರ್ಪಕವಾದ ಸಮುದ್ರಯಾನ ಸಂಪರ್ಕ ಸಾಧಿಸಲಿಲ್ಲ. ಈ ನ್ಯೂನತೆಗಳು ಪೋರ್ಚುಗೀಸರ ಆಗಮನ ಮತ್ತು ಇವರ ಚಟುವಟಿಕೆಗಳ ಕಾಲದಲ್ಲಿ ವ್ಯಕ್ತವಾಯಿತು.

ಒಟ್ಟಿನಲ್ಲಿ ಮಾನವನನ್ನು ಒಂದು ಚೌಕಟ್ಟಿನ ನಾಗರಿಕ ಬದುಕಿಗೆ ಒಳಪಡಿಸಿ ಅವನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ವ್ಯಾವಹಾರಿಕ ಜ್ಞಾನವನ್ನು ಹೆಚ್ಚಿಸಿ ಸಂಘಜೀವಿಯಾದ ಮಾನವನು ಸಾರ್ವತೋಮುಖ

ಅಭಿರುಚಿಗೆ ಮೂಲಕಾರಣವಾದದು ವೃತ್ತಿ ಆಧಾರಿತ ಬದುಕು ಎನ್ನಬಹುದು. ಇದರಿಂದಾಗಿ ತಾನು ಬೆಳೆದ ಬೆಳೆಗೆ ಒಂದು ಬೆಲೆಯು ಬಂದು ನೆಲೆಯು ಸಿಕ್ಕಿತು. ಆರಂಭದಲ್ಲಿ ತನಗೆ ಅಗತ್ಯವಾದಷ್ಟನ್ನೇ ಬೆಳೆಯುತ್ತಿದ್ದ ವ್ಯಕ್ತಿ ಲಾಭದ ದೃಷ್ಟಿಯಿಂದ ಮತ್ತಷ್ಟು ಬೆಳೆಯಲಾರಂಭಿಸಿದ. ಇವುಗಳ ವಹಿವಾಟುಗಳಿಗಾಗಿ ಒಂದು ವ್ಯಾಪಾರಿ ಕೇಂದ್ರವನ್ನು ಗುರುತು ಮಾಡಿಕೊಂಡ. ಇದರಿಂದಾಗಿ ಸಂತೆಗಳು ಹುಟ್ಟಿಕೊಂಡವು. ಸಂತೆಗಳು ಜನಪ್ರಿಯವಾದಂತೆ ಪಟ್ಟಣಗಳು ನಗರಗಳು ತಲೆ ಎತ್ತಿದ್ದವು. ವ್ಯಾಪಾರಕ್ಕೆ ಮೀಸಲಾದ ಕೆಲವು ಸಮುದಾಯಗಳು ವಂಶಪರಂಪರವಾಗಿ ಇಂತಹ ವೃತ್ತಿಗಳನ್ನು ರೂಢಿಸಿಕೊಂಡವು. ಹಾಗಾಗಿ ವರ್ತಕ ಸಂಘಗಳು, ವೃತ್ತಿ ಸಂಘಗಳು ಹುಟ್ಟಿಕೊಂಡು ವ್ಯಾಪಾರದ ದಿಕ್ಕು ದೆಸೆಗಳಲ್ಲಿ ಹೊಸದೊಂದು ಬದಲಾವಣೆ ಕಂಡು ಬಂತು. ಪ್ರಸ್ತುತ ಅಧ್ಯಾಯದಲ್ಲಿ ಅಂತಹ ವೃತ್ತಿ ಸಂಘಗಳು ಆ ಮೂಲಕ ಬೆಳೆದ ವ್ಯಾಪಾರ, ವಾಣಿಜ್ಯ ಅದಕ್ಕೆ ಮೀಸಲಾದ ಕೆಲವು ಜಾತಿ ಸಮುದಾಯಗಳು ಇಂತಹ ಪ್ರಮುಖ ವಿಚಾರಗಳನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ. ಇದರಿಂದ ವಿಜಯನಗರದ ಅಭಿವೃದ್ಧಿಗೆ ಆದ ಲಾಭ ನಷ್ಟಗಳನ್ನು ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು**

1. ಸೌ.ಇ.ಇ. xx ೧೪೨ ಬಾಳಂಬೀಡ (5) ಹಾನಗಲ್ಲ
2. ಸೌ.ಇ.ಇ. xx ೩೪೭ ನಿಂಬಾಳ (ತಾ.) ಇಂಡಿ (ಸು.ಶ.೧೩)
3. ಎ.ಕ. vii ಹೊನ್ನಾಳ ೮ ಕುರುವನಗದ್ದೆ (ಕ್ರಿ.ಶ. ೧೨೨೮)
4. ಸೌ.ಇ.ಇ. xviii ೩೩೮ ಹತ್ತಿಮತ್ತೂರ (ತಾ) ಹಾವೇರಿ (ಸು.ಶ.೧೧)
5. ಎ.ಇ. vi ಪುಟ ೧೬೬ ಲಕ್ಷ್ಮೇಶ್ವರ (ತಾ) ಶಿರಹಟ್ಟಿ (ಕ್ರಿ.ಶ. ೭೯೩)
6. ಎ.ಇ. v ಪುಟ ೧೯-೨೦ ಮನಗೂಳಿ (ತಾ) ಬಾಗೇವಾಡಿ (ಕ್ರಿ.ಶ. ೧೧೬೧)
7. ಸೌ.ಇ.ಇ. xx ೧೭೮ ಹಿಪ್ಪರಗಿ (ತಾ) ಸಿಂದಗಿ (ಕ್ರಿ.ಶ.೧೧೯೨)
8. ಎ.ಕ.vii ಶಿಕಾರಿಪುರ ೧೧೨ ಬಳ್ಳಿಗಾವೆ (ಕ್ರಿ.ಶ. ೧೧೯೫)
9. ಸೌ.ಇ.ಇ. xx ೨೨೫ ಬರಡೋಲ (ತಾ) ಇಂಡಿ (ಕ್ರಿ.ಶ. ೧೩೦೪)
10. ಕ.ಇ.v ೨೧ ತೇರದಾಳ (ತಾ) ಜಮಖಂಡಿ (ಕ್ರಿ.ಶ. ೧೧೨೫)
11. ಸೌ..ಇ. xx ೧೭೮ ಹಿಪ್ಪರಗಿ (ತಾ) ಸಿಂದಗಿ (ಕ್ರಿ.ಶ. ೧೧೯೨)
12. ಎ.ಕ. III ಗುಂಡ್ಲುಪೇಟೆ ೫೯ ರಾಘವಾಪುರ (ಕ್ರಿ.ಶ. ೧೫೦೭)
13. ಎ.ಕ. vi ಕಡೂರ ೧೧೨ ಕಂಚಿಗಲ್ಲು (ಕ್ರಿ.ಶ. ೧೮೫೩)
14. ಎ.ಇ. xix ಪುಟ ೩೫-೫೯ ಮಿರಜ (ತಾ) ಮಿರಜ (ಕ್ರಿ.ಶ. ೧೧೪೨)
15. ಎ.ಇ. xix ಪುಟ ೩೫-೫೯ ಮಿರಜ (ತಾ) ಮಿರಜ (ಕ್ರಿ.ಶ. ೧೧೪೨)
16. ಎ.ಇ. xix ಪುಟ ೩೫-೫೯ ಮಿರಜ (ತಾ) ಮಿರಜ (ಕ್ರಿ.ಶ. ೧೧೪೨)
17. ಸೌ.ಇ.ಇ. xx ೧೭೮ ಹಿಪ್ಪರಗಿ (ತಾ) ಸಿಂದಗಿ (ಕ್ರಿ.ಶ. ೧೧೯೨)
18. ಸೌ.ಇ.ಇ. xv ೩೬ ಹೊಸೂರ (ತಾ) ಗದಗ (ಕ್ರಿ.ಶ. ೧೧೪೮)
19. ಸೌ.ಇ.ಇ. xx ೧೭೮ ಹಿಪ್ಪರಗಿ (ತಾ) ಸಿಂದಗಿ (ಕ್ರಿ.ಶ. ೧೧೯೨)
20. ಸೌ.ಇ.ಇ. IX-ii ೫೫೪ ಕವಿತಾಳ (ತಾ) ಆದವಾನಿ (ಕ್ರಿ.ಶ. ೧೫೩೩)
21. ಎ.ಇ. xvii ಪುಟ ೧೨೧-೧೨೨ ಅರಸೀಬೀದಿ (ತಾ) ಹುನಗುಂದ (ಕ್ರಿ.ಶ. ೧೦೪೭)
22. ಎ.ಕ. xi ದಾವಣಗೆರೆ ೧೩೩ ಮಳಲಕೆರೆ (ಕ್ರಿ.ಶ. ೧೦೭೧)
23. ಸಕಲಪುರಾತನರ ವಚನಗಳು (ಸಂಪುಟ - ೧); ಮುನ್ನುಡಿ, ಪುಟ x-xiii

24. ಶಾಸನಸಂಪದ, ನಂ. ೨೪ ಕುರಗೋಡ (ತಾ) ಬಳ್ಳಾರಿ (ಕ್ರಿ.ಶ. 1176
25. ಇ.ನಾ.ಕ.ಕೊ.ಸ್ಟೇ.ನಂ. ೧೫ ಸಿರಸಂಗಿ (ತಾ) ಸವದತ್ತಿ (ಕ್ರಿ.ಶ. ೧೧೮೬)
26. ಎ.ಕ. ix ಚನ್ನಪಟ್ಟಣ ೯೮ ಮಳೂರ (ಕ್ರಿ.ಶ. ೧೩೨೬)
27. ತು.ನಾ.ಶಾ.ನಂ. ೪೭ ಹಿರಿಯಂಗಡಿ (ತಾ) ಕಾರ್ಕಳ (ಕ್ರಿ.ಶ. ೧೩೩೪)
28. ಸೌ.ಇ.ಇ. vii ೩೧೨ ಮುದಕೇರಿ (ತಾ) ಉಡುಪಿ (ಕ್ರಿ.ಶ. ೧೩೩೬)
29. ಹಳಗನ್ನಡದಲ್ಲಿ 'ಪರದ' ಶಬ್ದ ಬಳಕೆಯಲ್ಲಿದೆ
30. ಸಕಲ ಪುರಾತನರ ವಚನಗಳು (ಸಂಪುಟ-೨); ವ.ಸಂ. ೧೮೬೧
31. ಎ.ಕ. vii ಶಿಕಾರಿಪುರ ೧೧೮ ಬಳ್ಳಿಗಾವೆ (ಕ್ರಿ.ಶ. ೧೦೫೪)
32. ಇ.ಫ್ರಾ.ನಾ.ನಂ. ೩೧ ಏರಗಿ (ತಾ) ದೆಗ್ಲೂರ (ಕ್ರಿ.ಶ. ೧೧೩೪)
33. ಎ.ಕ. vii ಸೊರಬ ೩೨೮ ಭಾರಂಗಿ (ಕ್ರಿ.ಶ. ೧೧೫೯), ಸ.ಇ.ಇ. xx ೧೬೫ ವಿಜಾಪುರ (ತಾ) ವಿಜಾಪುರ (ಕ್ರಿ.ಶ. ೧೧೭೬)
34. ಹಿ.ಕ.ಸ್ಟ.ರಿ.ಅ.ಬ.ನಂ. ೨೩ ಮೀರಕಲ್ (ತಾ) ಬಸವಕಲ್ಯಾಣ (ಕ್ರಿ.ಶ. ೧೯೭)
35. ಹಿ.ಕ.ಸ್ಟ.ರಿ.ಅ.ಬ.ನಂ. ೨೩ ಮೀರಕಲ್ (ತಾ) ಬಸವಕಲ್ಯಾಣ (ಕ್ರಿ.ಶ. ೧೯೭)
36. ಹಿ.ಕ.ಸ್ಟ.ರಿ.ಅ.ಬ.ನಂ. ೨೩ ಮೀರಕಲ್ (ತಾ) ಬಸವಕಲ್ಯಾಣ (ಕ್ರಿ.ಶ. ೧೯೭)
37. ಕ.ಇ. II ಪುಟ ೮೨-೮೩ ತೆಲಸಂಗ (ತಾ) ಅಥಣಿ (ಕ್ರಿ.ಶ. ೧೧೪೭)
38. ಕನ್ನಡ ಸಂಶೋಧನ ಸಂಸ್ಥೆ, ಕಾಗದ ಪ್ರತಿ ನಂ. ೫೯೭
39. ರಾಘವಾಂಕನ (೧೨೨೫) 'ಸೋಮನಾಥ ಚಾರಿತ್ರ' (೫-೪೫) ಕೃತಿಯಲ್ಲಿ ಮಿಂಡಗುದ್ದಲಿ ಪದವೂ ಶಾಸನಗಳಲ್ಲಿ ತುಂಬುಳೆಪಟ್ಟಣದ ಮಿಂಡಗುದ್ದಲಿ ದೇಮಿಶೆಟ್ಟಿ, ವೈದಿಶೆಟ್ಟಿ (ಹೈ.ಆ.ಸಿ. III ಮಹಬೂಬನಗರ ೬೩ ವರ್ಧಮಾನಪುರಂ, ಕ್ರಿ.ಶ. ೧೨೨೯), ಮಿಂಡಗುದ್ದಲಿ ಬೈವಿಸೆಟಿ (ಎ.ಕ. x ಶಿಡ್ಲಘಟ್ಟ ೧೧೨ ರಾಮೇಶ್ವರ, ಕ್ರಿ.ಶ. ೧೩೭೮), ಮಿಂಡಗುದ್ದಲಿ ನಾಮಿಸೆಟ್ಟಿ (ಎ.ಕ. VII ಶಿಕಾರಿಪುರ 106 ಬಳ್ಳಿಗಾವ, ಕ್ರಿ.ಶ. ೧೯೮) ಉಲ್ಲೇಖಗಳೂ ಲಭಿಸುತ್ತವೆ.
40. ನಿರಂಜನವಂಶರತ್ನಾಕರ, ಪುಟ. ೨೬-೨೮
41. ಕನ್ನಡ ಸಂಶೋಧನಾ ಸಂಸ್ಥೆ: ಕಾಗದಪ್ರತಿ, ನಂ. ೫೯೭
42. ಪಾರಮಾರ್ಥಪ್ರಕಾಶಿಕೆ, ಅರಿಕೆ: ಪುಟ-೩೧
43. ಎ.ಕ.VIII ಸೊರಬ ೨೬೮ ದೇವಸ್ಥಾನದ ಹಕ್ಕಲು (ಕ್ರಿ.ಶ.ಸು. ೧೨೪೫)
44. ಸೌ.ಇ.ಇ. XVIII ೨೭೫ ದೇವಿಹೊಸೂರ (ತಾ) ಹಾವೇರಿ (ಕ್ರಿ.ಶ. ೧೪೦೨)
45. ಎ.ಸಿ. XV ಪುಟ ೩೧೭-೨೬ ಮಾಡಗಿಹಾಳ (ತಾ) ಜತ್ತ (ಕ್ರಿ.ಶ. ೧೧೭೨)
46. ಸೌ.ಇ.ಇ. XX ೫೯ ಕಡ್ಲೇವಾಡ (ತಾ) ಸಿಂದಗಿ (ಸು.ಶ.೧೨)
47. ಜ.ಬಾ.ರಾ.ಸೊ.X ಪುಟ ೨೪೮ ನೇಸರಗಿ (ತಾ) ಬೈಲಹೊಂಗಲ (ಕ್ರಿ.ಶ. ೧೨೧೯)
48. ಇ.ನಾ.ಕ.ಕೊ.ಸ್ಟೇ.ನಂ ೧೫ ಸಿರಸಂಗಿ (ತಾ) ಸವದತ್ತಿ (ಕ್ರಿ.ಶ. ೧೧೮೬)
49. ಸೌ.ಇ.ಇ. IX-i ೫೭ ಕುರಗೋಡ (ತಾ) ಬಳ್ಳಾರಿ (ಕ್ರಿ.ಶ. ೧೧೭೭)
50. ಸೌ.ಇ.ಇ. IX-i ೧೪೧ ನೀಲಗುಂದ (ತಾ) ಹರಪನಹಳ್ಳಿ (ಕ್ರಿ.ಶ. ೧೧೩೬)
51. ಸೌ.ಇ.ಇ. IX-i ೧೯೦ ಪೆದ್ದಹೊಟ್ಟೂರ (ತಾ) ಗೂಟಿ (ಕ್ರಿ.ಶ. ೧೧೩೪)
52. ಎ.ಕ. XVII ಮುಳಬಾಗಲು ೩೦೬ ಆವನಿ (ಕ್ರಿ.ಶ. ೯೫೦)
53. ಎ.ಕ. VIII ಸೊರಬ ೫೯ ತೊರೆವಂದ (ಕ್ರಿ.ಶ. ೧೦೭೪)
54. ಹಿ.ಕ.ಸ್ಟ.ರಿ.ಅ.ಬ.ನಂ. ೫೪ ಮಾಶ್ಯಾಳ (ತಾ) ಅಫಜಲಪುರ (ಕ್ರಿ.ಶ. ೧೧೧೯)
55. ಸೌ.ಇ.ಇ. XX ೧೧೧ ದೇವರನಾವದಗಿ (ತಾ) ಸಿಂದಗಿ (ಕ್ರಿ.ಶ. ೧೧೪೦)
56. ಸೌ.ಇ.ಇ. XX ೧೩೪ ತದಲಬಾಗಿ (ತಾ) ಜಮಖಂಡಿ (ಕ್ರಿ.ಶ. ೧೧೨೦)
57. ಎ.ಇ.V ಪುಟ ೧೯-೨೦ ಮನಗೂಳಿ (ತಾ) ಬಾಗೇವಾಡಿ (ಕ್ರಿ.ಶ. ೧೧೬೧)
58. ಸೌ.ಇ.ಇ. IX-ii ೪೧೬ ಮೋದನಕುಪ್ಪ (ತಾ) ಬಂಟ್ವಾಳ (ಕ್ರಿ.ಶ. ೧೩೩೭)
59. ಹೈ.ಆ.ಸಿ. III ನಂ ೧ ನಾಗಾವಿ (ತಾ) ಚಿತ್ತಾಪುರ (ಕ್ರಿ.ಶ. ೧೯೨)
60. ಸೌ.ಇ.ಇ Vol. XX ೭೮ ಲಕ್ಷ್ಮೇಶ್ವರ (ತಾ) ಶಿರಹಟ್ಟಿ (ಕ್ರಿ.ಶ. ೧೧೧೮)
61. ಕರ್ನಾಟಕ ಭಾರತಿ ೬-೩ ಪುಟ ೪೩-೫೩ ಕಲ್ಹೊಳೆ (ತಾ) ಗೋಕಾಕ (ಕ್ರಿ.ಶ. ೧೨೦೪)

62. ಕ.ಇ. Vol. ೭೮ ಧಾರವಾಡ (ತಾ) ಧಾರವಾಡ (ಕ್ರಿ.ಶ. ೧೨೧೫-೧೬)
63. ಜ.ಬಾ.ರಾ.ಸೊ.X ಪುಟ ೧೯೦ ಮುಳಗುಂದ (ತಾ) ಗದಗ (ಕ್ರಿ.ಶ. ೯೦೩-೦೪)
64. ಜ.ಬಾ.ರಾ.ಸೊ. X ಪುಟ ೧೯೦ ಮುಳಗುಂದ (ತಾ) ಗದಗ (ಕ್ರಿ.ಶ. ೯೦೩-೦೪)
65. ಎ.ಇ. Vol. XV ಪುಟ ೯೭-೯೯ ಸೂಡಿ (ತಾ) ರೋಣ (ಕ್ರಿ.ಶ. ೧೦೭೫)
66. ಹೈ.ಆ.ಸಿ. III ೧ ಪಟ್ನಿಚೆರು (ತಾ) ಹೈದ್ರಬಾದ್ (ಕ್ರಿ.ಶ. ೧೧೨೭)
67. ಎ.ಕ.x ಶಿಡ್ಲಘಟ್ಟ ೧೧೨ ರಾಮೇಶ್ವರ (ಕ್ರಿ.ಶ. ೧೩೭೮)
68. ಕ.ಇ.I ಪುಟ ೨೩ ಸಿಗ್ಗಾವೆ (ತಾ) ಸಿಗ್ಗಾವ (ಕ್ರಿ.ಶ. ೧೦೫೫)
    (ಧರ್ಮ್ಮವೊಳಲ ಪದಿನಱುವರು ಸೆಟ್ಟಿಯರು' ಡಂಬಳ ಗ್ರಾಮದವರು ಮಾತ್ರ)
69. ಕ.ಇ. Vol. IV ೫೫ ಬೆಡಕಿಹಾಳ (ತಾ) ಚಿಕ್ಕೋಡಿ (ಕ್ರಿ.ಶ. ೧೦೦೦)
70. ಸೌ.ಇ.ಇ Vol. XI-ii ಹನಮನಹಾಳ (ತಾ) ರೋಣ (ಕ್ರಿ.ಶ. ೧೯)
71. ಸೌ.ಇ.ಇ. Vol. XX ೧೧೧ ಸಂಸಿ (ತಾ) ಕುಂದಗೋಳ (ಕ್ರಿ.ಶ. ೧೧೪೪?)
72. ಸೌ.ಇ.ಇ. Vol. XV ೧೦೬ ಹುಯಿಲಗೋಳ (ತಾ) ಗದಗ (ಕ್ರಿ.ಶ. ೧೧೬೬)
73. ಕ.ಇ. Vol. V ೧೯ ಹಾನಗಲ್ಲ (ತಾ) ಹಾನಗಲ್ಲ (ಕ್ರಿ.ಶ. ೧೧೨೧)
74. ಸೌ.ಇ.ಇ. XX ೨೯ ಕಡ್ಲೇವಾಡ (ತಾ) ಸಿಂದಗಿ (ಸು.ಶ.೧೨)
75. ಎ.ಇ.ಇ Vol. V ಪುಟ ೧೯-೨೦ ಮನಗೂಳಿ (ತಾ) ಬಾಗೇವಾಡಿ ಕ್ರಿ.ಶ. ೧೧೬೧)
76. ಸೌ.ಇ.ಇ. Vol. XX ೭೧ ಅಗರಖೇಡ (ತಾ) ಇಂಡಿ (ಕ್ರಿ.ಶ. ೧೧೯)
77. ಸೌ.ಇ.ಇ. Vol. XX ೬೩ ಯರಗಲ್ಲ (ತಾ) ಸಿಂದಗಿ(ಕ್ರಿ.ಶ. ೧೯೮)
78. ಕ.ಇ. IV ೫೫ ಬೆಡಕಿಹಾಳ (ತಾ) ಚಿಕ್ಕೋಡಿ (ಕ್ರಿ.ಶ. ೧೦೦೦)
79. ಸೌ.ಇ.ಇ. Vol. IX-i ೧೩೯ ಹೊಳಲ (ತಾ) ಹಡಗಲಿ (ಕ್ರಿ.ಶ. ೧೦೭೪)
80. ಎ.ಕ. Vol. VII, ಶಿಕಾರಿಪುರ ೧೧೮ ಬಳ್ಳಿಗಾವೆ (ಕ್ರಿ.ಶ. ೧೦೫೪)
81. ಎ.ಕ. Vol. X ಕೋಲಾರ ೧೭೦ ಸೋಮಾಂಬುಧಿ (ಕ್ರಿ.ಶ. ೧೧೮೦)
82. ಎ.ಇ.X'X ಪುಟ ೩೫-೩೯ ಮಿರಜ (ತಾ) ಮಿರಜ (ಕ್ರಿ.ಶ. ೧೧೪೨)
83. ಎ.ಇ. Vol. XXXVIII ಪುಟ ೯೪-೯೮ ನಿಂಬಾಳ (ತಾ) ಇಂಡಿ (ಕ್ರಿ.ಶ. ೧೧೮೫-೮೬)
84. ಎ.ಕ. III ನಂಜನಗೂಡು ೩೯ ಹೆಮ್ಮರಗಾಲ (ಕ್ರಿ.ಶ. ೧೯೨)
85. ಹೈ.ಆ.ಸಿ. III ನಂ ೪೦ ಆವಂಚೆ (ತಾ) ಮಹಬೂಬನಗರ (ಕ್ರಿ.ಶ. ೧೧೧೩)
86. ಸೌ.ಇ.ಇ. XVIII ೧೩೮ ಮುದೇನೂರ (ತಾ) ರಾಣೇಬೆನ್ನೂರ (ಕ್ರಿ.ಶ. ೧೧೨೮)
87. ಹೈ.ಆ.ಸಿ. III ನಂ ೪೩ ಗಂಗಾಪುರಂ (ತಾ) ಮೆಹಬೂಬನಗರ (ಕ್ರಿ.ಶ. ೧೧೪೧)
88. ಎ.ಇ. XIX ಪುಟ ೩೦-೩೪ ಕೊಲ್ಲಾಪುರ (ತಾ) ಕೊಲ್ಲಾಪುರ (ಕ್ರಿ.ಶ. ೧೧೩೫)
89. ಎ.ಇ. XIX ಪುಟ ೩೦-೩೪ ಕೊಲ್ಲಾಪುರ (ತಾ) ಮೆಹಬೂಬನಗರ (ಕ್ರಿ.ಶ. ೧೧೪೧)
90. ಹೈ.ಆ.ಸಿ. III ನಂ ೪೩ ಗಂಗಾಪುರಂ (ತಾ) ಮೆಹಬೂಬನಗರ (ಕ್ರಿ.ಶ. ೧೧೪೧)
91. ಹೈ.ಆ.ಸಿ. III ನಂ. ೪೩ ಗಂಗಾಪುರಂ (ತಾ) ಮೆಹಬೂಬನಗರ (ಕ್ರಿ.ಶ. ೧೧೪೧)
92. ಸೌ.ಇ.ಇ. XVIII ೧೬೨ ಗದಗ (ತಾ) ಗದಗ (ಕ್ರಿ.ಶ. ೧೧೮೫)
93. ಎ.ಕ. Vol. V. ತಿ. ನರಸೀಪುರ ೨೬ ತಿರುಮಕೂಡಲು (ಸು.ಶ. ೧೬)
94. EC, Vol III, Mysore district part I, pp. 67, 69
95. EI, Vol XX, p. 90; (Annual reports of South Indian Epigraphy, 1918, paras 84 & 85)
96. ಕೃಷ್ಣದೇವರಾಯ: ಆಮುಕ್ತಮಾಲ್ಯದ ಸಿಕಂದರಾಬಾದ್, 1970, ಪು. 70
97. Elliot: History of India, IV, p. 107
98. Robert sewell : A forgotton empire, Delhi, 1962, p. 246, 247
99. EC, Vol. V, Mysore district, part II, Chamarajanagara, 819, 398 A.D.
100. Ibid, Vol, XI, Chitradurga District, Molakalmuru 8
101. Ibid, Vol. IV, Yalandur 2
102. Ibid., Vol. V, Hassan District, Belur 75
103. South Indian Inscriptions, Vol. VII, No. 196
104. E.C., Vol. V, Arakalgudu 22

105. Ibid., Vol. IV, 45
106. Ibid., Vol. IX, Bangalore District, Anekallu 44, 64; Hosakote 128; Ibid., Vol. X, Kolar District, Bagepalli, 72, 83; Malur 4
107. Ibid., Vol. X, Kolar 6
108. Ibid., Kolar 73
109. Ibid., Vol. V, Arakalgudu 68; Vol, Ix, Bangalore 56; Channapattana 37
110. Ibid., Vol. IX, Bangalore 96; Vol. XI, Holakere 17; Vol. X, Shidlanghatta 122
111. Ibid., Vol. VIII, Shimoga District, Sorab 18
112. Ibid., 428
113. Ibid., Vol, IX, Bangalore 96
114. Ibid., Vol. X, Kolar, 73
115. A History of India, Vol. I, p. 331
116. Administration and Social life under Vijayanagara, II, Social life, Madras, 1940, p. 28
117. ಡಬ್ಲ್ಯು -ಎಚ್ ಪೋರ್‌ಲ್ಯಾಂಡ್: ದಿ ಅಗ್ರೇರಿಯನ್ ಸಿಸ್ಟಮ್ ಆಫ್ ಮುಸ್ಲಿಂ ಇಂಡಿಯಾ ಅಧ್ಯಾಯ - ೧, ಪು. 38-62
118. ಕರ್ನಾಟಕ ಚರಿತ್ರೆ ಸಂಪುಟ - 3, ಸಂ, ಷೇಕ್ ಅಲಿ, ಪುಟ. 214
119. ಎಕ, Vol. 11, ಎಚ್.ಕೆ. 110
120. ಬಾರ್ಬೋಸಾ ೧, ಪು. 226
121. ಬಾರಿ ಎಸ್.ಎನ್: ನಾನ್ ಅಗ್ರೇರಿಯನ್ ಟ್ಯಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ, 1336-1565
122. 1924ರ 150 ಹಾಗೂ 1922ರ 180
123. ಎಕ. Vol - 5, ಕೆ.ಆರ್.ನಗರ, 113, 1361, ಟಿ. ನರಸೀಪುರ 16-1346
124. ಬಾರ್ಬೋಸಾ ೧, 205, 207-8
125. ಸೌ.ಇ.ಇ. - 153
126. ಅದೇ - 2, ಪು. 162
127. A Forgotton empire, Vol. - VI, P. 254
128. ಎಫ್.ಇ - 3 ಪು. 381
129. ಅದೇ, ಪು. 230, 266
130. ಬಾರ್ಬೋಸಾ, Vol. ೨, ಪುಟ 188
131. ಅದೇ, ಪು. 203
132. ಎಫ್.ಇ. ಪು. 276
133. ದಿಸ್ ಪ್ಯಾಪಸ್ ಫ್ರಂ ಇಂಗ್ಲೆಂಡ್, 1313-1321, ಪು. 20
134. ಬಾರ್ಬೋಸಾ Vol. ೧, ಪು. 163
135. ರಾಬರ್ಟ್ ಸಿವಲ್, ಪೂರ್ವೋಕ್ತ, ಪು. 202, ಸೌ.ಇ.ಇ., ೫೧೩
136. ಟೋಪೋಗ್ರಾಫಿಕಲ್ ಲಿಸ್ಟ್ ಸಂ. ೧, ೫೭
137. ವೆಂಕಟರಮಣಯ್ಯ, ಎನ್. ಸ್ಟಡೀಸ್ ಇನ್ ಹಿಸ್ಟರಿ ಆಫ್ ದಿ ಥರ್ಡ್ ಡೈನಾಸ್ಟಿ ಆಫ್ ವಿಜಯನಗರ, ಮದರಾಸು, 1935
138. ಎಲಿಯಟ್ ಹಿಸ್ಟರಿ ಆಫ್ ಇಂಡಿಯಾ, ಸಂ. 4, ಪು. 107
139. ಎಂ.ಎ.ಆರ್, 1925, 36, ಅದೇ 1919 ಪುಟ 33 ಪ್ಯಾರಾ 85
140. ಎ.ಕ. Vol. 5, ಬೇಲೂರು, 75
141. ಅದೇ, ಪು. 76
142. ಕಟ್ಟೆ ಶೇಷಾಚಾರ್, ಕವಿ ಕನಕದಾಸ; ಪು. 62, 63 ಮತ್ತು ಎಕ Vol. ೪, ಬೇಲೂರು 73
143. ಬಾರ್ಬೋಸಾ, ಪು. 189
144. ರೆಕಾರ್ಡ್ ಆಫ್ ಪೋರ್ಡ್ ಸೇಂಟ್ ಚಾರ್ಜ್; ಡೈರಿ ಅಂಡ್ ಕನ್ಸಲ್ಟೇಷನ್ಸ್ 1691, 51
145. ಫಾಸ್ಟರ್; ದಿ ಇಂಗ್ಲಿಷ್ ಫ್ಯಾಕ್ಟರೀಸ್ ಇನ್ ಇಂಡಿಯಾ 1618-1621, ಪು. 70

146. ಕರ್ನಾಟಕ ಚರಿತ್ರೆ, ಸಂ. 3, ಸಂ.ಬಿ. ಷಕ್‌ಅಲಿ, ಪು. 234, 235.
147. ಅದೇ, ಪು. 235
148. ನ್ಯೂನಿಜ್, ಸಿವೆಲ್, ಪು. 366, MAR. 1934, ಪು. 120 ಕೆ.ಡಿ.
149. ಅದೇ, ಪು. 236
150. ಎಸ್. ರಾಜಶೇಖರ, ಯಾನ್ ಅಪ್ರೋಚ್ ಆಫ್ ಮ್ಯಾಪ್ ಸ್ಟಡಿ ಆಫ್ ವಿಜಯನಗರ, ಮ್ಯಾಪ್ ನಂ. 27, ಪು. 23
151. ಕೇಂಬ್ರಿಡ್ಜ್ ಇಕನೋಮಿಕ್ ಹಿಸ್ಟರಿ ಆಫ್ ಇಂಡಿಯಾ, ಸಂ. I, (ನ್ಯೂ ಡೆಲ್ಲಿ, 1984), ಪು. 117
152. ರಾಘುವನ್ ವಾರ್‍ರಿಯರ್, 1991, 'ದಿ ರೈಸ್ ಅಂಡ್ ಗ್ರೋಥ್ ಆಫ್ ಕಾಲಿಕತ್' ಸೋವಿನಿಯರ್ ಆಫ್ ಸೌಥ್ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ ಕಾಲಿಕತ್, 1991, ಪು. 21-29
153. ಬಾರ್‌ಬೋಸ, Vol. 2, ಪು. 125
154. ಅದೇ ಪು.30
155. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ (ಮೈಸೂರು, 1966) ಭಾಗ 2, ಪು. 101-102, ವಿವೇಕಾನಂದ ನಾಯಕ ಬಸ್ರೂರು ಗರಡಿ, ಶಾರದಾವಾಣಿ, 1977-78, ಪು. 24
156. ಅದೇ
157. ಫ್ರೈಯರ್ ಈಸ್ಟ್ ಇಂಡಿಯಾ ಅಂಡ್ ಪರ್ಶಿಯಾ - 8, ಪು. 42-59
158. ಅದೇ, ಪು. 390
159. ಅದೇ
160. ಅದೇ
161. ಅದೇ

# ಅಧ್ಯಾಯ 6

# ವಿಜಯನಗರ ಕಾಲದಲ್ಲಿ ಬೇಟೆ, ಪಶುಪಾಲನೆ ಮತ್ತು ತಳವಾರಿಕೆ

ವೈಭವ ಮತ್ತು ಪ್ರಭಾವಶಾಲಿಯಾಗಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ, ಬುಡಕಟ್ಟು ಜನರು, ನಿಮ್ನ ವರ್ಗದ ಅನೇಕ ಶೋಷಿತ ಸಮುದಾಯಗಳು ಸಮಾಜದ ದೃಷ್ಟಿಯಲ್ಲಿ ನಿರ್ಲಕ್ಷಿತರಾಗಿದ್ದರೂ ಅವರು ಸಾಮ್ರಾಜ್ಯಕ್ಕೆ ನೀಡಿದ ಕಾಣಿಕೆ ಅನುಪಮವಾದುದು. ಇಂತಹವರ ಚರಿತ್ರೆ ಸರಿಯಾಗಿ ದಾಖಲಾಗದಿರುವುದು ಒಂದು ಕೊರತೆ. ಈ ಹಿನ್ನೆಲೆಯಲ್ಲಿ ಆ ಕಾಲದ ಬೇಟೆ, ಪಶುಪಾಲನೆ ಮತ್ತು ಅದರಿಂದ ಗುರುತಿಸಲ್ಪಟ್ಟು ಮುಂದೆ ಆಡಳಿತದಲ್ಲಿ ಭಾಗಿಗಳಾದ ತಳವಾರರು ಅಥವಾ ತಳವಾರಿಕೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಬೇಟೆ ಮಾನವನ ಮೂಲಭೂತ ಆಹಾರ ಮಾಧ್ಯಮದಲ್ಲಿ ಮೊದಲ ವೃತ್ತಿ ಎನಿಸಿಕೊಂಡಿದೆ. ಗೆಡ್ಡೆ, ಗೆಣಸು, ಹಣ್ಣು, ಹಂಪಲುಗಳನ್ನು ಸವಿದ ಅನಂತರ ಮನುಷ್ಯ ಪ್ರಾಣಿಗಳನ್ನು ಕೊಂದು ತಿನ್ನುವ ವಿನೂತನ ಪ್ರವೃತ್ತಿಯನ್ನು ಬೆಳೆಸಿಕೊಂಡನು. ಇದರ ರುಚಿಯನ್ನು ಕಂಡುಕೊಂಡ ಮೇಲೆ ಬೇಟೆಯನ್ನು ಒಂದು ವೃತ್ತಿಯನ್ನಾಗಿ ರೂಢಿಸಿಕೊಂಡನು. ಮಧ್ಯಯುಗೀನ ಭಾರತದ ಚರಿತ್ರೆಯಲ್ಲಿ ಬೇಟೆ ಸಾಂಸ್ಕೃತಿಕ ಪರಿವರ್ತನೆ ಮತ್ತು ರಾಜಪ್ರಭುತ್ವಕ್ಕೆ ಒಂದು ಹೊಸ ತಿರುವಾಗಿ ಪರಿಣಮಿಸಿತು. ಆದರೆ ಈ ವಿಷಯ ಚರಿತ್ರೆಯಲ್ಲಿ ಸರಿಯಾದ ಸ್ಥಾನವನ್ನು ಪಡೆದಿಲ್ಲ. ಕೆಲವು ಶಾಸನಗಳು, ವಿದೇಶಿ ಬರಹಗಳು, ಕನ್ನಡ ಕಾವ್ಯಗಳು ಹಾಗೂ ಹಲವಾರು ಸ್ಮಾರಕಗಳಲ್ಲಿ ಬೇಟೆಯ ಉಲ್ಲೇಖವಿರುವುದು ಗಮನಾರ್ಹ ಸಂಗತಿ.

ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹರಿಹರ ಮತ್ತು ಬುಕ್ಕರು ಬೇಟೆಗೆಂದು ಕಾಡಿಗೆ ಹೋದಾಗ ಮೊಲವೊಂದು ನಾಯಿಯನ್ನು ಎದುರಿಸಿ ನಿಂತಿತು ಎಂಬ ಐತಿಹ್ಯವೊಂದು ಪ್ರಚಲಿತದಲ್ಲಿದೆ. ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದ ಬೇಟೆ ಬಗ್ಗೆ ಹಂಪೆಯ ವಿರೂಪಾಕ್ಷ ದೇವಾಲಯ, ಹಜಾರರಾಮ, ವಿಜಯವಿಠಲ, ಕೃಷ್ಣ, ಅಚ್ಚುತ, ಮಾಲ್ಯವಂತ, ಮಹಾನವಮಿ ದಿಬ್ಬಗಳಲ್ಲಿನ ಉಲ್ಲೇಖಗಳನ್ನು ನೋಡಬಹುದು. ವಿಜಯನಗರ ವಾಸ್ತುಶಿಲ್ಪದಲ್ಲಿ ಬೇಟೆ ಚಿತ್ರಣವು ಆರಾಧನಾ ವೃತ್ತಿಯಾಗಿದ್ದಿತೆಂದು ಹೇಳಬಹುದು. ವರಹವು ವಿಜಯನಗರದ ರಾಜ ಲಾಂಛನವಾಗಿರುವುದು ಇದನ್ನು ಸಮರ್ಥಿಸುತ್ತದೆ.

ವಿಜಯನಗರ ಕಾಲದಲ್ಲಿ ಬೇಡ, ತಳವಾರ, ಗುರಿಕಾರ ಮೊದಲಾದವರು ರಾಜನೊಂದಿಗೆ ತಾವೂ ಸಹ ಬೇಟೆಗೆ ಹೋಗುತ್ತಿದ್ದರು. ಸಂಗಮ ವಂಶದ ಹರಿಹರ ಮತ್ತು ಬುಕ್ಕರಾಯ ಹಾಗೂ ಪ್ರೌಢದೇವರಾಯ ಮೊದಲಾದವರು ಬೇಟೆಯಲ್ಲಿ ನಿಪುಣರಾಗಿದ್ದರು.

ಹಾಗೆಯೇ ಪಶುಪಾಲನೆ ಸಹ ವಿಜಯನಗರ ಕಾಲದಲ್ಲಿ ಆರ್ಥಿಕ ದೃಷ್ಟಿಯಿಂದ ಹೆಚ್ಚು ಲಾಭದಾಯಕವಾಗಿತ್ತು. ಪಶುಗಳ ಪೋಷಣೆಗೆಂದೇ ಕೆಲವು ಪ್ರದೇಶಗಳನ್ನು ಮೀಸಲಾಗಿಡುತ್ತಿದ್ದರು. ತುಂಗಭದ್ರ, ಕೃಷ್ಣಾ, ಕಾವೇರಿ ಮೊದಲಾದ ನದಿಗಳ ಪರಿಸರವೇ ಅಲ್ಲದೆ ಅನೇಕ ಕೆರೆಗಳ ದಡಗಳು, ಹುಲ್ಲುಗಾವಲುಗಳು, ಬೆಟ್ಟದ ತಪ್ಪಲು ಪ್ರದೇಶ ಕಾಡಂಚಿನ ಭಾಗ ಪಶುಗಳ ಮೇವಿಗಾಗಿ ಇದ್ದ ಪ್ರದೇಶಗಳು.

ವಿಜಯನಗರದ ಅವಧಿಯಲ್ಲಿ ಆಂಧ್ರಮೂಲದ ಶ್ರೀಶೈಲ ಪರ್ವತದ ತಪ್ಪಲಿನ ಪ್ರದೇಶದಿಂದ ಬಂದ ದನಗಾಹಿಗಳು ಕರ್ನಾಟಕದ ಚಿನ್ನಗರಿ ನದೀ ಅನುಕೂಲದಿಂದಾಗಿ ನೆಲೆ ನಿಂತ ಪ್ರದೇಶ, ಮುತ್ತಿಗಾರಹಳ್ಳಿ. ಇವರೆಲ್ಲ ಬುಡಕಟ್ಟು ಜನರು. ಇವರ ಜೀವನ ಕ್ರಮವನ್ನು ಅರಿತ ವಿಜಯನಗರದ ಅರಸರು ಸುಮಾರು 300 ಎಕರೆ ಅರಣ್ಯ ಪ್ರದೇಶವನ್ನು ಇವರಿಗೆ ಮೇವಿಗಾಗಿ ಬಿಟ್ಟುಕೊಟ್ಟರು. ಕೀಲಾರಿಗಳೆಂದು ಕರೆಸಿಕೊಳ್ಳುವ ಈ ಬುಡಕಟ್ಟು ಜನರು ಪಶುಪಾಲಕರಾಗಿ ಬಯಲಿನಲ್ಲಿ ಜೀವನ ನಡೆಸುತ್ತಾರೆ. ಇವರು ಇರುತ್ತಿದ್ದು ಹೀಗೆ - ಬರೀ ಮೈ, ಕೈಯಲ್ಲಿ ಉದ್ದನೆಯ ಕೋಲು, ಸೊಂಟಕ್ಕೆ ಚಲ್ಲಣ, ಹೆಗಲ ಮೇಲೆ ಕಂಬಳಿ ಮತ್ತು ತಲೆಗೊಂದು ಮುಂಡಾಸು.

ಇವರೇ ಮುಂದೆ ವಿಕಾಸಗೊಂಡು ಬೇಡರು, ತಳವಾರರು, ಸೈನಿಕರು, ದಂಡನಾಯಕರು ಆಗಿ ನಾಯಕತನ ಅಮರನಾಯಕತನ, ನಾಯಕಾಚಾರ್ಯ ಎಂದು ಹಂತ ಹಂತವಾಗಿ ಬೆಳೆದರೆನಿಸುತ್ತದೆ.

ವಿಜಯನಗರದ ಅರಸರು ಯಾವುದೇ ವೃತ್ತಿಯನ್ನು ಕೇವಲವೆಂದು ಪರಿಗಣಿಸಿದವರಲ್ಲ ಬದಲಿಗೆ ಆಯಾ ವೃತ್ತಿಯನ್ನು ಮಾಡುವ ಪ್ರತಿ ಜಾತಿಯನ್ನು ಅವರು ಗೌರವಿಸಿದರು. ಸಾಧ್ಯವಾದೆಡೆ ಅವುಗಳ ಸಾಕ್ಷ್ಯಚಿತ್ರಗಳನ್ನು ಕೆತ್ತಿಸಿದರು. ಈ ವಿವರಗಳನ್ನು ಡಾ. ವಿರೂಪಾಕ್ಷ ಪೂಜಾರ ಹಳ್ಳಿಯವರು ವಿಸ್ತಾರವಾಗಿ ದಾಖಲಿಸಿದ್ದಾರೆ.[1]

## 6.1. ಬೇಟೆ

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಬೇಟೆ ಉತ್ತುಂಗ ಶಿಖರ ಮುಟ್ಟಲು ಕಾರಣ ಆಳರಸರು ಮತ್ತು ಜನಸಾಮಾನ್ಯರು ಬೇಟೆಯನ್ನು ಒಂದು ಪ್ರಮುಖ ವಿಷಯವಾಗಿ ಅವಲಂಬಿಸಿದ್ದರಿಂದ. ಈ ಕುರಿತಂತೆ ನಮಗೆ ಅನೇಕ ಆಧಾರಗಳು ಲಭ್ಯವುಂಟು. ಪುರಾತತ್ವ ಆಧಾರಗಳಲ್ಲಿ, ಶಾಸನ, ವೀರಗಲ್ಲು, ಮಹಾಸತಿ ಕಲ್ಲು, ನಾಣ್ಯ, ಶಿಲ್ಪ, ಚಿತ್ರಕಲೆ, ದೇವಾಲಯ ಮತ್ತು ಅವಶೇಷಗಳನ್ನು ಹೆಸರಿಸಬಹುದು. ಇವುಗಳ ವಿಚಾರವಾಗಿ ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಯಲ್ಲಿ ನೋಡಿದರೂ, ಪ್ರಮುಖವಾಗಿ ಹಂಪಿ, ಕಂಪ್ಲಿ, ಕಾಮಲಾಪುರ, ಮರಿಯಮ್ಮನಹಳ್ಳಿ, ಗುಡೇಕೋಟೆ ಮತ್ತು ಲೇಪಾಕ್ಷಿ ಮುಂತಾದ ಸ್ಥಳಗಳನ್ನು ಗಮನಿಸಬಹುದು. ಸಾಹಿತ್ಯ ಆಧಾರಗಳು ಎರಡು ಬಗೆಯವು. ದೇಶಿಯ ಮತ್ತು ವಿದೇಶಿ ಸಾಹಿತ್ಯ. ವಿದೇಶಿ ಆಧಾರಗಳಲ್ಲಿ ಭಾರತಕ್ಕೆ ಭೇಟಿ ನೀಡಿದ ಪ್ರವಾಸಿಗಳ ನೆನಪುಗಳಲ್ಲಿದ್ದ ಬೇಟೆಯ ಉಲ್ಲೇಖಗಳನ್ನು ಗುರುತಿಸಬಹುದು. ದೇಶಿಯ

ಸಾಹಿತ್ಯ ಆಧಾರಗಳಲ್ಲಿ ತೆಲುಗು, ತಮಿಳು, ಸಂಸ್ಕೃತ ಮತ್ತು ಕನ್ನಡ ಕೃತಿಗಳನ್ನು ಅವಲೋಕಿಸಬಹುದು. ಮಧ್ಯಕಾಲೀನ ಸಂದರ್ಭದಲ್ಲಿ ವಿಜಯನಗರ ಆಸ್ಥಾನದ ಕವಿಗಳು ಕಂಡ ಪ್ರಾಣಿಗಳ ವರ್ಣನೆಯ ಪ್ರಸಂಗಗಳು ವಾಸ್ತವಕ್ಕೆ ಕೈಗನ್ನಡಿಯಾಗಿವೆ.

ವಿಜಯನಗರ ಕಾಲದ ಅರಮನೆ, ಕೋಟೆ ಕೊತ್ತಲ, ಸಾರ್ವಜನಿಕ ಕಟ್ಟಡ, ದೇವಾಲಯ, ಗೋಪುರ, ಕಲ್ಯಾಣ ಮಂಟಪ, ವಸಂತ ಮಂಟಪ, ಕಂಬಗಳ ಮಂಟಪ, ಕೆರೆ ಕಟ್ಟೆ, ಕಾಲುವೆ ಪಟ್ಟಣ, ಅಣೆಕಟ್ಟು ಮತ್ತು ವಾಸದ ಮನೆಗಳ ಅವಶೇಷಗಳು ಹಂಪಿ ಪರಿಸರದಲ್ಲಿ ಕಂಡುಬರುತ್ತವೆ. ಹಂಪೆ ವಿರೂಪಾಕ್ಷ ದೇವಾಲಯದಲ್ಲಿ ಅದ್ಭುತವಾದ ವರ್ಣಚಿತ್ರಗಳಿವೆ. ಅಲ್ಲದೆ ಉಬ್ಬುಶಿಲ್ಪಗಳು ಕಂಬಗಳಲ್ಲಿ ಕೆತ್ತಿರುವ ದೃಶ್ಯಗಳು ಮನಮೋಹಕವಾಗಿವೆ. ಅರ್ಜುನನು ನೀರಿನಲ್ಲಿ ಮೀನಿನ ಪ್ರತಿಬಿಂಬವನ್ನು ನೋಡಿ ಮೀನಿಗೆ ಗುರಿಯಿಟ್ಟು ಬಾಣ ಬಿಡುತ್ತಿರುವುದು, ಮಹಾರಂಗಮಂಟಪದಲ್ಲಿ ಹಂಸ, ಕುದುರೆಗಳಲ್ಲದೆ ಬೇಟೆಗಾರ್ತಿ ಮತ್ತು ಯೋಧರ ಸ್ತಬ್ಧ ಚಿತ್ರಗಳಿವೆ.[1a] ಮಹಾನವಮಿ ದಿಬ್ಬದ ಶಿಲ್ಪಗಳಲ್ಲಿ ಆನೆಗಳು, ಒಂಟೆಗಳು, ಕುದುರೆಗಳ ಸವಾರರು, ಚಾಕರರು, ಬಾತುಕೋಳಿ, ಬೇಟೆಯ ದೃಶ್ಯ ಮೊದಲಾದ ಉಬ್ಬು ಕೆತ್ತನೆಯಿಂದ ಅಲಂಕಾರ ಮಾಡಿರುತ್ತಾರೆ.[2] ವಿಜಯನಗರದ ಸ್ಮಾರಕಗಳಲ್ಲಿ ಮಹತ್ವವಾದ ಮತ್ತು ಅಚ್ಚಳಿಯದೇ ಇರುವ ಒಂದು ಬಾಗಿಲಿಗೆ 'ಬೇಟೆಕಾರರ ಹೆಬ್ಬಾಗಿಲು' ಎಂದು ಹೆಸರಿಟ್ಟಿರುವುದನ್ನು ನೋಡಿದರೆ ಬೇಟೆಯ ಪ್ರಭಾವ ಎಷ್ಟಿತ್ತೆಂಬುದನ್ನು ಊಹಿಸಬಹುದು. ಈ ಬೇಟೆಕಾರರ ಹೆಬ್ಬಾಗಿಲು 'ಸಿಂಗಾರದ ಹೆಬ್ಬಾಗಿಲಿ'ನಂತೆ ಪ್ರಧಾನವಾದ ಮಹಾದ್ವಾರವೆನಿಸಿದೆ.

ವಿಜಯನಗರ ಕಾಲದ ಲೇಪಾಕ್ಷಿಯ ವೀರಭದ್ರ ದೇವಾಲಯದಲ್ಲಿ ಶಬರ ಶಂಕರ ದೃಶ್ಯದ ಚಿತ್ರಗಳಿವೆ. ಅರ್ಜುನ ಮತ್ತು ಶಿವ ಮೂಕ ದಾನವ (ವರಾಹ)ಕ್ಕೆ ಬಿಲ್ಲಿಂದ ಬಾಣ ಬಿಡುವ, ಸತ್ತ ಹಂದಿಗಾಗಿ ಹೋರಾಡುವ ಸನ್ನಿವೇಶವನ್ನು ಕೆತ್ತಲಾಗಿದೆ. ಉಬ್ಬು ಚಿತ್ರಗಳಲ್ಲಿ ಅರ್ಜುನ - ಶಿವ ಮಾಯಾ ವರಾಹಕ್ಕಾಗಿ ಮಲ್ಲಯುದ್ಧ ಮಾಡುವುದು ಅದ್ಭುತವಾಗಿದೆ. ಶಿವ - ಪಾರ್ವತಿಯರು ಅರ್ಜುನನಿಗೆ ಪಾಶುಪತಾಸ್ತ್ರ, ಅಂಜನಾಸ್ತ್ರಗಳನ್ನು ನೀಡಿ ನಂದಿವಾಹನವೇರಿ ತೆರಳುವ ಉಬ್ಬುಶಿಲ್ಪ ಮನನೀಯವಾಗಿದೆ. ಗೋಪಾಲಕನು ಶಿವನಿಗೆ ನಮಸ್ಕರಿಸುವುದು ಮುಂತಾದ ಪೌರಾಣಿಕ ಕಥೆಗಳ ದೃಶ್ಯಗಳನ್ನು ಕೆತ್ತಿದ್ದಾರೆ. ಮೊದಲೇ ತಿಳಿಸಿರುವಂತೆ ಹಂಪೆಯ ಮಹಾನವಮಿ ದಿಬ್ಬದಲ್ಲಿ ಬೇಡ - ಬೇಡತಿಯರಿಬ್ಬರೂ ಜಿಂಕೆಗಳನ್ನು ಬಿಲ್ಲು - ಬಾಣದಿಂದ ಹೊಡೆಯುವ ಅಪೂರ್ವ ದೃಶ್ಯಗಳನ್ನು ನೋಡಬಹುದು. ಬೇಟೆಯಲ್ಲಿ ಸತ್ತ ಪ್ರಾಣಿಯನ್ನು ಕೋಲಿಗೆ ಕಟ್ಟಿಕೊಂಡು ಇಬ್ಬರು ಕೋಲನ್ನು ಏರಿಸಿಕೊಂಡು ಹೆಗಲ ಮೇಲೆ ಹೊತ್ತು ಮನೆಗೊಯ್ಯುವರು. ಬೇಟೆ ಒಯ್ಯುವವರ ಮುಂದೆ ಇನ್ನೊಬ್ಬ ಬೇಟೆಗಾರ ಬಂದು ಬಿಲ್ಲಿಡಿದು ಪೌರುಷದಿಂದ ಹೋರಾಡುವ ರೀತಿಯಲ್ಲಿ ನಡೆಯುವನು. ಇನ್ನೊಂದು ಕಡೆ ಜೋಡಿಯಾಗಿ ಬೇಟೆಯಾಡುವುದು, ಎದುರ - ಬದುರು ಪರಸ್ಪರ ವಿರುದ್ಧವಾಗಿರುವ ಪ್ರಾಣಿಗಳ (ಜಿಂಕೆ) ಬೇಟೆ, ಏಕಾಂಗಿ ವೀರನೊಬ್ಬ ಹುಲಿಬಾಯಲ್ಲಿ ದೊಡ್ಡ ಆಯುಧ ಇಡುವ ದೃಶ್ಯಗಳು ಗಮನೀಯವಾಗಿವೆ.

ಈ ಮಹಾನವಮಿ ದಿಬ್ಬದ ಮತ್ತೊಂದು ಬದಿಯಲ್ಲಿ ಮೂರು ಜನ ಬೇಡ - ಬೇಟೆಗಾರರು ಬಿಲ್ಲಿಡಿದು ಬೇಟೆ ನಾಯಿಯೊಂದಿಗೆ ಕಾಡಿನ ಪ್ರಾಣಿಗಳನ್ನು ಹಿಂಬಾಲಿಸುವ ದೃಶ್ಯ ಅದ್ಭುತವಾಗಿದೆ.[3]

ಹಜಾರರಾಮ ದೇವಾಲಯದ ದ್ವಾರಬಾಗಿಲ ಪಕ್ಕದಲ್ಲಿ ಹಂದಿ, ಚಿಗರೆ ಬೇಟೆ ಶಿಲ್ಪಗಳಿವೆ. ಕಂಪ್ಲಿ ಸೋಮೇಶ್ವರ ದೇವಸ್ಥಾನದಲ್ಲಿ ಬೇಟೆಯ ಉಬ್ಬುಶಿಲ್ಪಗಳಿವೆ. ವಿಜಯನಗರ ಕಾಲಕ್ಕೆ ಸೇರಿದ ಗುಡೆಕೋಟೆಯ ಆಂಜನೇಯ ದೇವಾಲಯದ ಬೇಟೆ ಶಿಲ್ಪವು ಸಹಾ ಸೊಗಸಾಗಿದೆ. ಮರಿಯಮ್ಮನಹಳ್ಳಿಯ ಆಂಜನೇಯ ದೇವಾಲಯದಲ್ಲಿ ಹುಲಿಬೇಟೆ ವೀರಗಲ್ಲಿದೆ. ಹೀಗೆ ಅನೇಕ ಶಾಸನ, ವೀರಗಲ್ಲು, ಮಹಾಸತಿ ಕಲ್ಲು, ಉಬ್ಬು ಶಿಲ್ಪ, ದೇವಾಲಯ ಮತ್ತು ಕಂಬಗಳಲ್ಲಿ ಬೇಟೆ ದೃಶ್ಯಗಳು ಕಂಡುಬರುತ್ತವೆ. ವಿಜಯನಗರದ ಅರಸ ಎರಡನೇ ವೆಂಕಟನ ಆಸ್ಥಾನದಲ್ಲಿದ್ದ ರಾಮಾಜಿ ತಿರುಮಲೆ ಎಂಬುವನು ಪ್ರಭುವಿನ ಪ್ರೀತ್ಯರ್ಥವಾಗಿ ಆನೆಮಲೆ, ಏಳಿಮಲೆ ಮತ್ತು ಶಬರಿಮಲೆಗಳಲ್ಲಿ ಬೇಟೆಯಾಡುತ್ತಿದ್ದನಂತೆ. ದಕ್ಷಿಣದ ಆಲೆಮಲಬೆಟ್ಟಗಳಲ್ಲಿ ಜೀವಿಸುತ್ತಿರುವ ಪೊಲೈಯನ್ ಜನಾಂಗ ಮತ್ತು ಪರಾಂಬಿಕ್ಕಳಮ್‌ನಲ್ಲಿ ಜೀವಿಸುವ ಕಾಡರ್ ಸಮುದಾಯಗಳಲ್ಲಿ ಬೇಟೆ ಜೀವಂತವಾಗಿದೆ. ಇಲ್ಲಿರುವ ಜನಾಂಗಗಳನ್ನು ಕಕೇಸಿಯನ್ನರು, ಮಂಗೋಲಾಯಿಡ್ ಮತ್ತು ನೀಗ್ರೋ ಎಂದು ಗುರುತಿಸಿದ್ದಾರೆ.

ವಿಜಯನಗರ ಕಾಲದ ಸ್ಥಳೀಯ ಆಡಳಿತದಲ್ಲಿ ಬೇಡ - ನಾಯಕರ ಪಾತ್ರ ದೊಡ್ಡದು. ನಾಯಕ, ನಾಯಕತನ, ಮಹಾನಾಯಕಾಚಾರ್ಯರು, ರಾಜ ಮತ್ತು ಗ್ರಾಮಾಧಿಕಾರಿಗಳ ನಡುವಣ ಕೊಂಡಿಯಾಗಿದ್ದು, ಅವರ ಮೇಲಣ ಮೇಲ್ವಿಚಾರಕ ಅಧಿಕಾರ ಹೊಂದಿದ್ದರು. ಇವರು ರಾಜನು ಬೇಟೆಗೆ ಹೊರಡುವಾಗ ತಮ್ಮ ಬೇಡಪಡೆಯನ್ನು ಸಿದ್ಧಗೊಳಿಸಿ ಬೇಟೆಗೆ ಹೊರಡುತ್ತಿದ್ದರು. ಅಲ್ಲದೆ ನವರಾತ್ರಿ ಹಬ್ಬದಲ್ಲಿ ೨೫ ಕೋಣ, ೪೫೦ ಕುರಿಗಳನ್ನು ಬಲಿ ಕೊಡುತ್ತಿದ್ದರು.

ಕನ್ನಡ ಸಾಹಿತ್ಯ ಮತ್ತು ವಿದೇಶಿಯರ ವೃತ್ತಾಂತಗಳಲ್ಲಿ ಬೇಟೆಯ ಸಂದರ್ಭಗಳನ್ನು ವಿಜಯನಗರ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಅವಲೋಕಿಸಬಹುದು. ವಾರ್ಥಮ ಎಂಬ ಪ್ರವಾಸಿ ಈ ಜಾಗವು ಬೇಟೆಗೂ, ಹಕ್ಕಿಗಳನ್ನು ಹಿಡಿಯಲೂ ಬಹಳ ಚೆನ್ನಾಗಿದ್ದು ಎರಡನೆಯ ಸ್ವರ್ಗದಂತಿದೆ ಎಂದಿರುವನು. ಇವನಂತೆ ಬಾರ್ಬೋಸ ಈ ಸಾಮ್ರಾಜ್ಯದ ಜನರು ಒಳ್ಳೆಯ ಬೇಟೆಗಾರರು, ಕ್ರೂರ ಮೃಗಗಳ ಮತ್ತು ಹಾರುವ ಹಕ್ಕಿಗಳ ಬೇಟೆಯಲ್ಲಿ ಸಮರ್ಥರು ಎಂದು ತಿಳಿಸಿದ್ದಾನೆ. ೧೪೪೧ರಲ್ಲಿ ಅಬ್ದುಲ್ ರಜಾಕ್‌ನು ಆನೆಗಳನ್ನು ಹಿಡಿಯುವ ಬಗ್ಗೆ ಉಲ್ಲೇಖಿಸಿರುವನು. ಪೆರ್ನಾವ್‌ನೂನಿಜ್ ದೇವರಾಯ ಹಂಪೆಯಲ್ಲಿ ದೇವಾಲಯ ಕಟ್ಟಲು ಬೇಟೆಯೇ ಕಾರಣ ಎನ್ನುತ್ತಾನೆ. ದೇವರಾಯ ಬೇಟೆಯಾಡುತ್ತಾ ಒಂದು ಸ್ಥಳಕ್ಕೆ ಬಂದಾಗ ಅಲ್ಲಿ ಮೊಲವು ಬೇಟೆಯ ನಾಯಿಯನ್ನು ಹಿಮ್ಮೆಟ್ಟುವುದು ಕಂಡು ಆಶ್ಚರ್ಯಪಟ್ಟನಂತೆ.[4]

ಬೇಟೆಯು ಮಾನವನಿಗೆ ಆಹಾರದ ಮೂಲಾಧಾರವಾಗಿ, ಮನೋರಂಜನೆಯ ಹವ್ಯಾಸವಾಗಿ ಸಾಹಸ ಪ್ರದರ್ಶನದ ಸಾಧನವಾಗಿ ಜನಜೀವನದೊಂದಿಗೆ ಬೆಳೆದು ಬಂದಿದೆ. ಒಂದು ಕಾಲದಲ್ಲಿ ಜನರು ಹಸಿವನ್ನು

ಹಿಂಗಿಸಿಕೊಳ್ಳಲು ಆಹಾರಕ್ಕಾಗಿ ಮೃಗಗಳನ್ನು ಕೊಲ್ಲುವುದೂ ಅಲ್ಲದೆ ತಮ್ಮ ಉಳಿವಿಗಾಗಿ ಕ್ರೂರ ಮೃಗಗಳೊಂದಿಗೆ ಹೋರಾಡುವುದು ಅನಿವಾರ್ಯವಾಗಿತ್ತು. ಬೇಟೆಯಾಡುವುದು ಒಂದು ವಿನೋದವೂ ಆಗಿತ್ತು. ಈ ಕಲೆಗಾರಿಕೆಗೆ ಮೃಗಾಯ ವಿನೋದವೆಂದು ಕರೆಯುತ್ತಿದ್ದರಲ್ಲದೆ, ಅದು ಕ್ಷತ್ರಿಯ ಧರ್ಮವೂ ಆಗಿತ್ತೆಂದು ಹೇಳಬಹುದು. ಕಾಡಿನಲ್ಲಿ ಮೃಗಗಳ ಹಾವಳಿ ತೀವ್ರವಾದಾಗ ಬೇಡರು ರಾಜನ ಬಳಿ ಬಂದು ರಕ್ಷಣೆಗಾಗಿ ಬೇಟೆ ಅನಿವಾರ್ಯವೆಂದು ಕೋರಿದಾಗ, ರಾಜ ಒಪ್ಪಿ ಅವರೊಂದಿಗೆ ಬೇಟೆಗೆ ಹೋಗುತ್ತಾನೆ. ಉದಾ: 'ಇಕ್ಕಿ ಹಣೆಗೆ ರಾಯಗೆ ಲೀಲೆ ಮಿಕ್ಕು ಭಿನ್ನವಿಸಿದನಿಂತು ಲೆಕ್ಕವಿಲ್ಲದ ಮೃಗತತಿ ಬಂದ ತಳಿಯೊಳ (ಳು) (ಬೇಲಿ, ಪಾಳಯ) ಪೊಕ್ಕುದು ಚಿತ್ತೈಸೆಂದ ಲೀಲೆಯಿಂದುಡು ಗೋರತೆ ಗೊಟ್ಟವನಿಗೆ ಭೂಪಾಲ ಪೊಯ್ಯಲು ಭೇರಿಯನು'. ಎಂಬ ಕಾವ್ಯದ ನಿದರ್ಶನದಂತೆ ಹಿಂದಿನ ಕಾಲದಲ್ಲಿ ಅರಸರ ಬೇಟೆಗಾಗಿ ಕೆಲವು ಕಾಡುಗಳನ್ನು ಪ್ರತ್ಯೇಕಿಸಿ ಕಾಯ್ದಿರಿಸುತ್ತಿದ್ದರು.[5] ಈ ಪ್ರಯತ್ನ ಕಾಡುಪ್ರಾಣಿಗಳನ್ನು ಉತ್ಕೃಷ್ಟವಾಗಿ ಬೆಳಸಿ ಅರಸನನ್ನು ಬೇಟೆಗೆ ಹುರಿದುಂಬಿಸಿ ಕೊಲ್ಲಿಸುವ ಪ್ರವೃತ್ತಿ ರಾಜನ ಗುಣಗಳನ್ನು ಶೌರ್ಯವನ್ನು ಹೆಚ್ಚಿಸುವುದಾಗಿತ್ತು.

ವಿಜಯನಗರದ ಅರಸರು ಬೇಟೆಯಲ್ಲಿ ಪ್ರವೀಣರಾಗಿದ್ದರೆಂಬುದಕ್ಕೆ ಅವರಿಗಿದ್ದ ಬಿರುದುಗಳೇ ಸಾಕ್ಷಿ. ಎರಡನೇ ದೇವರಾಯ (ಪ್ರೌಢಪ್ರತಾಪದೇವರಾಯ) ಮಹಾರಾಯನಿಗೆ ಗಜವೇಂಟೆಕಾರ, ಗಜವೇಂಟೆಗಾರ ದೇವೇಂದ್ರ ಎಂಬ ಬಿರುದುಗಳಿದ್ದವು. ೨ನೇ ದೇವರಾಯ ೧೪೩೪ರಲ್ಲಿ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲೂಕಿನ ಮಚ್ಚೇನಹಳ್ಳಿಗೆ ಬೇಟೆಗೆಂದು ಬಂದಾಗ ಜಟ್ಟಂಗಿ ರಾಮೇಶ್ವರ ದರ್ಶನ ಮಾಡಿ, ತನ್ನ ಬೇಟೆಯ ಕುರುಹಾಗಿ ೭೦ ವರಹಗಳ ಆದಾಯ ಬರುವ ಒಂದು ಭೂಮಿಯನ್ನೆ ಉಂಬಳಿಯಾಗಿ ಕೊಟ್ಟನು. ೧೫೦೪ರ ಸಂದರ್ಭ ಉಮ್ಮತ್ತೂರಿನ ಮಹಾಮಂಡಲೇಶ್ವರ ನಂಜರಾಜ ಒಡೆಯರು ಗಜವೇಂಟೆಕಾರ ಬಿರುದು ಪಡೆದಿದ್ದರು. ಮೈಸೂರು ಸಂಸ್ಥಾನದ ರಾಜ ಇಮ್ಮಡಿ ರಾಜ ಒಡೆಯರಿಗೆ ಆನೆ ಮತ್ತು ಜಿಂಕೆಗಳ ಕ್ರೀಡೋತ್ಸವವನ್ನು ಏರ್ಪಡಿಸಿದ್ದರು. ಅವರಿಗೆ 'ಗಜಮಾರ್ಗ ವಿಹಾರ' ಎಂಬ ಬಿರುದಿತ್ತು.[6] ಯಾವುದೇ ಅರಸರ ಕಾಲದಲ್ಲಿ ಸಾಮಾನ್ಯ ವ್ಯಕ್ತಿ ಗಜವೇಂಟೆಯನ್ನಾಡಿದರೂ ಅವರಿಗೆ ಅಂಥ ಮಹತ್ವವಿರಲಿಲ್ಲ. ಆದರೆ ರಾಜನಾದವ ಅಲ್ಪವಾಗಿ ಸಾಧಿಸಿದರೆ ಸಾಕು ಅವರಿಗೆ ಬಿರುದು ಬಾವಲಿಗಳ ಸುರಿಮಳೆಗೈಯುತ್ತಾರೆ. ರಾಜನಿಗೆ ಕೊಡುವ ಗೌರವವು ಅದಾಗಿತೆನ್ನಬಹುದು. (ವಿಜಯನಗರ ಕಾಲದಲ್ಲಿ ಬೇಟೆ ವಿರೂಪಾಕ್ಷ ಪೂಜಾರಹಳ್ಳಿ)

ವಿಜಯನಗರ ಕಾಲದ ಸಂಸ್ಕೃತಿಯ ಬಗ್ಗೆ ಬೆಳಕು ಚೆಲ್ಲುವ 'ಸಾಮ್ರಾಜ್ಯಲಕ್ಷ್ಮಿ ಪೀಠಿಕಾ' ಎಂಬ ಸಂಸ್ಕೃತ ಗ್ರಂಥದ ಬಗ್ಗೆ ರಾಧಾಕೃಷ್ಣಮೂರ್ತಿ ಅವರು ಹೇಳುವ ಕೆಲವು ವಿವರಗಳಲ್ಲಿ ರಾಜನಾದವನಿಗೆ ತಿಳುವಳಿಕೆ ಇರಲೇಬೇಕಾದ ಕೆಲವು ಕ್ಷೇತ್ರಗಳ ಉಲ್ಲೇಖವಿದೆ. ರಾಜನ ಪಟ್ಟಾಭಿಷೇಕ, ರಾಜನ ನಿತ್ಯ ಕಾರ್ಯಗಳು, ಯುದ್ಧ ಸ್ಥಿತಿ, ಅಶ್ವವಿದ್ಯೆ, ಗಜವಿದ್ಯೆ, ರಥಗಳು, ಹಬ್ಬಗಳು, ಹರಕೆಗಳು ಉಪಾಸನೆ ಯಾತ್ರಾಸ್ಥಳಗಳು ಅಶುಭ ಸೂಚನೆಗಳು ಅರಣ್ಯಗಳು, ಅರಮನೆಗಳು, ಬೇಟೆ, ರಾಜ್ಯದ ಅಧಿಕಾರಿಗಳು ಮುಂತಾದ ವಿಷಯಗಳು ವಿಸ್ತಾರವಾಗಿವೆ. ಒಬ್ಬ ರಾಜಕುಮಾರನು ತಿಳಿಯಲೇಬೇಕಾದ ಅನೇಕ ಸುದ್ದಿ ಸಮಾಚಾರಗಳಿವೆ.

ರಾಜಶೇಖರ ವಿಳಾಸ ಶಿವಪಂಚಾಕ್ಷರಿ ಮಹತ್ವವನ್ನು ಸಾರುವ ಕಾವ್ಯ. ಇದರಲ್ಲಿ ಮೃಗಯಾ ವರ್ಣನೆ ಪ್ರಾಸಂಗಿಕವಾಗಿ ಬರುತ್ತದೆ. ಪ್ರಾಯೋಗಿಕ ಮೃಗಯಾ ಅಥವಾ ಶಿಕಾರಿಯ ವರ್ಣನೆ ಜಾಣ್ಮೆಗೆ ಕನ್ನಡಿಯಾಗಿದೆ. ಪುಳಿಂದ ನಾಯಕ ಬೇಟೆಗೆ ಒಗ್ಗೂಡುವ ಸಂದರ್ಭ, ಶಕ್ತಿ ಸ್ವರೂಪ, ಹಲ್ಲು, ಉಬ್ಬು, ದೇಹ, ಕೆಂಪಾದ ಕಣ್ಣುಗಳು, ದಪ್ಪ ಮೀಸೆ, ಆನೆಯ ಕುಂಭಸ್ಥಳ, ಮುತ್ತಿನ ಸರ, ಬಿಲ್ಲು, ಬಾಣ, ಚಪ್ಪಲಿ, ಬೇಟೆ ನಾಯಿಗಳು ಶಬರ ನಾಯಕ, ಬೇಟೆಗಾರರ ಪಡೆ, ಬಲೆ, ಪ್ರಾಣಿಗಳ ಪ್ರಜ್ಞೆ ತಪ್ಪಿಸುವುದು, ಬಡಿಗೋಲು, ಮದ್ದು ಹಾಕುವ ತಂಬಾಕು, ಕಲ್ಲು ಬೀಸುವ ಕವಣೆ, ದೊಡ್ಡ ಬಲೆ, ಚೂಪಾದ ಗಾಳ, ಕತ್ತಿ, ಗುರಾಣಿ, ದೀಹದ ಜಿಂಕೆ, ಕಲ್ಲಿನ ಉಳಿ, ದೀಪ, ದೀಹದ ಗಿಡುಗ, ಮುಂತಾದ ಬೇಟೆಯ ಸಂಗತಿಗಳನ್ನು ತಿಳಿಸಿದ್ದಾನೆ.

ಕಾಡಿನ ಪ್ರಾಣಿಗಳ ಹೆಜ್ಜೆ ಗುರುತುಗಳಿಂದ ಬೇಟೆಯಾಡುವ ತಂತ್ರವನ್ನು ಹೇಳಿದ್ದಾನೆ. ಬೇಡಪಡೆಯವರು ಪ್ರಾಣಿಯ ಹೆಜ್ಜೆಗಳನ್ನು ಗುರುತಿಸಿ ಆ ಪ್ರಾಣಿಗಳನ್ನು ಹಿಡಿದು ಕೊಲ್ಲುತ್ತಾರೆ. ಅವುಗಳಲ್ಲಿ ಜಿಂಕೆ, ಮೊಲ, ಆನೆ, ಹೆಬ್ಬುಲಿ, ಪಕ್ಷಿ, ಖಡ್ಗಮೃಗ, ತೋಳ, ಸಿಂಹ ಮುಂತಾದವು ಪ್ರಮುಖವಾಗಿವೆ. ಬೇಟೆಯ ನಿಮಿತ್ತ ಬೇಹುಗಾರರು, ಸೋವತರು, ಚಲನವಲನ, ಸಂಕೇತ - ಸಂಜ್ಞೆಗಳ ಪ್ರಾಣಿಕೊಂದ ಸಂಕೇತಕ್ಕೆ 'ಸನ್ನೆಬೇಂಟೆ' ಎಂದಿದ್ದಾರೆ. ಕನ್ನಡದ ಪ್ರಾಚೀನ ಕವಿಗಳೆಲ್ಲರೂ ಮೃಗಯಾದ ಪರವಾಗಿದ್ದರೆ ಷಡಕ್ಷರ ಮೊತ್ತಮೊದಲ ಬಾರಿಗೆ ವಿರೋಧವಾಗಿಯೂ ಹೇಳಿಕೆ ನೀಡಿ ವನ್ಯಜೀವಿಗಳ ಬಗ್ಗೆ ಕಾಳಜಿ, ಪ್ರೀತಿ ತೋರಿದ್ದಾನೆ.[7]

ಹೀಗೆ ವಿಜಯನಗರ ಪೂರ್ವ ಮತ್ತು ವಿಜಯನಗರ ಕಾಲದಲ್ಲಿ ಬೇಟೆ ಕುರಿತಂತೆ ಕನ್ನಡ ಕವಿಗಳು, ವಿದೇಶಿ ಪ್ರವಾಸಿಗಳು ವರ್ಣಿಸಿರುವುದು ಕಂಡುಬರುತ್ತದೆ. ಸಾಮ್ರಾಜ್ಯದಲ್ಲಿ ನಾಯಕತನ ಪಾಳೆಗಾರಿಕೆ ಇರುವಂತೆ ಬೇಟೆಗಾರರು ಎನ್ನುವ ಪ್ರತ್ಯೇಕ ವರ್ಗ ಇದ್ದಿತು. ಇದೇ ಭಾಗದಲ್ಲಿ ವಿಜಯನಗರ ಕಾಲದಲ್ಲಿ ಹೆಚ್ಚು ಜನಪ್ರಿಯವು, ಲಾಭದಾಯಕವು ಆಗಿದ್ದ ಮೀನುಗಾರಿಕೆ ಕುರಿತಂತೆ ವಿವರವಾಗಿ ಚರ್ಚಿಸಲಾಗಿದೆ.

## 6.2. ಮೀನಿನ ಬೇಟೆ

ಪ್ರಾಚೀನ ಕಾಲದಿಂದಲೂ ಗಂಗ ಮತಸ್ಥರು, ಕಬ್ಬಲಿಗ, ಕಬ್ಬೇರ, ಬಾರಿಕ, ಬೆಸ್ತರು, ಗಂಗಪುತ್ರ, ಮೊಗವೀರ, ಮುಂಡಾರು ಮತ್ತು ಅಂಬಿಗ ಮತ್ತಿತರರು ಮೀನು ಹಿಡಿಯುವ ವೃತ್ತಿಯಲ್ಲಿದ್ದವರು. ಸ್ಥಿತ್ಯಂತರಗೊಂಡು ಸಾಂಸ್ಕೃತಿಕ ಪಲ್ಲಟಗಳಾಗಿರುವುದು ಸತ್ಯ. ಹರಗೋಲು ನಡೆಸುವ ಅಂಬಿಗ / ಮೀನು ಹಿಡಿಯುವ ಬೆಸ್ತರು ಇಂದು ಮೂಲ ವೃತ್ತಿಗಳಲ್ಲಿಲ್ಲ. ವರ್ಣಸಂಕರವಾದಂತೆ ವೃತ್ತಿಸಂಕರವಾದಂತಾಗಿದೆ. ಇವರು ಬೇಸಾಯವಲ್ಲದೆ, ಸುಣ್ಣದ ಭಟ್ಟಿಯ ಕೆಲಸ ಮಾಡುತ್ತಿದ್ದರು. ಕೆರೆಯಿಂದ ಭೂಮಿಗೆ ನೀರು ಬಿಡುವ ನೀರುಗಂಟೆಯ ಕರ್ತವ್ಯವನ್ನು ಸಹಾ ನಿರ್ವಹಿಸುತ್ತಿದ್ದರು.

ಬೆಸ್ತರಂತೆ ಕಿಳ್ಳೆಕ್ಯಾತರು ಸಹಾ ಹುಟ್ಟು ಮೀನುಗಾರರು. ಜೊತೆಗೆ ತೊಗಲು ಬೊಂಬೆಯಾಡುವವರು. ಇವರು ಮಹಾರಾಷ್ಟ್ರದ ಮೂಲದವರಾಗಿದ್ದು, ಬಾಂಬೆಯಿಂದ ಬಂದಿರುವ ಮರಾಠಿ ವಂಶದವರೆಂದು ಹೆಸರಾಗಿದ್ದಾರೆ. ಬೇಟೆ, ಆಹಾರ ಸಂಗ್ರಹಣೆ, ವಿನೋದ, ಕ್ರೀಡೆ, ಕೃಷಿಗಳಲ್ಲಿ ಜೀವಮಾನವನ್ನು ಸವೆಸಿದವರು.

ಉತ್ತರ ಕರ್ನಾಟಕ, ಮೈಸೂರು ಮತ್ತು ಶಿವಮೊಗ್ಗ ಭಾಗಗಳಲ್ಲಿ ಬೆಸ್ತರು ವ್ಯಾಪಕವಾಗಿದ್ದಾರೆ. ಇವರು ಬಲೆಗಳ ಸಹಾಯದಿಂದ ಮೀನುಗಾರಿಕೆ ಮಾಡುತ್ತಿದ್ದರು. ಕರ್ನಾಟಕದ ಪೂರ್ವ ಜಿಲ್ಲೆಗಳಲ್ಲಿ ಬೆಸ್ತರೆಂದು, ದಕ್ಷಿಣ ಭಾಗದಲ್ಲಿ ಕಬ್ಬೇರ ಮತ್ತು ಗಂಗ ಮಕ್ಕಳೆಂದು ಉಲ್ಲೇಖಿಸಲಾಗಿದೆ. ಬೆಸ್ತರು ಕೆಲವು ಭಾಗಗಳಲ್ಲಿ ತೆಲುಗು ಮಾತನ್ನಾಡುತ್ತಾರೆ.

ಬೆಸ್ತರ ಮೂಲದ ಬಗ್ಗೆ ಅನೇಕ ಕತೆಗಳಿವೆ. ವರುಣ ಮತ್ತು ಸಪ್ತ ಋಷಿ ಸನ್ಯಾಸ ಸಮಾರಂಭದಲ್ಲಿ ಭಾಗವಹಿಸಿದ್ದರೆಂಬ ದಂತ ಕತೆಗಳಿವೆ. ಇವರು ಈಶ್ವರ, ಭೂಮಿ, ಪ್ರಾಣಿ, ಗಂಗೆಯನ್ನು ಪೂಜಿಸುತ್ತಿದ್ದು ಸುಪರ್ಣರಾಜ, ಗುರಾಹಾಜ ಮತ್ತು ಸುತ ಎಂಬ ೩೨ ಆಯುಧಗಳಿದ್ದವು. ಇವರಿಗೆ ಸೂತ ಕುಲದವರೆಂದು ಹೆಸರಿದೆ. ಸೂತಕುಲದವರು ತಿಳಿಸುವಂತೆ ದೋಣಿಯಲ್ಲಿ ವರುಣ ಮತ್ತು ಗಂಗಾ ಬಂದರಂತೆ. ಮತ್ತೊಂದು ಕತೆ ಸತ್ಯವತಿಗೆ ಸಂಬಂಧಿಸಿದ್ದು, ತಳವರ್ಗದ ಅಂಬಿಗನ ಮಗಳು ಈ ಸತ್ಯವತಿ. ಇವಳು ಭೀಷ್ಮನ ಚಿಕ್ಕಮ್ಮ. ಗಂಗೇಯನ ಹೆಂಡತಿ. ಇವರಲ್ಲಿ ದುಷ್ಯಂತ, ನಿಷಾದ, ಪಾರಸವ, ದೇಶಿ ಅಥವಾ ಮಾರ್ಗಶೈಲಿ ಇತ್ತು. ಮನು ತಿಳಿಸುವಂತೆ ದುಷ್ಯಂತನು ಕ್ಷತ್ರಿಯನ ಮಗ, ತಾಯಿ ಬ್ರಾಹ್ಮಣ ವಂಶದವಳು. ನಿಷಾದ ಮೀನುಗಾರಿಕೆ ಮತ್ತು ಪ್ರಾಣಿಗಳ ಕೊಂದು ಜೀವಿಸುತ್ತಿದ್ದನು. ಅಂಬಿಗರು ನಿಷಾದದ ಮಕ್ಕಳೆಂದು, ಶ್ರೇಷ್ಠಕುಲವೆಂದು ಖ್ಯಾತವಾಗಿರುವುದು ಸ್ಪಷ್ಟ. ಪ್ರಾಚೀನ ಕಾಲದಿಂದಲೂ ಗಂಗಾದೇವಿಯನ್ನು ಇವರು ಆರಾಧಿಸುತ್ತಾರೆ. ಕುಮಾರರಾಮನನ್ನು ಅಂಬಿಗ (ಬೇಡ)ರು ಮನೆದೇವರಾಗಿ ಪೂಜಿಸುವರು.

ಬೆಸ್ತರಲ್ಲಿ ಎರಡು ಪಂಗಡಗಳಿವೆ. ತೆಲುಗು ಬೆಸ್ತರು ಮತ್ತು ಕನ್ನಡ ಬೆಸ್ತರು. ಹಿಂದೂ ಧರ್ಮದ ವ್ಯಾಪ್ತಿಯಲ್ಲಿ ಬರುವ ಶೈವ ಮತ್ತು ವೈಷ್ಣವ ಪಂಥಗಳೊಂದಿಗೆ ಬೆರೆತಿರುವರು. ಬೆಸ್ತರು ರಾಜಕೀಯ, ಸಾಂಸ್ಕೃತಿಕ ಚರಿತ್ರೆಯಲ್ಲಿ ಸ್ಪಷ್ಟವಾಗಿ ದಾಖಲಾಗಿಲ್ಲ. ಇವರ ರೂಢಿ ಮತ್ತು ಸಂಪ್ರದಾಯಗಳು ತುಂಬಾ ಮಹತ್ವವಾದವುಗಳು.

ತೊರೆ ಬೆಸ್ತರು - ಸುಣ್ಣದ ಭಟ್ಟಿ

ತೆಲುಗು ಬೆಸ್ತರು - ರಾಜರಿಗೆ ಕೊಡೆ, ಛಾಮರ

ಸರಾಯಿ ಬೆಸ್ತರು - ಅರಿಶಿನ ಬೆಸ್ತರು ಬೀಸುತ್ತಿದ್ದರು

- ಎಂಬ ಬೆಡಗು ಮತ್ತು ಕುಲಾಚಾರಗಳಿದ್ದವು. ಕೌಂಡಿನ್ಯ ಮತ್ತು ಕಷ್ಯಪ ಗೋತ್ರದವರಿದ್ದರು. ಇವರಲ್ಲಿ ಬಾಲ್ಯವಿವಾಹ, ದೇವದಾಸಿ ಪದ್ಧತಿಗಳಿದ್ದವು. ಬೆಸ್ತರು ತಮ್ಮ ಕುಲದ ಮುಖ್ಯಸ್ಥರಿಗೆ ೧೮ ಪಣ ಕೊಡಬೇಕಿತ್ತು. ಬೆಸ್ತರವೇ ಆದ ಪ್ರತ್ಯೇಕ ವ್ಯಾಪಾರ ಶ್ರೇಣಿ ಇತ್ತು. ಇವರ ಸಂಪ್ರದಾಯಗಳು ತೀರಾ ವಿಚಿತ್ರವಾಗಿದ್ದವು.

ವಿಜಯನಗರ ಕಾಲದ ಮೀನುಗಾರಿಕೆ ಕಡಲತೀರದಲ್ಲಿಯೂ ಯತೇಚ್ಛವಾಗಿ ಇದ್ದಿರಬೇಕು. ಈ ಬಗ್ಗೆ ಖಚಿತ ಆಕರಗಳು ದೊರೆತಿಲ್ಲ. (ಭಟ್ಕಳ, ಹೊನ್ನಾವರ, ಬಾರಕೂರು, ಮಂಗಳೂರು ಇತರ ರೇವು ಪಟ್ಟಣಗಳು).

ಹಂಪೆಯ ಪರಿಸರದ ತುಂಗಭದ್ರಾ ನದಿ ಆಸುಪಾಸಿನಲ್ಲಿ ಮಾತ್ರ ಮೀನುಗಾರಿಕೆ ಮತ್ತು ಅಂಬಿಗತನವಿದ್ದ ಬಗ್ಗೆ ಶಾಸನ, ಸಾಹಿತ್ಯ ಹಾಗೂ ವಿದೇಶಿ ಪ್ರವಾಸಿಗರು ತಿಳಿಸಿರುವುದು ಗಮನಾರ್ಹ.

ಮೀನು ಬೇಟೆ ವಿಜಯನಗರ ಕಾಲದಲ್ಲಿ ಯುದ್ಧದಷ್ಟೇ ಸಂಭ್ರಮವನ್ನು ಬಯಸಿತ್ತು. ಇದು ಉಪವೃತ್ತಿಯಾಗಿದ್ದರೂ ಕೆಲವೊಂದು ವರ್ಗಗಳಿಗೆ ಜೀವನಾಶ್ಯಕ ವೃತ್ತಿಯಾಗಿ, ರಾಜ್ಯಕ್ಕೆ ಆದಾಯ ತರುವ ಕಸುಬಾಗಿತ್ತು. (ವಿಧಾನ) ವಿದೇಶಿ ವಿದ್ವಾಂಸರು ಹೇಳಿರುವಂತೆ, ರಾಜನು ಯುದ್ಧಕ್ಕೆ ಹೋಗುವ ಸಿದ್ಧತೆಯಂತೆ ಬೇಟೆಯಲ್ಲಿಯೂ ಅದೇ ರೀತಿ ಸಾಹಸವನ್ನು ಪ್ರದರ್ಶಿಸುತ್ತಿದ್ದನಂತೆ. ಮೀನುಗಾರಿಕೆಯನ್ನು ನದಿ, ಕೆರೆ, ಕಟ್ಟೆಗಳಲ್ಲದೆ, ಸಮುದ್ರದಲ್ಲಿ ಮಾಡಿ ಲಾಭಗಳಿಸಿರಬೇಕು. ಹೀಗಾಗಿ ಮೀನುಗಾರಿಕೆ ಈ ಕಾಲವು ಹದವಾಗಿದ್ದು ಉತ್ತಮ ಪರಿಸರವನ್ನು ನಿರ್ಮಿಸಿತ್ತು. ಬೇಟೆಗಾರರು, ತಳವಾರರು ಇರುವಂತೆ ಅಂಬಿಗರು, ಬೆಸ್ತರು ಸಹಾ ಮೀನುಗಾರಿಕೆ ಮತ್ತು ಹರಗೋಲು ನಡೆಸಿ ಜೀವಿಸುತ್ತಿದ್ದರು. ಅಂದು ಮೀನುಗಾರರ ಮತ್ತು ಅಂಬಿಗರ ವ್ಯಾಪಾರ ಶ್ರೇಣಿಗಳಿದ್ದವು.

**ಸಾಹಿತ್ಯ ಆಕರಗಳು :** ಹರಿಹರನ ಗಿರಿಜಾಕಲ್ಯಾಣ, ರಾಘವಾಂಕನ ಹರಿಶ್ಚಂದ್ರಕಾವ್ಯ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ, ಮೊದಲಾದ ಕಾವ್ಯಗಳು ಮೀನು ಬೇಟೆ ಬಗ್ಗೆ ಬೆಳಕು ಚೆಲ್ಲುತ್ತವೆ. ಬೇಡರು ಮತ್ತು ಬೆಸ್ತರಿಗೆ ಬೇಟೆ ಹಾಗೂ ಮೀನುಗಾರಿಕೆ ಆಹಾರ ಮಾಧ್ಯಮದ ಏಕೈಕ ವೃತ್ತಿಯಾಗಿದ್ದಿರಬೇಕು. ಕಾವ್ಯಗಳಲ್ಲಿಯೂ ಇವರ ಉಲ್ಲೇಖಗಳಿರುವುದು ಸ್ಪಷ್ಟ.

ಕನಕದಾಸರು 'ಮೋಹನ ತರಂಗಿಣಿ'ಯಲ್ಲಿ ಮೀನುಗಾರಿಕೆ ಬಗ್ಗೆ ತಿಳಿಸುತ್ತಾರೆ: ಜಲಗಾರ, ಮೀನು ಈ ಸಂಬಂಧ ಇನ್ನು ಅನೇಕ ಸಂಗತಿಗಳನ್ನು ಅಲ್ಲಲ್ಲಿ ಮನೋಜ್ಞವಾಗಿ ಮೆಲುಕಿ ಹಾಕಿದ್ದಾನೆ. ಇವನ ಕಾಲಕ್ಕೆ ಈ ವೃತ್ತಿ ಲೋಕಸೃಷ್ಟಿಯಿಂದ ಮಾನ್ಯವಾದಂತಿದ್ದು, ಕನಕದಾಸ ಒಬ್ಬ ನಿಪುಣ ಬೇಟೆಗಾರನಂತೆ ಕಾಣುತ್ತಾನೆ.

೧. **ಮಾಣಿಕ ಮೆಯ್ವಣ್ಣದ ಚಾಯ ಮೀನಕಂ**
**ಡಾಣಿಕಾರಿಕೆ ನಾಸ್ಥಾನಕ್ಕೆ ತಂದು ಕೈ ಗಾಣಿಕೆ ಕೊಟ್ಟ ಶಂಬರಗೆ (೩೪-೧೨೯)**

೨. **ಮೀನು ತಂದವಗೆ ಬೇಡಿಗ ವಸ್ತುಗಳ ಕೊಟ್ಟು**
**ಭೂನಾಥ ತಾತ್ಪರಿಯಲ್ಲಿ ತಾನೊರ್ವ ಹೆಗ್ಗಡತಿಯು ಕೈಯ ಕಳುಹಿದ**
**ಬೋನದ ಮನೆಗೀವುದೆನುತ (೨೬-೧೨೬)**

ಎಂದು ಮೀನು ತಂದವರಿಗೆ ಹಣ ಬದಲಿಗೆ ಇಷ್ಟವಾದ ವಸ್ತುಗಳ ಮೂಲಕ ವಿನಿಮಯ ಮಾಡಿಕೊಳ್ಳುತ್ತಿದ್ದರೆಂಬುದನ್ನು ತನ್ನ ಕೀರ್ತನೆಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

ವಿಜಯನಗರಕ್ಕೆ ಭೇಟಿಕೊಟ್ಟ ಅನೇಕರ ಪೈಕಿ ಅಬ್ದುಲ್ ರಜಾಕ್, ಫೆರಿಸ್ತಾ, ನಿಕಟಿನ್, ಡೊಮಿಂಗ್ ಪಾಯಸ್ ಮೊದಲಾದವರು ಪ್ರಮುಖರು. ಅವರು, ಇಲ್ಲಿನ ಮೀನುಗಾರಿಕೆ ಬಗ್ಗೆ ಹೇಳಿದ್ದಾರೆ. ವಾಸ್ಕೋಡಿಗಾಮಾ ೧೫೦೪ರಲ್ಲಿ ಭಾರತಕ್ಕೆ ಬಂದಾಗ ಪೋರ್ತುಗಲ್‌ನ ರಾಜನನ್ನು ಸಮುದ್ರದ ಒಡೆಯನೆಂದು ಬಣ್ಣಿಸಿದ್ದಾನೆ. ಭಾರತೀಯ ಕರಾವಳಿಯಲ್ಲಿ ದೊಡ್ಡ ನೌಕೆಯೊಂದರಲ್ಲಿ ೧೦೦ ಪ್ರಯಾಣಿಕರನ್ನು ನೌಕೆ ಮತ್ತು

ನಾವಿಕರನ್ನು ನಾಶಪಡಿಸಿದ. ಅವರು ಅಕ್ಟೋಬರ್ ೨೯ರಂದು ಕಾಲಿಕಟ್ ತಲುಪಿದ ಕೂಡಲೆ ನಗರದ ಮೇಲೆ ಗುಂಡಿಮಳಗೆರೆದು, ಬಂದರಿನಲ್ಲಿ ನಿರಾಕ್ಷೇಪ ಮೀನುಗಾರರನ್ನು ಸೆರೆಹಿಡಿದು ಅವರಲ್ಲಿ ೮೦೦ ಜನರನ್ನು ಪಾಶವಿಕ್ರೂರತೆಯಿಂದ ಕೊಂದ.[9] ಡೊಮಿಂಗೊ ಪಯಾಸ್ 'ಪುರೋಹಿತ ಬ್ರಾಹ್ಮಣರು ಮೀನನ್ನು ತಿನ್ನುತ್ತಿರಲಿಲ್ಲ' ಎಂದಿದ್ದಾನೆ.

ಪಯಾಸ್ ಮುಂದುವರೆದು 'ಈ ನಗರದ ಉತ್ತರ ದಿಕ್ಕಿಗೆ ಬಹಳ ನೀರುಳ್ಳ ದೊಡ್ಡ ನದಿಯಿದೆ ಅದರಲ್ಲಿ ವಿಪುಲ ಮೀನುಗಳಿವೆ'. ಆ ಮೀನುಗಳು ಅನಾರೋಗ್ಯಕರವಾಗಿವೆ ಎನ್ನುತ್ತಾನೆ.[10]

**ಅ. ಮೀನು ಬೇಟೆಯ ಸ್ವರೂಪ :** ಬೇಟೆಗಾರ ಬೇಟೆ ಪ್ರಾಣಿಗಿಂತಲೂ ಚಾಣಾಕ್ಷ ಮತ್ತು ಅತೀ ಬುದ್ಧಿವಂತನಾಗಿ ಪ್ರದರ್ಶನಗೊಳ್ಳುತ್ತಾನೆ. ಕಣ್ಣಿನ ದೃಷ್ಟಿ, ಶಬ್ದ ಗ್ರಹಿಕೆ, ಸದೃಢದೇಹ ಮನಸ್ಸು ಏನೆಲ್ಲಾ ಅರ್ಹತೆಗಳು ಬೇಟೆಗಾರನಿಗಿವೆ. ಅವನು ನೀರಿನಲ್ಲಿ ಮೀನಿನ ಸಂಚಲನ, ವಾಸದ ನೆಲೆ, ಆಯಕಟ್ಟಿನ ಜಾಗಗಳನ್ನು ಪತ್ತೆ ಹಚ್ಚುವುದು ಕಠಿಣದ ಕೆಲಸ. ಬೇಟೆಗಾರ ನೀರಿನಲ್ಲಿ ಮೀನನ್ನು ಹಿಡಿಯುವುದು ಪರಿಣತಿಯ ಕೆಲಸ. ಕಣ್ಣಿಗೆ ಕಂಡರೂ ನೀರಿನಲ್ಲಿ ಮೀನು ಹಿಡಿಯುವಾಗ ಪರಿಕರಗಳು ಅಗತ್ಯ. ಗಾಳ, ಕೊಳೆ, ಬಲೆಗಳ ಮೂಲಕ ಮೀನನ್ನು ಹಿಡಿಯುವುದರಲ್ಲಿ ಅವರು ಪರಿಣಿತರೆಂಬುದು ಸ್ಪಷ್ಟ.[11]

ಬೇಟೆಯಾಡುವಾಗ ಇನ್ನಿತರ ಪರಿಕರಗಳು ಅಗತ್ಯ. ಅವುಗಳ ಸಹಾಯದಿಂದಲೇ ಪ್ರಾಣಿಗಳನ್ನು ಪಳಗಿಸುತ್ತಾರೆ. ತೆಳುವಾದ ಬಂಬು, ನುಗ್ಗೆಯ ಕೋಲುಗಳ ಮೂಲಕ ತೆಪ್ಪ ಕಟ್ಟಿ ದಡ ಸೇರಿಸುತ್ತಿದ್ದರು. ಹೆಚ್ಚಾಗಿ ಮೀನುಗಾರಿಕೆಗೆ ಬಲೆ, ಗಾಳ, ಕೊಳೆ ಮೊದಲಾದ ಪರಿಕರಗಳನ್ನು ಪ್ರಯೋಗಿಸುತ್ತಾರೆ.

ಜಲಚರಗಳನ್ನು ಬಲೆಗಳಿಂದ ಹೆಚ್ಚಾಗಿ ಬೇಟೆಯಾಡುತ್ತಾರೆ. ಬಲೆ ಅರ್ಧ ಚಂದ್ರಾಕಾರವಾಗಿರುತ್ತದೆ. ಈ ಬಲೆಗಳು ಮೊಲ, ಮೀನು ಮೊದಲಾದವುಗಳಿಗೆ ಮೃತ್ಯುಪಾಷವೆನಿಸಿವೆ. ಮೀನಿನ ಬಲೆಗಳು ೨-೩ ರೀತಿಯಲ್ಲಿವೆ. ದೊಡ್ಡ ಬಲೆಗೆ ಎರಡು ಗಾಳಗಳನ್ನು ಕಟ್ಟಿ ಇಬ್ಬರು ವ್ಯಕ್ತಿಗಳು ನೀರಿನಲ್ಲಿ ಎಳೆಯುವಾಗ, ಕೆಲವು ಬೇಟೆಗಾರರು ನೀರಿನಲ್ಲಿ ಈಜುತ್ತಾ ಬಂದು ಬಲೆಯನ್ನು ಎತ್ತಿ ದಡಕ್ಕೆ ತಂದು ಮೀನನ್ನು ಹೊರತೆಗೆದು ರಾಶಿಹಾಕುತ್ತಾರೆ. ಮತ್ತೊಂದು ಸಣ್ಣ ಅಥವಾ ಕೊಂಡ್ಲ ಬಲೆ, ಚಿಕ್ಕ ದೊಡ್ಡ ಬಲೆಗಳನ್ನು ಸುಲಭವಾಗಿ ಹಿಡಿಯುವ ಬಲೆ. ಇದು ೩ ಅಡಿ ಅಗಲವಿದ್ದು, ಸುಮಾರು ಮೀಟರುಗಳವರೆಗೆ ಉದ್ದವಿರುತ್ತದೆ.

ಗಾಳದಿಂದ ಮೀನು ಹಿಡಿಯುವಾಗ ಉದ್ದವಾದ ಕೋಲಿಗೆ ದಾರಕಟ್ಟಿ ಆ ದಾರದ ತುದಿಗೆ ಚೂಪಾದ ತಂದಿ ರೂಪದ (ಮುಳ್ಳಿನಾಕಾರದ) ಗಾಳವನ್ನು ಕಟ್ಟಿ ಅದಕ್ಕೆ ಎರೆಹುಳವನ್ನು ಏರಿಸಿ ನೀರಿನಲ್ಲಿ ಬಿಡುತ್ತಾರೆ. ಮೀನು ಆ ಹುಳವನ್ನು ನುಂಗಿದಾಗ ಸಿಕ್ಕಿಕೊಳ್ಳುತ್ತದೆ. ಆಗ ಮೇಲಕ್ಕೆತ್ತಿ ಮೀನನ್ನು ಪಡೆಯುತ್ತಾರೆ.

**ಕೂಳೆ ಬೇಟೆ :** ತೆಂಗಿನಗರಿಯನ್ನು ಕಡ್ಡಿ ಅಥವಾ ತೆಳುವಾದ ಕೋಲಿನ ಕಡ್ಡಿಗಳಿಂದ ಕೂಳೆಯನ್ನು ತಯಾರಿಸುತ್ತಾರೆ. ಇದನ್ನು ಹರಿಯುವ ನೀರಿಗೆ ಅಡ್ಡಲಾಗಿಟ್ಟು ಅದರ ಮೇಲೆ ಭಾರವಾದ ವಸ್ತುವನ್ನಿಟ್ಟಿರುತ್ತಾರೆ. ಕೂಳೆಯಲ್ಲಿ ನೀರು ಸರಾಗವಾಗಿ ಹೊರಗಡೆ ಹೋಗುವಾಗ ಜೊತೆಗೆ ಬಂದ ಮೀನು ಅದರಲ್ಲಿ

ಸಿಕ್ಕಿಹಾಕಿಕೊಳ್ಳುತ್ತದೆ. ಹೊರಗಡೆ ಹೋಗಲು ಅವಕಾಶವಿರುವುದಿಲ್ಲ. ಹೆಚ್ಚಾಗಿ ಕಾಲುವೆ, ಕೆರೆ, ಬೂದುಗಳಿಗೆ ಇದನ್ನು ಹಾಕುತ್ತಾರೆ.

ಇಂಗೂಳಿ, ಹೆಗ್ಗೂಳಿ, ಕಿರುಗೂಳಿ ಎಂದು ಕೂಳಿಗಳಲ್ಲಿ ಹಲವು ವಿಧ. ಜಾಲಗಳಿಂದ ಉದ್ದವಾದ ಬಿಗಿದ ಸಿಲುಕಂಬಿನಿಂದ ಸೊಗಡು ಗೂಳುಗಳಿಂದ ಮೀನು ಹಿಡಿಯುವ ವಾಸನೆಯುಳ್ಳ ಬುಟ್ಟು, ಮದ್ದುಗಳನ್ನು ಮಸಕದಿಂದ ಆಹಾರದಲ್ಲಿ ವಿಷ ಬೆರೆಸಿ ನದಿ, ಕಾಲುವೆ, ಬಾವಿಗಳಲ್ಲಿ ಮೀನನ್ನು ಸುಲಭವಾಗಿ ಹಿಡಿಯಬಹುದಾಗಿದೆ. ರಸಾಯನಿಕ ವಸ್ತು, ವಿಷಪೂರಿತ ದ್ರವ, ಅನಿಲಾಂಶಗಳನ್ನು ನೀರಿನಲ್ಲಿ ಕಲಿಸಿದರೆ ಮೀನುಗಳು ತಲ್ಲಣಗೊಂಡು ಗಲಿಬಿಲಿ ಎದ್ದು ಸಾಯುತ್ತವೆ ಇಲ್ಲವೆ ಬೇಟೆಗಾರನ ಬಲೆಗೆ ವಶವಾಗುತ್ತವೆ.

**ಆ. ಮೀನಿನ ವಿಧಗಳು :** ಸಾಹಿತ್ಯ ಕೃತಿಗಳಲ್ಲಿ ತಿಳಿಸಿರುವಂತೆ, ವಿಜಯನಗರ ಕಾಲದಲ್ಲಿ ಬಾಳ, ಚಿತ್ತರೆ, ಮೊಟ್ಟು, ಉಸಗತಕ್ಕಡಿ, ನೆತ್ತಿ ಮೇಲೆ ಕಣ್ಣಿರುವ ಮೀನು, ಬುರ್ದೆಗೊಟ್ಟು, ಗೊದ್ಲೆ, ಬಿಳಸೆ, ಹೊಟ್ಟುಟ್ಟೆ ಬಡ್ಡುಗ, ಹಾವು ಮೀನು, ಉಲುಸೆ ಇತರ ತಳಿಗಳ ಮೀನುಗಳಿದ್ದವು.

ರಾಜಪ್ರಭುತ್ವದಲ್ಲಿ ಮೀನುಗಾರಿಕೆಗೆ ಅಷ್ಟು ಬೇಡಿಕೆ ಇದ್ದಂತಿರಲಿಲ್ಲ. ಆರಂಭದಲ್ಲಿ ಆಹಾರಕಷ್ಟೆ ಸೀಮಿತವಾಗಿತ್ತು. ಹಿಂದಿನ ಕಾಲದಲ್ಲಿ ಆಳರಸರು ಮೀನುಗಾರರ ಮುಖಂಡರಿಗೆ ಇಂತಿಷ್ಟು ಕೆರೆ, ಸಮುದ್ರದಲ್ಲಿ ಮೀನು ಬೇಟೆಯಾಡಬೇಕೆಂದು ಪರವಾನಿಗಿ ಕೊಡುತ್ತಿದ್ದರು. ಅದಕ್ಕೆ ಗುತ್ತಿಗೆ ಎನ್ನುತ್ತಾರೆ.

ರಾಜನಿಗೆ ಇಂತಿಷ್ಟು ನಿಗದಿತ ತೆರಿಗೆ ನೀಡಬೇಕಿತ್ತು. ಇಂದಿನ ಕಮಲಾಪುರ ಕೆರೆಯಲ್ಲಿಯೂ ಹಿಂದೆ ಮೀನಿನ ಬೇಟೆ ನಡೆಯುತ್ತಿತ್ತು. ಹಾಗೆಯೇ ವಿಜಯನಗರ ಸಾಮ್ರಾಜ್ಯದಲ್ಲಿ ಮೀನುಗಾರಿಕೆಯ ಗುತ್ತಿಗೆಯನ್ನು ಈ ಕೆಳಗಿನಂತೆ ಅವಲೋಕಿಸಬಹುದು.

ವಿಜಯನಗರ ಕಾಲದಲ್ಲಿ ಮೀನುಗಾರಿಕೆ ಲಾಭದಾಯಕ ಉದ್ಯಮವಾಗಿತ್ತು. ರಾಜನು ತನ್ನ ಅಧೀನದಲ್ಲಿರುವ ಕೆರೆ, ಕುಂಟೆ, ನದಿಗಳಲ್ಲಿನ ಮೀನುಗಳು ಸಾಕಾಣಿಕೆ ಮತ್ತು ಮಾರಾಟಕ್ಕೆ ಗುತ್ತಿಗೆ ಪದ್ಧತಿಯನ್ನು ಅನುಸರಿಸುತ್ತಿದ್ದರು. 'ಕೆರೆ, ಕುಂಟೆ, ಬಾವಿ, ಅಣೆಕಟ್ಟು ಮೊದಲಾದವುಗಳ ಮೇಲ್ವಿಚಾರಣೆಗೆ ಮೀನುಗಾರರನ್ನು ನೇಮಿಸಿಕೊಳ್ಳುತ್ತಿದ್ದರು. ಮೀನುಗಾರರ ಸಂಘ, ಕೆರೆಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿತ್ತು. ಮೀನುಗಾರರ ಬದುಕು ಕೆರೆಗಳೊಂದಿಗೆ ನಿಕಟ ಸಂಬಂಧ ಹೊಂದಿತ್ತು. ಮೀನುಗಾರರು ಬಹುಶಃ ಬೇರೆ ಕಸುಬನ್ನು ಕಲಿತವರಲ್ಲ. ಮೀನುಗಾರಿಕೆಯೇ ಜೀವನಾಧಾರ. ಕೆರೆಗಳಿಂದ ಬೇಟೆಯಾಡಿದ ಮೀನುಗಳನ್ನು ಮಾರಾಟ ಮಾಡಿ ಮೀನುಗಾರರ ವರ್ಗವೇ ಬೆಳೆದು ಬಂತು.

ಮೀನುಗಾರರು ಅಪ್ರತಿಮ ಚಾಣಾಕ್ಷರು ಆಗಿದ್ದರು. ಇವರು ಮೀನುಗಳ ಚಲನವಲನ, ಕೆರೆಗಳ ಬಗ್ಗೆ ಮಾಹಿತಿ, ನೆರೆ, ಪ್ರವಾಹ, ಚಂಡಮಾರುತ, ಕೆರೆಯ ಹೂಳು, ಏರು ಪೇರು, ನೀರಿನ ರಭಸ, ಪ್ರತಿಯೊಬ್ಬ ಕೆರೆಯ ಅಧಿಕಾರಿಗಳಿಗೆ 'ಕಾರಿಪಿಂಬ ತಳಿಯ ಮೀನ'ನ್ನು ಪ್ರತಿದಿನ ನೀಡುತ್ತಿದ್ದರು. ಜವಾಬ್ದಾರಿ ಸ್ಥಾನದಲ್ಲಿ

ಮೀನುಗಾರರು ಕೆರೆಯ ಒಡ್ಡಿನ ಭದ್ರತೆಯನ್ನು, ನೀರಿನ ಮಟ್ಟವನ್ನು ನೋಡಿಕೊಳ್ಳುತ್ತಿದ್ದರು. ನೀರು ಸೋರದಂತೆ ಜಾಗೃತಿ ವಹಿಸುತ್ತಿದ್ದರು. ಕೆರೆಗಳ ಹೂಳೆತ್ತುವ ಕಾರ್ಯವನ್ನು ಮೀನುಗಾರರಿಗೆ ವಹಿಸಲಾಗಿತ್ತು.

ಕೆರೆಯಲ್ಲಿ ನೀರು ಕಡಿಮೆ ಇದ್ದಾಗ ಅಧಿಕ ಮೀನುಗಳನ್ನು ಹಿಡಿಯುತ್ತಿದ್ದರು. ವಿಜಯನಗರ ಕಾಲದಲ್ಲಿ ಮೀನುಗಾರಿಕೆಯ ಗುತ್ತಿಗೆಯನ್ನು ಮೀನುಗಾರರಿಂದಲೇ ವಸೂಲಿ ಮಾಡಬೇಕೆಂದು ತಿಳಿಸಲಾಗಿದೆ. (ಹೈದರಾಬಾದಿನ ತಮಿಳು ಶಾಸನದಲ್ಲಿ, ಪು. ೧೬೫). ಕ್ರಿ.ಶ. ೧೪೧೦ರಲ್ಲಿ ತಮಿಳು ಶಾಸನವು ಮೊದಲನೆಯ ದೇವರಾಯನ ಕಾಲಕ್ಕೆ ಸೇರಿದೆ. ಮಲ್ಲಣ್ಣ ಒಡೆಯರ ಆದೇಶದಂತೆ ಮಾದರಸನೆಂಬ ಅಧಿಕಾರಿಯು ಕೆರೆಯ ಹೂಳನ್ನು ತೆಗೆಸಿ, ಅದರ ಆಳವನ್ನು ಅಧಿಕಗೊಳಿಸಿದ. ಇದರ ವೆಚ್ಚವನ್ನು ಪೆಗನ್ನವೀಡು ಅಥವಾ ವೀರನರಸಿಂಹ ಚತುರ್ವೇದಿ ಯಂಗಳಮಂ ಕೆರೆಯ ಮೀನು ಮಾರಾಟದಿಂದ ಬಂದ ಹಣದಿಂದ ಪಡೆಯಬೇಕು ಎಂದಿದೆ. ಇದರಲ್ಲಿ ನಾವು ಗಮನಿಸಬೇಕಾದ ಅಂಶವೇನೆಂದರೆ, ಹೀಗೆ ಮೀನುಗಾರರಿಂದ ಸಹಾಯ ಪಡೆದು ಕೆರೆಯ ಆಳವನ್ನು ಹೆಚ್ಚಿಸಿ, ಅಧಿಕ ನೀರನ್ನು ಸಂಗ್ರಹಿಸಿದ್ದರಿಂದ ವ್ಯವಸಾಯದಲ್ಲಿ ಅಧಿಕ ಉತ್ಪಾದನೆ ಮಾಡಲು ಅನುಕೂಲವಾಗಿತ್ತು. ಕ್ರಿ.ಶ. ೧೪೬೬ರಲ್ಲಿ ಅಕ್ಕದೇವಿ ಎಂಬ ಉನ್ನತ ಕುಲದ ಹೆಣ್ಣು ಕೆರೆಯ ಹೂಳನ್ನು ತೆಗಿಸಿ, ಇತರರಿಂದ ಸಂಗ್ರಹಿಸಿರುವಂತೆ ಮೀನು ಮಾರಾಟದಿಂದ ಬಂದ ಹಣ ಹಾಗೂ ಮೀನುಗಾರಿಕೆಯ ಗುತ್ತಿಗೆ ಪಡೆದವರಿಂದ ಹಣ ಸಂಗ್ರಹಿಸುತ್ತಿದ್ದರು. ಸಿ.ಟಿ.ಎಂ. ಕೊಟ್ರಯ್ಯನವರು ತಮ್ಮ 'ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ' ಎಂಬ ಕೃತಿಯಲ್ಲಿ ಆರ್ಕಾಟು ಜಿಲ್ಲೆಯ ತಿರುಮಲ್ಯೆ ಹಳ್ಳಿಯ ನಾಲ್ಕು ಕೆರೆಗಳ ಜೀರ್ಣೋದ್ಧಾರ ಕಾರ್ಯ ಕೈಗೊಂಡು, ಮೀನು ಮಾರಾಟ ಹಣ ಪಡೆದ ಬಗ್ಗೆ ವಿವರವನ್ನು ತಿಳಿಸಿದ್ದಾರೆ. ಕ್ರಿ.ಶ. ೧೪೪೬ರ ಇಂದಿರಾನಮ್ ಹಳ್ಳಿಯ ಒಂದು ದಾಖಲೆಯು ಮೇಲಿನ ವ್ಯವಸ್ಥೆಯಂತೆ, ತಮ್ಮ ನಾಯಕರು ಕೆರೆಯ ಹೂಳನ್ನು ತೆಗೆಸಿ ಖರ್ಚನ್ನು ಮೀನುಗಾರರಿಂದ ಪಡೆದರು. ದೇವರಾಯನ ಕಾಲದ ದಾಖಲೆಗಳಲ್ಲಿ ಕೆರೆಯ ಹೂಳನ್ನು ತೆಗೆಸಿ, ಕೆರೆಯ ಆಳವನ್ನು ಅಧಿಕಗೊಳಿಸಿದ್ದಕ್ಕೆ ಅಣ್ಣ ಉಕ್ಕೈಯಾರ ಮತ್ತು ನಾಶಿನಾಯಕರಿಗೆ ಮಾಡಿದ ವೆಚ್ಚಕ್ಕೆ ಪುಕ್ಕನ್ರಮ್ ಕೆರೆಯ ಮೀನು ಗುತ್ತಿಗೆ ಕೊಟ್ಟಿದ್ದನ್ನು ಉಲ್ಲೇಖಿಸಲಾಗಿದೆ. ಕೊಡಂಗಲ್ಲೂರಿನ ಶಾಸನದಲ್ಲಿ ದಳವಾಯಿ ಶಿವಪ್ಪನಾಯಕ ತನ್ನ ಒಡೆಯ ತಿರುಮಲನಾಯಕನ ಪುಣ್ಯಸ್ಮರಣೆಗೆ ಕೆರೆಯ ಆಳ, ಹೂಳು ತೆಗೆಸಿದ್ದು ಮೀನು ಗುತ್ತಿಗೆಯ ಹಣದಿಂದ ಎಂದು ತಿಳಿದುಬರುತ್ತದೆ.

ಕ್ರಿ.ಶ. ೧೫೩೮ ಕಲ್ಮನಾಯಕನಯ್ಯ ಪ್ರತಿನಿಧಿ ಪುಟ್ಟನಾಯಕನು ಕೆರೆಯ ಮೇಲ್ವಿಚಾರಣೆಗೆ ಮೀನುಗಾರಿಕೆಯ ಗುತ್ತಿಗೆ ಹಣವನ್ನು, ಸಿನಲೂರು ಕೆರೆಗೆ ದಾನ ನೀಡಿದ್ದನ್ನು ತಿಳಿಯಬಹುದು. ಕ್ರಿ.ಶ. ೧೫೫೭ರ ದಾಖಲೆಯಲ್ಲಿ ಪಾರುಪತ್ಯಂ ತಿರುಮಲ್ಯೆ ನಂಬಿಸಿರಮಯ್ಯಂಗಾರರ ಆದೇಶದಂತೆ ಮೀನುಗಾರರಿಂದ ಸಂಗ್ರಹಿಸಿದ ಹಣವನ್ನು ತಿರುಪ್ಪಾಲಯಪ್ಪನಾಂದಾಲ ಕೆರೆಯ ದುರಸ್ತಿಗೆ ವೆಚ್ಚ ಮಾಡಲಾಯಿತು. ಕ್ರಿ.ಶ. ೧೬೩೬ರಲ್ಲಿ ಏರಿಪಲ್ಲಿ ಮುಕುಂದರೆಡ್ಡಿ ತಿಮ್ಮಣ್ಣ ನಾಯಕನ ಪ್ರತಿನಿಧಿ ಕೆರೆಯ ಮೀನುಗಾರಿಕೆ ಗುತ್ತಿಗೆಯ ಹಣವನ್ನು ವೆಚ್ಚ ಮಾಡಿದ್ದನ್ನು ನೆನಪಿಸುತ್ತದೆ. ಹಾಗೆಯೇ ಕೆರೆಯ ದುರಸ್ತಿ ಕಾರ್ಯಗಳಿಗೆ ಮೀನುಗಾರಿಕೆಯ ಗುತ್ತಿಗೆ ಹಣ, ಮಾರಾಟದ

ಹಣ ಹಾಗೂ ಅದರ ಮೇಲೆ ಹೇರಲಾದ ಕರಗಳಿಂದ ವೆಚ್ಚವನ್ನು ಸರಿದೂಗಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಬೆಸ್ತ - ಬೇಡ - ಕಬ್ಬಲಿಗನಿಗೆ ವ್ಯತ್ಯಾಸ ಇದ್ದಂತಿಲ್ಲ.[12] ಇವರೆಲ್ಲರು ಮೀನನ್ನು ಹಿಡಿದು ವ್ಯಾಪಾರ ಮಾಡುತ್ತಿದ್ದರಲ್ಲದೆ, ಹರಗೋಲು (ದೋಣಿ) ಮೂಲಕ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಕಳುಹಿಸುತ್ತಿದ್ದರು. ಅಪಾರ ಲಾಭವನ್ನು ಪಡೆಯುತ್ತಿದ್ದಿರಬೇಕೆಂಬುದು ತಿಳಿದ ಸಂಗತಿ. ಒಳನಾಡು ಮತ್ತು ಹೊರನಾಡಿನ ವ್ಯಾಪಾರದಲ್ಲಿ ಕರ್ನಾಟಕ ಪ್ರಮುಖ ಸ್ಥಾನ ಹೊಂದಿತ್ತು. ಈ ಸಾಮ್ರಾಜ್ಯ ಮೂರು ಕಡೆ ಸಮುದ್ರವನ್ನು ಹೊಂದಿದ್ದರಿಂದ ವ್ಯಾಪಾರ ವಹಿವಾಟಿಗೆ ಅಡ್ಡಿ ಆತಂಕಗಳಿರಲಿಲ್ಲ.

ಅಬ್ದುಲ್ ರಜಾಕ್ ಹೇಳುವಂತೆ ವಿಜನಯಗರ ಸಾಮ್ರಾಜ್ಯದಲ್ಲಿ ೩೦೦ ಬಂದರುಗಳಿದ್ದವು. ಹಿಂದೂ ಮಹಾಸಾಗರದ ದ್ವೀಪುಗಳು, ಮಲಯ, ಬರ್ಮಾ, ಚೈನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಅಬಿಸೀನಿಯ ಮತ್ತು ಪೋರ್ಚುಗಲ್‌ಗಳೊಡನೆ ವ್ಯಾಪಾರ ಸಂಬಂಧವಿತ್ತು. ಮುತ್ತು ರತ್ನಗಳನ್ನು ರಫ್ತು ಮಾಡಿದಂತೆ ಒಣಗಿದ ಮೀನನ್ನು ರಫ್ತು ಮಾಡುತ್ತಿದ್ದರು. ವಿಜಯನಗರ ಕಾಲದಲ್ಲಿ ಅಂಕೋಲ, ಮಿರ್ಜಾನ್, ಹೊನ್ನಾವರ, ಭಟ್ಕಳ, ಬೈಂದೂರು, ಬಾರಕೂರು, ಬಸ್ರೂರು, ಮಂಗಳೂರು ಮತ್ತು ಕುಂಬ್ಳೆ ಮೊದಲಾದ ಪಟ್ಟಣಗಳಲ್ಲಿ ಕೃಷಿ ಉತ್ಪನ್ನಗಳು ವೃದ್ಧಿಗೊಂಡಿದ್ದವು. ಕರಾವಳಿ ತೀರದಲ್ಲಿ ಮೀನುಗಾರಿಕೆ ಅವ್ಯಾಹತವಾಗಿ ನಡೆಯುತ್ತಿತ್ತು.

ಪಾಯಸ್‌ನು 'ಪಾನ್ಸುಪಾರಿ ಬಜಾರಿನಲ್ಲಿ ಪ್ರತಿ ಶುಕ್ರವಾರ ಸಂಜೆಯಾಗುತ್ತಿತ್ತು. ಸಂತೆಯಲ್ಲಿ ಹಂದಿ, ಕೋಳಿ, ಸಮುದ್ರದಿಂದ ತಂದ ಒಣಮೀನು, ಇನ್ನು ಇತರ ಈ ದೇಶದ ನನಗೆ ಗೊತ್ತಿಲ್ಲದ ಸಾಮಾನುಗಳನ್ನು ಮಾರುತ್ತಾರೆ ಎಂದಿರುವನು'[13].

**ಇ. ಮೀನುಗಾರರ ನಿಷೇಧಗಳು :** ಮಹಾನವಮಿ ದಿನ ಮೀನುಗಾರರು ಬಲೆ, ಕೃಷಿ, ಉಪಕರಣಗಳಿಗೆ ಪೂಜೆ ಸಲ್ಲಿಸುತ್ತಾರೆ. ಫಾಲ್ಗುಣ ಮತ್ತು ಚೈತ್ರಮಾಸಗಳಲ್ಲಿ ಮೀನುಗಳು ಮೊಟ್ಟೆ ಇಡುವುದರಿಂದ (ಗರ್ಭಧಾರಣೆ) ಮೀನನ್ನು ಬೇಟೆಯಾಡುವುದು ನಿಷೇಧವಿರುತ್ತದೆ.

ಬೆಸ್ತರು ಮೂಲತಃ ಮೀನುಗಾರರು. ಇವರು ಬೀಸುವ ಬಲೆ, ಯಲಬಲೆ, ಬಿಡುವ ಬಲೆ, ಸೀಗಡೆ ಬಲೆ. ಮುಖ್ಯವಾಗಿ ಇರ ಬಲೆಗಳನ್ನು ನೀರಿನಮಟ್ಟ, ಇವು ಕಾಲಕ್ಕೆ ತಕ್ಕಂತೆ ತಾವು ರೂಢಿಸಿಕೊಂಡು ಬಂದಿರುವ ಧಾರ್ಮಿಕ ಪದ್ಧತಿ. ಮತ್ತು ರೂಢಿ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಐಕ್ಯತೆ ಮತ್ತು ಸಮಗ್ರತೆಯನ್ನು ಕಾಪಾಡಿಕೊಳ್ಳುತ್ತಾರೆಂಬುದು ಗಮನಾರ್ಹ ಸಂಗತಿ. ತಮ್ಮ ಪೂರ್ವಜರ ಆರಾಧನೆ (ವೃತ್ತಿ) ಮೂಲಕ ಇವರು ನದಿ, ಬೆಟ್ಟ, ಮರಗಳಿಗೆ ಮತ್ತು ಸಾಂಕೇತಿಕವಾಗಿ ಹರಗೋಲು ಮೀನುಗಳಿಗೆ ಪೂಜಿಸುವ ಸಂಪ್ರದಾಯದಲ್ಲಿ ವಿನೂತನ ಮಾರ್ಪಾಟುಗಳಾಗಿವೆ.

## 6.3. ಅಂಬಿಗತನ

ಅಂಬಿಗ ಎನ್ನುವುದು ಕರ್ನಾಟಕದಲ್ಲಿರುವ ಒಂದು ಜಾತಿ ಸಮುದಾಯ. ಇವರಿಗೆ ಗಂಗ ಮಕ್ಕಳು, ಕಬ್ಬೇರ, ಗಂಗಮತಸ್ಥ, ಬಾರಿಕೇರ, ಕೋಳಿ, ಬೆಸ್ತ, ಕಿಳ್ಳೆಕ್ಯಾತ ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ. ಇವರಿಗೆ ಪ್ರಾಚೀನ ಚರಿತ್ರೆ ಇರುವಂತೆ ಸಾಂಸ್ಕೃತಿಕ ಪರಂಪರೆಯೂ ಇದೆ.

ವಿಜಯನಗರ ಕಾಲದಲ್ಲಿ ಸುಣಗಾರ, ಜಾಲಗಾರ, ಗಂಗಮತಸ್ಥ, ಮಡ್ಡೇರ ಮೊದಲಾದವರು ಅಂಬಿಗ ವೃತ್ತಿಯನ್ನು ಪರಿಪಾಲಿಸುತ್ತಿದ್ದರು.[14] ಇವರಿಗೆ ಅರಸರು ಪ್ರೋತ್ಸಾಹ ನೀಡಿದ ಉಲ್ಲೇಖಗಳಿವೆ. ಶಾಸನ ಮತ್ತು ವಿದೇಶಿ ಪ್ರವಾಸಿಗರು ಹರಗೋಲಿನ ಮೂಲಕ ತಳವಾರಘಟ್ಟದಿಂದ ಆನೆಗೊಂದಿಗೆ (ವಿಠಲಾಪುರದಿಂದ) ಹೋಗುತ್ತಿರುವ ಚಿತ್ರಣವನ್ನು ದಾಖಲಿಸಿದ್ದಾರೆ. (ರಾಬರ್ಟ್ ಸಿವೆಲ್ ಪು. ೨೭೭) ವಾಲಿಭಂಡಾರ, ಶಬರಿ ಆಶ್ರಮ, ಕೇವಟ ಎಂದು ಕರೆಯುವ ಗುಹಾ (ಅಂಬಿಗ ಶ್ರೀರಾಮ ಸ್ನೇಹಿತ) ಮೊದಲಾದವರು ನೆಲೆಸಿದ್ದ ಸ್ಥಳಗಳ ಬಗ್ಗೆ ಉಲ್ಲೇಖಗಳಿವೆ. ೧೨ನೇ ಶತಮಾನದ ಅಂಬಿಗರ ಚೌಡಯ್ಯ ಈ ಕುಲಕ್ಕೆ ಸೇರಿದವನೆಂಬುದು ಗಮನಾರ್ಹ. ಆ ಕಾಲದ ಉಳವಿ ಚೆನ್ನಬಸವೇಶ್ವರರು ಆಪತ್ಕಾಲಕ್ಕೆ ಹರಗೋಲು ಸಿಗಲಿಲ್ಲವೆಂದು ಪರಿತಪಿಸಿದವರು. ವಿಜಯನಗರ ಕಾಲದ ಮೊದಲ ಘಟ್ಟದಲ್ಲಿ 'ಅಂಬಿಗತನ' ಎನ್ನುವುದು ಶಾಶ್ವತ ವೃತ್ತಿಯಾಗಿಲ್ಲ. ಆರಂಭದಲ್ಲಿ ಇವರು ಮೀನುಗಾರಿಕೆಗೆ ಒಗ್ಗಿಕೊಂಡಿದ್ದು, ಕ್ರಮೇಣ ದೋಣಿ ಹರಗೋಲುಗಳನ್ನು ಇಟ್ಟುಕೊಂಡು ಜೀವನ ಸಾಗಿಸುತ್ತಿದ್ದರು. ಈ ಅಂಬಿಗರು ರಾಜ, ಮಂತ್ರಿ, ಪ್ರತಿನಿಧಿಗಳನ್ನಲ್ಲದೆ, ಜನಸಾಮಾನ್ಯರನ್ನು ದಡಕ್ಕೆ ಸಾಗಿಸುತ್ತಿದ್ದರು. ಈ ವ್ಯವಸ್ಥಿತ ಕಾರ್ಯವೈಖರಿಯನ್ನು ಮೆಚ್ಚಿ ಅರಸರು ಇವರಿಗೆ ದಾನ ಶಾಸನ ಕೊಟ್ಟಿರುವರು. ಮ್ಯಾಸಬ್ಯಾಡ್ಕಿ ನಾಯಕತನ, ಗುರಿಕಾರ, ತಳವಾರ ವೃತ್ತಿಗಳಿದ್ದಂತೆ, ಅಂಬಿಗತನವು ಮಹತ್ವದಿಂದ ಕೂಡಿದೆ.

ವಿದೇಶಿ ಪ್ರವಾಸಿಗರು ಅಂಬಿಗತನ ಮತ್ತು ಹರಗೋಲಿನ ಬಗ್ಗೆ ನೀಡಿದ ಸಂಗತಿಗಳನ್ನು ಗಮನಿಸಬಹುದು ಸೂಕ್ತ. ಡೊಮಿಂಗೊ ಪಾಯಸ್ ಹೇಳಿರುವಂತೆ, "ಈ ನಗರದಲ್ಲಿ ರಾಜನ ಪರವಾಗಿ ಒಬ್ಬ ದಳವಾಯಿ ಇರುತ್ತಾನೆ. ಜನರು ಈ ಊರಿಗೆ ಬುಟ್ಟಿಗಳಂತೆ ದುಂಡಾಗಿರುವ ಚರ್ಮ ಹೊದೆಸಿರುತ್ತಾರೆ. ಅವುಗಳು ೧೫-೨೦ ಜನರನ್ನು ಒಯ್ಯಬಲ್ಲವು ಮತ್ತು ಅಗತ್ಯವಿದ್ದರೆ ಕುದುರೆ ಮತ್ತು ಎತ್ತುಗಳೂ ಅವುಗಳಲ್ಲಿ ದಾಟುತ್ತವೆ. ಆದರೆ, ಬಹುಮಟ್ಟಿಗೆ ಈ ಪ್ರಾಣಿಗಳು ಈಜಿ ದಾಟುತ್ತವೆ. ಜನರು ಅವುಗಳನ್ನು ಒಂದು ತರದ ಮೋಟು ಹುಟ್ಟಿನಿಂದ ಹುಟ್ಟುಹಾಕುತ್ತಾರೆ. ಮತ್ತು ಅವು ಇತರ ದೋಣಿಗಳಂತೆ ನೇರವಾಗಿ ಹೋಗಲಾರದವಾದುದರಿಂದ ಈ ದೋಣಿಗಳು ಯಾವಾಗಲೂ ದುಂಡಗೆ ತಿರುಗುತ್ತವೆ. ರಾಜ್ಯದಲ್ಲಿ ನದಿಗಳಿರುವೆಡೆಗಳಲ್ಲೆಲ್ಲಾ ಇವುಗಳನ್ನು ಬಿಟ್ಟರೆ ಬೇರೆ ದೋಣಿಗಳಿಲ್ಲ" ಎಂದಿದ್ದಾನೆ.

ವಿದೇಶಿ ಯಾತ್ರಿಕ ಬಾರ್ಬೋಸನು ವಿಜಯನಗರದಲ್ಲಿ ವೀಳೆಯದೆಲೆ ಬೆಳೆಯುವುದನ್ನು ಕುರಿತು ಹೇಳುತ್ತಾ ದಬುಲ್‌ನಿಂದ ದಕ್ಷಿಣಕ್ಕೆ ಮುಂದೆ ಮುಂದೆ ಹೋದರೆ ಬೆತಲ ನದಿ ಸಿಗುತ್ತದೆ. ಈ ನದಿಗೆ ಅಕ್ಕಪಕ್ಕ

ಸುಂದರವಾದ ತೋಟಗಳಿದ್ದವು. ಇವುಗಳಲ್ಲಿ ಅತೀ ಹೆಚ್ಚಿನ ವೀಳೆಯ ಎಲೆಯನ್ನು ಕೊಯ್ದು ಸಣ್ಣ ದೋಣಿಗಳ ಮೂಲಕ ನಾನಾ ಸ್ಥಳಗಳಿಗೆ ಸಾಗಿಸುತ್ತಿದ್ದರು.[15] ಎಂದಾಗ ದೋಣಿಗಳು ಪ್ರಯಾಣಕ್ಕಲ್ಲದೆ ವ್ಯಾಪಾರಕ್ಕೂ ಬಳಕೆಯಾಗುತ್ತಿದ್ದವು ಎನಿಸುತ್ತದೆ. ಫೆರಿಸ್ತಾನ ಪ್ರಕಾರ ನದಿ ಪ್ರವಾಹ ಬಂದಾಗ ಮತ್ತು ನೀರು ಅತಿ ಕಡಿಮೆ ಇದ್ದಾಗ ಅಶ್ವದಳ ಮತ್ತು ಆನೆಗಳ ಮೂಲಕ ಸವಾರಿ ಮಾಡಿ ನದಿ ದಾಟುತ್ತಿದ್ದರಂತೆ. ದೋಣಿ ಮತ್ತು ಹರಗೋಲುಗಳನ್ನು ವಿಜಯನಗರ ಕಾಲದಲ್ಲಿ ಯುದ್ಧಕ್ಕೆ ಬಳಸಿಕೊಂಡ ಬಗ್ಗೆ ರಾಬರ್ಟ್ ಸಿವೆಲ್ ಅವರು ಸುಲ್ತಾನನು ನದಿ ದಾಟಲು ಸುದೀರ್ಘವಾಗಿ ಆಲೋಚಿಸಿ ತನ್ನ ಅಧಿಕಾರಿಗಳ ಸಹಾಯದಿಂದ ಅನುಕೂಲವಾದ ನೂರಾರು ಅಡ್ಡಪಟ್ಟಿಗಳನ್ನು ಸಿದ್ಧಗೊಳಿಸುತ್ತಾನೆ.' ಇವು ೧೬ನೇ ಶತಮಾನದಲ್ಲಿ ನದಿಗಳ ಮೇಲೆ ಪ್ರಯಾಣಕ್ಕೆ ಬಳಸುತ್ತಿದ್ದರೆಂದು ಪಾಯಸ್ ಹೇಳಿದ್ದಾರೆ. ಇವು ಆಕಾರದಲ್ಲಿ ದುಂಡಗಿದ್ದು ಬಿದಿರು ಸೀಳಿ ಒಂದರೊಳಗೊಂದು ಹೆಣೆದು ಅದರ ಹೊರಮೈ ಪೂರ್ತಿ ಚರ್ಮದಿಂದ ಆವೃತ್ತವಾಗಿದೆ.[16]

ಯುದ್ಧದ ಸಂದರ್ಭದಲ್ಲಿ ಅಂಬಿಗರ ಪಾತ್ರ ಹಿರಿದಾದದು ಎಂದು ವಿದೇಶಿಯರು ಕೊಂಡಾಡಿದ್ದಾರೆ. ವಿಜನಯಗರದ (ದೇವರಾಯ) ಮೇಲೆ ದಾಳಿ ಮಾಡಿದ ಗುಲ್ಬರ್ಗಾದ ಫಿರೋಜಷಾ ಸುಲ್ತಾನನು ಸುಮಾರು ೪೦೦೦ ಸೈನಿಕರು ಅದಕ್ಕಾಗಿಯೇ ಸಿದ್ಧಪಡಿಸಲಾಗಿದ್ದ ದೋಣಿ ಮತ್ತು ತೆಪ್ಪಗಳಲ್ಲಿ ನದಿಯನ್ನು ದಾಟಿದ್ದರೆಂದು ಹೇಳಲಾಗಿದೆ.[17] ಮತ್ತೊಬ್ಬ ಪ್ರವಾಸಿ ಆನೆಗೊಂದಿ ನದಿ ದಾಟಿ ಹಂಪೆಗೆ ಬರುವಾಗ ಹಳೆಯ ಶಿಥಿಲಗೊಂಡ ಸೇತುವೆ ಇತ್ತು. ದೊಡ್ಡ ಗಾತ್ರದ ಕಲ್ಲುಬಂಡೆಗಳನ್ನು ಅದಕ್ಕೆ ಹಾಕಿದ್ದರು. ಅಲ್ಲಿಂದ ಹರಿಗೋಲಿನ ಮೂಲಕ ಹೊಳೆದಾಟಿ ಬರಬೇಕಿತ್ತು ಎಂದಿದ್ದಾನೆ.

**ಅ. ಅಂಬಿಗರಿಗೆ ಅರಸರ (ದಾನ) ಕೊಡುಗೆಗಳು :** ಕ್ರಿ.ಶ. ೧೫೫೬ ಮಾರ್ಚ್ ೨೭ರಂದು (೧೫೫೪) ಸದಾಶಿವರಾಯನು ಆನೆಗೊಂದಿಯ ಅಂಬಿಗರ ನಾಗಜೋಡಿ ಮತ್ತು ಬಸವಜೋಗಿಯವರಿಗೆ ಶಾಸನವನ್ನು ನೀಡಿದ ವಿವರ ಹೀಗಿದೆ: ತುಂಗಭದ್ರಾನದಿಯ ಎರಡು ದಂಡೆಗಳಾದ ಆನೆಗೊಂದಿ ಮತ್ತು ತಳವಾರಕಟ್ಟೆಯಲ್ಲಿ ಕಾರ್ಯನಿರತರಾಗಿದ್ದು, ರಾಜನಿಗೆ ವಿಜ್ಞಾಪನೆ ಮಾಡಿಕೊಂಡಲ್ಲಿ, ರಾಜನು ಇವರಿಗೆ ಆನೆಗೊಂದಿಯಲ್ಲಿ ೧೫ ಕೊಳಗ ನೀರು ಭೂಮಿಯನ್ನು ನೀಡಿ ಇದರ ಆದಾಯವನ್ನು ಇವರು ಅನುಭವಿಸುತ್ತಾ ಬ್ರಾಹ್ಮಣ, ಸಾಧು, ಸಂತರ ಸೇವೆ ಮಾಡಿಕೊಂಡಿರಬೇಕೆಂದು, ಮಕ್ಕಳು ಮೊಮ್ಮಕ್ಕಳವರೆಗೂ ಆಚಂದ್ರಾರ್ಕ್ಕರವಾಗಿ ಕಟ್ಟೆಮನೆ ಅಧಿಕಾರ ಕುಲಾಚಾರ ಜವಾಬ್ದಾರಿಯನ್ನು ಕೊಟ್ಟ ಬಗ್ಗೆ ಆನೆಗೊಂದಿಯ ಅಂಬಿಗರ ದೊಡ್ಡತಾಯಣ್ಣನಲ್ಲಿರುವ ಈ ತಾಮ್ರಶಾಸನದಲ್ಲಿ ಉಲ್ಲೇಖಿತಗೊಂಡಿವೆ.[18]

ಇಲ್ಲಿ ಅಂಬಿಗರಿಗೆ ಹರಗೋಲು ನಡೆಸಲು ಅವಕಾಶ ಕೊಟ್ಟು ಜನರಿಗೆ ಪ್ರಯಾಣದಲ್ಲಿ ಸಹಕರಿಸುತ್ತಿದ್ದರು. ಇವರು ಪ್ರತಿಫಲವಾಗಿ ಜನರಿಂದ ಹಣವನ್ನು ಅಲ್ಪವಾಗಿ ಪಡೆಯುತ್ತಿದ್ದರು. ರಾಜಮನ್ನಣೆ ಪಡೆದವರಿಂದ ಹಣ ಪಡೆಯುತ್ತಿರಲಿಲ್ಲ. ಏಕೆಂದರೆ ಜನ ಕಲ್ಯಾಣಕ್ಕಾಗಿ ರಾಜನೇ ಅಂಬಿಗರಿಗೆ ಭೂದಾನ ಕೊಟ್ಟು, ಕಟ್ಟೆಮನೆ, ಕುಲಾಚಾರಗಳಿಗೆ ಮುಖ್ಯಸ್ಥರನ್ನಾಗಿ ಮಾಡಿರುವುದರಿಂದ ಇವರಿಗೆ ಅತೀ ಹೆಚ್ಚಿನ ಜವಾಬ್ದಾರಿ

ಇತ್ತು. ಅಂಬಿಗರು ಆನೆಗೊಂದಿ ಪ್ರದೇಶದಲ್ಲಿ ಪ್ರಾಚಿನ ಕಾಲದಲ್ಲಿದ್ದುದು ಸ್ಪಷ್ಟ. ಕಟ್ಟೆಮನೆ ಅಂದರೆ ಜಾತಿ ಕುಲಾಚಾರಗಳ ಪಂಚಾಯಿತಿ ಅಥವಾ ಹಿರೆಮನೆ. ಅರಮನೆ ಗುರುಮನೆಯ ಕೇಂದ್ರಗಳು ಆನೆಗೊಂದಿಯೇ ಆಗಿದ್ದು ಕಟ್ಟೆಮನೆ ಕುಲಾಚಾರಗಳಿಗೆ ಅಂಬಿಗರ ಮುಖ್ಯಸ್ಥರನ್ನು ನೇಮಿಸಿದರು.

ದೊಡ್ಡತಾಯಣ್ಣನವರ ಹತ್ತಿರವಿರುವ ಮತ್ತೊಂದು ಶಾಸನದಲ್ಲಿ (ತೆಲುಗು ಭಾಷೆ): ಕ್ರಿ.ಶ. ೧೭೨೧ರಲ್ಲಿ ಆನೆಗೊಂದಿ ಸಂಸ್ಥಾನದವರು ಅಂಬಿಗರ ಬರಮ ಮತ್ತು ಬಸವ ಎಂಬುವವರಿಗೆ ನೀಡಿದ ಸನ್ನಿಧಿಯಲ್ಲಿ ಸಂಸ್ಥಾನದ ಕಾರ್ಯವನ್ನು ದಕ್ಷತೆಯಿಂದ ಮಾಡುತ್ತಿರುವುದರಿಂದ ಇವರಿಗೆ ತುಂಗಭದ್ರಾ ನದಿಯಲ್ಲಿ ೫ ಹರಗೋಲು (ಬುಟ್ಟಿ)ಗಳಿದ್ದು ಅವುಗಳಲ್ಲಿ ಎರಡು ಬುಟ್ಟಿಗಳನ್ನು ಇನಾಂ ಆಗಿ ನೀಡಿರುತ್ತಾರೆ.[19] ಇವರು ಕಟ್ಟೆಮನೆಗೆ ಸೇರಿದವರಾಗಿದ್ದು ಜಾತಿ ಕಲಹಗಳನ್ನು ನಿವಾರಿಸುವ (ಕುಲ) ಜವಾಬ್ದಾರಿಯನ್ನು ಹೊಂದಿದ್ದರು. ಇವರಲ್ಲಿ ಸಮಾನತೆ, ಶಾಂತಿ ಕಾಪಾಡಲು ಅರಸರು ಕೈಗೊಂಡ ನಿರ್ಮಾಣ ಪ್ರಶಂಸಾರ್ಹವಾದುದು. ಇಲ್ಲಿನ ವಿಶೇಷತೆ ಎಂದರೆ ಪ್ರೋತ್ಸಾಹ ಕೊಟ್ಟವರು ವಿಜಯನಗರ ಮತ್ತು ಆನೆಗೊಂದಿ ಅರಸರಾದರೆ ಇವರು ಆರಾಧಿಸುವುದು ಅಥವಾ ಮನೆ ದೇವರಾಗಿ ಹೊಂದಿರುವುದು ಕುಮಾರ ರಾಮನನ್ನು. ಇಲ್ಲಿ ಪರಸ್ಪರ ವೈವಿಧ್ಯತೆಯನ್ನು ತಾಳಿದಂತಿದ್ದರೂ ಆಶ್ರಿತ ರಾಜನಲ್ಲದೆ ಇತರರನ್ನು ಪೂಜಿಸಬಾರದೆಂಬ ನಿಯಮವಿಲ್ಲ. ಹೀಗಾಗಿ ಅವರು ಕುಮಾರರಾಮನನ್ನು ಪೂಜಿಸುವರು.

ಅಂಬಿಗರು ತಮ್ಮ ವೃತ್ತಿಯಿಂದ ಬಂದ ಇಂತಿಷ್ಟು ಹಣವನ್ನು ರಾಜ್ಯದ ಬೊಕ್ಕಸಕ್ಕೆ ಕೊಡಬೇಕಾಗಿರುವ ಸಂಗತಿ ಬಗ್ಗೆ (ಕ್ರಿ.ಶ. ೧೫೫೭ ಮಾರ್ಚ್ ೧೨ರ ಒಂದು ಶಾಸನದಲ್ಲಿ:) ಸದಾಶಿವರಾಯನ ಕಾಲದಲ್ಲಿ ಆನೆಗೊಂದಿ ಹೊಳೆಯ ೧೪ ಬೋವರು (ಮೀನುಗಾರರು) ೩೦೦ ಮಂಗಿ ಅಂಬಿಗರು ಅಂಬಲಿಯ ಮಹಾಲಿಂಗವೊಡೆಯರಿಗೆ ತಾವು ಹೊಳೆಯಲ್ಲಿ ಬಿಡುವ ಚಿಕ್ಕ ಹರಿಗೋಲು ಒಂದು ಕಾಸು, ದೊಡ್ಡ ಹರಿಗೋಲಿಗೆ ಎರಡು ಕಾಸು ಹಣವನ್ನು ನೀಡುವುದಾಗಿ ತಿಳಿಸಲಾಗಿದೆ. ಬೋವಿಗಳು ಮತ್ತು ಅಂಬಿಗರು ಇಲ್ಲಿ ವ್ಯಾಪಕವಾಗಿ ನೆಲೆಸಿದ್ದು ಸೂರ್ಯಚಂದ್ರರ ಪರ್ಯತ ನಡೆಸಿಕೊಂಡು ಹೋಗಲು ಅಂಬಿಗರ ಕುಲದೇವತೆ ಶ್ರೀ ಗಂಗಾದೇವಿಯನ್ನು ಸಾಕ್ಷೀಕರಿಸಲಾಗಿದೆ. ರಾಜ ಇವರಿಗೆ ಭೂದಾನ, ಕತ್ತಿ, ಬಿರುದು, ಅಧಿಕಾರಿಗಳನ್ನು ಕೊಟ್ಟರೆ ಅದಕ್ಕೆ ಪರ್ಯಾಯವಾಗಿ ಅಂಬಿಗರು ದೇವಾಲಯಗಳಿಗೆ ಉದಾರವಾಗಿ ದಾನ ಮಾಡಿದ್ದು ಶ್ಲಾಘನೀಯ ಕಾರ್ಯ.

ಅಂಬಿಗರು ತುಂಗಾಭದ್ರಾದ ಎರಡು ದಂಡೆಗಳ ಆಸುಪಾಸಿನಲ್ಲಿ ವಾಸಿಸಿದರೂ, ನಿಖರವಾಗಿ ನೆಲೆಯೂರಿದ ತಾಣದ ಬಗ್ಗೆ ಖಚಿತ ಇಲ್ಲ. ನದಿ ದಾಟುವ ಮಾರ್ಗಗಳಲ್ಲಿ ನೆಲೆ ನಿಂತರೂ ಇವರ ವಾಸಸ್ಥಳ ಆನೆಗೊಂದಿ ಪರಿಸರವನ್ನು ಸಂಕೇತಿಸುತ್ತದೆ. ವಸುಂಧರಾ ಫಿಲಿಯೋಜಾ ಅವರು 'ದಾಸರ ಮಂಟಪ' ಎಂದು ಕರೆಯುವ ಪುರಂದರ ಮಂಟಪವು ಹಿಂದೆ ನದಿ ದಾಟಿ ಹೋಗಲು ಹರಿಗೋಲ ದಾರಿ ಕಾಯಲು ವೀಕ್ಷಣಾಲಯವಾಗಿದ್ದೀತು ಎಂದಿರುವರು.[20] ನದಿಯುದ್ದಕ್ಕೂ ಸಂಪರ್ಕ ಮಾರ್ಗಗಳು ಇದ್ದುದರಿಂದ ಸಾಗಾಣಿಕೆಗೆ ಯೋಗ್ಯವಾದ ಜಾಗದಲ್ಲಿ ಅಂಬಿಗರು ನೆಲೆಸಿರುತ್ತಾರೆ. ಮೇಲಿನ ಸ್ಥಳವು ಹರಗೋಲು ನಿಲ್ಲುವ ಸ್ಥಳವಾಗಿರಬೇಕೇ ಹೊರತು

ವೀಕ್ಷಣಾಲಯವಾಗಿರಲಿಕ್ಕಿಲ್ಲ. ಪ್ರಸ್ತುತ ಮಂಟಪವನ್ನು ೧೯೩೦ರಲ್ಲಿ ಕಟ್ಟಿಸಿ ಅದಕ್ಕೆ ಪುರಂದರದಾಸರ ಮಂಟಪ ಎಂದು ನಾಮಕರಣ ಮಾಡಿದ್ದರಿಂದ ಮೇಲಿನ ಅಭಿಪ್ರಾಯ ತಾಳುವುದರಲ್ಲಿ ಅನುಮಾನವಿಲ್ಲ. ಇವರೇ ಮುಂದುವರೆದು ತಿಳಿಸುವಂತೆ 'ರಾಮದೇವರ ಗುಡಿಯ ಹಿಂದೆ ಎರಡು ದೋಣಿಗಳಿವೆ. ಅವುಗಳಲ್ಲಿ ಒಂದು ರಾಮನ ದೋಣಿ ಇನ್ನೊಂದು ಲಕ್ಷ್ಮಣನ ದೋಣಿ' ಎಂದು ಜನಾಭಿಪ್ರಾಯವನ್ನು ಸಮರ್ಥಿಸಿದ್ದಾರೆ.[21] ಇಲ್ಲಿ ಯಾವಾಗಲೂ ನೀರಿರುತ್ತದೆ. ಇವುಗಳ ದಂಡೆ ಮೇಲೆ ಲಿಂಗನಂದಿಯಿದೆ. ಈ ದೋಣಿಗಳ ಹಿಂದೆ ಅತೀ ಪುರಾತನ ಶಿವಾಲಯವಿರುವುದರಿಂದ ಅಂಬಿಗರ ಆರಾಧ್ಯದೇವತೆ ಅದಾಗಿರಬೇಕು.

ಆನೆಗೊಂದಿ ಮಹಾದ್ವಾರ ಅಂಬಿಗರ ನೆಲಸುತಾಣ ಎಂಬುದಕ್ಕೆ ಅಂಬಿಗರ ವೀರಗಲ್ಲುಗಳೆರಡು ಕೋಟೆಯ ಪ್ರವೇಶದ್ವಾರದಲ್ಲಿ ಪಶ್ಚಿಮಕ್ಕೆ ಮುಖಮಾಡಿ ನಿಂತಿರುವುದು ಗಮನಿಸಬಹುದು. ಇವುಗಳ ಬಗ್ಗೆ ಆರ್. ಶೇಷಶಾಸ್ತ್ರಿಯವರು 'ಜನರನ್ನು ಒಂದು ದಡದಿಂದ ಮತ್ತೊಂದು ದಡಕ್ಕೆ ಸಾಗಿಸುವಲ್ಲಿ ತಮ್ಮ ಸಾಹಸವನ್ನು ತೋರಿಸಿ, ನೀರಿನಲ್ಲಿ ಮಡಿದಿರಬಹುದಾದ ವೀರರ ಎರಡು ವೀರಗಲ್ಲುಗಳು ದೊರೆಯುತ್ತವೆ. ಆದರೆ ಅವುಗಳ ಮೇಲೆ ಶಾಸನ ಇಲ್ಲವಾದ್ದರಿಂದ ಈ ಬಗ್ಗೆ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ಈ ವೀರಗಲ್ಲುಗಳು ಹಂಪೆಯಿಂದ ತುಂಗಭದ್ರಾ ನದಿಯನ್ನು ದಾಟಿ ಆನೆಗೊಂದಿಗೆ ಹೋಗುವ ದಾರಿಯಲ್ಲಿ ಇವೆ. ಇಂದಿಗೂ ಅಂಬಿಗರು ಅವುಗಳನ್ನು ವಿಶೇಷ ಸಂದರ್ಭಗಳಲ್ಲಿ ಆರಾಧಿಸುತ್ತಾರೆ ಮತ್ತು ಅವುಗಳನ್ನು ವೀರಗಾರರು ಎಂಬುದಾಗಿ ಕರೆಯುತ್ತಾರೆ. ನಿಂತ ಇಬ್ಬರು ವೀರರು ತಮ್ಮ ಹುಟ್ಟುಗಳನ್ನು ಕೈಯಲ್ಲಿ ಹಿಡಿದಿರುವಂತೆ ಶಿಲ್ಪದ ವಿವರಗಳನ್ನು ಬಿಡಿಸಲಾಗಿದೆ. ಈ ವಿವರಕ್ಕೆ ಪೂರಕವಾಗಿ ಡೊಮಿಂಗೋ ಪಾಯೆಸ್‌ನು ಅಂಬಿಗರು ನದಿ ತೀರದಲ್ಲಿ ಹರಿಗೋಲು ಹಾಕುತ್ತಿದ್ದರಲ್ಲದೆ, ಹಂಪೆ ಮತ್ತು ಆನೆಗೊಂದಿಗಳಿಗೆ ಪರಸ್ಪರ ಸಂಪರ್ಕ ಕಲ್ಪಿಸುತ್ತಿದ್ದರೆಂಬುದನ್ನು ತಿಳಿಸಿದ್ದಾನೆ.

ಅಂಬಿಗತನವು ವಿಜಯನಗರ ಕಾಲಕ್ಕೆ ಪವಿತ್ರ ಕಾಯಕವಾಗಿದ್ದಿತು. ತಪಸ್ಸಿಗೆ, ಮೋಕ್ಷ ಸಾಧನೆಗೆ ಆವಾಸಕೇಂದ್ರಗಳಾದ ನದಿಗಳು ಅಂಬಿಗರಿಗೆ ಗಂಗೆಯಷ್ಟೇ ಪವಿತ್ರ ಮತ್ತು ಭಕ್ತಿದಾಯಕವಾಗಿದೆ. ಹೊಲ, ಮನೆಗಳಿಲ್ಲದೆ, ಹರಗೋಲುಗಳನ್ನೆ ನಂಬಿದ ಅಂಬಿಗರಿಗೆ ಭವಿಷ್ಯದ ದಿನಗಳು ಕರಾಳವಾಗಿವೆ. ಎಂದು ವಿರೂಪಾಕ್ಷ ಪೂಜಾರಿಯಳ್ಳಿಯವರು ಅಭಿಪ್ರಾಯಪಡುತ್ತಾರೆ.

ವಿಜಯನಗರ ಕಾಲ ಮೀನುಗಾರಿಕೆ ಆಹಾರ ಮಾಧ್ಯಮವಾಗಿ ಮತ್ತು ವಾಣಿಜ್ಯ ವೃತ್ತಿಯಾಗಿ ವೃದ್ಧಿಯಾಗಿತ್ತು. ಅದೇ ರೀತಿ ಅಂಬಿಗತನ ಪ್ರಯಾಣಿಕರು ನದಿ ದಾಟುವುದು ತುಂಬಾ ಕಷ್ಟ. ಎಂಥವರನ್ನು ಭೇದ - ಭಾವಗಳಿಲ್ಲದೆ ದಡದಿಂದ ದಡಕ್ಕೆ ತಲುಪಿಸುವ ಕೆಲಸವನ್ನು ಅಂಬಿಗರು ಮಾಡುತ್ತಿದ್ದರು. ಇವರಿಗೆ ರಾಜಮನ್ನಣೆಯಿದ್ದು ವಿಜಯನಗರ ಅವಧಿಯಲ್ಲಿ ರಾಜರಿಂದ ಪೋಷಣೆಗೊಂಡು ಅನೇಕ ಕಟ್ಟು-ನಿಟ್ಟಿನ ಮತ್ತು ಉದಾರತೆಯ ಜೀವನವನ್ನು ನಡೆಸಿದ್ದು ಮಹತ್ವವಾದುದು.

## 6.4. ಪಶುಪಾಲನೆ

ರಾಜಪ್ರಭುತ್ವಗಳ ಆಳ್ವಿಕೆ ಸಂದರ್ಭದಲ್ಲಿ ಚಾಲ್ತಿಯಲ್ಲಿದ್ದ ಬೇಟೆ ಮತ್ತು ಪಶುಪಾಲನೆ ವಿಜಯನಗರ ಕಾಲದಲ್ಲಿ ಪ್ರಗತಿದಾಯಕ ಕ್ಷೇತ್ರಗಳಾಗಿದ್ದು ಆರ್ಥಿಕ ಉತ್ಪನ್ನ, ಅಭಿವೃದ್ಧಿ, ವಿತರಣೆ ಹಾಗೂ ಅನುಭೋಗದಲ್ಲಿ ಮಹತ್ತರವಾದ ಬದಲಾವಣೆಯನ್ನುಂಟು ಮಾಡುವಲ್ಲಿ ಮಹತ್ವ ಪಡೆದಿವೆ.

ವಿಜಯನಗರ ಕಾಲದ ಪಶುಪಾಲನೆಯನ್ನು ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿಯು ಅವಲೋಕಿಸಬಹುದಾಗಿದೆ. ಈ ನೆಲದ ಪಾರಂಪರಿಕ ವೃತ್ತಿಗಳಾದ ಬೇಟೆಯಂತೆ ಪಶುಪಾಲನೆಗೂ ಸಹಾ ಮಹತ್ವದ ಸ್ಥಾನವಿದೆ. ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ಮಾನವ ತನ್ನ ಜೀವನಾವಶ್ಯಕ ವೃತ್ತಿಗಳಾಗಿ ಇವುಗಳನ್ನು ಜೀವಂತಗೊಳಿಸಿಕೊಂಡು ಬಂದಿದ್ದಾನೆ. ಶಿಲಾಯುಗದ ಮಾನವನ ಬದುಕು ಆಹಾರ ಸಂಗ್ರಹಣೆಯಿಂದ ಬೇಟೆ ಪರಿವರ್ತನೆಯಾದರೆ, ಬೇಟೆಯಿಂದ ಕ್ರಮೇಣ ಪಶುಪಾಲನೆಗೆ ಆಸ್ಪದವಾಯಿತು. ಕ್ರೂರ, ಕಾಡುಪ್ರಾಣಿಗಳನ್ನು ಪಳಗಿಸಿ, ಹಿಂಸೆಯಿಂದ ಕೆಲವು ಪ್ರಾಣಿಗಳಿಗೆ ಜೀವದಾನ ನೀಡಿ ಸಾಗಿತ್ತು ಇತಿಹಾಸ. ಸಾತ್ವಿಕ ಪ್ರಾಣಿಗಳನ್ನು ಮನೆ, ಹಾಗೂ ಹಟ್ಟಿ ಅಥವಾ ಮಂದೆಯಲ್ಲಿ ವಾಸಿಸಲು ಅವಕಾಶ ಕಲ್ಪಿಸಿಕೊಟ್ಟು ಹಾಲು, ಸಗಣಿಯಿಂದ ಆರ್ಥಿಕ ಕೊರತೆಯನ್ನು ಮಾನವ ನೀಗಿಸಿಕೊಳ್ಳುತ್ತಿದ್ದ. ಹರಪ್ಪ ಅಥವಾ ಸಿಂಧೂ ಬಯಲಿನ ನಾಗರಿಕತೆಯ ಜನರು ಕೃಷಿಗಷ್ಟೇ ಅಲ್ಲದೆ, ಪಶುಪಾಲನೆಯಲ್ಲಿ ತಮ್ಮ ಮುಕ್ಕಾಲುಪಾಲು ಜೀವನ ನಡೆಸಿರುವ ಬಗ್ಗೆ ವೇದಗಳೇ ಸಾಕ್ಷಿ. ಹಸು, ಎತ್ತು, ಎಮ್ಮೆ, ಕುರಿ, ಮೇಕೆಗಳನ್ನು ಸಾಕುತ್ತಿದ್ದದು ಬಹುಶಃ ಮೊದಲ ಹಂತ ಇರಬೇಕು. ಹಂದಿ, ಜಿಂಕೆ, ಮೊಲ, ಬೆಕ್ಕು, ನಾಯಿ, ಕತ್ತೆ, ಕುದುರೆ, ಒಂಟೆಗಳನ್ನು ಆನಂತರ ಸಾಕಿರುವ ಸಾಧ್ಯತೆಯಿದೆ. ವೇದಗಳ ಅಥವಾ ಆರ್ಯರ ಕಾಲವು ಪಶುಪಾಲನೆಯ ಸುವರ್ಣ ಯುಗವಾಗಿತ್ತು. ಆ ಕಾಲಕ್ಕೆ ದನಗಳ ಹಿಂಡು, ಗೋವುಗಳ ಸಂಪತ್ತು ಹೆಚ್ಚಿರುವವನೇ ಶ್ರೀಮಂತನಾಗಿರುತ್ತಿದ್ದನು.

ಸಾಳುವ ಅರಸರು ಆಂಧ್ರದ ಅನಂತಪುರ ಜಿಲ್ಲೆಯಲ್ಲಿರುವ ಧಾರ್ಮಿಕ ಕ್ಷೇತ್ರ ಕದ್ರಿನರಸಿಂಹಸ್ವಾಮಿ ದೇವಾಲಯದ ಶಾಸನದಲ್ಲಿ (ಕ್ರಿ.ಶ. ೧೪೧೮ ಫೆಬ್ರವರಿ ೧೫ರಂದು) ಹರಿಹರ ಮಹಾರಾಯನು ನಾಲ್ಕು ಪಾಂಚಾಳರಿಗೆ ಮದುವೆ, ಕುಲಿಕೆಯತ್ತು, ಯಮ್ಮೆ, ಧೊತ್ತು ಬಂಕಿಯ ಬತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಅರಣಿಕೆ... ಕೊಟ್ಟ ವಿಷಯ ತಿಳಿಯುತ್ತದೆ.[22] ಗೋವುಗಳು ಮೇಯುವ ಹುಲ್ಲುಗಾವಲು, ವಾಸಿಸುವ ನೆಲೆಗಳಿಗೆ ತೆರಿಗೆಯನ್ನು ಕೊಡಬೇಕಾಗಿತ್ತು.

ಶ್ರೀಕೃಷ್ಣದೇವರಾಯನ ಕಾಲದ ಕ್ರಿ.ಶ. ೧೫೨೧ರ ಶಾಸನಗಳಲ್ಲಿ ಗೋದಾನ ಉಲ್ಲೇಖವಾಗಿದೆ. ಮಾನುವೆ, ಹಾನಗಲ್ಲು, ಅಲಂಪೂರು, ರಾಚೂರು, ಮಾಗಡೆದುರ್ಗಗಳನ್ನು ಗೆದ್ದು ಕೃಷ್ಣ ಮತ್ತು ಭೀಮಾನದಿ ಸಂಗಮದಲ್ಲಿ ರತ್ನಧೇನು ಮಹಾದಾನವನ್ನು ಮಾಡಿ, ತನ್ನ ಹೆಂಡತಿ ಚಿಂನಾದೇವಿ ಕೈಲಿ ಗೋದಾನವನ್ನು, ತಿರುಮಲದೇವಿ ಕೈಲಿ ಕನಕ ಗೋದಾನವನ್ನು ಮಾಡಿಸುತ್ತಾನೆ.[23] ಗೋದಾನ ಸ್ತ್ರೀಯರಿಂದ ಮಾಡಿಸುವ ಆಚರಣೆ, ಗೋವನ್ನು ಸಂಪತ್ತು, ಸ್ತ್ರೀಯರಿಗಾಗಿ ಬಗೆದಿರುವ ಶಕ್ಯವಿದೆ. ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ಮುತ್ತಿಗೆ

ಗ್ರಾಮದ ಆಂಜನೇಯ ದೇವಾಲಯದ ಶಾಸನದಲ್ಲಿ (ಸಂ ೩೭೨, ಕ್ರಿ.ಶ. ೨.೧..೧೫೫೭ನೇ ಮಂಗಳವಾರ) ಮಹಾನಾಯಕಾಚಾರ್ಯರು ಕೃಷ್ಣಪ್ಪನಾಯಕನು ಮುತ್ತಿಗೆ ಗ್ರಾಮದ ಕೃಷಿಕರು ಕೊಡಬೇಕಾದ ಕುರಿಗಳ ತೆರಿಗೆಯನ್ನು ನಿಗದಿಪಡಿಸಿದ್ದನ್ನು ತಿಳಿಸುತ್ತದೆ.[24] ವಿಜಯನಗರ ಸಾಮ್ರಾಜ್ಯಕ್ಕೂ ಪೂರ್ವದಲ್ಲಿ ಈ ಪ್ರದೇಶವು ಪಶುಪಾಲನ ಚಟುವಟಿಕೆಗಳಿಂದ ಕೂಡಿತ್ತು. ಹರಪನಹಳ್ಳಿ ತಾಲೂಕು ನೀಲಗುಂದ ಮುಕ್ತೇಶ್ವರ ದೇವಸ್ಥಾನ ಮುಂದಿನ ತ್ರಿಭುವನಮಲ್ಲ ನಾಲ್ಕನೇ ವಿಕ್ರಮಾದಿತ್ಯನ ವೀರಗಲ್ಲು ಶಾಸನದಲ್ಲಿ (ಕ್ರಿ.ಶ. ೧೦೭೯ ಜನವರಿ ೨೦ ಭಾನುವಾರ) ಚಯಂದಿಯರನ ಮಗ ಮರೆಯಾಳ್ವನು ನೀಗ್ಗುಂದದ ಗೋವುಗಳನ್ನು ರಕ್ಷಿಸಲು ಬನವಾಸಿ ನಾಡಿನಲ್ಲಿ ಹೋರಾಡಿದಾಗ ನೀಗ್ಗುಂದದ ಮೂಲಿನ ಕಲ್ಲಗಂಗನು ಮರಣ ಹೊಂದಿರುವುದನ್ನು ತಿಳಿಸುತ್ತದೆ. ಹೀಗೆ ಗೋವುಗಳನ್ನು ಮಳೆ, ಗಾಳಿ, ಬೆಂಕಿ, ಕಾಡುಪ್ರಾಣಿಗಳಿಂದ ರಕ್ಷಿಸಲು ಅವಿರತ ಶ್ರಮಿಸಿದ್ದು ಅವುಗಳನ್ನು ನಿಖರವಾಗಿ ಎಲ್ಲೂ ದಾಖಲಿಸಿಲ್ಲ. ಬೆಣ್ಣೆಹಳ್ಳಿ ಪಂಪಾವತಿ ದೇವಸ್ಥಾನದ ಶಾಸನವು (ಸಂ ೩೨೬) (ಹೊಯ್ಸಳ ವೀರನರಸಿಂಹದೇವನಿಗೆ ಸೇರಿದೆ.) ನಲ್ಲೆಮ್ಮೆಯ ಉಗ್ರಾಣಿ ಗಿರಿಪಯ್ಯ ಪಿರಿಯಣ್ಣನು ಬೆಣ್ಣೆವೂರಿನ ವಿರೂಪಾಕ್ಷೇಶ್ವರನ ನೈವೇದ್ಯಕ್ಕೆ, ದೀಪಕ್ಕೆ ಮತ್ತು ದೇವಸ್ಥಾನದ ೧೨ ಮಹಾಜನರ ಭೋಜನಕ್ಕೆ ಒಂದು ಎಮ್ಮೆಯನ್ನು ದಾನ ನೀಡಿದ ಬಗ್ಗೆ ತಿಳಿಸುತ್ತದೆ. ದೇವರ ನೈವೇದ್ಯದ ದೀಪಕ್ಕೆ ಹಸು ಮತ್ತು ಎಮ್ಮೆಯನ್ನು ದಾನ ನೀಡುವುದು ಅವುಗಳ ಉತ್ಪನ್ನದಿಂದ ಬರುವ ಹಣವನ್ನು ಬಳಿಸಿಕೊಳ್ಳಬಹುದಾಗಿತ್ತು. ಪಶುಗಳು ಆ ಕಾಲಕ್ಕೆ ಗಣನೀಯ ಪ್ರಮಾಣದಲ್ಲಿದ್ದ ಸೂಚನೆಯನ್ನು ಇದರಲ್ಲಿ ಗಮನಿಸಬಹುದಾಗಿದೆ.

ಬೇಟೆ, ಪಶುಪಾಲನೆಯೊಂದಿಗೆ ಬೆಳೆದು ಬಂದ ಬುಡಕಟ್ಟು ಜನರಾದ ಬೇಡರಿಗೆ ಪಶುಗಳೇ ಸಂಪತ್ತು. ಗೋಮೂತ್ರ, ಸಗಣಿ ಪವಿತ್ರವೆಂಬ ಭಾವನೆ ಇವರಲ್ಲಿತ್ತು. ವ್ಯಾಸ ಮಂಡಲದ ಜನಸಂಖ್ಯೆ, ಪ್ರಾಣಿಸಂಕುಲ ಹೆಚ್ಚಾಗಿ ಹುಲ್ಲು, ನೀರಿಗಾಗಿ, ಆಹಾರಕ್ಕಾಗಿ ಅಲೆದಾಡಿದರು. ಕ್ಷಾಮ - ಬರಗಾಲ ಪರಿಸ್ಥಿತಿಯನ್ನು ಎದುರಿಸಿದರು. ಹೀಗೆ ವಿಜಯನಗರ ಸಾಮ್ರಾಜ್ಯ ಅಭಿವೃದ್ಧಿ ಪಥ ತಲುಪಿದಾಗಲೇ ಆಂಧ್ರ ಹಾಗೂ ಒರಿಸ್ಸಾದಿಂದ ಬೇಡ ಬುಡಕಟ್ಟಿನ ಪಶುಪಾಲಕರು ಕರ್ನಾಟಕಕ್ಕೆ ವಲಸೆ ಬಂದರು. ಇವರು ಮೂಲತಃ ಬೇಟೆಗಾರರಾದರೂ ಅನಂತರ ಪಶುಪಾಲನೆಯನ್ನು ಶಾಶ್ವತವಾಗಿ ಉಳಿಸಿಕೊಂಡು ಬಂದವರಾಗಿದ್ದರು. ಆಂಧ್ರದ ಶ್ರೀಶೈಲ, ತಿರುಪತಿ, ಕದ್ರಿ, ಅಹೋಬಲಂ ಮೊದಲಾದ ನೆಲೆಗಳಿಂದ ಇಲ್ಲಿಗೆ ಆಗಮಿಸಿದವರು. ಇವರಿಗೆ ವ್ಯಾಸಬೇಡರೆಂದು ಹೆಸರು (ಮೇಯಿಸುವ > ಗೋವು ಮತ್ತು ಕುರಿ ಇತ್ಯಾದಿ) ಅಡವಿಯಲ್ಲಿ ಇರುವವರನ್ನು ಅಡವಿಚೆಂಚ, ಮ್ಯಾಸ ಎಂದೆಲ್ಲ ಕರೆಯಲಾಯಿತು. ಶ್ರೀಶೈಲ ಕರಿಮಲೆ ಪರ್ವತದಿಂದ ಬಂದಂಥ ಇವರು ತಮ್ಮ ಜತೆಗೆ ೧೨ ಪೆಟ್ಟಿಗೆ ದೇವರು, ೫೦೦ ಜನ ಮೇಸರ್ರು ಸೇರಿ ವಿಜಯನಗರದ ಮೊದಲ ರಾಜಧಾನಿ ಆನೆಗೊಂದಿಗೆ ಬರುತ್ತಾರೆ. ಆಂಧ್ರದ ಅನಂತರಪುರ ಜಿಲ್ಲೆ ಮೂಲಕ ಬಂದಂಥ ಕೆಲವು ಗುಂಪುಗಳು ಮೊಳಕಾಲ್ಮೂರು ತಾಲೂಕಿನ ಕಂಪಳ ದೇವರಹಟ್ಟಿ, ಮುತ್ತಿಗಾರಹಳ್ಳಿ ಮತ್ತು ನಾಯಕನಹಟ್ಟಿಗಳಲ್ಲಿ ತಂಗುತ್ತಾರೆ. ಕಂಪಳ ದೇವರಹಟ್ಟಿ, ಹತ್ತಿರ ಜನಿಗೆಹಳ್ಳ - ಚಿನ್ನಹಗರಿ ನದಿ ಪರಿಸರದಲ್ಲಿ ಗೋವುಗಳನ್ನು ಮೇಯಿಸಿಕೊಂಡು ಕಾಲಕಳೆದರು. ಈ ಗುಂಪಿನ

ಕೆಲವರು ಗುಹೇಶ್ವರ ಬೆಟ್ಟಕ್ಕೆ ಹೋಗುತ್ತಾರೆ. ಎಲ್ಲೆಲ್ಲಿ ಹೋಗಿ ನೆಲೆ ನಿಂತರು ಅವು ಪವಿತ್ರ ಕ್ಷೇತ್ರಗಳಾಗಿ, ಧಾರ್ಮಿಕ ತಾಣಗಳಾಗಿ ಖ್ಯಾತಿ ಪಡೆದವು. ಬೇಟೆಗಾರರ ದೇವರಾಗಿ ಪೂಜಿಸುವ ತಿರುಪತಿ ತಿಮ್ಮಪ್ಪ ನಿಜವಾದ ಬುಡಕಟ್ಟು ವೀರ. ಒಂದು ಕಾಲದಲ್ಲಿ ತಿಮ್ಮಪ್ಪ ಬೇಟೆಗಾರನಾಗಿದ್ದನೆಂಬ ಜನರ ಮಾತು ಸುಳ್ಳಲ್ಲ. ಹೀಗೆ ಬೇಟೆಗಾರರು ಶ್ರೀಶೈಲದಿಂದ ಬಂದವರು ಶೈಲ ಕ್ಷೇತ್ರಗಳನ್ನು, ತಿರುಪತಿಯಿಂದ ಬಂದವರು ಆಯಾ ಸ್ಥಳಗಳಿಗೆ ಅದೇ ಹೆಸರನ್ನಿಟ್ಟುಕೊಂಡರು. ಶ್ರೀಶೈಲದಿಂದ ಬಂದವರು ಮಲ್ಲಯ್ಯನ ಶಿಷ್ಯರೆಂದು ಕರೆದರು. ಮೇಲೆ ಹೇಳಿದಂತೆ ಕಾಟಮಲ್ಲನಾಯಕನ ನೇತೃತ್ವದಲ್ಲಿ ಬಂದ ಕಾಪು ಕಂಪಳ (ದನಕರು) ಜನರು ವಿಜಯನಗರ ಸಾಮ್ರಾಜ್ಯದ ಗಡಿಯೊಳಗೆ ರಾಜ ಅನುಮತಿ ಇಲ್ಲದೆ ತಂಗಿದರು. ಇವರನ್ನು ಹೊರದೂಡಲು ಜಟ್ಟಿಗರನ್ನು (ರಾಮಜಟ್ಟಿ ಅಣ್ಣ ತಮ್ಮಂದಿರು) ಸೈನಿಕ ದಂಡನಾಯಕರನ್ನು ಕಳಿಸಿದರೂ ಶರಣಾಗತರಾಗಲಿಲ್ಲ. ಜಟ್ಟಿಗರಿಗೂ ಮಾತು ಕೇಳದ ಕಾಟಮಲ್ಲನಾಯಕನಿಗೆ ವಿಜಯನಗರದ ಅರಸರ ಸ್ವಾಮಿಗಳನ್ನು ಸಂಧಾನಕ್ಕೆ ಕಳುಹಿಸುತ್ತಾರೆ. ಸ್ವಾಮಿಗಳ ಮಾತಿಗೂ ಸೊಪ್ಪು ಹಾಕದ ನಾಯಕರಿಗೆ ತಕ್ಕ ಪಾಠ ಕಲಿಸಲು ೩೨ ಜನ ಸುಂದರ, ಮೋಹಕ ವೇಶ್ಯೆಯರನ್ನು ಕಳುಹಿಸುತ್ತಾರೆ. ಅವರನ್ನು ಮರಳು ಮಾಡಲು, ಮೋಹಗೊಳಿಸಲು ವಿಫಲರಾದ ಸ್ತ್ರೀಯರು ಮರಳಿಬರಬೇಕಾಯಿತು. ಇವೆಲ್ಲ ಬೆಳವಣಿಗೆಗಳನ್ನು ಅರಿತ ಅರಸರು ನಾಯಕರು ಧೈರ್ಯ ಪರಾಕ್ರಮಶಾಲಿಗಳು, ಸಾಮ್ರಾಜ್ಯ ನಮ್ಮದಾದರು ನಮ್ಮ ಅಪ್ಪಣೆ ಕೇಳದೆ ಬಂದು ನೆಲೆಸಿದ್ದಾರೆಂದರೆ ಸಾಮಾನ್ಯರಲ್ಲ ಎಂದರಿತು ನಾಯಕನಹಟ್ಟಿ ಪಾಳೆಯಪಟ್ಟನ್ನು ಆಳ್ವಿಕೆ ಮಾಡಿಕೊಳ್ಳಲು ಅನುಮತಿಕೊಟ್ಟರು. ಪಶುಗಳಿಗೆ ಹುಲ್ಲುಗಾವಲಿಲ್ಲದ ಕಾರಣ ಮುತ್ತಿಗಾರಹಳ್ಳಿ ಅರಣ್ಯದಲ್ಲಿ ೩೦೦ ಎಕರೆ ಪ್ರದೇಶವನ್ನು ಎತ್ತುಗಳಿಗೆಂದು ಬಿಟ್ಟುಕೊಟ್ಟರು.

ವಿಜಯನಗರ ಕಾಲದ ಪಶುಪಾಲನೆ ಹೆಚ್ಚಾಗಿ ಮಲೆನಾಡು, ಬಯಲುಸೀಮೆ ಹಾಗೂ ಜಲಸಂಪನ್ಮೂಲ ಮತ್ತು ಹುಲ್ಲುಗಾವಲು ಪ್ರದೇಶದಲ್ಲಿತ್ತು. ಇಲ್ಲಿ ಆರೋಗ್ಯಯುತ ಪಶುಗಳನ್ನು ಪೋಷಿಸಲಾಗುತ್ತಿತ್ತು. ಮಧ್ಯ ಕರ್ನಾಟಕದಲ್ಲಿ ಬೇಡರು, ಕುರುಬರು ಮತ್ತು ಗೊಲ್ಲರು ಪ್ರಮುಖ ಪಶುಪಾಲಕರಾಗಿದ್ದರು. ಸಾಕುವ ಗೋವುಗಳಲ್ಲಿ ದೇವರಿಗೆಂದು ಬಿಟ್ಟ ದನಗಳನ್ನು ದೇವರೆತ್ತುಗಳೆಂದು ಕರೆಯುತ್ತಿದ್ದರು. ಇಂದಿಗೂ ಸಹಸ್ರಾರು ಸಂಖ್ಯೆಯ ದೇವರೆತ್ತುಗಳಿರುವುದನ್ನು ಗಮನಿಸಬಹುದು. ಇವುಗಳನ್ನು ಕಾಯುವವನಿಗೆ 'ಕಿಲಾರಿ' ಎನ್ನುತ್ತಾರೆ. ಪ್ರತಿಯೊಂದು ಪಶುಪಾಲನಾ ಬುಡಕಟ್ಟು ಜನರು ತಮ್ಮ ಜಾತಿಯ ನೇತಾರರನ್ನಾಗಿ ಒಬ್ಬೊಬ್ಬರನ್ನು ಆರಾಧಿಸುವುದುಂಟು. ಕಾಡುಗೊಲ್ಲರಲ್ಲಿ ಎತ್ತಪ್ಪ - ಜುಂಜಪ್ಪ, ಲಂಬಾಣಿಗರ ಸೇವಾಲಾಲರು ಮತ್ತು ರಾಮೋಜಿ, ಕುರುಬರ ಮಾಳಿಂಗರಾಯ, ಬೇಡರ ಗಾದರಿಪಾಲನಾಯಕ ಮತ್ತು ಇತರರನ್ನು ಸ್ಮರಿಸಬಹುದು. ವಿಜಯನಗರದ ಅರಸರು ಬುಡಕಟ್ಟು ಜನರಿಗೆ ನೆಲೆಯನ್ನು ಕಲ್ಪಿಸಿ ಪಶುಪಾಲನೆಗೆ ನೆರವು ಕೊಟ್ಟರು. ಜೊತೆಗೆ ರಾಜಕೀಯದಿಂದ ಇವರನ್ನು ದೂರವಿಡಲು ಪ್ರಯತ್ನಿಸಿ ವಿಫಲರಾದಾಗ ಅನಿವಾರ್ಯವಾಗಿ ರಾಜಕೀಯಕ್ಕೂ ಬೆಂಬಲ ನೀಡಿದರು.

ಸ್ಥಳೀಯವಾದ ಆಕರಗಳು ಪಶುಪಾಲನೆಯನ್ನು ನಿರೂಪಿಸುವುದಕ್ಕಿಂತ ಭಿನ್ನವಾದ ರೀತಿಯಲ್ಲಿ ವಿದೇಶಿ ಬರವಣಿಗೆಗಳು ಈ ಬಗ್ಗೆ ಬೆಳಕು ಚೆಲ್ಲುತ್ತವೆ. ಕನ್ನಡ ಕಾವ್ಯ, ಶಾಸನಗಳಿಂದ ವಿದೇಶಿಯರ ಲೋಕದೃಷ್ಟಿ ಏನಾಗಿತ್ತೆಂಬ ಸ್ಪಷ್ಟ ಕಲ್ಪನೆ ಅವರು ನೋಡುವ ದೃಷ್ಟಿ ಮತ್ತು ರೂಪಿಸುವ ಸೃಷ್ಟಿಯಿಂದ ವ್ಯಕ್ತಪಟ್ಟಿದೆ.

ಡೊಮಿಂಗೊ ಪಯಾಸ್ (೧೫೨೦-೨೨) ವಿಜಯನಗರಕ್ಕೆ ಭೇಟಿ ಕೊಟ್ಟಾಗ ಅವನು ಕಂಡ ದೃಶ್ಯವನ್ನು ಹೀಗೆ ಹೇಳಿದ್ದಾನೆ: "ಈ ರಾಜ್ಯಗಳು ಒಳ್ಳೆಯ ಸಾಗುವಳಿ ಮಾಡಿದವುಗಳು ಮತ್ತು ಬಲು ಫಲವತ್ತಾದವುಗಳಲ್ಲದೆ, ಆಕಳು, ಎಮ್ಮೆ ಮತ್ತು ಕುರಿ ಮೊದಲಾದ ಜಾನುವಾರುಗಳ ವಿಪುಲತೆಯಿಂದ ಕೂಡಿವೆ" ಎಂದೂ ಇಲ್ಲಿನ ಮರ, ಗಿಡ, ಪ್ರಾಣಿ, ಪಕ್ಷಿಗಳು, ದವಸ-ಧಾನ್ಯಗಳ ಬಗ್ಗೆ ವಿಶೇಷ ಆಸಕ್ತಿ ವಹಿಸಿ ತಿಳಿಸಿರುವನು. ಮುಂದುವರೆದು ಈ ಸರೋವರಗಳಲ್ಲಿ ವಿಶೇಷತಃ (ಚಿಲುಮೆ) ಊಟೆಗಳು ಇಂಥವುಗಳಲ್ಲಿ, ನೀರು ಬಹುಮಟ್ಟಿಗೆ ರಾಡಿಯಾಗಿರುತ್ತದೆ. ಅದಕ್ಕೆ ಕಾರಣವೆಂದರೆ ನಾಡಿನಲ್ಲಿರುವ ಪ್ರಬಲ ಗಾಳಿ ಮತ್ತು ಧೂಳು, ನೀರು ತಿಳಿಯಾಗಲು ಬಿಡುವುದಿಲ್ಲ. ಇದೂ ಅಲ್ಲದೆ, ಅವುಗಳಲ್ಲಿ ನೀರು ಕುಡಿಯುವ ಎಮ್ಮೆಗಳು, ಆಕಳು, ಎತ್ತುಗಳು ಮತ್ತು ಇತರ ಚಿಕ್ಕ ಜಾನುವಾರುಗಳ ಸಂಖ್ಯೆ ಅಧಿಕ. ಏಕೆಂದರೆ ಈ ನಾಡಿನಲ್ಲಿ ಅವರು ಆಕಳುಗಳನ್ನು ಕೊಲ್ಲುವುದಿಲ್ಲ ಎಂಬುದನ್ನು ತಿಳಿದಿರಬೇಕು. ಎತ್ತುಗಳು ಹೊರೆ ಹೊರುವ ಪ್ರಾಣಿಗಳು ಮತ್ತು ಹೇಸರಗತ್ತೆಗಳಂತಿರುತ್ತವೆ: ಇವು ಅವರ ಎಲ್ಲ ಸರಕುಗಳನ್ನು ಹೊತ್ತೊಯ್ಯುತ್ತವೆ. ಅವರು ಆಕಳುಗಳನ್ನು ಪೂಜಿಸುತ್ತಾರೆ ಮತ್ತು ಅವುಗಳನ್ನು ಕಲ್ಲಿನಲ್ಲಿ ಕಟ್ಟಿದ ದೇವಸ್ಥಾನಗಳಲ್ಲಿ ಇಡುತ್ತಾರೆ. ಹಾಗೆಯೇ ಹೋರಿಗಳನ್ನು ಕೂಡ. ಈ ದೇವಸ್ಥಾನಗಳಿಗೆ ದಾನ ಮಾಡಿದ ಅನೇಕ ಹೋರಿಗಳಿದ್ದು ಅವು ಊರು ಸುತ್ತಿದರೂ ಯಾರೂ ಅವುಗಳಿಗೆ ತೊಂದರೆ ಅಥವಾ ಹಾನಿ ಮಾಡುವುದಿಲ್ಲ ಎಂದು ತಿಳಿಸಿದ್ದಾನೆ. ಬಹುಶಃ ಅವನು ಗೂಳಿಗಳನ್ನು ಅಥವಾ ತುರುಮಂದೆಯನ್ನು ಈ ರೀತಿ ಬಣ್ಣಿಸಿರಬೇಕು.[25]

ಶ್ರೀಕೃಷ್ಣದೇವರಾಯನ ಕಾಲದಲ್ಲಿ ದೊರೆ, ದಳವಾಯಿಗಳು, ರಾಜನ ಪರವಾಗಿ ಬಂದ ಇತರ ವ್ಯಕ್ತಿಗಳಿಗೆ ಕುರಿ, ಕೋಳಿ, ಬೆಣ್ಣೆ, ಜೇನುತುಪ್ಪ ಇತ್ಯಾದಿ ವಸ್ತುಗಳನ್ನು ಕೊಡುತ್ತಿದ್ದನು. ಹಂಪೆ ರಾಜಧಾನಿಯ ಹೆಬ್ಬಾಗಿಲಿಗೆ ಹೊಂದಿಕೊಂಡಂತೆ ಎರಡು ದೇವಾಲಯಗಳಿಗೆ (ಪಟ್ಟಣದ ಯಲ್ಲಮ್ಮ) ಕುರಿಗಳನ್ನು ಕಡಿಯಲಾಗುತ್ತದೆ. ಇಲ್ಲಿ ಬಿಟ್ಟರೆ ಇನ್ನೆಲ್ಲೂ ಕುರಿ ಕಡಿಯಲಾಗುತ್ತಿರಲಿಲ್ಲ. ಅವುಗಳ ರಕ್ತವನ್ನು ದೇವಾಲಯದಲ್ಲಿ ಮೂರ್ತಿಗಳಿಗೆ ನೈವೇದ್ಯ ಮಾಡುತ್ತಾರೆ. ತಲೆಗಳನ್ನು ಅವನಿಗೆ ಬಿಡಲಾಗುತ್ತದೆ ಮತ್ತು ಪ್ರತಿಯೊಂದು ಕುರಿಗೆ ಒಂದು ಚಕ್ರಮ್ (?) ಕೊಡುತ್ತಾರೆ. ೧ ಈ ಪಶುಬಲಿಯ ಸಮಯಕ್ಕೆ ಅಲ್ಲೊಬ್ಬ ಆ ದೇವಾಲಯದ ಮೇಲ್ವಿಚಾರಣೆಯಲ್ಲಿ ಉಪಸ್ಥಿತನಿದ್ದು ಕುರಿ ಅಥವಾ ಆಡಿನ ತಲೆ ಕಡಿದ ಸಲಕ್ಕೊಮ್ಮೆ ಮೂರ್ತಿ ಆ ಬಲಿಯನ್ನು ಸ್ವೀಕರಿಸುವುದರ ಸಂಕೇತವಾಗಿ ಕೊಂಬು ಊದುತ್ತಾನೆ (ಕಹಳೆ). ವಿಜಯನಗರದ ರಾಜಧಾನಿಯಲ್ಲಿ ಪ್ರತಿ ಶುಕ್ರವಾರ ಸಂತೆ ಆಗುತ್ತಿತ್ತು. ಅಂದು ಹಂದಿ, ಕೋಳಿ, ಮೀನು ಮೊದಲಾದವು ಮಾರಾಟವಾಗುತ್ತಿದ್ದವು. ಹಣ್ಣು-ಹಂಪಲು, ನಿಂಬೆ, ಕಿತ್ತಾಳೆ, ವಜ್ರ, ವಸ್ತುಗಳು ವ್ಯಾಪಕ ಮಾರುಕಟ್ಟೆಯಲ್ಲಿ ಕವುಜುಗ, ಲಾವಕ್ಕಿ, ಮೊಲ ಇತರ ಪಕ್ಷಿ ಬೇಟೆ ಪ್ರಾಣಿಗಳನ್ನು ಮಾರುತ್ತಿದ್ದರು. ಕುದುರೆ ಎತ್ತುಗಳು ನದಿಯನ್ನು ಈಜಿ ದಾಟುತ್ತಿದ್ದವು. ಇವು ಒಮ್ಮೊಮ್ಮೆ ದೋಣಿಗಳಲ್ಲಿಯು ದಡ ಸೇರುತ್ತಿದ್ದವು.

ವಿಜಯನಗರ ಕೇಂದ್ರ ಸ್ಥಳದಲ್ಲಿ ಜೀವಂತ ಕುರಿಗಳನ್ನು ಮಾರುವ ಕುರಿ ಮಾರ್ಕೆಟ್ ಇತ್ತು. ಇಲ್ಲಿನ ಆಕಳುಗಳು ಮತ್ತು ಎಮ್ಮೆಗಳು ಸುಂದರವಾಗಿದ್ದವು. ಆಡು-ಮರಿ ಮತ್ತು ಟಗರುಗಳಿದ್ದು ಲಗಾಮು (ಜೀನು) ತೊಡಿಗಿಸಲಾಗುತ್ತಿತ್ತು. ಹುಡುಗರು ಅವುಗಳ ಮೇಲೆ ಕುಳಿತು ನಡೆಸುತ್ತಾರೆ.[26] ಕೋಣ, ಕಾಯಿಪಲ್ಯೆಗಳು, ಗಿಡ, ತೋಟ, ಕಟ್ಟಡ, ಜನರ ರುಚಿಗಳ ಬಗ್ಗೆ ವಿದೇಶಿ ಪ್ರವಾಸಿಗರು ತಿಳಿಸಿದ್ದಾರೆ.

ಒಂದು ವಾರ ನಡೆಯುವ ಹಬ್ಬದಲ್ಲಿ (ಫಲಪೂಜೆ ಅಥವಾ ಮಹಾನವಮಿ) ೨೪ ಕೋಣ, ೧೫೦ ಕುರಿಗಳ ವಧೆಯನ್ನು ವೀಕ್ಷಿಸುತ್ತಾನೆ. ಈ ಕೋಣ, ಕುರಿಗಳ ರುಂಡಗಳನ್ನು ಕೆಲವು ದೊಡ್ಡ ಮಚ್ಚುಗತ್ತಿಗಳಿಂದ ಒಂದೇ ಹೊಡೆತಕ್ಕೆ ಕತ್ತರಿಸುತ್ತಾರೆಂಬುದನ್ನು ನೀವು ತಿಳಿಯಬೇಕೆಂದು ಡೊಮಿಂಗ್‌ಫಯಾಜ್ ತಿಳಿಸುತ್ತಾನೆ.[27]

ಪ್ರಾಣಿಗಳ ನಡುವೆ ಕಾಳಗವನ್ನು ಏರ್ಪಡಿಸಲಾಗುತ್ತಿತ್ತು. ಟಗರಿನ ಕಾಳಗ, ಓಣಿ, ಬಜಾರುಗಳಲ್ಲಿ ದಳವಾಯಿಗಳ ಪಡೆಗೆ ತನ್ನದೆ ಮಾರುಕಟ್ಟೆ ಇತ್ತು. ಅಲ್ಲಿ ಕುರಿ, ಕೋಳಿ, ಆಡು, ಹಂದಿ, ಮೊಲ, ಕವುಜಗ ಮತ್ತು ಇತರ ಹಕ್ಕಿಗಳ ಮಾಂಸ ಯಥೇಚ್ಛವಾಗಿ ದೊರೆಯುತ್ತಿತ್ತು. ಎಷ್ಟು ಯಥೇಚ್ಛವೆಂದರೆ ನೀವು ವಿಜಯನಗರದ (ಭಿಸ್ನಗದವನಗರ)ಲ್ಲಿದ್ದಂತೆಯೇ ಭಾಸವಾಗುತ್ತಿತ್ತು. ಇತರ ಕಾಳುಗಳ ಅನೇಕಾನೇಕ ಜಾತಿಗಳು ದೊರಕುತ್ತಿದ್ದವೆಂದು ತಿಳಿಸಲಾಗಿದೆ.

ವಿಜಯನಗರ ರಾಜರು ಎಲ್ಲ ತರಹದ ಭಕ್ಷ್ಯ ತಿನ್ನುತ್ತಿದ್ದರಾದರೂ, ಎತ್ತು ಅಥವಾ ಆಕಳಿನ ಮಾಂಸ ತಿನ್ನುತ್ತಿರಲಿಲ್ಲ. ಅವುಗಳನ್ನು ಎಂದು ಕೊಲ್ಲುತ್ತಿರಲಿಲ್ಲ. ಅವರು ಕುರಿ, ಹಂದಿ, ಚಿಗರಿ, ಮೊಲಗಳ ಮಾಂಸವನ್ನು ಮತ್ತು ಕವುಜಗ, ಪಾರಿವಾಳ, ಲಾವಕ್ಕಿ, ಇತರ ಎಲ್ಲ ಬಗೆಯ ಹಕ್ಕಿ, ಗುಬ್ಬಿಗಳ ಮಾಂಸವನ್ನು ಜೊತೆಗೆ ಇಲಿ, ಬೆಕ್ಕು, ಉಡಗಳನ್ನು ಸಹಾ ತಿನ್ನುತ್ತಿದ್ದರೆಂದು ವಿದೇಶಿ ಪ್ರವಾಸಿ ನ್ಯೂನಿಜ್ ಹೇಳಿದ್ದಾನೆ. ಮುಂದುವರೆದು ನ್ಯೂನಿಜ್ ವಿಜಯನಗರ ಸಾಮ್ರಾಜ್ಯದಲ್ಲಿ ಉತ್ಸವ, ಆಚರಣೆಗಳು ನಡೆಯುತ್ತಿದ್ದವು. ೯ ಮಂಟಪ, ೯ ಪ್ರಧಾನ ದಳವಾಯಿ, ನೃತ್ಯಗಾರ್ತಿಯರು ರಾಜನಿಗೆ ನೃತ್ಯ ತೋರಿಸಲು ಬರುತ್ತಾರೆ. ೯ ದಿನಗಳ ಕಾಲ (ದಸರಾ ?) ಅಧಿಕಾರಿಗಳ ಸಮ್ಮುಖದಲ್ಲಿ ಪ್ರಾಣಿಗಳನ್ನು ಬಲಿ ಕೊಡುತ್ತಾರೆ. ಮೊದಲ ದಿನ ೯ ಕೋಣ, ೯ ಕುರಿ ಮತ್ತು ೯ ಆಕಳುಗಳನ್ನು ಕೊಲ್ಲುತ್ತಾರೆ. ಹೀಗೆ ದಿನದಿಂದ ದಿನಕ್ಕೆ ಸಂಖ್ಯೆಯನ್ನು ಹೆಚ್ಚಿಸುತ್ತಾ ಹೋಗುತ್ತಾರಲ್ಲದೆ, ರಾಜನೊಂದಿಗೆ ಪ್ರಧಾನ ಅಶ್ವಪತಿ ಇರುತ್ತಾನೆ.[28]

ಕೃಷ್ಣದೇವರಾಯನ ಪ್ರಧಾನ ಅಶ್ವಪತಿಯಾಗಿದ್ದ ಮಲಪನಾಯಕ ಕ್ಯಾಲಿಕಟ್‌ದ ಒಳನಾಡಿನಲ್ಲಿರುವ ಅವಳಿ ಕೋಲಾರ ಜಿಲ್ಲೆ ಮೊರಸು ಒಕ್ಕಲು ಪ್ರದೇಶದ ದೊರೆಯಾಗಿದ್ದವನು. ಈ ನಾಡಿನಲ್ಲಿ ಕಬ್ಬಿಣ ಮತ್ತು ಹತ್ತಿ, ಭತ್ತ, ಆಡುಗಳು, ಕುರಿಗಳು, ಆಕಳುಗಳು ಮತ್ತು ಎಮ್ಮೆಗಳು ವಿಫುಲವಾಗಿದ್ದು, ಅವನಿಗೆ ೧೫ ಸಾವಿರ ಪದಾರ್ಥಗಳ ಆದಾಯವಿದೆ. ೪೦೦ ಕುದುರೆ ಮತ್ತು ೬೦೦೦ ಕಾಲಾಳುಗಳೊಂದಿಗೆ ಸೇವೆ ಮಾಡಲು ಬಾಧ್ಯಸ್ಥರು ಮತ್ತು ರಾಜನಿಗೆ ಪ್ರತಿ ವರ್ಷ ೫ ಸಾವಿರ ಪದಾರ್ಥಗಳನ್ನು ಕೊಡುತ್ತಾನೆಂದು ನ್ಯೂನಿಜ್ ತಿಳಿಸಿದ್ದಾನೆ. ಅಮರ ನಾಯಕರು ತಮ್ಮ ಶಕ್ತಿ ಮೀರಿ ರಾಜನಿಗೆ ಸಹಕರಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಇಡೀ ಸಾಮ್ರಾಜ್ಯ

ಸಂಪತ್ತು ಯಾವುದೇ ಒಬ್ಬ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿರಲಿಲ್ಲ ಅದು ಹಂಚಿ ಹೋಗಿತ್ತು. ಅಂದು ಜನಸಾಮಾನ್ಯರು ತಾನು ರೂಢಿ ಸಂಪ್ರದಾಯಗಳನ್ನು ಯಾರ ಒತ್ತಡಕ್ಕೂ ಬದಲಿಸಿಕೊಂಡಿಲ್ಲವೆಂಬಂತೆ ತಿಳಿಯುತ್ತದೆ. ವಿಜಯನಗರದಲ್ಲಿ ಬ್ರಾಹ್ಮಣರು ಶ್ರೇಷ್ಠರು. ಒಬ್ಬನೇ ದೇವರಾದ ತ್ರಿಮೂರ್ತಿಯನ್ನು ಪೂಜಿಸುತ್ತಾರೆ. ಕನ್ನಡದವರಾದ ಇನ್ನೊಂದು ವರ್ಗವಿದೆ. ಅವರ ದೇವಾಲಯಗಳಲ್ಲಿ ಮಂಗಗಳು, ಆಕಳುಗಳು, ಎಮ್ಮೆಗಳು ಮತ್ತು ರಾಕ್ಷಸರಿಗೆ (ವಿಗ್ರಹ) ಅವರು ಭಕ್ತಿ ತೋರಿಸುತ್ತಾರೆ. ಮಂಗಗಳನ್ನು ಇಲ್ಲಿ ಕೊಲ್ಲುವುದಿಲ್ಲ. ವಿಜಯನಗರ ಬ್ರಾಹ್ಮಣರು ಮತ್ತು ಈ ಜನರ ಕಟ್ಟಳೆಗಳಿದ್ದವು. ಆಕಳುಗಳಿಗೆ ಭಕ್ತಿ ತೋರುತ್ತಿದ್ದರು.

ಆದಿ ಮಾನವನು ಆಹಾರಕ್ಕಾಗಿ ಅಲೆದಾಡುತ್ತಿದ್ದ ಕಾಲದಲ್ಲಿ ಗೆಡ್ಡೆ, ಗೆಣಸುಗಳ ಜೊತೆಗೆ ಮಾಂಸಹಾರವನ್ನು ರೂಢಿಸಿಕೊಂಡನು, ಸುಲಭವಾಗಿ ಪ್ರಾಣಿಗಳು ಕೈಗೆ ಸಿಗದೆ ಹೋದಾಗ ಅವುಗಳನ್ನು ಬೇಟೆಯಾಡ ತೊಡಗಿದನು. ಹೀಗೆ ಮಾಂಸದ ರುಚಿಗಾಗಿ, ಹಸಿವಿಗಾಗಿ ಆರಂಭದಲ್ಲಿ ಬಹುಮುಖ್ಯ ಆಹಾರ ಪದ್ಧತಿಯಾಗಿ ಬೇಟೆ ಮುಖ್ಯಪಾತ್ರವನ್ನು ವಹಿಸಿತು.

ಅನಂತರದಲ್ಲಿ ಬೇಟೆ ಒಂದು ಕ್ರೀಡೆಯಾಗಿಯೂ, ಮನರಂಜನೆಯ ಒಂದು ಭಾಗವಾಗಿಯೂ ಕಂಡಿರಬೇಕು. ರಾಜರು ಸಹ ವಿರಾಮದ ವೇಳೆಯಲ್ಲಿ, ಹಬ್ಬ ಹರಿದಿನಗಳ ಸಂದರ್ಭಗಳಲ್ಲಿ ಮೋಜಿಗಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಹೀಗೆ ಆರಂಭದಲ್ಲಿ ಆಹಾರದ ಅಗತ್ಯಕ್ಕಾಗಿ ಹುಟ್ಟಿಕೊಂಡದ್ದು ಬೇಟೆ. ಬರುಬರುತ್ತ ಜನ ತಮ್ಮ ಮನೆಯಂಗಳದಲ್ಲಿಯೇ ಕೆಲವು ಪ್ರಾಣಿಗಳನ್ನು ಪಳಗಿಸಿ ಸಾಕಲಾರಂಭಿಸಿದರು. ಇವುಗಳ ಬಹುಮುಖ ಲಾಭವನ್ನು ಅರಿತ ಇವನು ಪಶು ಸಂಗೋಪನೆಗೆ ತೊಡಗಿದನು. ಪಶುಗಳು ನೀಡುತ್ತಿದ್ದ ಹಾಲು, ಬೆಣ್ಣೆ, ತುಪ್ಪ, ಸಗಣಿ ಎಲವು ಅವನ ಅಗತ್ಯ ವಸ್ತುಗಳೇ ಆಗಿದ್ದವು.

ಹೀಗೆ ಪಶುಗಳನ್ನೇ ಸಾಕಿ ಬದುಕು ನಡೆಸುವವರು ಗೊಲ್ಲರಾದರೆ, ಕುರಿಗಳನ್ನು ಸಾಕುವವರು ಕುರುಬರಾದರು. ಮುಂದೆ ಇವೇ ಜಾತಿ ಆಧಾರಿತ ಸಮುದಾಯಗಳಾಗಿರುವುದನ್ನು ಕಾಣುತ್ತೇವೆ.

## 6.5. ವಿಜಯನಗರ ಕಾಲದಲ್ಲಿ ತಳವಾರಿಕೆಯ ವೃತ್ತಿ

'ತಳವಾರ' ಎಂದರೆ ಊರ ಕಾವಲುಗಾರ, ಗ್ರಾಮರಕ್ಷಕ, ಸಂರಕ್ಷಕ ಎಂದರ್ಥ. ಇವರಿಗೆ ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ತಳರ, ತಳವಾರ, ತಲವಾರ, ತಲಕಾರ, ತಳಾರಿ ಎಂದೆಲ್ಲಾ ಉಲ್ಲೇಖವಿದೆ. ಕತ್ತಿ ಹಿಡಿದು ಊರಿನ ಜನರ ಹಿತವನ್ನು ಕಾಪಾಡತಕ್ಕವನೆಂದೂ ಪಂಚಾಯತಿ ಕಟ್ಟೆಗಳಲ್ಲಿ (ಪ್ರತಿ ಗ್ರಾಮಗಳಲ್ಲಿ ಊರಿನ ತಳವಾರ, ಕೋಲುಕಾರ, ಓಲೆಕಾರ ಇರುತ್ತಿದ್ದರು) ಕತ್ತಿ ಕೋಲು ಹಿಡಿದು ಸುದ್ದಿಸಾರುವವನು, ಆರಕ್ಷಕನ ಹೆಗ್ಗುರುತಾಗಿಯು ಊರನ್ನು ಕಾಯುವ ರಕ್ಷಿಸುವ ಅಧಿಕಾರಿಗಳಂತೆಯೇ ಹೊಣೆಯನ್ನು ನಿರ್ವಹಿಸುತ್ತಿದ್ದವರಿಗೆ ತಳವಾರರೆಂದು ಕರೆಯುತ್ತಾರೆಂದು ತಿಳಿಸಲಾಗಿದೆ.[29] ಇವರು ಗ್ರಾಮರಕ್ಷಣೆಯ ಜೊತೆಗೆ ಆಗಾಗ

ಪೂಜಾರಿಕೆಯನ್ನು ಕರ್ನಾಟಕದ ಕೆಲವು ಭಾಗಗಳಲ್ಲಿ ಮಾಡಿಕೊಂಡು ಬಂದಿದ್ದಾರೆ. ತಳವಾರ, ವಾಲಿಕಾರ, ಕೋಲುಕಾರ ಗೌಡ, ಪಟೇಲ, ಸಿಕ್ಕರು, ಗೂರ್ಖಾಗಳಂತೆ ಬೇಡರು ಸೈನಿಕ, ತಳವಾರ ವೃತ್ತಿಯಲ್ಲಿದ್ದರು. ಸೈನಿಕ ವೃತ್ತಿಯ ಸಮೀಪದ ಇತರ ವೃತ್ತಿಗಳೆಂದರೆ ಅಂಗರಕ್ಷಣೆ, ನಗರ, ಗ್ರಾಮ ರಕ್ಷಣೆ, ಕೋಟೆ-ಕೊತ್ತಲಗಳ ಕಾವಲು ಕೆಲಸ, ಗಸ್ತಿ ತಿರುಗುವುದು, ಬೇಟೆಯಾಡುವುದು. ಈ ಬಗೆಯ ಕರ್ತವ್ಯದ ಲಕ್ಷಣಗಳು ಹಿಂದೆ ಚಾಲ್ತಿಯಲ್ಲಿದ್ದವು.

ತಳವಾರಿಕೆಯ ಚರಿತ್ರೆ ಬಹುಪ್ರಾಚೀನವಾದುದು. ಹಳ್ಳಿಗರ ಗ್ರಾಮಗಳ ರಕ್ಷಕರೇ ಈ ತಳವಾರರು. ಗ್ರಾಮ ಸೇವೆಯೇ ದೇಶ ಸೇವೆಯೆಂದು ತಮ್ಮನ್ನು ತಾವು ಅರ್ಪಿಸಿಕೊಂಡವರಲ್ಲದೆ ಈಗಿನ ಪೋಲೀಸರಂತೆ ಅಂದು ಕಾರ್ಯ ನಿರ್ವಹಿಸಿದ್ದರು. ಡಾ. ವಿರೂಪಾಕ್ಷ ಪೂಜಾರಹಳ್ಳಿಯವರು 'ವಿಜಯನಗರ ಅಧ್ಯಯನ' ಎಂಬ ಕೃತಿಯಲ್ಲಿ ಈ ವಿಷಯವನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. ಅದು ಇಂತಿದೆ.

ವಿಜಯನಗರ ಪೂರ್ವದಲ್ಲಿಯೂ ತಳವಾರರ ಆಡಳಿತ ರಾಜಪ್ರಭುತ್ವದಲ್ಲಿ ಅವರಿಗೂ ಉನ್ನತ ಸ್ಥಾನಮಾನಗಳಿದ್ದವೆಂಬುದಕ್ಕೆ ಅನೇಕ ಉದಾಹರಣೆಗಳಿವೆ. ಮುಮ್ಮಡಿ ಸಿಂಗೇಯನಾಯಕನು ನಾಡ ತಳವಾರನಾಗಿದ್ದನು. ಕಂಪಿಲರಾಯನ, ಕುಮಾರ ರಾಮನಾಥರು ನಾಡತಳವಾರಿಕೆಯಿಂದ ಬಂದವರಾಗಿದ್ದರೂ, ಅರಸರಾಗಿ ಖ್ಯಾತಿ ಮೆರೆದಿದ್ದುದು ಗಮನಾರ್ಹ.

ಹಿಂದಿನ ರಾಜಪ್ರಭುತ್ವದಲ್ಲಿ ಪ್ರಚಲಿತವಿದ್ದಂತೆ ತಳವಾರಿಕೆ ವಿಜಯನಗರ ಕಾಲದಲ್ಲಿ ವ್ಯಾಪಕವಾಗಿದ್ದಿತು. ವಿಜಯನಗರ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಕ್ಷಣಕ್ಷೇತ್ರವು ಮಹತ್ವದ್ದು, ಈ ರಕ್ಷಣೆಯಲ್ಲಿ ತಳವಾರರು ನಿಷ್ಣಾತರು. 'ತಳವಾರಿಕೆ' ನಿರ್ಣಾಯಕ ಹುದ್ದೆಯಾಗಿತ್ತು. ಅಂದಿನ ಗ್ರಾಮಾಡಳಿತಕ್ಕೆ ಸಂಬಧಿಸಿದ ಇಬ್ಬರ ಹೆಸರುಗಳನ್ನು ಇಲ್ಲಿ ಸ್ಮರಿಸಬಹುದು. ಒಬ್ಬ ಸೇನ ಬೋವ (ಶಾನುಭೋಗ) ಮತ್ತೊಬ್ಬ ತಳವಾರ[30]. ಗ್ರಾಮದಲ್ಲಿ ಗೌಡ, ಪಟೇಲ ಅಧಿಕಾರ ನಡೆಸಿದರೆ, ಅಕ್ಷರಸ್ಥನಾದ ಶಾನುಭೋಗ ಕರಣಿಕನಾಗಿದ್ದನು ತಳವಾರನು ಗ್ರಾಮ, ನಾಡು, ನಗರದ ರಕ್ಷಕ ಕಾವಲುಗಾರನಾಗಿದ್ದನು. ಆಡಳಿತದಲ್ಲಿ Head man ನಂತರ Accountant ಸ್ಥಾನಮಾನದ ಬಗ್ಗೆ ಡಾ.ಜಿ.ಎಸ್. ದೀಕ್ಷಿತ್ ಹೇಳದ್ದಾರೆ.[31]

ವಿಜಯನಗರವನ್ನಾಳಿದ ನಾಲ್ಕು ವಂಶಗಳಾದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶದ ಪ್ರಮುಖ ಅರಸರು ತಳವಾರಿಕೆಗೆ ಪ್ರೋತ್ಸಾಹ ಕೊಟ್ಟಿದ್ದು ಗಮನಾರ್ಹ. ವಿಶೇಷವಾಗಿ ತುಳುವ ಅರಸರು ತಳವಾರಿಕೆಗೆ ಆದ್ಯತೆ ಕೊಟ್ಟು ರಕ್ಷಣಾಕ್ಷೇತ್ರವನ್ನು ಇಮ್ಮಡಿಗೊಳಿಸಿದ್ದು ಸ್ಪಷ್ಟ. ಆರಂಭದ ಅರಸರು ಹಿಂದಿನ ಪದ್ಧತಿಯನ್ನೆಲ್ಲ ಅನುಸರಿಸಿದರು. ಕೆಲವರು ಪರಂಪರೆ, ವಂಶಾವಳಿ ಮತ್ತು ತಲೆಮಾರಿನ ರೂಢಿ - ಸಂಪ್ರದಾಯಗಳಿಗೆ ಜೋತು ಬಿದ್ದು, ಮತ್ತು ಆ ಮನೆತನದ ಸದೃಢ ಅರ್ಹ ವ್ಯಕ್ತಿಗಳು ತಳವಾರಿಕೆ ನಡೆಸುತ್ತಿದ್ದರು. ಅರಸರು ತಳವಾರ ವೃತ್ತಿಯಲ್ಲಿದ್ದ ವ್ಯಕ್ತಿಗಳಿಗೆ ಉಂಬಳಿ ಇನಾಂ ಭೂದಾನ, ಸುಂಕ (ತೆರಿಗೆ) ಕೊಡುವ ಮತ್ತು ಕೆಲವು ಹಕ್ಕು ಬಾದ್ಯತೆಗಳಿಂದ ವಿನಾಯ್ತಿ ಪಡೆದಿದ್ದರು.

ಕ್ರಿ.ಶ. ೨.೮.೧೪೨೨ರ ಶಾಸನವು ಮಲೆಯೂರು ಗ್ರಾಮವನ್ನು ವಾಸುದೇವರಿಗೆ ೩ನೇ ವೀರ ಹರಿಹರ ರಾಯರ ತಂದೆ ದೇವರಾಯ ಕೊಟ್ಟಿರುತ್ತಾರೆ. ಕನಕಗಿರಿಯ ಶ್ರೀವಿಜಯದೇವರ... ಅಂಗಭೋಗ.... ಮಲೆಯೂರು ಚತುಸ್ಸೀಮೆಯೊಳಗಾದ... ತಳವಾಟುಕೆ ಗ್ರಾಮದ ಮಣಯವೊಸಗೆ ಕ್ಷೌರ,[32] ಇತರ ವಿವರಗಳು ಈ ಶಾಸನದಲ್ಲಿ ಬಂದಿವೆ.

ವಿಜಯನಗರದ ಆರಂಭದ ಅವಧಿಯು ಸಂಘಟನೆ ಮತ್ತು ಹೋರಾಟದ ಕಾಲವಾಗಿತ್ತು. ರಾಜಪ್ರಭುತ್ವ ತಳವಾರಿಕೆಗೆ ಉದಾರ ಪ್ರೋತ್ಸಾಹ ನೀಡಿದ ಉದಾಹರಣೆಗಳಿವೆ. ಶಿವಮೊಗ್ಗ ಜಿಲ್ಲೆಯ (೧೪೩೧ರ ಒಂದು) ಶಾಸನದಲ್ಲಿ ಏನುಳ್ಳ ಸುಂಕ ತಳವಾರಿಕೆಗೆ ಸಲುವ ಅಂಬಲಿ ವುಡುಗೊರೆ ಗೌಡುಂಬಳಿ ಸಹವಾಗಿ ಎಂದು ತಿಳಿದು ಬರುತ್ತದೆ.[33] ಇದೇ ಜಿಲ್ಲೆಯ ಮತ್ತೊಂದು ಶಾಸನದಲ್ಲಿ "ಸೀಮೆಗ್ಗೆ ತಳವಾರಿಕೆಯಿಂದ ಗಾಜನೂರು ಯಡತ್ತೋರೆ ಸೀಮೆಯಲ್ಲು ಈ ಮಠಕ್ಕೆ ಉತ್ತರವಾದ ಗ್ರಾಮದವರು... ತೆಗೆದುಕೊಂಡು ಹೋದಂಥದಕ್ಕೆ". ಎಂದು ತಳವಾರರ ಆದಾಯ ಮತ್ತು ಭಕ್ತಿಯ ಸ್ಥಿತಿಗತಿಯನ್ನು ಸಂಕೇತಿಸುತ್ತದೆ. ತಳವಾರಿಕೆಯಿಂದ, ಆದಾಯವನ್ನು ವಿವಿಧ ಸಮಾಜ ಸೇವಾ ಕಾರ್ಯಗಳಿವೆ ಬಳಸಿಕೊಳ್ಳುತ್ತಿದ್ದರು. ಕ್ರಿ.ಶ. ೧೪೬೮ರ ಮುಳಬಾಗಿಲಿನ ಒಂದು ಶಾಸನದಲ್ಲಿ ಸುಂಗ ಮಗ್ಗೆಮೆ ತಳವಾರಿಕೆ ಕಾಣಿಕೆ ಕಡ್ಡಾಯ ಎಂದಿದೆ.[34] ಬಹುಶಃ ಆ ಕಾಲದಲ್ಲಿ ತಳವಾರನಿಗೆ ಕೊಡುವ ಸುಂಕ ಕಡ್ಡಾಯವಾಗಿದ್ದು ಆರ್ಥಿಕ ಸ್ಥಿತಿ-ಗತಿ ಸುಧಾರಣೆ ಮಾಡುವ ಕ್ರಮ ಇರಬೇಕು. ಹಾಗೆಯೇ ಸಾಗರ ತಾಲೂಕಿನ ಶಾಸನದಲ್ಲಿ 'ಅಂಕಸುಂಕ ಟಂಕಸಾಲೆ ತಳವಾಟಿಕೆ ನಿದಿ ನಿಕ್ಷೇಪ'ದ ವಿವರವಿದೆ. ವಿಜಯನಗರ ಕಾಲದಲ್ಲಿ ಗ್ರಾಮರಕ್ಷಣೆ ಸಂಪತ್ತಿನ ಕ್ರೋಢೀಕರಣಕ್ಕೆ ಈ ಪದ್ಧತಿ ಹಾಸುಹೊಕ್ಕಾಗಿತ್ತು. ವೇಶ್ಯಗೃಹಗಳ ತೆರಿಗೆಯಿಂದ ಬಂದ ೧೨ ಸಾವಿರ ಪಣಂ ಆದಾಯವನ್ನು ಪಹರೆಯವರಿಗೆ ಸಂಬಳವಾಗಿ ಕೊಡುತ್ತಿದ್ದರು. ಈ ಪಹರೆಯವರು ಕೋಟೆಯೊಳಗೆ ನಡೆಯುವ ಎಲ್ಲಾ ವಿಚಾರಗಳನ್ನು ತಿಳಿದುಕೊಳ್ಳಬೇಕು. ಕಳ್ಳವುಗಳನ್ನು ಪತ್ತೆ ಹಚ್ಚಿ ವರದಿ ಮಾಡಬೇಕು[35] ಎಂದು ಹೇಳುತ್ತದೆ.

ತುಳು ಸಂತತಿಯ ಶ್ರೀಕೃಷ್ಣದೇವರಾಯನ ಕಾಲದಲ್ಲಿ ತಳವರಿಕೆ ಬಗ್ಗೆ ಹೆಚ್ಚಿನ ಉಲ್ಲೇಖಗಳಿವೆ. ಮೂಲತಃ ತುಳು ಸಂತತಿ ತಳವಾರಿಕೆಯಿಂದ ವಿಕಾಸವಾಗಿರಬೇಕು. ಇವರ ಮೂಲ ಪುರುಷರು ತಳವಾರ ಈಶ್ವರನಾಯಕ, ನರಸನಾಯಕ ಮೊದಲಾದವರನ್ನು ಇಲ್ಲಿ ಸ್ಮರಿಸಬಹುದು. ಕೃಷ್ಣದೇವರಾಯನು ತನ್ನಪಟ್ಟದ ಅವಧಿಯಲ್ಲಿ ಶ್ರೀವಿಠಲೇಶ್ವರ ದೇವರ ಅಮೃತಪಡಿ ನೈವೇದ್ಯಕ್ಕೆ ಅನೇಕ ಗ್ರಾಮ, ದವಸ ಧಾನ್ಯಗಳನ್ನು ದಾನ ಮಾಡುತ್ತಾನೆ. ವಿಠಲಸ್ವಾಮಿ ದೇವಾಲಯದ ಮುಂದಿನ ಮಂಟಪದ ದಕ್ಷಿಣ ಗೋಡೆಯ ಶಾಸನವು.... "ಯ ಗ್ರಾಮ ೧ ಗ್ರಾಮಗಳಿಗೆ ಸಲ್ಲುವ ಸಕಲ ಸುವರ್ನಾದಾಯ ಸಕಲ ಬತ್ತಾದಾಯ ಸ್ತಳಸುಂಕ ತಳವಾರಿಕೆ ಸಾಂಮ್ಯ ಹಾರಿಕಾಯಿ ಈ ಗ್ರಾಮಗಳ ಜೋಡಿ ಬಿರಾಡ ತೆರಿಗೆ ಕಾಲುವೆಯ ನೀರ ಬಿರಾಡ ಮೊದಲಾದ ಏನು ಉಂಟಾದನೂ ಸರ್ವಸಾಮಾನ್ಯವಾಗಿ ನಮ್ಮ ತಂದೆ ಸರಸಣನಾಯಕ ವೊಕೆಯರಿಗೆ ನಂಮ ತಾಯಿ ನಾಗಾಜಿ ಅಮ್ಮನವರಿಗೂ ಪುಣ್ಯವಾಗಿ ಸೂರ್ಯಗ್ರಹಣ ಪುಣ್ಯ ಕಾಲದಲೂ ಆಚಂದ್ರಾರ್ಕಸ್ತಾಯಿಯಾಗಿ ನಡೆವ ಮರಿಯಾದೆಯಲೂ"

ಸಮರ್ಪಿಸಿದೆ. ಈ ಧರ್ಮಕೆ ಎಂದು ವಿವರವಾಗಿ ತಿಳಿದುಬರುತ್ತದೆ.[36] ಕ್ರಿ.ಶ. ೧೫೧೦ರ ಶಾಸನದಲ್ಲಿ ಸುಂಕವನ್ನು ಕೊಂಡವನ್ನು ತನ್ನ ತಲಾರಿಗೆ ಮದುವಣಿಗೆ ಕೊಟ್ಟನುಯೆಂದು ತಿಳಿದುಬರುತ್ತದೆ.[37]

ಕ್ರಿ.ಶ. ೧೨.೩.೧೫೧೩ರ ಕೃಷ್ಣದೇವರಾಯನ ಶಾಸನದಲ್ಲಿ ತಳವಾರರಿಗೆ ಗ್ರಾಮಗಳ ದಾನ ನೀಡಿದ ವಿಷಯ ತಿಳಿದು ಬರುತ್ತದೆ. "ಸ್ತಳದ ಸುಂಕ ಸಾಮ್ಯ ತಳವಾರಿಕೆಯ ರೋಕ್ಕತ್ತಬತ್ತ ಜೋಡಿ ಬಿರಾಡ ಗ್ರಾಮಗಳನ್ನು ನೀರ ಬಿರಾಡ ಅನುಪುಹಾರಿ ಕಾಯಿ..." ಎಂದಿದೆ. ಗ್ರಾಮದ ಸುಂಕವನ್ನು ತಳವಾರರು ಸಂಗ್ರಹಿಸಿಕೊಡುತ್ತಿದ್ದ ವಿಧಾನ ಶ್ರೇಷ್ಠತೆ, ಪ್ರಾಮಾಣಿಕತೆಯಿಂದ ಬೊಕ್ಕಸ ತುಂಬುತ್ತಿತ್ತು. ಮತ್ತೊಂದು (೧೧.೩.೧೫೧೩) ಶಾಸನದಲ್ಲಿ ಕೃಷ್ಣದೇವರಾಯ ತನ್ನ ತಂದೆ-ತಾಯಿಗೆ ಪುಣ್ಯವಾಗಲೆಂದು ತಳವಾರಿಕೆ ಸುಂಕ ಸಂಬಂಧ ಜೋಡಿ ಬಿರಾಡ ಸಾಂಮ್ಯ ಸಕಲ ಸುವರ್ಣಾದಾಯಸಹ ೩ ಗ್ರಾಮ ಗೋಪಿಸೆಟಿಹಳ್ಳಿ (ಪಂಚಕಸೀಮೆ), ಬೀಜವರಿ ಮುತ್ತುಮಳಲಕೋಟೆ, ಇವಲ್ಲದೆ, ವಿರೂಪಾಪುರ ಗ್ರಾಮಗಳ ತಳವಾರಿಕೆ ಸುಂಕ ಬಗ್ಗೆ ತಿಳಿಸಿದೆ.

ಶ್ರೀಕೃಷ್ಣದೇವರಾಯ ವಿಶೇಷವಾಗಿ ಅನೇಕ ಗ್ರಾಮ ಮತ್ತು ಭೂಮಿಗಳನ್ನು ದಾನ ಮಾಡಿದ್ದು ಗಮನಾರ್ಹ. ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ಈ ಗ್ರಾಮದ ಆದಾಯವಾದ ಬತ್ತ, ಹಣ, ತಳವಾರಿಕೆ ಸುಂಕ, ಸಾಮ್ಯ, ಜೋಡಿ, ಬಿರಾಡ, ಕಟ್ಟೆಯಹೊಕ್ಕ, ಇವೆಲ್ಲವೂ ದೇವಾಲಯಕ್ಕೆ ಸಲ್ಲುತ್ತವೆ. ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ ನರಸಿಂಹದೇವರಿಗೆ ಕೊನಮರಸಯ್ಯನವರು ಕೊಟ್ಟ ಧರ್ಮ ಶಾಸನದ ಕ್ರಮವೆಂದರೆ, ಸ್ವಾಮಿ ನಮಗೆ ಪಾಲಿಸಿದ ವಿಜಯನಗರದ ತಳವಾರಿಕೆಗೆ ಸಲುವ ಕಂದಾಯ ಕೊಟ್ಟ ಮೂಲಕಾಣಿಕೆ ಅಡಿಕಾಸು... ರಾಜನಿಗೆ, ದೇವರಿಗೆ ತಳವಾರರು ತಮ್ಮ ಕಂದಾಯವನ್ನು ಅಡಿಕಾಸು ಕೊಟ್ಟದ್ದುಂಟು. ಕೃಷ್ಣಸ್ವಾಮಿದೇವಾಲಯ ಶಾಸನದಲ್ಲಿ ಜೋಡಿ ಬಿರಾಡ ಸಾಮ್ಯ ನಾಡ ತಳವಾರಿಕೆ ಸುಂಕ ಕರಣಿಕರ ಮಾನ್ಯದ ಗದ್ದೆಗಳು... ರಾಯದುರ್ಗದ ಸೀಮೆಗೆ ಸಲ್ಲುವ ಬ್ರಹ್ಮಸಮುದ್ರದ ಗ್ರಾಮ ಈ ಗ್ರಾಮಕ್ಕೆ ಸಲ್ಲುವ ದುರ್ಗದೇವರಿಗೆ ಕೊಟ್ಟು ಬರಹ. ಕಡಿವಾಟಿ ನಾಡುದಳವಾಟಿಕೆ ಹುಗಿಯಬತ್ತ.... ಜಿನ ಮಾದಿಯವರೆಗೆ ಕೊಟ್ಟು ಬಹ ತಳವಾರಿಕೆ ಎಂದು ಈಗಿನ ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳ ಪೂರ್ವಭಾಗದಲ್ಲಿದ್ದ ಗ್ರಾಮರಕ್ಷಣೆಯನ್ನು ನಾಡ ತಳವಾರರು ತಮ್ಮ ಅವಧಿಯಲ್ಲಿ ಸಾಧಿಸಿದ ವಿವರಗಳನ್ನು ಅನೇಕ ಶಾಸನಗಳು ಒಳಗೊಂಡಿವೆ.

ವಿಜಯನಗರದ ಕಾಲದ ಶಾಸನವೊಂದು ಮೈಸೂರು ಜಿಲ್ಲೆ ದಾಸನಪುರ ಗ್ರಾಮದಲ್ಲಿದೆ. ಇದರಲ್ಲಿ ೨೫.೫.೧೫೩೬ರಲ್ಲಿ ಅಚ್ಯುತರಾಯ ಮಹಾರಾಯರು... ಮನೆಗೆ ನಾಯಕತನಕ್ಕೆ ನಡೆದು ಬಂದ ತೆರಕಣಾಂಬೆಯ... ಮಾದಾರಿಕೆ, ತಳವಾರಿಕೆ ಉಪ್ಪಿನ ಕಾವಲಿ ಇತರ ಸಂಗತಿಗಳ ಉಲ್ಲೇಖವಿದೆ.[38] ಇದೇ ಕಾಲಕ್ಕೆ ಸೇರಿದ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕಿನ ಒಂದು ಶಾಸನದಲ್ಲಿ ತಳಾವಾಟಿವರಿ ಮುಂತಾಗಿ ಯೆಲ್ಲಾವು ಸರ್ವಮಾನ್ಯವಾಗಿ ಬಿಟ್ಟು ಎಂಬ ಸಂಗತಿಯಿದೆ. ತಳವಾರರಿಗೆ ದಾನ ದತ್ತಿಗಳನ್ನು ಕೊಡುತ್ತಿದ್ದುದಲ್ಲದೆ. ಸರ್ವಮಾನ್ಯವಾಗಿ ಭೂಮಿಯಲ್ಲದೆ ಎಲ್ಲವನ್ನು ಕೊಟ್ಟದ್ದುಂಟು. ಮಂಡ್ಯ ಜಿಲ್ಲೆಯ

ಪಾಂಡವಪುರ ತಾಲೂಕಿನ ಮೇಲುಕೋಟೆಯ ಎರಡು ಶಾಸನಗಳು ಸಿಂಧು ಘಟ್ಟದವರನ್ನು ತಳವಾರರನ್ನಾಗಿ ಇಟ್ಟುಕೊಂಡಿದ್ದು (ಸಿಂದಾಗಟ್ಟ ತಳವಾರಿಕೆ) ಅಲ್ಲದೆ, ತಳವಾರಿಕೆಯಿಂದ ಬರುತ್ತಿದ್ದ ಆದಾಯ ೨೬ ಗದ್ಯಾಣಗಳೆಂದು ತಿಳಿದುಬರುತ್ತದೆ. ಚಾಮರಾಜ ನಗರ ತಾಲೂಕಿನ ದಾಸನಪುರದ ೧೫೩೬ರ ಶಾಸನವು ತಳವಾರಿಕೆಯಿಂದ ಬರುತ್ತಿದ್ದ ಸುಂಕವನ್ನು ತಿಳಿಸುತ್ತದೆ. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಕಾರಬಯಲು ಗ್ರಾಮದ ಕ್ರಿ.ಶ. ೧೬ನೇ ಶತಮಾನದ ಶಾಸನವು ಜಗದೇವರಾಯ ಒಡೆಯರು ತಳವಾರಿಕೆಯ ದಾಸಪ್ಪನಾಯಕರ ಮಗ ಚಿಕ್ಕರಸನಾಯಕರಿಗೆ ಕಾರಬಯಲು ಗ್ರಾಮವನ್ನು ದಂಡಿಗೆ ಉಂಬಳಿಯಾಗಿ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಮಡಕಶಿರಾ ತಾಲೂಕಿನ ಅಗಳಿ ಶಾಸನವು ಕಾಚವೊಡೆಯರ ಅಗಳಿಯ ತಳವಾರಿಕೆಯನ್ನು ಹುಲಿಕುಂಟೆ ಚಂದ್ರ ನಾಯಕನ ಮಗ ತಳವಾರ ದೊಡ್ಡನಿಗೆ ಶಾಶ್ವತವಾಗಿ ಕೊಟ್ಟಿದ್ದನ್ನು ಹೇಳುತ್ತದೆ. ಇದೇ ತಾಲೂಕಿನ ಅಮರಾಪುರಂ ವೀರಗಲ್ಲು ಶಾಸನವು ಕುರುಳೆನಾಯಕ ಎಂಬುವವನು ತರುಗಳನ್ನು ಸೆರೆಹಿಡಿದು ತೈಲಂಗೆರೆಯ ತಳವಾರ ಬೊಮ್ಮಯ್ಯ ನಾಯಕನ ಮಗ ಮುಂಡಿನ ಬೊಮ್ಮಯ್ಯನು ಹೋರಾಟ ಮಾಡಿಸುತ್ತಿದ್ದನ್ನು ತಿಳಿಸುತ್ತದೆ.[39]

ಸಿಂಧನೂರು ತಾಲೂಕಿನ ಮುಕ್ಕುಂದಿ ಗ್ರಾಮದ ವೀರೇಶಪ್ಪನ ಹಿತ್ತಲಲ್ಲಿನ ಬಂಡೆಯ ಮೇಲಿನ ಶಾಸನದಲ್ಲಿ ಗೌಡ, ಸೇನಬೋವ, ಪಟಣಸೆಟ್ಟಿಗಳು, ತಳವಾರರು, ಕಾರಟಿಗೆ, ಸಿದ್ದಾಪುರ, ಮುಕ್ಕುಂದಿ ಮುಂತಾದ ಗ್ರಾಮಗಳ ಗೌಡ ಶಾನುಬೋಗರು ದೇವರಿಗೆ ಕೊಟ್ಟ ತೆರಿಗೆ, ಮದುವೆ, ಮಂಗಳ ಕಾರ್ಯ ಹಾಗೂ ಸಂತೆಗೆ ಮಳಿಗೆಗಳನ್ನು ಕಟ್ಟಿಸುತ್ತಾರೆ ಎಂಬುದನ್ನು ತಿಳಿಸುತ್ತದೆ.

ವಿಜಯನಗರ ಸಾಮ್ರಾಜ್ಯದ ವಿವಿಧಹಳ್ಳಿ, ಗ್ರಾಮ ಪಟ್ಟಣಗಳಲ್ಲಿ ತಳವಾರರು ನೆಲಸಿದ್ದರು. ಎಲ್ಲಿ ಕರ್ತವ್ಯ ನಿರ್ವಹಿಸುತ್ತಾರೋ ಅಲ್ಲಿಯೇ ತಮ್ಮ ವಾಸವನ್ನು ಮಾಡಿಕೊಳ್ಳುತ್ತಿದ್ದರು. ಕ್ರಿ.ಶ. ೧೦೧.೧೦.೧೫೪೫ರ ಸುಮಾರಿಗೆ (ಶಾ.ಶ. ೧೪೬೭) ಹೇವಿಳಂಬಿ ಸಂವತ್ಸರ ಕಾರ್ತಿಕ ಶು ೫ ಕುಡುತ್ನೆಯ ತಳವಾರ (ಕುಡುತಿನಿ) ಗೋಸಪೆಂನ್ನೆಯ್ಯನು ಬಹುಶಃ ಸಿದವಿರಪ್ಪ ಸಂಗನಬಸಪ್ಪನ ಪ್ರಾಣ ಹತ್ಯೆ ಮಾಡಿದ. ಇದರ ದೋಷ ಪರಿಹಾರವಾಗಿ ದರೋಜಿ ವಳಿತದ ಹರಲಪುರ ಗ್ರಾಮ, ಕುಡುತಿನಿಯಲ್ಲಿ ೫ ಕೊಳಗ ಎರೆಭೂಮಿ, ಇನ್ನೂ ಕೆಲವು ಅನುಕೂಲಗಳ ಸಮೇತ ದಾನ ನೀಡುತ್ತಾನೆ. ಇದೇ ಶಾಸನದಲ್ಲಿ ಕುಡುತಿನಿಯ ತಳವಾರ ಸಿಂಕನಾಯಕ, ಸೊಂಡೂರು ರಾಜಪನಾಯಕರ ಹೆಸರುಗಳಿವೆ. ವಿರೂಪಾಕ್ಷ ದೇವರಿಗೆ ..... ದಾ.... ಸಿಂಗೆಯ ನಾಯಕನಹಳ್ಳಿಯ ಗ್ರಾಮ.... ತಳವಾರಿಕೆ ಸ್ವಾಮ್ಯ ಜೋಡಿ ಬಿರಾಡ.... ಇತ್ಯಾದಿ ವಿವರಗಳಿವೆ. ಕುಡುತಿನಿಯ ಇನ್ನೊಬ್ಬರ ತಳವಾರಗೋಸ ಪೆನ್ನೆಯ್ಯ ಎಂದು ತಿಳಿಯುವುದು. ಅಧಿಕಾರ ಮುಗಿದಾಗ ಇನ್ನೊಬ್ಬರನ್ನು ನೇಮಿಸಿರಬೇಕು. ಮಡಕಶಿರಾ ತಾಲೂಕು ಅಗಳಿ ಗ್ರಾಮ ಶಾಸನದಲ್ಲಿ ಹುಲಿಕುಂಟೆಯ ಚಂದ ನಾಯಕನ ಮಗ ತಳವಾರ ದೊಡ್ಡ ಎನ್ನುವವನಿಗೆ ಕಾಚವೊಡೆಯ ಎನ್ನುವವನು ಅಗಳಿಯ ತಳವಾರಿಕೆಯನ್ನು ಕೊಟ್ಟಿದ್ದನ್ನು ಇಲ್ಲಿ ದಾಖಲಿಸಲಾಗಿದೆ.

ವಿಜಯನಗರದ ಅರಸ ಸದಾಶಿವದೇವ ಮಹಾರಾಯ ೧೮.೬.೧೫೫೬ರಂದು ವಿದ್ಯಾನಗರದಿಂದ ಆಳುತ್ತಿದ್ದಾಗ ಮಹಾಮಂಡಳೇಶ್ವರ ರಾಮರಾಜ ಅಪ್ಪಯ್ಯದೇವ ಮಹಾ ಅರಸನ ಮಗ ಕೋನಪದೇವ ಮಹಾ ಅರಸನೂ, ರಾಯದುರ್ಗ ವೇಂಠೆಗೆ ಸಲ್ಲುವ ಉರುವಕೊಂಡ ಸೀಮೆಯ ಅಗ್ರಹಾರಗಳಾದ ಆನದಲೆ, ನೆಂಬೆಗಲ್ಲು, ರಾಯಪ್ಪನಹಳ್ಳಿ, ಕಲಿದೇವನಹಳ್ಳಿ, ಸಿರಿವರ, ರೇವಿನಾಯಕನಹಳ್ಳಿ, ಯುರ್ರಗುಡಿ, ತುಂಗೆಗನೂರು, ರಾಗನಹಾಳು, ತಾವರೆಗೋಳ, ಚಿಕ್ಕ ಪೇಪಲಿ, ತಿಂಮಾಪುರ, ಹೋತೂರು, ಬೆನಕಾನಹಳ್ಳಿ, ಅಂಡುರಸನಹಾಳು, ಕಮಳ ಹಾಳಗಳ ಮಹಾಜನರಿಗೆ ತಳವಾರಿಕೆ, ಬೆನಕಾನಹಳ್ಳಿ, ತಳವಾರಿಕೆ, ಬೇಡಿಕೆ, ರಾಯಸದ ವರ್ತನೆ, ಕರಣಿಕರ ವರ್ತನೆ, ಹರಳಬತ್ತಿ ಮೊದಲಾದ ವಿನಾಯತಿ ನೀಡಿದನೆಂದು ಇದರಲ್ಲಿ ದಾಖಲಿಸಿದೆ. ತಂದೆ ಅಪ್ಪಲರಾಜ ಅಯ್ಯ ಹಾಗೂ ಅಣ್ಣ ತಿರುಮಲರಾಜನಿಗೆ ಪುಣ್ಯವಾಗಲೆಂದು ಪಿನಾಕನೀ ನದಿ ತೀರ್ದಲ್ಲಿ ಹನ್ನೆ ಅಹೋಬಲನಾರಸಿಂಹ ದೇವರ ಸನ್ನಿಧಿಯಲ್ಲಿ ಈ ದತ್ತಿಯನ್ನು ನೀಡಲಾಯಿತೆಂದು ತಿಳಿಸಿದೆ.

ಹಡಗಲಿ (ದು) ತಾಲೂಕಿನ ನಕ್ಕರ ಹಲುವಿನ ಕ್ರಿ.ಶ. ೧೫೬೨ರ ಒಂದು ಶಾಸನವು ನಗರೆ ಹಾಳ್ ಅಧಿಕಾರಿ ಸೇನಬೋವ ತಿರುಮಲ್ಲ ರಸಗೌಡ, ತಳವರ ಮತ್ತು ಜೋಯಿಸರಿಗೆ ಮಾನ್ಯ ಭೂಮಿಯನ್ನು ಕೊಡಲಾಯಿತು ಎಂದು ತಿಳಿಸುತ್ತದೆ.[40]

ಅಮರಾಪುರಂ ಗ್ರಾಮದ ವೀರಗಲ್ಲು ಶಾಸನದಲ್ಲಿ ಕರುಳೆನಾಯಕ ಎಂಬುವನು ತುರುಗಳ ಸೆರೆಹಿಡಾದ ತೈಲಂಗೆಟೆಯ ತಳವಾರ ಬೊಮ್ಮಯ ನಾಯಕನ ಮಗ ಮುಂದಿನ ಬೊಮ್ಮಯ್ಯನು ಹೋರಾಟಮಾಡಿ ಸತ್ತದ್ದನ್ನು ತಿಳಿಸುತ್ತದೆ. ನೊಳಂಬವಾಡಿ ೩೨,೦೦೦ (ಅಮರಾಪುರಂ ೫೫) ಸೋವಯ್ಯರನ್ನು ಪೆಂಜೇರು (ಹೆಂಜೇರು) ವಿನ ಕಾವಲುಗಾರ ಬಟ್ಟೆರಾಚಯ್ಯನು ದೇವರಕೆರೆ ಕಟ್ಟಿಸಿದ, ಕಲ್ಲಿನ ತೂಬು ಇಡಿಸಿದ ಖಂಡುಗ ಭೂಮಿದಾನ ಮಾಡಿದ್ದು ಶ್ಲಾಘನೀಯ. ಕಾವಲುಗಾರ ತಳವಾರರು ಇಂಥ ನಾನಾಬಗೆಯ ಲೋಕಕಲ್ಯಾಣ ಕಾರ್ಯಗಳನ್ನು ಮಾಡಿ ನಿಸ್ಸೀಮರಾಗಿದ್ದು ನಿಜ. ಹೀಗೆ ವಿಜಯನಗರ ಸಾಮ್ರಾಜ್ಯದಲ್ಲಿ ತಳವಾರರ ಸೇವೆ ಶ್ಲಾಘನೀಯವಾಗಿ ರುಜುವಾತಾಗಿದೆ.

ನಾಯಕನ ಮತ್ತು ತಳವಾರಿಕೆ ಹುದ್ದೆ ಸೇವೆಗೆ ರಾಜನಿಂದ ವಿಶೇಷ ಮನ್ನಣೆ ಇತ್ತು. ಹಾಸನ ಜಿಲ್ಲೆಯ ಕುದುರೆಗುಂಡಿ ವೀರಭದ್ರ ದೇವಾಲಯದ ಶಾಸನ ವೀರಪ್ರತಾಪ ಅಚ್ಯುತರಾಯ ಮಹಾರಾಯರ ಮಕ್ಕಳು ಸದಾಶಿವರಾಯರು ವಿದ್ಯಾನಗರಿ ಅಧಿಕಾರಿ ಅನ್ಯೆಯಸುಂಕ ತಳವರಿಕೆ ಸೊಲಿಗಿ ಬಿಟ್ಟು ಅಳಿವು ಎಂದು ಉಲ್ಲೇಖಿತವಾಗಿದೆ. ಇದೇ ಜಿಲ್ಲೆಯ ಹಾಸನದ ವಿರೂಪಾಕ್ಷ ದೇವಸ್ಥಾನ ದಕ್ಷಿಣ ಬಾಗಿಲಿನ ನೆಟ್ಟಕಲ್ಲಿನ ಶಾಸನ ಕ್ರಿ.ಶ. ೨,೮.೧೫೬೩ರಲ್ಲಿ ವೀರಪ್ರತಾಪ ಅಚ್ಯುತರಾಯ... ಬಯ್ಯಪನಾಯಕನವರ ಮಕ್ಕಳು ಕೃಷ್ಣಪ್ಪನಾಯಕ ಒಬ್ಬನಿಗೆ ಅವರನಾಯಕತನಕ್ಕೆ... ಪಾಲಿಸಿದ ಹಾಸಂದು ಗ್ರಾಮ ಕಾಣಿಕೆ, ಕಪ್ಪ-ಜೋಡಿ ಬೇಡಿಕೆ ತಳವಾಟಿಕೆ... ಅಳಿವು ಅನ್ಯಾಯ.... ಇತ್ಯಾದಿ ವಿವರಗಳಿದ್ದು[41] ಅವು ತಳವಾರರ ಬಗ್ಗೆ ಹೆಚ್ಚು ಬೆಳಕು ಚೆಲ್ಲುತ್ತವೆ. ಏಕ ಕಾಲಕ್ಕೆ ಎರಡು ಹುದ್ದೆ, ದಾನ ದತ್ತಿಗಳನ್ನು ನೀಡಿದ್ದು ಗಮನಾರ್ಹ. ಇದೇ ಜಿಲ್ಲೆಯ

ಆಲೂರು ತಾಲೂಕಿನ ಪಾಳ್ಯ ದೇವಸ್ಥಾನದ ಶಾಸನವು ೨೦.೧೦.೧೫೬೬ರಂದು ಬುಕ್ಕಪ್ಪನಾಯಕರು ಕೃಷ್ಣಪ್ಪನಾಯಕರಿಗೆ ಪುಣ್ಯವಾಗಲೆಂದು ಗೋಣಿ ಬೀಡ ಸೀಮೆಯ ೧೮ ಅಘರ ಮುಂತಾದ ಸರ್ವಮಾನ್ಯಗಳಲ್ಲಿ ತೆಕ್ಕೊಂಬ ತಳವಾರಿಕೆ ಬೇಡಿಕೆ ವರ್ತನೆಗಳೂ ಸೊಲ್ಲಗೆ ಬಿಟ್ಟ ಸಂಗತಿ ತಿಳಿಯುತ್ತದೆ.[42] ರಾಜನ ಪರವಾಗಿ ಸಾಮಂತರು ಅಧೀನರು ದತ್ತಿ-ದಾನ ಮಾಡಿದ್ದು ತಳವಾರಿಗೆ ಮಟ್ಟಿಗೆ ಹೆಚ್ಚಿನ ಅನುಕೂಲಕ್ಕೆ ಆಸ್ಪದವಾಯಿತು. ಇದೇ ಜಿಲ್ಲೆಯ ಭೈರಾಪುರ ಬಸವಣ್ಣ ಗುಡಿಯ ಪೂರ್ವ ಗೋಡೆಯ ಶಾಸನವು ತಳವಾರಿಕೆ ಕುರಿತು ಬೆಳಕು ಚೆಲ್ಲುತ್ತದೆ.

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಕಾರುಬಯಲು ನರಸಿಂಹದೇವಸ್ಥಾನದ ಹತ್ತಿರ ಶಾಸನವು ೧೬ನೇ ಶತಮಾನಕ್ಕೆ ಸೇರಿದ ಕಾರ ಬಯಲು ಗ್ರಾಮವನ್ನು ಚಿಕ್ಕ ನರಸನಾಯಕನಿಗೆ (ತಂದೆ ತಳವಾರಿಕೆಯ ದಾಸಪ್ಪ ನಾಯಕ) ತಳವಾರಿಕೆಯ ಕಾರಣವಾಗಿ ದಂಡಿಗೆ ಉಂಬಲಿ ನೀಡುತ್ತಾರೆ.[43] (ತಳವಾರಿಕೆಯ ದಾಸಪ್ಪನಾಯಕರ ಮಗ ಬೆಕರಸನಾಯ್ಕರಿಗೆ ದಂಡಿಗೆ ಉಂಬಳಿ ಕೊಟ್ಟು ಗ್ರಾಮ ಅರಸನ ಅಪ್ಪಣೆಯಿಂದ) ಇದೇ ಜಿಲ್ಲೆಯ ಪಾಂಡವಪುರ ತಾಲೂಕಿನ ನಾರಾಯಣ ದೇವಸ್ಥಾನದಲ್ಲಿ ನೆಟ್ಟ ಕಲ್ಲಿನ ಶಾಸನವು 'ತಳವಾರಿಕೆ ೧೫೬೫-೬೬ಯನ್ನು ಉಲ್ಲೇಖಿಸುತ್ತದೆ. ಈ ಹಿಂದೆ ತಿಳಿಸಿದಂತೆ, ಮೇಲುಕೋಟೆಯ ಶಾಸನವು ಕೃಷ್ಣದೇವರಾಯನ ಕಾಲಕ್ಕೆ ಸೇರಿದ, ಕೃಷ್ಣದೇವ ಮಹಾರಾಯ ನಾಯಕತನಕ್ಕೆ ಪಾಲಿಸಿದ ಶ್ರೀರಂಗಪಟ್ಟಣದ ಸಿಂದಾಗಟ್ಟ ಸೀಮೆಗ್ರಾಮ.... ಕಾಮೆನಾಯಕನಹಳ್ಳಿ ತಳವಾರಿಕೆಯಿಂದ ನಮ್ಮಗೆದೆಟೆಗ ಯಿಂದ ಗ.... ಎಂದಿದೆ. ಹೀಗೆ ಸಿಂದಾಗಟ್ಟದ 'ತಳವಾರಿಕೆ' ಬಗ್ಗೆ ಈ ಶಾಸನ ಮಾಹಿತಿ ನೀಡುತ್ತದೆ.[44]

ವಿಜಯನಗರ ಕಾಲದ ರಕ್ಷಣಾ ವ್ಯವಸ್ಥೆಯಲ್ಲಿ ತಳವಾರರು ಬಹು ಮುಖ್ಯ ಪಾತ್ರವಹಿಸಿದ್ದರು. ಪ್ರಾಮಾಣಿಕತೆ, ದಕ್ಷತೆಯ ಸೇವಾ ಮನೋಭಾವಕ್ಕೆ ಇವರು ಅರ್ಹರಾಗಿದ್ದರು. ರಾಜ ಪ್ರಭುತ್ವದಲ್ಲಿ ಸಂಪತ್ತು ರಾಜ್ಯದ ಗೂಢಚಾರಿಕೆ, ಉಸ್ತುವಾರಿ, ಇತರ ಕಾರಣಗಳಿಗಾಗಿ ತಳವಾರರು ರಾಜನಿಗೆ ಹತ್ತಿರವಾಗಿದ್ದರು. ಕೆಲವರು ತಮ್ಮ ರೀತಿ ನೀತಿ ಹಾಗೂ ದೌರ್ಬಲ್ಯಗಳಿಂದ ಬಳಲುತ್ತಿದ್ದರು. ಹೀಗೆ ಏನೆಲ್ಲಾ ಸಂಘಟನೆ ಮತ್ತು ಹೋರಾಟದ ನಡುವೆಯೂ ಮಾತೃಪ್ರೇಮ, ದೇಶಪ್ರೇಮದೊಂದಿಗೆ ತಳವಾರರು ವಿಜಯನಗರ ಸಾಮ್ರಾಜ್ಯದ ನೀತಿಗೆ ತಾತ್ಕಾಲಿಕ ಕಾರಣಿಭೂತರಾಗಿರುವುದು ಸ್ಪಷ್ಟ.

ಒಟ್ಟಿನಲ್ಲಿ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲೇ ಏಕೆ ? ಜಗತ್ತಿನಲ್ಲೇ ಪ್ರಸಿದ್ಧಿ ಪಡೆದಿರುವುದು ಈ ಬಗೆಯ ಆಡಳಿತದಿಂದಲೇ. ಇವರು ಹೆಚ್ಚಾಗಿ ಗ್ರಾಮಾಡಳಿತಕ್ಕೆ ಒತ್ತುಕೊಟ್ಟಿದ್ದರಿಂದಲೇ ಆರ್ಥಿಕ ಅಭಿವೃದ್ಧಿಯಾಯಿತು. ಈ ಸಾಮ್ರಾಜ್ಯವನ್ನು ಮಹಾರಾಜ್ಯ, ರಾಜ್ಯ, ಮಂಡಲ, ಸೀಮೆ, ನಾಡು, ಕಾರು, ಗ್ರಾಮ, ಸ್ಥಳ ಎಂದು ವರ್ಗೀಕರಿಸಲಾಗಿದ್ದಿತು. ಉದಾ. ಉದಯಗಿರಿ ರಾಜ್ಯ, ಪೆನುಗೊಂಡೆ, ತೆಲಂಗಾಣ, ರಾಯಲಸೀಮಾ ಇತ್ಯಾದಿ. ಮಂಡಲಕ್ಕೆ ಮಂಡಲೇಶ್ವರ ಎಂದು ರಾಜ ಕುಟುಂಬದವರೇ ಇರುತ್ತಿದ್ದರು. ಪ್ರಾಂತಕ್ಕೆ ನಾಯಕನನ್ನು ನೇಮಿಸುತ್ತಿದ್ದರು. ಎಲ್ಲ ಪ್ರಾಂತ್ಯಗಳು ಮಹಾನಾಯಕಾಚಾರ್ಯರ ಅಧೀನದಲ್ಲಿದ್ದವು. ನಾಯಕರ

ಅಧೀನದಲ್ಲಿ ೨೦೦ ಘಟಕಗಳಿದ್ದವು. ಪಾಯಸ್ ಹೇಳುವಂತೆ ಅಂದು ನಗರ, ಉಪನಗರಗಳನ್ನು, ಸೆಟ್ಟಿ ಪಟ್ಟಿಣ ಸ್ವಾಮಿಗಳು ನೋಡಿಕೊಳ್ಳುತ್ತಿದ್ದರು. ಹಳ್ಳಿಗಳು ಗ್ರಾಮ ಅಥವಾ ಹಳ್ಳಿ ಸ್ವಯಂ ಆಡಳಿತ ಘಟಕಗಳಾಗಿದ್ದವು. ಹಳ್ಳಿಗಳು ಗ್ರಾಮ ಸಭೆ ಹೊಂದಿದ್ದವು. ಸೇನಬೋವ ಶ್ಯಾನಭೋಗ, ತಳವಾರ ಹುದ್ದೆಗೆ ಕ್ಷತ್ರಿಯರಾದ ಯೋಧ ಸೈನಿಕರಾದ ಬೇಡರನ್ನೇ ನೇಮಿಸುತ್ತಿದ್ದುದು ಗಮನಾರ್ಹ. ಜಿಲ್ಲೆ ಮತ್ತು ಗ್ರಾಮಗಳಲ್ಲಿ ಶಾಂತಿ, ನೆಮ್ಮದಿಯನ್ನು ಪಾಲಿಸಲು ತಳವಾರಿ, ಕಾವಲುಗಾರ, ದೇಶಕಾವಲುಗಾರರಿದ್ದರು. ವಿಜಯನಗರ ಕಾಲದ ನಾಯಕರ ಬಗ್ಗೆ ನೆಬುರೊಕರಾಶಿಮ ವಿಶೇಷ ಅಧ್ಯಯನ ನಡೆಸಿದ್ದಾರೆ.[45]

ವಿಜಯನಗರ ಕಾಲದಲ್ಲಿ ಸೈನಿಕರು, ಸಾಮಂತರು, ನಾಯಕರು, ಬೇಡರಪಡೆ, ಖಾಸಬೇಡರಪಡೆ, ಮೀಸಲುಪಡೆ, ದಂಡನಾಯಕರು ಇರುವಂತೆ ತಳವಾರ, ಊಳಿಗ ತಳವಾರ, ನಾಡತಳವಾರ, ಮಹಾತಳವಾರ ಮತ್ತು ಮೀಸಲು ತಳವಾರರು ಇದ್ದರು.[46] ಈ ತಳವಾರ ಅಧಿಕಾರ ಶ್ರೇಣಿಕೃತವಾಗಿತ್ತು. ತಳವಾರಿಕೆಯಲ್ಲಿ ಆರೋಹಣಕ್ರಮದ ಅಧಿಕಾರ ಸ್ಥಾನಗಳಿದ್ದವು. ಈ ತಳವಾರರು ಸರ್ಕಾರ ನಡೆಸುವಷ್ಟು ಮತ್ತು ನಿಯಂತ್ರಿಸುವಷ್ಟು ಶಕ್ತಿಶಾಲಿಗಳಾಗಿದ್ದರು. ಹೀಗೆ ವಿಜಯನಗರ ಸಾಮ್ರಾಜ್ಯದಲ್ಲಿ ಪಶುಸಂಗೋಪನೆ, ಬೇಟೆ ಮತ್ತು ತಳವಾರಿಕೆ ಅದರ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿರುವುದು ಗೋಚರವಾಗುತ್ತದೆ.[46]

**ಅಡಿಟಿಪ್ಪಣಿಗಳು**

1. ವಿಜಯನಗರ ಕಾಲದ ಸಂಸ್ಕೃತಿ, ಡಾ. ವಿರೂಪಾಕ್ಷ ಪೂಜಾರಹಳ್ಳಿ
1a. ಕರ್ನಾಟಕ ಚರಿತ್ರೆ, ಸಂಪುಟ 3, ಪು. 262
2. ಅದೇ, ಪು. 266
3. ಅದೇ ಪು. 370
4. ವಿಜಯನಗರ ಕಾಲದ ಸಂಸ್ಕೃತಿ, ಡಾ. ವಿರೂಪಾಕ್ಷ ಪೂಜಾರಹಳ್ಳಿ, ಪು, 50, 51
5. ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನ ಜೀವನ ಚಿತ್ರ, ಪು. 493
6. ಪ್ರವಾಸಿ ಕಂಡ ಇಂಡಿಯಾ, ಸಂಪುಟ 7, ಪು. 158
7. ವಿಜಯನಗರ ಕಾಲದಸಂಸ್ಕೃತಿ, ಡಾ. ವಿರೂಪಾಕ್ಷ ಪೂಜಾರಹಳ್ಳಿ, ಪು. 72
8. ಎಲ್.ಕೆ. ಐಯ್ಯಂಗಾರ್, ದಿ ಮೈಸೂರ್ ಸ್ಟೇಟ್ ಟೈಮ್ಸ್ ಅಂಡ್ ಕ್ಯಾಸ್ಟ್ಸ್, ಸಂ. 7, ಪು. 257
9. ಮರೆತು ಹೋದ ಸಾಮ್ರಾಜ್ಯ ವಿಜಯನಗರ, ಪು. 126
10. ಅದೇ, ಪು. 277
11. ಪ್ರವಾಸಿ ಕಂಡ ಇಂಡಿಯಾ, ಸಂಪುಟ 2, ಪು. 367
12. ಮರೆತು ಹೋದ ಸಾಮ್ರಾಜ್ಯ ವಿಜಯನಗರ, ಪು. 127-28
13. ಪ್ರವಾಸಿ ಕಂಡ ಇಂಡಿಯಾ, ಸಂ. 2, ಪು. 367
14. ಕೃಷ್ಣದೇವರಾಯನ ದಿನಚರಿ, ಪು. 17
15. ಮರೆತು ಹೋದ ಸಾಮ್ರಾಜ್ಯ ವಿಜಯನಗರ, ಪು. 277
16. ಅದೇ, ಪು. 59
17. ಅದೇ, ಪು. 57
18. ಕ.ವಿ.ವಿ. ಹಂಪಿ ಶಾಸನ ಸಂಪುಟ 2, ಪು. 340, ಮತ್ತು ಸಿ.ಎಸ್. ಪಾಟೀಲ; ವಿಜಯನಗರ ಶಾಸನಗಳು, ಸಂ. 5
19. ಅದೇ, ಪು. 341-346

20. ಅಳಿದುಳಿದ ಹಂಪೆ, ಪು. 93
21. ಅದೇ, ಪು. 96
22. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ : ವಾ IX, ಭಾಗ II, ಪು. 446
23. ರಾಯಚೂರು ಜಿಲ್ಲೆ ಶಾಸನ ಸಂಪುಟ, ಮಾನ್ವಿ 1a, ಕ.ವಿ.ಹಂ. ಪ್ರಸಾರಾಂಗ
24. ದಾವಣಗೆರೆ, ಶಾಸಂ. ಪು. 372
25. ಮರೆತು ಹೋದ ಸಾಮ್ರಾಜ್ಯ ವಿಜಯನಗರ (ಅನು: ಸದಾನಂದ ಕನವಳ್ಳಿ 1992), ಪು. 260
26. ಅದೇ, 278
27. ಅದೇ, 283
28. ಅದೇ, 354
29. ವಿಜಯನಗರ ಅಧ್ಯಯನ - ವಿಜಯನಗರ ಕಾಲದ ತಳವಾರಿಕೆ; ವಿರುಪಾಕ್ಷ ಪೂಜಾರಳ್ಳಿ, ಪು. 251
30. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ. ಎಂ. ಚಿದಾನಂದಮೂರ್ತಿ, 2002
31. Local self government in mediaval karnataka, p. 200 Dikshit Kud, 1964, p. 146-49
32. Ec, Vol - Iv, p. 237
33. ಎ.ಕ. Vol. VII, ಶಿವಮೊಗ್ಗ 7131 : 1431
34. ಎ.ಕ. Vol. X, ಮುಳುಬಾ 20-2 : 1468
35. ಪ್ರವಾಸಿ ಕಂಡ ಇಂಡಿಯಾ, ಭಾಗ - ೨, (ನಿಕೊಲೊ ದ ಕೊಂ3) ಪು. 159
36. ಹಂಪಿ ಶಾಸನಗಳು, ಕವಿವಿ - ಹಂಪಿ, ಪು. 164
37. ಸೌ.ಇ.ಇ, IX-11 480-13, 1510
38. EC - vol - IV, p - 196
39. ರಾಯಚೂರು ಜಿಲ್ಲೆಯ ಶಾಸನ ಸಂಪುಟ, ಕೆ.ವಿ.ವಿ, ಹಂ.ಪು. 367
40. ಸೌ.ಇ.ಇ., IX (II) ನಂ. 679
41. ಕೆ.ವಿ.ವಿ., ಹಂಪಿ ಶಾಸನಗಳು, ಪು. 68
42. Ec. Vol - 8, p - 215
43. ಅದೇ, ಪು. 460
44. Ec - Vol - 7, p. 124
45. ವಿಜಯನಗರ ಅಧ್ಯಯನ, ಪು. 260
46. ಅದೇ, ಪು. 261

# ಉಪಸಂಹಾರ

ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ ಕ್ರಿ.ಶ. 1336-1565 ಎಂಬ ನನ್ನ ಸಂಶೋಧನೆಯಲ್ಲಿ ಕಂಡುಕೊಂಡ ಫಲಿತಗಳು ಈ ಕೆಳಕಂಡಂತಿವೆ. ಮೊದಲನೆಯದಾಗಿ ವಿಜಯನಗರ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ಪರಿಶೀಲಿಸಿದಾಗ ಹಿಂದಿಗಿಂತ ಹೆಚ್ಚು ವೃತ್ತಿ ಆಧಾರಿತ ಜಾತಿಗಳು ಕಂಡುಬರುತ್ತವೆ.

ವೃತ್ತಿಗೆ ಇತಿಹಾಸದಲ್ಲಿ ಮಾನವನಷ್ಟೇ ಪ್ರಾಚೀನತೆಯಿದೆ. ವ್ಯಕ್ತಿಯ ಜೀವನಾಧಾರ ವೃತ್ತಿ. ವೃತ್ತಿಯಿಲ್ಲದೆ ಬಾಳುವುದು ಬದುಕುವುದು ಮಾನವನಿಗೆ ಸಾಧ್ಯವೇ ಇಲ್ಲ. ಹೀಗಾಗಿ ಚರಿತ್ರೆಯ ಆರಂಭದಿಂದಲೂ ಒಂದಿಲ್ಲೊಂದು ವೃತ್ತಿಯನ್ನು ಕೈಗೊಳ್ಳುವುದು ಅವನಿಗೆ ಅನಿವಾರ್ಯವೂ, ಅಗತ್ಯವೂ ಆಗಿದ್ದಿತು. ಬೌದ್ಧಿಕವಾಗಿ, ಮಾನಸಿಕವಾಗಿ ವಿಕಾಸವಾದಂತೆ ನಿಸರ್ಗ ಜೀವಿಯಾದ ಮಾನವ ಸಮಾಜ ಜೀವಿಯಾದನು. ಕ್ರಮೇಣ ನೈಸರ್ಗಿಕ ವೃತ್ತಿಗಳೊಂದಿಗೆ ಸಾಮಾಜಿಕ ವೃತ್ತಿಗಳೂ ಅವನೊಂದಿಗೆ ಬೆಳೆದು ಬರುವಂತಾದವು.

ಆರಂಭದಲ್ಲಿ ಈ ಎಲ್ಲ ವೃತ್ತಿಗಳೂ ಅನುವಂಶಿಕವಾಗಿದ್ದವು. ಅಲ್ಲದೆ ಜಾತಿವಾಚಿ, ಧರ್ಮವಾಚಿಗಳಾಗಿರದೆ, ವೃತ್ತಿವಾಚಿಗಳೆನಿಸಿದ್ದವು. ಕ್ರಮೇಣ ಇವು ಜಾತಿನಿಷ್ಠ, ಜನಾಂಗನಿಷ್ಠ, ಪ್ರದೇಶ ನಿಷ್ಠಗಳಾಗಿಯೂ ವರ್ಗನಿಷ್ಠಗಳಾಗಿಯೂ ಬೆಳೆದು ಬಂದವು. ವಿಜಯನಗರ ಕಾಲದಲ್ಲಿ ಇಂತಹ ವೃತ್ತಿನಿರತ ಜಾತಿಗಳು ಒಂದು ಸ್ಥಿರ ರೂಪವನ್ನು ಪಡೆದುಕೊಂಡಂತೆ ಗೋಚರವಾಗುತ್ತದೆ.

ವಿಜಯನಗರ ಕಾಲದಲ್ಲಿ ವೃತ್ತಿನಿರತ ಜಾತಿಗಳನ್ನು ಪಣಗಳೆಂದು ಕರೆಯುತ್ತಿದ್ದರು. ಅವುಗಳ ಸಂಖ್ಯೆ 18 ಇದ್ದಿತು. ಕೃಷಿ, ವ್ಯಾಪಾರ ಮತ್ತು ಕರಕುಶಲ ಕಲೆಗೆ ಸೇರಿದ ವೃತ್ತಿಪರ ಜಾತಿಗಳು ಈ 18 ಫಣಗಳಲ್ಲಿ ಸೇರ್ಪಡೆಯಾಗಿದ್ದವು. ಇವುಗಳನ್ನು ಬಲಗೈ ಮತ್ತು ಎಡಗೈ ಗುಂಪುಗಳಾಗಿ ವಿಂಗಡಿಸಲಾಗಿತ್ತು. ಬಹುಪಾಲು ಜಾತಿಗಳು ಈ ಎರಡು ಗುಂಪುಗಳ ನಡುವೆ ಬರುತ್ತಿದ್ದವು. ಈ ಎರಡು ಗುಂಪುಗಳ ನಡುವೆ ಆಗಾಗೆ ಹಕ್ಕು ಬಾಧ್ಯತೆಗಳಿಗಾಗಿ ಪ್ರತಿಷ್ಠೆ, ಗೌರವಗಳ ಸಲುವಾಗಿ ಮೇಲು ಕೀಳೆಂಬ ಕಾರಣಗಳಿಗಾಗಿ ಘರ್ಷಣೆಗಳಾಗುತ್ತಿದ್ದುವೆಂದು ತಿಳಿದು ಬರುತ್ತದೆ. ವಿಜಯನಗರದ ಅರಸರು ತಮ್ಮ ಸೈನ್ಯ ವ್ಯವಸ್ಥೆ ಮತ್ತು ಆರ್ಥಿಕ ಸಬಲತೆಗಾಗಿ ಈ ಸಮುದಾಯಗಳನ್ನು ತಮ್ಮದೇ ಆದ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದರು.

ಎರಡನೆಯದಾಗಿ ವಿಜಯನಗರ ಕಾಲದ ಜಾತಿ ವ್ಯವಸ್ಥೆಯು ಹಿಂದು ಸಮಾಜದ ವಿಶಿಷ್ಟ ಲಕ್ಷಣವಾಗಿತ್ತು. ವಿವಿಧ ಆಕಾರಗಳಲ್ಲಿ ಸೂಚಿಸಿರುವಂತೆ ಈ ಕಾಲದಲ್ಲಿ ಹಲವು ಪ್ರಾದೇಶಿಕ ಜಾತಿಗಳು, ಉಪಜಾತಿಗಳು ಇದ್ದವು. ಅನುವಂಶಿಕವಾಗಿ ಬಂದಂತೆ ವೃತ್ತಿಯನ್ನೇ ಅವರು ಅನುಸರಿಸುತ್ತಿದ್ದರು. ಅದೊಂದು ಸಮಾನ ಲಕ್ಷಣವುಳ್ಳ ಕುಟುಂಬಗಳ ಸಮುದಾಯ. ಧಾರ್ಮಿಕ ಆಚರಣೆಗಳು, ಸಾಮಾಜಿಕ ಸ್ಥಾನಮಾನ, ಪರಿಶುದ್ಧತೆ ಇವುಗಳ

ಆಧಾರದಿಂದ ಸಮಾಜದಲ್ಲಿ ವರ್ಗಗಳನ್ನು ಅನುಕ್ರಮಿತ ಶ್ರೇಣಿಗಳಲ್ಲಿರಿಸಲಾಗುತ್ತಿತ್ತು. ಆಚರಣೆಗಳು, ನಂಬಿಕೆಗಳು, ಅಭ್ಯಾಸಗಳು, ರೂಢಿಗಳು, ವೃತ್ತಿಗಳು ಎಲ್ಲಕ್ಕಿಂತ ಮಿಗಿಲಾಗಿ ಸಂಪ್ರದಾಯಗಳ ವಿಶಿಷ್ಟ ಲಕ್ಷಣಗಳೂ ಕೂಡ ಒಳಗೊಳ್ಳುತ್ತಿತ್ತು. ಪ್ರತಿಯೊಂದು ಜಾತಿಯಲ್ಲೂ ಉಡುಗೆ ತೊಡುಗೆ ಮತ್ತು ಮದುವೆ ಹಾಗೂ ಅಂತ್ಯ ಸಂಸ್ಕಾರಗಳಿಗೆ ಸಂಬಂಧಿಸಿದ ವಿಧಿಗಳು ಬೇರೆಯಾಗಿದ್ದವು. ಉದಾ: ಚಿನ್ನದ ಕೆಲಸ ಮಾಡುವ ಕುಶಲ ಕಾರ್ಮಿಕರು ಕಬ್ಬಿಣದ ಕೆಲಸ ಮಾಡುವವರಿಗಿಂತ ತಾವು ಬೇರೆ ಜಾತಿಯೆಂದು ಭಾವಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ಕನ್ನಡವಲ್ಲದೆ ಬೇರೆ ಭಾಷೆಯನ್ನು ಆಡುತ್ತಿದ್ದ ಸ್ಥಳೀಯ ಬ್ರಾಹ್ಮಣರು ಇದ್ದರು. ಉತ್ತರ ಕನ್ನಡದ ನಾವಾಯುತ ಮುಸ್ಲಿಮರು, ಕೊಂಕಣಿ ಮಾತನಾಡುತ್ತಿದ್ದ ಕ್ರಿಶ್ಚಿಯನ್ನರು ಇದ್ದರು. ಈ ಕಾಲದ ಸಮಾಜ ಜೀವನದಲ್ಲಿ ಜಾತಿಯು ತನ್ನ ಸಾಂಗತ್ಯವನ್ನು ಕಳೆದುಕೊಂಡಿದ್ದಿತ್ತು. ಕೆಲವು ಜಾತಿಗಳು ಸಾಮಾಜಿಕ ಸ್ಥಾನಮಾನದಲ್ಲಿ ಮೇಲಕ್ಕೇರಲು ಪ್ರಯತ್ನ ಮಾಡುತ್ತಿದ್ದರು. ವಿಜಯನಗರ ಕಾಲದಲ್ಲಿ ಈ ಪ್ರವೃತ್ತಿಯು, ಹಿಂದಿಗಿಂತ ಹೆಚ್ಚಾಗಿಯೇ ವ್ಯಕ್ತವಾಯಿತು. ಈ ಕಾಲದ ಸಾಮಾಜಿಕ ರಚನೆಯಲ್ಲಿ ಬ್ರಾಹ್ಮಣರು ಹಿಂದೂ ಸಮಾಜದ ಅತ್ಯಂತ ಎತ್ತರದ ಪ್ರಧಾನ ಸ್ಥಾನದಲ್ಲಿದ್ದರು.

ಬ್ರಾಹ್ಮಣರಿಗೆ 16 ನಿತ್ಯ ಸಂಸ್ಕಾರಗಳಿರಬೇಕಾಗಿತ್ತು. ಅವುಗಳಲ್ಲಿ ಮುಖ್ಯವಾದುದು ಉಪನಯನ. ವಿಧವೆಯರು ತಲೆಯನ್ನು ಬೋಳಿಸಬೇಕಾಗಿತ್ತು. ಆಹಾರ ಪದ್ಧತಿಗಳು ಮತ್ತು ತರಕಾರಿ ಬಳಕೆಯಲ್ಲೂ ನಿಷೇಧಗಳು ಇರುತ್ತಿದ್ದವು. ಸಾಂಪ್ರದಾಯಿಕವಾಗಿ ಅವರ ವೃತ್ತಿ, ವೇದ, ಶಾಸ್ತ್ರ ಪುರಾಣಗಳ ಅಧ್ಯಯನ, ಯಜ್ಞಯಾಗಾದಿಗಳ ಆಚರಣೆ, ದೇವಾಲಯಗಳಲ್ಲಿ ಪೂಜೆ ಮಾಡುವಂತಹುದು ಹಾಗೂ ಅಗ್ರಹಾರಗಳಲ್ಲಿ ಬೋಧಿಸುವುದು. ಕೆಲವು ಬ್ರಾಹ್ಮಣರು ವ್ಯಾಪಾರದಲ್ಲಿ ನಿರತರಾಗಿದ್ದರು. ವಿದ್ಯಾವಂತ ಬ್ರಾಹ್ಮಣರಲ್ಲಿ ಬಹುತೇಕ ಜನರು ಸರ್ಕಾರಿ ಸೇವೆಯನ್ನು ಕೈಗೊಳ್ಳಲು ಬಯಸುತ್ತಿದ್ದರು. ಕೆಲವರು ಸಚಿವರಾಗಿಯೂ, ದಂಡನಾಯಕರಾಗಿಯೂ ಹಾಗೂ ಪ್ರಾಂತ್ಯದ ರಾಜ್ಯಪಾಲರಾಗಿಯು ಕಾರ್ಯನಿರ್ವಹಿಸುತ್ತಿದ್ದರು. ಆದ್ದರಿಂದ ರಾಜ್ಯದ ಅಧಿಕಾರ ಶಾಯಿಯು ಕ್ಷತ್ರಿಯರ ಏಕಸ್ವಾಮ್ಯವಾಗಿ ಉಳಿದಿರಲಿಲ್ಲ. ವಿಜಯನಗರ ಇತಿಹಾಸದಲ್ಲಿ ಕ್ಷತ್ರಿಯರು ಕಾಣಿಸಿಕೊಳ್ಳುವುದಿಲ್ಲ. ಸೇನಾಧಿಪತಿಗಳನ್ನು ಅವರ ಸಾಧನೆಗಳಿಂದ ಪ್ರಶಂಸಿಸಲಾಗುತ್ತಿತ್ತೇ ಹೊರತು ಅವರ ಕ್ಷತ್ರಿಯ ವಂಶದಿಂದಲ್ಲ.

ಮೂರನೆಯದಾಗಿ ವೈಶ್ಯಜಾತಿಯವರು ವ್ಯಾಪಾರ ನಡೆಸುತ್ತಿದ್ದರು. ಅದೊಂದೆ ಅವರಿಗೆ ಲಭ್ಯವಿದ್ದ ವೃತ್ತಿ. ಇವರು ಸಮರ್ಥವಾದ ಸಂಘಗಳನ್ನು ಸ್ಥಾಪಿಸಿಕೊಂಡು ರಾಜ್ಯದ ಆಡಳಿತದಲ್ಲೂ, ಸಮಾಜದಲ್ಲೂ ಅಪಾರವಾದ ಪ್ರಭಾವವನ್ನು ಹೊಂದಿರುತ್ತಿದ್ದರು. ಅವರಿಗೆ ಕಂದಾಯ ಹಾಗೂ ನ್ಯಾಯ ವಿತರಣ ಅಧಿಕಾರಗಳಿರುತ್ತಿದ್ದವು. ಬಾರ್ಬೋಸನ ಪ್ರಕಾರ ಅಮೂಲ್ಯವಾದ ಬೆಳೆ ಬಾಳುವ ವಸ್ತುಗಳ ವ್ಯಾಪಾರ ಮಾಡುತ್ತ ಅವರು ತುಂಬಾ ಶ್ರೀಮಂತರಾಗಿದ್ದರು. ಲಿಂಗಾಯಿತರು ಅಥವಾ ವೀರಶೈವರು ವಿಜಯನಗರ ಸಾಮ್ರಾಜ್ಯದಲ್ಲಿ ಇನ್ನೊಂದು ಬಹುಮುಖ್ಯ ಪಂಗಡವಾಗಿತ್ತು. ಸಾಮ್ರಾಜ್ಯದಾದ್ಯಂತ ವೀರಶೈವ ಮಠಗಳು ತಲೆಯೆತ್ತಿದವು.

ಅನೇಕ ವೀರಶೈವರು ರಾಜ್ಯದ ಗಣ್ಯ ಅಧಿಕಾರಿಗಳಾಗಿದ್ದರು. ಒಂದು ರೀತಿಯಲ್ಲಿ ಸಾಮ್ರಾಜ್ಯದ್ಯಾಂತ ಎಲ್ಲಾ ಕಡೆ ಅಂಗೀಕೃತವಾಗದ ಮತ್ತು ಏರಲ್ಪಟ್ಟ ವೈದಿಕ, ಬ್ರಾಹ್ಮಣ ಸಾಂಸ್ಕೃತಿಕ ಬದಲಿ ಸಾಮಾಜಿಕ ಮಾದರಿಯನ್ನು ಒದಗಿಸಿತ್ತು. ಶೂದ್ರರದು ಶ್ರೇಣಿಯಲ್ಲಿ ಕೊನೆಯದಾದ ಒಂದು ಸಂಕೀರ್ಣ ಜಾತಿ. ಅವರಲ್ಲಿ ಹಲವು ಉಪಜಾತಿಗಳಿದ್ದವು. ಇವರಿಗೆ ವಿದ್ಯಾಭ್ಯಾಸಕ್ಕೆ ಅರ್ಹತೆ ಇರಲಿಲ್ಲ. ಸಂಸ್ಕೃತಿಯಿಂದ ಅವರನ್ನು ವಂಚಿಸಲಾಗಿತ್ತು. ಬಹು ಸಂಖ್ಯೆಯ ಶೂದ್ರರು, ಗೇಣಿದಾರರು ಅಥವಾ ಕೃಷಿ ಕಾರ್ಮಿಕರು. "ಅವರು ರಾಷ್ಟ್ರದ ಬೆನ್ನು ಮೂಳೆಯಾಗಿದ್ದರು. ದೇಶದ ಅಭ್ಯುದಯವು ಅವರ ಮೇಲೆ ಬಹುಮಟ್ಟಿಗೆ ಅವಲಂಬಿಸಿತ್ತು" ರೆಡ್ಡಿಗಳು ಮತ್ತು ಗೌಡರು ಮುಖ್ಯವಾಗಿ ಈ ವರ್ಗಕ್ಕೆ ಸೇರಿದವರು.

ನಾಯಕರು ಯೋಧರು ಇವರ ಮುಖ್ಯ ವೃತ್ತಿ ಯುದ್ಧ ಮಾಡುವುದು. ಇವರಿಗೂ ಜಮೀನು ಇರುತ್ತಿದ್ದಿತು. ಅದನ್ನು ಅವರು ಇತರರಿಂದ ಬೇಸಾಯ ಮಾಡಿಸುತ್ತಿದ್ದರು. ಈ ಉಪಜಾತಿಗಳ ಗಣ್ಯರನ್ನೇ ಮುಖ್ಯವಾಗಿ ಅಮರನಾಯಕರನ್ನಾಗಿ, ಗೇಣಿ ರೈತರಾಗಿ, ಕಾವಲುಗಾರರಾಗಿ ನೇಮಕ ಮಾಡಲಾಗುತ್ತಿತ್ತು. ಕುರುಬರು ಮತ್ತು ಗೊಲ್ಲರು ಕುರಿ ಮತ್ತು ದನಗಳನ್ನು ಕಾಯುತ್ತಿದ್ದರು. ಬಟ್ಟೆ ನೇಯುತ್ತಿದ್ದವರು ಮುಖ್ಯವಾಗಿ ಪದ್ದಸಾಲಿಗಳು. ಮಡಿಕೆ ಮಾಡುವವರು ಕುಂಬಾರರು, ಭೂಮಿ ಅಗೆಯುವವರು ವಡ್ಡರು, ಉಪ್ಪು ತಯಾರಿಸುವವರು ಉಪ್ಪಲಿಗರು, ಕ್ಷೌರ ಮಾಡುವವರನ್ನು ನಾಯಿಂದರೆಂದು ಕರೆಯುತ್ತಿದ್ದರು. ವಿಜಯನಗರ ಕಾಲದಲ್ಲಿ ಗ್ರಾಮೀಣ ಪ್ರದೇಶದಲ್ಲಿ ರೈತರ ಸೇವಾನಿರತರಾಗಿ ಆಯಗಾರರು ಕಂಡುಬರುತ್ತಾರೆ. ವಿಜಯನಗರದ ಅರಸರು ಅವರಿಗೆ ಅದೇ ರೀತಿಯ ತೆರಿಗೆಗಳ ವಿನಾಯತಿಯನ್ನು ನೀಡಿದ್ದರು. ಸುಮಾರು ಹದಿನಾಲ್ಕು ಜಾತಿಯ ಸಮುದಾಯಗಳು ಈ ಭಾಗದಲ್ಲಿ ಕಂಡುಬರುತ್ತಾರೆ. ಪ್ರತಿಯೊಂದು ಉಪಜಾತಿಯ ಮುಖ್ಯಸ್ಥನು ಹಿರಿಯರ ಒಂದು ಮಂಡಳಿಯ ಮೂಲಕ ಕಾರ್ಯ ನಿರ್ವಹಿಸುತ್ತಿದ್ದನು.

ನಾಲ್ಕನೆಯದಾಗಿ ಅಸ್ಪೃಶ್ಯರನ್ನು ಐದನೆಯ ವರ್ಗಕ್ಕೆ ಸೇರಿಸಲಾಗಿತ್ತು. ಅವರನ್ನು ಅಂತ್ಯಜರು ಅಥವಾ ಹೊಲೆಯರೆಂದು ಕರೆಯುತ್ತಿದ್ದರು. ಊರಿನ ಹೊರವಲಯದಲ್ಲಿ ಅವರು ವಾಸಮಾಡಬೇಕಾಗಿತ್ತು. ಅವರು ಕಡ್ಡಾಯವಾಗಿ ದುಡಿಯಬೇಕಾಗಿತ್ತು. ಮೇಲುವರ್ಗದ ಜನರ ಆದೇಶವನ್ನು ಪಾಲಿಸಬೇಕಾಗಿತ್ತು. ಅವರಲ್ಲಿ ಎರಡು ಉಪ ಪಂಗಡಗಳಿದ್ದವು. ಹೊಲೆಯರು ಮತ್ತು ಮಾದಿಗರು. ಯಾವುದೇ ನಾಗರಿಕ ಅಥವಾ ಸೈನ್ಯ ಹುದ್ದೆಗೆ ಅವರನ್ನು ಸೇರಿಸಿಕೊಳ್ಳುತ್ತಿರಲಿಲ್ಲ. ಹೊಲೆಯರು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದರು. ಉಪ ಕಸುಬಾಗಿ ನೇಯ್ಗೆ ಮಾಡುತ್ತಿದ್ದರು. ಮಾದಿಗರು ಮುಖ್ಯವಾಗಿ ಕುಶಲ ಕರ್ಮಿಗಳು. ಇವರು ಪಾದರಕ್ಷೆಗಳನ್ನು, ತೊಗಲಿನ ಹಗ್ಗವನ್ನು ತಯಾರಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ಜಾತಿ ಪದ್ಧತಿಯು ಮಾನವನ ಮನಸ್ಸಿನ ಮೇಲೆ ಬೀರಿದ ದುಷ್ಟ ಪರಿಣಾಮ ಅದರ ಬೆಂಬಲಿಗರು ತೋರುತ್ತಿದ್ದ ಕಪಟ ವಂಚನೆ, ಇವು ಸಮಾಜದಲ್ಲಿ ಅಸಮಾನತೆಯನ್ನು ಕೆರಳಿಸಿದ್ದವು. ಹೆಚ್ಚಿನ ಜಾತಿಗಳು ಬಲವಾದ ಆಡಳಿತ ವ್ಯವಸ್ಥೆಯನ್ನು ಹೊಂದಿದವು. ಕೆಲವು ಜಾತಿಗಳಲ್ಲಿ ಈ ವ್ಯವಸ್ಥೆಯು

ಕಾಣದಿದ್ದರೂ ಅವು ಜನರ ಮೇಲೆ ಸಡಿಲ ಮತ್ತು ಅನಿರ್ದಿಷ್ಟ ರೀತಿಗಳಲ್ಲಿ ತಮ್ಮ ಯಾಜಮಾನ್ಯವನ್ನು ಹೇರುತ್ತವೆ. ಉದಾಹರಣೆಗೆ ಜಾತಿಯೊಂದು ವ್ಯಕ್ತಿಯೊಬ್ಬನನ್ನು ಬಹಿಷ್ಕರಿಸಬಹುದು. ಕನಕ, ಪುರಂದರದಾಸರಂತಹ ಸಂತಶ್ರೇಷ್ಠರು ಇಂಥ ಅನಿಷ್ಟವನ್ನು ಖಂಡಿಸಿ ಅನೇಕ ಕೀರ್ತನೆಗಳನ್ನು ರಚಿಸುವುದರ ಮೂಲಕ ಅಂದಿನ ಸಮಾಜದ ತಾರತಮ್ಯವನ್ನು ಖಂಡಿಸುತ್ತಿದ್ದರು.

ಐದನೆಯದಾಗಿ ಅಂದಿನ ಶಾಸನಗಳಲ್ಲಿ ಕಂಡುಬರುವಂತೆ ಶೂದ್ರರು, ಗೌಡರು (ಒಕ್ಕಲಿಗರು), ಹೊಲೆಯರು, ಮಾದಿಗರು ಇವರೆಲ್ಲರ ಪ್ರಧಾನ ವೃತ್ತಿ ಕೃಷಿಯೇ ಆಗಿದ್ದಿತು. ಅಂದಿನ ಆರ್ಥಿಕ ವ್ಯವಸ್ಥೆಯನ್ನು ಕೃಷಿಯೇ ಅವಲಂಬಿಸಿತ್ತು. ಎನಿಸುತ್ತದೆ. ಕೃಷಿ ಅಂದು ಭೂ ಮಾಲಿಕರ ಸ್ವತ್ತಾಗಿತ್ತು. ಭೂಮಿಯಲ್ಲಿ ಕೆಲಸ ಮಾಡಲು ಕೂಲಿ ಕೆಲಸಗಾರರನ್ನು, ಜೀತದಾಳುಗಳನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗೆ ಸೇರಿದವರಾಗಿದ್ದರು. ಕೃಷಿಕರಿಗೆ ಬೇಕಾದ ಕೃಷಿ ಉಪಕರಣಗಳನ್ನು ಸಿದ್ಧ ಮಾಡಿಕೊಡುತ್ತಿದ್ದ ಅನೇಕ ವೃತ್ತಿ ಸಮುದಾಯಗಳು ಈ ಕಾಲದಲ್ಲಿದ್ದವು. ಗೃಹೋಪಕರಣಗಳು, ಬಟ್ಟೆಯ ವಸ್ತುಗಳು, ಮೊದಲಾದ ಕಚ್ಚಾ ಸಾಮಾಗ್ರಿಗಳು ಲಭ್ಯವಿದ್ದ ಸ್ಥಳಗಳಲ್ಲಿ ಹತ್ತಿ ಮತ್ತು ರೇಷ್ಮೆ ತಯಾರಿಕ ಕೇಂದ್ರಗಳಿದ್ದವು. ಗಣಿಗಾರಿಕೆ, ಯುದ್ಧದ ಶಸ್ತ್ರಾಸ್ತ್ರಗಳು, ಸುಗಂಧ ದ್ರವ್ಯಗಳ ತಯಾರಿಕೆ, ಕರಕುಶಲ ವಸ್ತುಗಳ ತಯಾರಿಕೆ ಮುಂತಾದ ಸಮಾಜಕ್ಕೆ ಉಪಯುಕ್ತವಾಗುವ ಪ್ರಾಚೀನ ಕಾಲದ ಕೌಶಲ್ಯವು ಈ ಅವಧಿಯಲ್ಲಿ ಮುಂದುವರಿಯಿತು. ಅಕ್ಕಸಾಲಿಗ, ಬಡಗಿ, ಕಲ್ಲುಕುಟಿಗ, ಕಂಬಾರ ಮತ್ತು ಕುಂಬಾರರಂಥ ಕುಶಲ ಕೆಲಸಗಾರರು ತಮಗೆ ಪರಂಪರೆಯಿಂದ ಬಂದ ಪರಿಣಿತಿಯಿಂದ ವಸ್ತುಗಳನ್ನು ತಯಾರಿಸಿಕೊಡುತ್ತಿದ್ದರು. ಇವರನ್ನು ಆಯಗಾರರೆಂದು ಕರೆಯುತ್ತಾರೆ.

ಆರನೆಯದಾಗಿ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಅಭಿವೃದ್ಧಿಯು ಹೆಚ್ಚಾಗಿ ವ್ಯಾಪಾರ ಮತ್ತು ವಾಣಿಜ್ಯವನ್ನು ಆಧರಿಸಿತ್ತು. ನಾಡಿನ ವ್ಯಾಪಾರವು ವಾಣಿಜ್ಯ ಮತ್ತು ವರ್ತಕ ಸಂಘಗಳಿಂದ ಬಹುಮಟ್ಟಿಗೆ ಪ್ರಭಾವಿತವಾಗಿತ್ತು. ಕಸುಬುದಾರರಂತೆಯೆ ವರ್ತಕರು ತಮ್ಮದೇ ಆದ ವೃತ್ತಿ ಸಂಘಗಳನ್ನು ರೂಪಿಸಿಕೊಂಡಿದ್ದರು. ವ್ಯಾಪಾರವು ವಸ್ತು ವಿನಿಮಯಕ್ಕಿಂತ ಹೆಚ್ಚಾಗಿ ನಾಣ್ಯಗಳ ಮೂಲಕವೇ ನಡೆಯುತ್ತಿತ್ತು. ಚಿನ್ನದ ನಾಣ್ಯಗಳು ಹೆಚ್ಚು ಬಳಕೆಯಲ್ಲಿದ್ದವು. ಉಪ್ಪಾರರು, ಮಾಚಿಗಳು, ಮೇದರು, ಮಡಿಕೆ ತಯಾರಕರು, ಎಣ್ಣೆ ತಯಾರಕರು, ಕಬ್ಬು ಮತ್ತು ಬೆಲ್ಲ ತಯಾರಕರು, ಲೋಕ ವಸ್ತುಗಳ ತಯಾರಕರು ಹೀಗೆ ಕೈಗಾರಿಕೆ ಹಾಗೂ ಕರಕುಶಲ ಕಸುಬುಗಳು, ಮೇಲಿನ ವಿವಿಧ ಸಮುದಾಯಗಳ ದುಡಿಮೆಯಿಂದಾಗಿ ವಿಜಯನಗರದ ಬೊಕ್ಕಸಕ್ಕೆ ಆರ್ಥಿಕ ಸಂಪನ್ಮೂಲಗಳ ಹೊಳೆಯೇ ಹರಿದು ಬರುತ್ತಿತ್ತು. ಆದರೆ ಈ ಸಮುದಾಯಗಳ ವೈಯಕ್ತಿಕ ಬದುಕು ಮಾತ್ರ ಶೋಚನೀಯವಾಗಿತ್ತೆಂದೇ ಹೇಳಬಹುದು.

ಕೊನೆಯದಾಗಿ ವಿಜಯನಗರ ಕಾಲದಲ್ಲಿ ಮೇಲಿನ ವೃತ್ತಿಗಳಲ್ಲದೆ ಕೆಲವು ಪ್ರವೃತ್ತಿಗಳು, ಹವ್ಯಾಸಗಳು ಚಾಲನೆಯಲ್ಲಿದ್ದವು. ಆದಿ ಮಾನವನ ಮೂಲಭೂತ ಅಗತ್ಯವಾದ ಬೇಟೆ ವೃತ್ತಿ ಈ ಅವಧಿಯಲ್ಲಿ

ಮನರಂಜನೆಯ ವೃತ್ತಿಯಾಗಿ ಕಂಡುಬರುತ್ತದೆ. ಕೆಲವು ನಿರ್ದಿಷ್ಟ ಸಮುದಾಯಗಳು ಬೇಟೆಯಲ್ಲಿ ಪರಿಣಿತಿಯನ್ನು ಪಡೆದಿದ್ದರು. ವಿಜಯನಗರ ಅರಸರು ಇವರೊಂದಿಗೆ ಬೇಟೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಪ್ರಮುಖವಾಗಿ ಬೇಡರು ಮೂಲತಃ ಬೇಟೆಗಾರರಾಗಿದ್ದು ವಿಜಯನಗರ ಕಾಲದಲ್ಲಿ ತಳವಾರಿಕೆ, ಸೈನ್ಯ ವ್ಯವಸ್ಥೆ ಮೊದಲಾದ ಸೇವೆಗಳಲ್ಲಿ ಕಾಣಿಸಿಕೊಳ್ಳುವಂತೆ ಆದುದು ಒಂದು ವಿಶೇಷ ಎಂದೇ ಹೇಳಬೇಕು.

ಒಟ್ಟಿನಲ್ಲಿ ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳನ್ನು ಕುರಿತ ಈ ಅಧ್ಯಯನದಲ್ಲಿ ಮುಖ್ಯವಾಗಿ ವೃತ್ತಿ ಆಧಾರಿತ ಎಲ್ಲಾ ಅಂಗಗಳಲ್ಲೂ, ರಂಗಗಳಲ್ಲೂ ತಮ್ಮದೇ ಆದ ರೀತಿಯಲ್ಲಿ ಮತ್ತು ಇತಿಮಿತಿಗಳಲ್ಲಿ ವಿಜಯನಗರದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ವಿಜಯನಗರ ಕಾಲದ ಸಮಾಜ, ಸಂಸ್ಕೃತಿ, ಆರ್ಥಿಕ ಭದ್ರತೆ, ಸೈನ್ಯದ ಬಲಿಷ್ಟತೆ, ವ್ಯಾಪಾರದ ವೈವಿಧ್ಯತೆ ಹೀಗೆ ವಿವಿಧ ಸಮುದಾಯಗಳು ವಿಜಯನಗರದ ಅಭಿವೃದ್ಧಿಗೆ ಶ್ರಮಿಸಿವೆ.

ಆದರೆ ಈ ಸಮುದಾಯಗಳ ಸಾಮಾಜಿಕ ಮಟ್ಟವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಬಹಳಷ್ಟು ಏರುಪೇರುಗಳು ಕಂಡುಬರುತ್ತವೆ. ಬಡವ ಬಲ್ಲಿದ, ಮೇಲುವರ್ಗ, ಕೆಳವರ್ಗ ಇಂತಹ ಹಲವಾರು ವಿಚಾರಗಳು ಕುತೂಹಲವನ್ನುಂಟು ಮಾಡುತ್ತ ಹೆಚ್ಚಿನ ಸಂಶೋಧನೆಗೆ ಪ್ರೇರಣೆಯಾಗುತ್ತವೆ.

# ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ
# (ಕ್ರಿ.ಶ. 1336-1565)

## ಪರಿವಿಡಿ

## ಸಂಶೋಧಕರ ಪ್ರಮಾಣಪತ್ರ

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಯನ ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿರುವ ಡಾ. ಪುಟ್ಟಯ್ಯ ಅವರ ಮಾರ್ಗದರ್ಶನದಲ್ಲಿ "ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ(ಕ್ರಿ.ಶ. 1336-1565)" ಎಂಬ ವಿಷಯ ಕುರಿತು ಸಂಶೋಧನಾ ಕಾರ್ಯ ನಡೆಸಿ ಇತಿಹಾಸ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಈ ಹಿಂದೆ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು (ಮಹೇಶ್.ಜಿ)
ದಿನಾಂಕ : ಸಂಶೋಧಕರು

## ಹಾಜರಾತಿ ಪ್ರಮಾಣಪತ್ರ

ಸಂಶೋಧಕರಾದ ಶ್ರೀ ಮಹೇಶ್.ಜಿ ಅವರು "ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ (ಕ್ರಿ.ಶ. 1336-1565)" ಎಂಬ ವಿಷಯದಲ್ಲಿ ನನ್ನ ಮಾರ್ಗದರ್ಶನದಲ್ಲಿ ಮಹಾಪ್ರಬಂಧವನ್ನು ಸಿದ್ಧಪಡಿಸಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ. ವಿಶ್ವವಿದ್ಯಾನಿಲಯವು ನಿಗದಿಪಡಿಸಿರುವಂತೆ ಸುಮಾರು 200 ದಿವಸಗಳಿಗೂ ಮಿಕ್ಕಂತೆ ನಿರಂತರ ಸಂಪರ್ಕದಲ್ಲಿ ಅವರು ನನ್ನೊಂದಿಗೆ ಸಂಶೋಧನಾ ಕಾರ್ಯಕ್ಕೆ ಸಂಬಂಧಿಸಿದಂತೆ ಮಾರ್ಗದರ್ಶನ ಪಡೆದಿರುತ್ತಾರೆ. ಹೀಗಾಗಿ ಹಾಜರಾತಿಗೆ ಸಂಬಂಧಿಸಿದ ನಿಯಮವನ್ನು ಅವರು ಪಾಲಿಸಿದ್ದಾರೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ :

(ಡಾ. ಪುಟ್ಟಯ್ಯ)
ಸಹ ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ
ಮಾನಸ ಗಂಗೋತ್ರಿ, ಮೈಸೂರು - 570 006

ಇಂದ,

ದಿನಾಂಕ :

**ಮಹೇಶ್.ಜಿ**
ಸಂಶೋಧಕರು
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು - 570006

ಇವರಿಗೆ,
**ಕುಲಸಚಿವರು (ಪರೀಕ್ಷಾಂಗ)**
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು - 570 005

ಮೂಲಕ,
**ಅಧ್ಯಕ್ಷರು**
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು - 570006

ಮಾನ್ಯರೇ,

ವಿಷಯ : ಮೈಸೂರು ವಿಶ್ವವಿದ್ಯಾನಿಲಯಕ್ಕೆ ಇತಿಹಾಸದಲ್ಲಿ ಪಿಎಚ್.ಡಿ. ಪದವಿಗಾಗಿ ಸಂಶೋಧನ ಮಹಾಪ್ರಬಂಧ ಸಲ್ಲಿಸುವುದರ ಬಗ್ಗೆ.

ಉಲ್ಲೇಖ: 1) Univ.Order No. AC6/Ph.D-EN/340/2010-11 Dated 25.11.2010
2)

ಇತಿಹಾಸ ಅಧ್ಯಯನ ವಿಭಾಗದಲ್ಲಿ ಇತಿಹಾಸ ಸಹಪ್ರಾಧ್ಯಾಪಕರಾಗಿರುವ ಡಾ. ಪುಟ್ಟಯ್ಯ ಅವರ ಮಾರ್ಗದರ್ಶನದಲ್ಲಿ "ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ (ಕ್ರಿ.ಶ. 1336-1565) ಎಂಬ ವಿಷಯದ ಬಗೆಗೆ ಇತಿಹಾಸದಲ್ಲಿ ಸಂಶೋಧನೆ ಮಾಡಿದ್ದು, ನನ್ನ ಈ ಸಂಶೋಧನಾ ಮಹಾಪ್ರಬಂಧದ 04 ಪ್ರತಿಗಳನ್ನು ಅಂತಿಮ ಸಾರಲೇಖದ 10 ಪ್ರತಿಗಳನ್ನು ಹಾಗೂ ಮಹಾಪ್ರಬಂಧದ ಎರಡು C.D.ಯನ್ನು ವಿಶ್ವವಿದ್ಯಾನಿಲಯಕ್ಕೆ ಮುಂದಿನ ಸೂಕ್ತ ಕ್ರಮಕ್ಕಾಗಿ ಸಲ್ಲಿಸುತ್ತಿದ್ದೇನೆ.

ತಮ್ಮ ನಂಬುಗೆಯ

(ಡಾ. ಪುಟ್ಟಯ್ಯ)

(ಮಹೇಶ್.ಜಿ)
ಸಂಶೋಧಕರು

ಅಡಕಗಳು

1) ಸಂಶೋಧನ ಮಹಾಪ್ರಬಂಧದ 04 ಪ್ರತಿಗಳು ಮತ್ತು 02 ಸಿ.ಡಿ
2) ಅಂತಿಮ ಸಾರಾಂಶದ 10 ಪ್ರತಿಗಳು
3) ಪಿಎಚ್.ಡಿ. ಶುಲ್ಕ ಪಾವತಿಸಿದ ಬ್ಯಾಂಕ್ ಚಲನ್ ನಂ.
4) ಸಂಶೋಧನ ಅವಧಿಯಲ್ಲಿ ಸಂಚಿಕೆಗಳಲ್ಲಿ ಪ್ರಕಟಗೊಂಡ 2 ಲೇಖನಗಳ ಜೆರಾಕ್ಸ್ ಪ್ರತಿಗಳು
5) ಮಾರ್ಗದರ್ಶಕರ ಹಾಜರಾತಿ ಪ್ರಮಾಣಪತ್ರ
6) ವಿ.ವಿ. ಗ್ರಂಥಾಲಯಗಳ ಬೇಬಾಕಿ ಪತ್ರ
7) ವಿಶ್ವವಿದ್ಯಾನಿಲಯ ಸಂಶೋಧನ ವಿದ್ಯಾರ್ಥಿಗಳ ವಸತಿನಿಲಯದ ಬೇಬಾಕಿ ಪತ್ರ
8) ಸಂಶೋಧನಾ ಎನ್‌ರೋಲ್‌ಮೆಂಟ್ ಮತ್ತು ನೊಂದಣಿ ಪತ್ರಗಳು

# 1. ಪಾರಿಭಾಷಿಕ ಪದಗಳ ಅರ್ಥ

| | | |
|---|---|---|
| ಅವಸರಂ | : | ಪ್ರಾರ್ಥನೆ, ಪೂಜೆ |
| ಅಗ್ರಹಾರ / ಅಗರಪರ್ರು | : | ಬ್ರಾಹ್ಮಣರಿಗಾಗಲಿ, ವೈಶ್ಯ (ವಣಿಕ)ರಿಗಾಗಲಿ ನಿವಾಸಕ್ಕೆಂದು ನಿರ್ಮಿಸಿದ 'ಸರ್ವಕರ ಪರಿಹಾರ' ಅಥವಾ 'ಸರ್ವಮಾನ್ಯ' ಎಂದು ಪರಿಗಣಿತವಾದ ವಸತಿ |
| ಅಚ್ಚುಕ (ಗ)ಟ್ಟು | : | ಕೆರೆ ಕಾಲುವೆ ಮುಂತಾದವುಗಳ ಆಸರೆಯಲ್ಲಿರುವ ಭೂಮಿಯ ಪರಿಮಿತಿ; 'ತರಿ' ವ್ಯವಸಾಯಕ್ಕೆ ಸಿದ್ಧಮಾಡುವ (ಮಾಡಲ್ಪಟ್ಟ) ಭೂಮಿ |
| ಅಟ್ಠವಣೆ (ಆಟ್ಟವಣೆ) | : | ಕಂದಾಯ ಇಲಾಖೆ |
| ಅಡ್ಡದೆರೆ | : | ಮೇಕೆ ಮೇಲಿನ ತೆರಿಗೆ |
| ಅಣೆ(ಣೆ)ಕಟ್ಟು | : | ನೀರಿನ ಪ್ರವಾಹಕ್ಕೆ ಹಾಕಿದ (ಅಡ್ಡಗಟ್ಟೆ) ಕಟ್ಟೆ ಕೆರೆಯ ಕಟ್ಟೆ |
| ಅಮರಂ / ಅಮರ ಮಾಗಣಿ | : | ಸೈನ್ಯವನ್ನು ಸಂರಕ್ಷಿಸಿಕೊಳ್ಳಲು ನೀಡುವ ಮಾನ್ಯ ವ್ಯವಸಾಯ : ಭೂಮಿ; ಆಮಿರಾನ್-ಎ-ಸದ್ ಎಂಬ ಪರ್ಷಿಯನ್ ಶಬ್ದದಿಂದ ಹುಟ್ಟಿದುದು; ಸೇನಾಮಾನ್ಯ |
| ಅಮರನಾಯಕತನ | : | ಅಮರನಾಯಕನಸ್ಥಾನಾ |
| ಅರುವಾರ / ಅಂತರಾರುವಾರ | : | ಸಾಲಕ್ಕಾಗಿ ಮನೆ, ಜಮೀನು ಮುಂತಾದ ಆಸ್ತಿಯನ್ನು ಭೋಗ್ಯಕ್ಕೆ ಹಾಕುವುದು |
| ಅಷ್ಟಭೋಗಗಳು | : | ಇನಾಮು / ಉಂಬಳಿ ಪಡೆದ ಭೂಮಿಯ ಮೇಲಿನ ಎಂಟು (ಸಂಪೂರ್ಣ) ಬಗೆಯ ಹಕ್ಕುಗಳು |
| ಅಕ್ಷಿಣಿ | : | ಅಷ್ಟಬೋಗ ತೇಜಸ್ವಾಮ್ಯ<br>i) ನಿಧಿ, ನಿಕ್ಷೇಪ, ಜಲ, ಪಾಷಾಣ, ಅಕ್ಷಿಣಿ, ಆಗಾಮಿ, ಸಿದ್ಧ ಹಾಗೂ ಸಾಧ್ಯ<br>ii) ವಿಕ್ರಯ, ದಾನ, ವಿನಿಮಯ, ಜಲ, ತರು, ಪಾಷಾಣ, ನಿಧಿ, ನಿಕ್ಷೇಪಗಳು |
| ಆದಿಮೈ | : | ಜಾತಿಹೀನ ಜಾತಿಗಳು |
| ಆಯಂ | : | ತೆರಿಗೆ, ಸುಂಕ, ಧಾನ್ಯರೂಪದ ತೆರಿಗೆ |
| ಆಯಕಟ್ಟು | : | ಅಚ್ಚುಕಟ್ಟು; ಜಲಾಶಯದ ಆಸರೆಯಲ್ಲಿ ಬರುವ ಭೂಮಿಯ ಒಟ್ಟು ವಿಸ್ತಾರ |
| ಆಯಗಾರರು / ಆಯಗಾಂಡ್ಲು | : | ಗ್ರಾಮಸೇವಕರು: ಉಪಕಾಲುವೆಗಳನ್ನು ಹೊಂದಿರುವರು (ತಲುಗು ಆಯಕಾಂಡ್ಲು; ಆಯಮುಕಾಂಡ್ಲು) ಊರಿನ ಮುಖ್ಯಸ್ಥರಿಂದ ಕಣದ ಮೇಲೆ ದವಸ ಧಾನ್ಯಗಳನ್ನು ಪಡೆದುಕೊಳ್ಳುವವರು. |
| ಆರಂಭ | : | ಕೃಷಿ |
| ಇನಾಮ್ | : | ಕಂದಾಯವಿರದ ವಂಶಪಾರಂಪರ್ಯವಾಗಿ ಅನುಭೋಗಿಸಲು ಇರುವ ಭೂಮಿ |
| ಇರೈ | : | ತೆರಿಗೆ |

| | | |
|---|---|---|
| ಇರೈಲಿ / ಇರಂಗಲ್ | : | ತೆರಿಗೆ ಇಲ್ಲದ ಭೂಮಿ |
| ಇಲ್ಲರೈ | : | ಮನೆಗಂದಾಯ; ಮನೆವಣ |
| ಉಂಬಳಿ / ಉಂಬಳಿಗೆ | : | ದತ್ತಿ; ಇನಾಂ ಭೂಮಿ; ಇನಾಂ |
| ಉಂಬಳಿ ಗ್ರಾಮ | : | ಜೋಡಿ ಗ್ರಾಮ; ಜಹಗೀರು; ಜಾಗೀರ್ |
| ಉಂಬಳಿ | : | ರಾಜರು ರಾಜ್ಯದ ಅಧಿಕಾರಿಗಳ ಹಿಂದಿನ ಸೇವೆಯ ಗುರುತಾಗಿ ಅಥವಾ ಹಾಲಿಸೇವೆಗೆ ವೇತನದ ಬದಲು ನೀಡುತ್ತಿದ್ದ ಬೂದತ್ತಿ |
| ಉಭಯಂ | : | ದಾನ; ಸೇವೆ; ಅರ್ಪಣೆ; ದೇವಸ್ಥಾನಗಳಲ್ಲಿ ಸಂಗ್ರಹಿಸುತ್ತಿದ್ದ ಒಳವಾರು ಹೊರವಾರು ತೆರಿಗೆಗಳು |
| ಉಳುವ-ಕಾಣಿಯಾಚ್ಚಿ (ಉಳುವ ಕಾಣಾಚಿ) | : | ವ್ಯವಸಾಯದ ಹಕ್ಕು |
| ಉತ್ತಾರ / ಉದ್ಧಾರ / ಉದ್ರಂಗ | : | ನಿಗದಿತ (ಹಣ ಸಂದಾಯ) ಕಂದಾಯ; ನಿಗದಿತ ತೆರಿಗೆ; (Fixed Taxes) ನಿಗದಿತ ತೆರಿಗೆ ಇಲ್ಲವೆ ನಿಶ್ಶುಲ್ಕವನ್ನುಳ್ಳ ಭೂಮಿ ಇದನ್ನು ವ್ಯಕ್ತಿಯೋರ್ವನು ಸಲ್ಲಿಸಿದ ಸೇವೆಗೆ ಕೊಡಲಾಗುತ್ತಿತ್ತು. |
| ಊರ್ (ಊರು) | : | ಗ್ರಾಮ; ಪುರ; ಸಭೆ |
| ಊರಾರ್ / ಊರವರು | : | ಗ್ರಾಮದ ಮುಖ್ಯಸ್ಥ (ಮುಖ್ಯಸ್ಥರು) |
| ಏಕಭೋಗ / ಏಕಭೋಗ್ಯ / ಏಕಸ್ವಾಮ್ಯ | : | ಸರ್ವ ಅಧಿಕಾರಗಳನ್ನು ಹೊಂದಿ ಅನುಭವಿಸುವ ಸ್ವಾಮ್ಯತ್ವ (ಭೂಮಿ : ಗ್ರಾಮ) |
| ಐಲು ಗುಯ್ಲು (ಗಯ್ಯಲ್) | : | ನ್ಯೂನತೆಯಿಂದ ಕೂಡಿದ ಭೂಮಿಯ ಒಂದು ಅಳತೆ |
| ಒಕ್ಕಲು | : | ವ್ಯವಸಾಯ ಮಾಡುವ ಕುಟುಂಬ |
| ಒಡೆಯ | : | ದೊರೆ, ರಾಜ, ಮಂಡಲಾಧಿಪತಿ |
| ಕಟ್ಟಳೆ | : | ಒಪ್ಪಂದ |
| ಕಟ್ಟು ಕೊಡುಗೆ | : | ಕೆರೆಗಳನ್ನು ಕಟ್ಟುವುದಕ್ಕೆ ಜೀರ್ಣೋದ್ಧಾರಕ್ಕೆ ಕೊಡುವ ಕೊಡುಗೆ (ಅನುದಾನ) |
| ಕಡಮೈ (ತಮಿಳು) | : | ಸರ್ಕಾರಕ್ಕೆ ಕೊಡುವ ಧಾನ್ಯರೂಪದ ಕಂದಾಯ |
| ಕಣಜ / ಕೊಟಾರ / ಕೊಟಾರು | : | ಧಾನ್ಯ ತುಂಬುವ ಕಡಿಕೆಂಚ ಹಗೆ / ಹಗೇವು; ಹಲಗೆಗಳಿಂದ ಮಾಡಿದ ಧಾನ್ಯದ ಕೋಣೆ; ಕೊಟಾರು (ತೆಲುಗು) ಧಾನ್ಯಗಳನ್ನು ಶುದ್ಧೀಕರಿಸುವ ಸ್ಥಳ |
| ಕಪಿಲೆ | : | ಏತ; ಏತದ ಬಾವಿ (ಎತ್ತುಗಳ ಮೂಲಕ ನೀರೆತ್ತುವ ಸಾಧನ) |
| ಕಮ್ಮಾರ | : | ಕಬ್ಬಿಣದ ಕೆಲಸ ಮಾಡುವ ವ್ಯಕ್ತಿ (ಕಂಬಾರ) |
| ಕರಣಂ | : | ಗ್ರಾಮ ಲೆಕ್ಕಿಗ; ಶಾನಭೋಗ; ಸೇನಬೋಧ |
| ಕಿರುಕುಳ | : | ಸಣ್ಣ ತೆರಿಗೆ |
| ಕಳಮ (ಕಲಮ) | : | ಧಾನ್ಯದ ಅಳತೆ |
| ಕಳಂಜು | : | ಚಿನ್ನದ ನಾಣ್ಯ |
| ಕ್ರಯ | : | ವಿಕ್ರಯ, ಮಾರುವ ಬೆಲೆ, ಬೆಲೆ |
| ಕಾಡಾರಂಭ | : | ಒಣಭೂಮಿಯ (ಬೆದ್ದಲು/ಖುಷ್ಕಿ) ವ್ಯವಸಾಯ; ಆರಂಭ |
| ಕಾಣಿಕೆ | : | ಕಪ್ಪಕಾಣಿಕೆ; ನಜರಾಣ, ನಜರು; ಬಹುಮಾನ |

| | | |
|---|---|---|
| ಕಾಣಿಯಾತಿ / ಕಾಣಾಚಿ | : | ದತ್ತಿ / ಉಂಬಳಿ - ಭೂಮಿ |
| ಕಾರ್ತಿಕ ಕ್ರಾಪು | : | ನವೆಂಬರ್ ಮತ್ತು ಜನವರಿ ಮಾಹೆಯ ನಡುವೆ ಬೆಳೆಯುತ್ತಿದ್ದ ಬೆಳೆ (ಖಾರಿಫ್) |
| ಕಾಪು / ಕಾಂಪುಲು | : | ಒಕ್ಕಲಿಗ, ವ್ಯವಸಾಯಗಾರ |
| ಕಾಲುವೆ / ಕಾಲ್ವ (ತೆಲುಗು) | : | ನಾಲೆ |
| ಕಾಸಾಯಂ | : | ಹಣದ ಸ್ವರೂಪದಲ್ಲಿ ನೀಡುವ ಆಯ |
| ಕೀಳ್ವಾರಂ / ಕುಡಿವಾರಂ | : | ಪಾಲುಗಾರನ ಭಾಗ; ಕಡಿಮೆ ಪಾಲು |
| ಕೀಳೊಕ್ಕಲು | : | ಒಕ್ಕಲುಗಳು ಹೊಂದಿರುವ ಆಳುಗಳು |
| ಕುಚ್ಚಲ / ಕುಚ್ಚಲ | : | ಭೂಮಿಯ ಅಳತೆ, 8 ಗೊರ್ರು ಅಳತೆ; ಸುಮಾರು 25 ಎಕರೆ ಜಮೀನು |
| ಕುಡಿ | : | ಕುಡಿ ಒಕ್ಕಲಿಗ; ಒಕ್ಕಲಿಗ |
| ಕುಮರಿ | : | ಕಾಡಿನ ಮಗ್ಗಲು ಸವರಿ ಸುಟ್ಟು ಬೆಳೆಮಾಡುವ ಸ್ಥಳ; ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ವ್ಯವಸಾಯ ಬದಲಾವಣೆ |
| ಕುಮ್ಮರಿ(ತೆ) | : | ಕುಂಬಾರ; ಕುಲಾಲ |
| ಕುಳಿ | : | 144 ಅಥವಾ 576 ಚದರ ಭೂಮಿಯ ಒಂದು ಅಳತೆ |
| ಕುಳ | : | ತೆರಿಗೆ; ನೇಗಿಲು |
| ಕೂಲಿಯಾಳು | : | ಬಾಡಿಗೆಯಾಳುಗಳು |
| ಕೂರಿಗೆ | : | ಬಿತ್ತುವ ಸಾಧನ |
| ಕೆಜೆ / ಕೆರೆ | : | ತಟಾಕ |
| ಕೆರೆ ಕೊಡುಗೆ | : | ಕೆರೆಗೆ ಕೊಟ್ಟ ಅನುದಾನ ಇದು ಹಣದ ಸ್ವರೂಪದಲ್ಲಿರಬಹುದು ಇಲ್ಲವೇ ಧಾನ್ಯದ ಸ್ವರೂಪದಲ್ಲಿರಬಹುದು |
| ಕೊಟ್ಟೆ ಕೊಡುಗೆ | : | ಕೊಟ್ಟೆಗಳ ಉಸ್ತುವಾರಿಗಾಗಿ ನೀಡುತ್ತಿದ್ದ ಮಾನ್ಯ |
| ಕೊಡುಗೆ | : | ದತ್ತಿ / ಉಂಬಳಿ, ಬಹುಮಾನ, ಅನುದಾನ |
| ಕೊಳ / ಕುಳಂ | : | ಕೆರೆ /ತಟಾಕ; ಎರಡು ಬೆಟ್ಟಗಳಿಗೆ ಒಡ್ಡುಕಟ್ಟಿ ಹರಿದು ಬರುವ ನೀರನ್ನು ನಿಲ್ಲಿಸುವುದು. |
| ಕೊಳಗ | : | ಅಳತೆಯ ಪಾತ್ರೆ; ಖಂಡುಗದ 1/20ನೇ ಭಾಗ |
| ಕೋರು | : | ಗೇಣಿ; ಧಾನ್ಯ ಸ್ವರೂಪದಲ್ಲಿ ಸರ್ಕಾರಕ್ಕೆ ಸಲ್ಲಿಸುವ ಕಂದಾಯ |
| ಕೋಲ್ | : | ಅಳತೆಯ ಸಾಧನ (ಕಟ್ಟಿಗೆ) |
| ಕೌಲು | : | ನಂಬಿಗೆಯ ಕರಾರು |
| ಕಂದಾಚಾರ | : | ಇಲಾಖೆ |
| ಕಂದಾಯ | : | ಸಿದ್ಧಾಯ; ಭೂಮಿಯ ಮೇಲಿನ ತೆರಿಗೆ |
| ಕಂಪಣ | : | ಆಡಳಿತ ವಿಭಾಗ |
| ಕುಂಟ(ಟೆ) / ಗುಂಟೆ | : | ಭೂಮಿಯ ಅಳತೆ |
| ಕುಳಿ | : | ಚದರಳತೆ |
| ಕುಂಟೆ | : | ವ್ಯವಸಾಯದ ಒಂದು ಸಾಧನ. ಇದರಿಂದ ಮಣ್ಣನ್ನು ಸಮತಟ್ಟಾಗಿ ಮಾಡಲು ಬರುತ್ತದೆ. ನೇಗಿಲನಿಂದ ಸಾಲು ಸಾಲು ಏರುತಗ್ಗು ಆದ ಭೂಮಿ ಕುಂಟೆಯಿಂದ ಸಮನಾಗುತ್ತದೆ. |
| ಗಡ (ಗಳ/ಗವಿ) | : | ಅಳೆಯುವ ಕೋಲು |

| | | |
|---|---|---|
| ಗಡಿ | : | ಎಲ್ಲೆ; ಒಂದು ಕಲ್ಲು |
| ಗಣ ಭೋಗ್ಯ | : | ಗ್ರಾಮದಲ್ಲಿ ದೇವದಾಯವನ್ನು ಮಹಾಜನರೆಲ್ಲರೂ ಪಡೆದ ಅನುಭೋಗಾಧಿಕಾರ |
| ಗಣ್ಡಾಳು (ಗಂಡಾಳು) | : | ಹೊಲ, ಗದ್ದೆ, ಬಯಲುಗಳಲ್ಲಿ ವಾಸಿಸುವ, ದುಡಿವ ಹಳ್ಳಿಯ ಆಳು |
| ಗದ್ಯಾಣ | : | ಸುವರ್ಣದ ನಾಣ್ಯ |
| ಗದ್ದೆ / ಗಟ್ದೆ | : | ತರೀಭೂಮಿ; ನೀರಾವರೀ ಜಮೀನು |
| ಗ್ರಾಮ | : | ಹಳ್ಳಿ; ಆರ್ಥಿಕ ಸಣ್ಣ ಘಟಕ |
| ಗುಡಿಕಟ್ಟು | : | ಶಾನಭೋಗ/ಕುಲಕರ್ಣಿ/ಕರಣಂ - ಇತ್ಯಾದಿ ಹೆಸರುಗಳಿಂದ ವಾಡಿಕೆಯಲ್ಲಿರುವ ಗ್ರಾಮ ಲೆಕ್ಕಿಗ |
| ಗಾರಡಿ | : | ಗಾರುಡಿತನಕ್ಕೆ ನೀಡುತ್ತಿದ್ದ ಉಂಬಳಿ |
| ಗಾಣದೆರೆ | : | ಎಣ್ಣೆತೆಗೆಯುವ ಯಂತ್ರದ ಮೇಲಿನ ತೆರಿಗೆ |
| ಗುತ್ತಗೆ / ಗುತ್ತಿಗೆ / ಗುತ್ತ | : | ಗೇಣಿ; ಕಾಲುಭೂಮಿ; ವ್ಯವಸಾಯಕ್ಕೆ ಕೊಟ್ಟ ಗುತ್ತಗೈ ಭೂಮಿಯ ಮೇಲಿನ ನಿಗದಿಪಡಿಸಿದ ಹಣ |
| ಗೊರ್ರು(ತೆ) | : | 32 ಕುಂಟೆ ಭೂಮಿ; ಒಂದು ನೇಗಿಲಿಗೆ ಸಾಧ್ಯವಾದ ಭೂಮಿ; 3.1637 ಎಕರೆ ಭೂಮಿ |
| ಗೇಣಿ | : | ಒಕ್ಕಲು; ಕೌಲು; ಬಾಡಿಗೆ; ಭೂಮಿಯನ್ನು ಗುತ್ತಿಗೆಗೆ ಕರಾರಿಗೆ - ಹಿಡಿಯುವುದು. ಕೌಲು ಕರಾರು ಮಾಡಿಕೊಳ್ಳುವುದು |
| ಗೋಚರ್ಮ | : | ಹಸುವಿನ (ಎತ್ತಿನ) ಚರ್ಮ; 1000 ಹಸು ಹಾಗೂ 100 ವೃಷಭಗಳು ಸೇರಿ ಮೇಯುವ ಅಳತೆಯ ಭೂಮಿ |
| ಗೋಚರ | : | ಹುಲ್ಲುಗಾವಲು ಭೂಮಿ (ಹತ್ತುನಿವರ್ತನ ಭೂಮಿ) |
| ಗೌಡ / ಗಾವುಂಡ | : | ಗ್ರಾಮ ಮುಖ್ಯಸ್ಥ, ಗ್ರಾಮ ಮುಖಂಡ |
| ಗೌಡಿಕೆ | : | ಪಟೇಲ ಅಧಿಕಾರ; ಗ್ರಾಮದ ಒಡೆತನ |
| ಗುಡಿಮಾನ್ಯ | : | ದೇವಾಲಯಕ್ಕೆ ನೀಡುತ್ತಿದ್ದ ಬಾಡಿಗೆ ರಯಿತ ಭೂಮಿ |
| ಚತುಸ್ಸೀಮೆ / ಸೀಮಾತುರ್ಪು | : | ಹೊಲ, ಗದ್ದೆ, ತೋಟ ಹಾಗೂ ಊರುಗಳ ನಾಲ್ಕೂ ಸೀಮೆಗಳ - ಗಡಿಗೆರೆಗಳು |
| ಚವಕ ಭೂಮಿ (ಚವುಕ/ಚವುಳು) | : | ಚತುರಶ್ರ/ಸವುಳು ಭೂಮಿ |
| ಚಾವಡಿ | : | ನ್ಯಾಯಾಲಯ |
| ಚಿತ್ರಮೇಳ | : | ವ್ಯವಸಾಯಗಾರರ (ವೆಟ್ಟೂವಿರ) ಸಂಘ |
| (ಶಿತ್ತಿರಮೇಟಿ) | : | ನೇಗಿಲು (ಹಲ) ಈ ಸಂಘದ ಚಿಹ್ನೆಯಾಗಿತ್ತು. ನೇಗಿಲು ಚಿಹ್ನೆಯ ಗಡಿಗಳು |
| ಚೇನು (ತೆ) | : | ಕ್ಷೇತ್ರ; ಭೂಮಿ (ಹೊಲ) |
| ಜಲಸೂತ್ರ | : | ಅಭಿಯಂತ (ನೀರಾವರಿಗೆ ಸಂಬಂಧಿಸಿದ ಇಂಜನೀರ್); ನೀರಾವರಿಯ ವಿಜ್ಞಾನ |
| ಜೋಡಿ | : | ಇನಾಮು |
| ಜ್ಯೋತಿಷ್ಯ | : | ಭವಿಷ್ಯ; ಖಗೋಳ ವಿಜ್ಞಾನ; ಗ್ರಹಗತಿಫಲ ವಿಜ್ಞಾನ |
| ತಳಾರ / ತಳಾರಿ | : | ಗ್ರಾಮರಕ್ಷಕ; ಓಲೆಕಾರ; ವಾಲಿಕಾರ; ತಳವಾರ ಇತ್ಯಾದಿ |
| ತಿರುವಿಡಿಯಾಟ್ಟಂ (ತಮಿಳು) | : | A gift (D.C. Sircar) ಬಹುಮಾನ; |

| | | |
|---|---|---|
| ತೂಮು | : | ಖಂಡಿಯ (ಖಂಡುಗದ) 1/20ನೇ ಭಾಗದ ಅಳತೆ; ಭೂಮಿಯ ಒಂದು ಅಳತೆ |
| ತೆರೆ | : | ಸುಂಕ; ತೆರಿಗೆ |
| ತೊರೆ | : | ಹಳ್ಳ; ನೀರಿನ ಹರಿ |
| ತೋಟ / ತೋಟ ಭೂಮಿ | : | ಬಾಗಾಯ್ತು; ತೋಟ |
| ತೋಟಾರಂಭ | : | ತೋಟ ವ್ಯವಸಾಯ |
| ದಶವಂದ / ದಶಬನ್ಧ (ಪತ್ತೊನ್ದಿ) | : | ಕೆರೆ ಕಟ್ಟೆ ಇತ್ಯಾದಿಗಳ ಜಲವನ್ನು ಬಳಸಿಕೊಂಡುದಕ್ಕೆ ಕೊಡಬೇಕಾದ ತೆರಿಗೆ (1/10 of the produce) (ಫಸಲಿನ 1/10 ಅಂಶ) |
| ದಂಡಿಗೆ ಕೊಡುಗೆ | : | ಪಲ್ಲಕ್ಕಿ ಮತ್ತು ಅದನ್ನು ಹೊರಲು ಬೇಕಾದ ಊಳಿಗದವರ ನೇಮಕ |
| ದಳವಾಯಿ / ದಣ್ಣಾಯಕ | : | ಸೇನಾಪತಿ; ಸೈನ್ಯದ ಮುಖ್ಯಸ್ಥ |
| ದಾನ | : | ಕೊಡುಗೆ; ಉಂಬಳಿ; ದತ್ತಿ |
| ದೇವದಾಯ / ದೇವದಾನ ದೇವಸ್ವಮ್ | : | ದೇವಾಲಯಗಳಿಗೆ ಬಿಟ್ಟ ದತ್ತಿ |
| ಧಾನ್ಯಾಯ/ಧಾನ್ಯಾದಾಯ | : | ಧಾನ್ಯ ಸ್ವರೂಪದ ತೆರಿಗೆ |
| ನಞ್ಜಿ | : | ವ್ಯವಸಾಯಕ್ಕೆ ಸಿದ್ಧವಿರುವ ತರೀಭೂಮಿ |
| ನಾಟ್ಟಾರ್ | : | ನಾಡುಗಳ ಸಭೆ (ಒಕ್ಕೂಟ) |
| ನಾಡು | : | ಆಡಳಿತದ ಒಂದು ವಿಭಾಗ; ಹಲವು ಹಳ್ಳಿಗಳು ಊರುಗಳು ಸೇರಿ 'ನಾಡು' ಆಗುತ್ತದೆ. |
| ನಾಯಕ | : | ಮುಖ್ಯಸ್ಥ; ವಿಜಯನಗರ ಕಾಲದಲ್ಲಿ ಸೇನೆಯ ಮುಖ್ಯಸ್ಥ ಇಲ್ಲವೇ ಪಾಳೆಯಪಟ್ಟಿನ ಒಡೆಯ |
| ನಾಯಕತನ/ನಾಯಂಕಾರ | : | ಸೇನಾ ಸಿಬ್ಬಂದಿ ಸೇವೆಗೆ ಪಡೆಯುತ್ತಿದ್ದ ಉಂಬಳಿ |
| ನಿಧಿ | : | ದ್ರವ್ಯ |
| ನಿರೂಪ | : | ಆಜ್ಞೆ |
| ನಿವರ್ತನ | : | ಭೂಮಿಯ ಒಂದು ಅಳತೆ; ಬಗೆ(ಗೆ); ಎಕರೆಯ 5/8ನೇ ಭಾಗ |
| ನೀರಗಂಟಿ /ನೀರನಿಕ್ಕಾರ | : | ನೀರನ್ನು ಬಿಡುವ ಸರ್ಕಾರಿ ಕೆಲಸ |
| ನೀರಾರಂಭ/ನೀರುನೆಲ | : | ನೀರಿನ ಆಶ್ರಯದ ಬಳಿ ಹೊಸದಾಗಿ ವ್ಯವಸಾಯವನ್ನು ಆರಂಭಿಸುವ ಭೂಮಿ |
| ನೆಲ್ಲಾಯಂ | : | ಬತ್ತಾಯ (ಬತ್ತಾದಾಯ) |
| ಪಗೋಡ | : | ಒಂದು ಬಗೆಯ ನಾಣ್ಯ |
| ಪಟ್ಟಣಸ್ವಾಮಿ | : | ವ್ಯಾಪಾರಿಗಳ ಮುಖ್ಯಸ್ಥ |
| ಪಟ್ಟೆ | : | ಖಾತೆ, ಜಮೀನ ಒಡೆತನದ ಹಕ್ಕು |
| ಪ್ರಜೆ | : | ಜನ; ಜನಪದ |
| ಪ್ರಭು ಗಾವುಂಡ | : | ಮುಖ್ಯಗೌಡ; ಗೌಡರ ಒಡೆಯ |
| ಪ್ರಸಾದ | : | ನೈವೇದ್ಯ, ನೈವೇದ್ಯಕ್ಕೆ ಕೊಟ್ಟ ಕೊಡಿಗೆ |
| ಪಾಳೆಂ | : | ಸೇನೆಯ ಚಟುವಟಿಕೆಗೆ - ಸೇವೆಗೆ ನೀಡುತ್ತಿದ್ದ ಸಣ್ಣ ಉಂಬಳಿ |
| ಪಾಳೇಯಗಾರರು / | | |

| | | |
|---|---|---|
| ಪಾಳೈಕ್ಕಾರರು | : | ನಾಯಕರ ಕೆಳಗೆ ಪಾಳೆಯಗಳನ್ನು ಆಳುತ್ತಿದ್ದ ಅಧೀನ ಅಧಿಕಾರಿ (ಮುಖಂಡ) |
| ಪುಞ್ಜೈ | : | ಬೆದ್ದಲು ಭೂಮಿ / ಖುಷ್ಕಿ |
| ಪುಟ್ಟಿ | : | ಒಂದು ಅಳತೆ; ಇದು 20 ತೂಮುಗಳಿಗೆ ಸಮ ಇರುತ್ತದೆ |
| ಪುನ್‌ಪೈರ್ | : | ಬೆದ್ದಲು ಭೂಮಿಯಲ್ಲಿ ಬೆಳೆಯುವ ಪೈರು |
| ಪುರುಷಾರ್ಥ | : | ಮನುಷ್ಯನು ಆಶಿಸುವ ನಾಲ್ಕು ಆಸೆಗಳು ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ |
| ಪುಲ್ಲರಿ | : | ಹುಲಬನ್ನಿ; ಹುಲ್ಲನ್ನು ಮೇಯಿಸುವುದಕ್ಕೆ ಕೊಡುತ್ತಿದ್ದ ಸುಂಕ |
| ಪೂರ್ವ ಮರ್ಯಾದೆ | : | ಅನುಚಾನವಾಗಿ ಬಂದ (ಪರಂಪರಾಗತವಾಗಿ ಬಂದ) ಮರ್ಯಾದೆ ಹಕ್ಕು |
| ಪೊಗದಿ | : | ಇಡುಗಂಟು, ಠೇವಣಿ |
| ಪೋಡು (ತೆ.ಪೋಡ್ಲು) | : | ಅಡವಿಯನ್ನು ಕಡಿದು ಭೂಮಿಯನ್ನು ಸಾಗುವಳಿ ಮಾಡುವುದು |
| ಬಯಲು | : | ಮೈದಾನ; ಮಾಳ; ಬಯಲು ಭೂಮಿ, ಕೆರೆಯ ಕೆಳಗಿರುವ ಭೂಮಿ |
| ಬಲುತ್ತಿ | : | ೧೨ ರೀತಿಯ ಸೇವೆ ಮಾಡುವ ಗ್ರಾಮದ ನಾಯಕರು |
| ಬ್ರಹ್ಮದೇಯ / ಬ್ರಹ್ಮಾದಾಯಮು(ತೆ) | : | ಬ್ರಾಹ್ಮಣರಿಗೆ ಕೊಟ್ಟ ಭೂಮಿ |
| ಬಾವಿಮಾನ್ಯ | : | ಬಾವಿಗೆ ನೀಡಿದ (ಜೀರ್ಣೋದ್ಧಾರಕ್ಕೆ ಕೊಟ್ಟ) ದತ್ತಿ |
| ಬಿ(ಬಟ್ಟಿ)ಟಿ ಬಿರಾಡ | : | ಬೇಗಾರಿ ಸುಂಕ ಇತ್ಯಾದಿ |
| ಬಿತ್ತುವಟ್ಟ | : | ನೀರಾವರಿಯ ಆಕರ (ಕೆರೆ, ಕಟ್ಟು ಹಾಗೂ ಬಾವಿ)ಗಳನ್ನು ಸುಸ್ಥಿತಿಯಲ್ಲಿಡುವ ಸಿಬ್ಬಂದಿಗೆ - ಆಕರಗಳಿಗೆ (ಜೀರ್ಣೋದ್ಧಾರಕ್ಕೆ) ಬಿಟ್ಟ ಕಂದಾಯವಿಲ್ಲದ ಭೂಮಿ |
| ಬಣಜಿಗ | : | ವ್ಯಾಪಾರ ವೃತ್ತಿಯ ಸಮುದಾಯ |
| ಬಳ್ಳ | : | ಧಾನ್ಯ ಅಳತೆಯ ಸಾಧನ |
| ಬೀಜವರಿ | : | ಒಂದು ನಿರ್ದಿಷ್ಟ ಪ್ರಮಾಣದಷ್ಟು ಬೀಜವನ್ನು ಹಿಡಿಯುವ ಭೂಮಿ |
| ಬೆಟ್ಟು | : | ಬೆಟ್ಟ; ಬೆಟ್ಟದಲ್ಲಿ (ಎತ್ತರದಲ್ಲಿ) ಇರುವ, ವರ್ಷಕ್ಕೆ ಒಂದೇ ಬೆಳೆಯನ್ನು ನೀಡುವ ಗದ್ದೆ, ಎರಡನೇ ದರ್ಜೆಯ ಬೀಡಿಗೆ ಭೂತೆರಿಗೆ ಮಾನ್ಯ (Quilrent on land) ಭೂಮಿ |
| ಬೆದ್ದಲು | : | ಒಣಭೂಮಿ, ಖುಷ್ಕಿ ಭೂಮಿ, ಮಳೆಯಿಂದ ಬೆಳೆ ಬೆಳೆಯುವ ಭೂಮಿ, |
| ಬೇಸಾಯ | : | ವ್ಯವಸಾಯ |
| ಭೋಗ | : | ಅನುಭೋಗಕ್ಕೆಂದು ನೀಡಿದ ಭೂಮಿ, ಹಣ ಇತ್ಯಾದಿ |
| ಭೋಗ್ಯ | : | ಅನುಭೋಗಿಸುವುದಕ್ಕೆ ನೀಡಿದುದು |
| ಬಂಡಾರ (ಭಂಡಾರ) | : | ಖಜಾನೆ |
| ಬಂಡಿ | : | ಚಕ್ಕಡಿ; ಗಾಡಿ; ಬಂಡಿದೆರೆ=ಸುಂಕ (ಬಂಡಿಯ ಸುಂಕ) |
| ಬಂದರವಾಡ (ಬಂಜರವಾಡ) | : | ಸರ್ಕಾರಿ ಭೂಮಿ |
| ಭತ್ತಾದಾಯ | : | ನೆಲ್ಲನ್ನೇ ನೀಡುವ ಪಡೆಯುವ ಆದಾಯ / ತೆರಿಗೆ |
| ಮಕ್ಕಿ | : | ಭತ್ತದ ಗದ್ದೆ |
| ಮಜೇಲು | : | ಎರಡನೆಯ ದರ್ಜೆಯ ಭತ್ತದ ಭೂಮಿ; ಒಂದು ತರೀಬೆಳೆ ಇನ್ನೊಂದು ಖುಷ್ಕಿ ಬೆಳೆ. ಹೀಗೆ ಎರಡು ಬೆಳೆ ಬೆಳೆಯುವ ಭೂಮಿ |

| | | |
|---|---|---|
| ಮಠಪುರ / ಮಡಪುರಂ | : | ಮಠಗಳು ಹೊಂದಿದ ಒಂದು ಗೇಣಿಯ ಬಗೆ |
| ಮಡಿ | : | ಭತ್ತದ ಭೂಮಿ; ತೋಟದ ತಳಭೂಮಿ |
| ಮಣ | : | ಒಂದು ತೂಕದ ಅಳತೆ |
| ಮತ್ತರ / ಮರುತರು | : | ಭೂಮಿಯ ಒಂದು ಅಳತೆ |
| ಮಹಾಜನರು | : | ಬ್ರಹ್ಮದೇಯ ಗ್ರಾಮದ ಮುಖ್ಯಸ್ಥರು |
| ಮಾಪನ | : | ಭೂಮಿಯನ್ನು ಅಳೆಯುವ ಒಂದು ಅಳತೆ. ವೇಳಿಯ 1/20 |
| ಮಾಡ | : | ಒಂದು ನಾಣ್ಯ; ಪಗೋಡೆಯ ಅರ್ಧ ಭಾಗ |
| ಮಾನ್ಯ | : | ಇನಾಂ ಭೂಮಿ |
| ಮಿರಾಶಿ | : | ವಂಶಪಾರಂಪರ್ಯ ಹಕ್ಕು |
| ಮುಕ್ಕಂದಾಯ | : | ಕಂದಾಯವನ್ನು ಮೂರು ಭಾಗದಲ್ಲಿ ಸಂದಾಯ ಮಾಡುವುದು |
| ಮೂಡೆ | : | ಭೂಮಿಯ ಒಂದು ಅಳತೆ; ಎಕರೆಯ 1 13/100 ಭಾಗ |
| ಮೇಡಿ (ಮೇಟಿ) ಪಾಲು | : | ರೈತನ ಪಾಲು |
| ಮೇರ (ತೆ.ಮೆರ) | : | ಫೀಜು; ಶುಲ್ಕ |
| ಮೇಲವಾರುಂ | : | ಭೂಮಾಲಿಕನ ಪಾಲು; ಹೊಲದವನ ಪಾಲು |
| ಯೆರೆ ಭೂಮಿ /ಯರೆಗದ್ದೆ | : | ಕಪ್ಪು ಭೂಮಿ; ಕಪ್ಪು ಭೂಮಿಯ ಗದ್ದೆ |
| ಯಲ್ಲ (ಎಲ್ಲೆ) / ಯಲ್ಲಮಾನ್ಯ | : | ಸೀಮೆಗಳನ್ನು ರಕ್ಷಿಸುವ ಕೆಲಸಕ್ಕೆ ನೀಡಿದ ಉಂಬಳಿ |
| ಯಾ (ಏ)ತ | : | ಕಪಿಲೆ; ಮೊಟ್ಟೆ |
| ರಕ್ತ ಕೊಡಿಗೆ / ರುದಿ (ಧಿ) ರ ಪಟ್ಟಿ | : | ರಕ್ತಮಾನ್ಯ; ಯುದ್ಧದಲ್ಲಿ ಮರಣವನ್ನಪ್ಪಿದವರಿಗೆ ಕೊಡುತ್ತಿದ್ದ ಉಂಬಳಿ |
| ರಜ್ಜುಕ | : | ಹಗ್ಗ; ಮೋಜಣಿ ಅಧಿಕಾರಿ |
| ರಕ್ಷಾಬೋಗಂ | : | ರಕ್ಷಣೆಗಾಗಿ ಕೊಡುವ ಪೋಲಿಸ್ ಸುಂಕ ತಮಿಳುನಾಡಿನಲ್ಲಿ ಪ್ರಚಲಿತ |
| ರಾಚ ಗಡೇಲು | : | ರಾಜ್ಯದ ಕಣಜಗಳು |
| ರಾಚ (ರಾಜ) | : | ಸರ್ಕಾರಿ ಭೂಮಿ |
| ರಾಜ (ರಾಚ)ಪಾಲು | : | ರಾಜನ ಭಾಗ |
| ರಾಜ್ಯ | : | ಆಡಳಿತ ವಿಭಾಗ |
| ರೂಕ(ತೆ) | : | ಒಂದು ನಾಣ್ಯ; ಘನಂ |
| ರೋಖ-ಧಾನ್ಯ | : | ಧಾನ್ಯ ಹಾಗೂ ನಗದೀ ಕಂದಾಯ |
| ರಾಬಿಖ್ರಾಫ್ | : | ವೈಶಾಖ ಬೆಳೆ (ಏಪ್ರಿಲ್ ಮೇ ಮಾಸಗಳ ಮಧ್ಯ ಬೆಳೆಯುವ ಬೆಳೆ) |
| ವಸ್ತುದಾಯ/ವಸ್ತ್ವಾದಾಯ | : | ವಸ್ತುಗಳನ್ನೇ ತೆರಿಗೆ ರೂಪದಲ್ಲಿ ಸಲ್ಲಿಸುವುದು |
| ವ್ಯವಸಾಯ | : | ಆರಂಭ; ಒಕ್ಕಲುತನ; ಕಮತ |
| ವಾರ | : | ಫಸಲಿನ ಒಂದು ಪಾಲು ಅಥವಾ ಹೊಲಗದ್ದೆಗಳಲ್ಲಿನ ಬೆಳೆಯ ಪಾಲು |
| ವೇಣ್ಣೆ | : | ಆಡಳಿತ ವಿಭಾಗ |
| ವೇಳಿ / ವೇಟಿ / ವಾಟಿಕಾ | : | ಭೂಮಿಯ ಅಳತೆಗಳಲ್ಲಿ ಅತ್ಯಂತ ದೊಡ್ಡ ಅಳತೆ 5/20 ದಂಡ; 448 ಎಕರೆ |
| ವೊ(ಬ)ಕ್ಕಲ ಪಾಲು | : | ಒಕ್ಕಲಿಗನ ಪಾಲು; ಉಳುವವನ ಪಾಲು |
| ವೊ(ಬ)ಕ್ಕಲಿಗ | : | ವ್ಯವಸಾಯ ಮಾಡುವವ |

| | | |
|---|---|---|
| ಶಿಸ್ತು | : | ಬಿದನೂರು ರಾಜರು (ಶಿವಪ್ಪನಾಯಕ) ನಿಗದಿಪಡಿಸಿದ ಕಂದಾಯ (ಸಿದ್ಧಾಯ) |
| ಶೂದ್ರಪ್ರಜೆ | : | ಶೂದ್ರಜನ; ಸೇವೆಯನ್ನು ಮಾಡುವ ಜನ ಸಮುದಾಯ (ಕೆಳದರ್ಜೆಯ ಜಾತಿ ಜನ) |
| ಶೂದ್ರವಾಡ | : | ಶೂದ್ರರ ಗ್ರಾಮ |
| ಶೂಲವಾರಿ (ತಮಿಳು) | : | ಒಂದು ಬಗೆಯ ತೆರಿಗೆ |
| ಶ್ರೋತ್ರಿಯಂ | : | ಶ್ರೋತ್ರಿಯ (ಶೃತಿ ಪರಾಂಗತ) ಬ್ರಾಹ್ಮಣನಿಗೆ ಕೊಡುತ್ತಿದ್ದ ಉಂಬಳಿ |
| ಷಡ್‌ಭಾಗ | : | 1/6ನೇ ಭಾಗ; ಷಟ್ಬಂಗ; ಸಟ್ಬಂಗ; ಅರುವಣ; ಬೆಳೆದ ಫಸಲಿನ 1/6 ಭಾಗ |
| ಸನ್ತೆ / ಸಂತೆ | : | ಊರಿನ ಸಂತೆ |
| ಸಪ್ತ ಸಂತಾನಗಳು | : | ರಾಜರ ಧರ್ಮ ಕಾರ್ಯಗಳು; ತಟಾಕ; ಧನ ನಿಕ್ಷೇಪ; ಬ್ರಹ್ಮ ಸ್ಥಾಪನಾ (ಅಗ್ರಹಾರ ಸ್ಥಾಪನಾ); ಶಿವಾಲಯ ನಿರ್ಮಾಣ (ದೇವಾಲಯ ಕಟ್ಟುವುದು); ವನವನ್ನು ಮಾಡಿಸುವುದು; ಸದ್‌ಗ್ರಂಥರಚನೆ ಹಾಗೂ ಪುತ್ರೋತ್ಪಾದನ |
| ಸಮಸ್ತ ಪ್ರಜೆ | : | ಊರಿನ ಸರ್ವಜನ; ಸಮಸ್ತರು |
| ಸಲಗೆ / ಸೊಲಗೆ | : | ಒಂದು ಅಳತೆ; ಬೀಜ ಹಿಡಿಯುವಷ್ಟು ಭೂಮಿ |
| ಸರ್ವಮಾನ್ಯ | : | ಸರ್ವಬಾಧಾಪರಿಹಾರ; ನಿಶ್ಶುಲ್ಕ |
| ಸ್ಮೃತಿಕಾರರು | : | ಧರ್ಮಶಾಸ್ತ್ರಕಾರರು ಹಾಗೂ ಧರ್ಮಶಾಸ್ತ್ರದ ಮೇಲೆ ವ್ಯಾಖ್ಯಾನ ಬರೆಯುವವರು (ಉದಾ - ವಿಜ್ಞಾನೇಶ್ವರ) |
| ಸಾಗುವಳಿ | : | ವ್ಯವಸಾಯ; ವ್ಯವಸಾಯಕ್ಕೆ ಸಿದ್ಧಭೂಮಿ |
| ಸ್ಥಾನತ್ತಾರ | : | ಸ್ಥಾನಪತಿಗಳು; ದೇವಸ್ಥಾನದ ಪಾರುಪತ್ಯಗಾರರು; ದೇವಸ್ಥಾನದ ವಿಶ್ವಸ್ಥ ಮಂಡಳಿ |
| ಸ್ಥಾನಿಕ | : | ಸ್ಥಾನಪತಿ |
| ಸಾಮನ್ತ | : | ಅಧೀನ ದೊರೆ; ಇನಾಂ ಭೂಮಿಯ ಪಕ್ಕದಲ್ಲಿರುವವ |
| ಸಿದ್ಧಾಯ | : | ನಿಗದಿಪಡಿಸಿದ ಕಂದಾಯ |
| ಸೀಮೆ | : | ಗಡಿಗೆರೆಗಳು |
| ಸುವರ್ಣಾದಾಯ / ಸುವರ್ಣಾಯ | : | ಸುವರ್ಣ ರೂಪದಲ್ಲಿ ಬರುತ್ತಿದ್ದ ಕಂದಾಯ; ಆಯ |
| ಸೆಟ್ಟಿಗಳು | : | ವ್ಯಾಪಾರ ಮಾಡುವ ವರ್ತಕರು |
| ಸೇನಬೋವ | : | ಕುಲಕರ್ಣಿ; ಶಾನುಭೋಗ; ಕರಣಂ |
| ಹತ್ತಿಪಂಪು | : | ಹತ್ತಿ ಕೃಷಿಯ ಮೇಲಿನ ತೆರಿಗೆ |
| ಹಣ | : | ಒಂದು ನಾಣ್ಯ; ಫಣಮ್/ ಫನಮ್/ ಬಂಗಾರ / ಬೆಳ್ಳಿಯ ನಾಣ್ಯವೊಂದರ ಹೆಸರು |
| ಹಣ್ದಿಗೆ | : | ಸುಡದ ಮಣ್ಣಿನ ಪಾತ್ರೆ; ಸುಡದ ಪಾತ್ರೆಗಳನ್ನು (ಹಣ್ದಿಗಳನ್ನು) ಮನೆಯ / ಹೊಲದ ಗಡಿಗೆರೆಗಳನ್ನು ಸುತ್ತುವರಿಸುವುದು |
| ಹದಿನೆಂಟು ಸಮಯ | : | 18 ಜಾತಿಗಳು |
| ಹಲರು | : | ಇನಾಂದಾರರು |
| ಹುಲ್ಲು ಕೊಡುಗೆ | : | ಕುದುರೆಗಳಿಗೆ ಹುಲ್ಲನ್ನು ಒದಗಿಸುತ್ತಿರುವವರಿಗೆ ಮಾನ್ಯ ಭೂಮಿ |

| | | |
|---|---|---|
| ಹೊಗೆ ಹಣ | : | ತಂಬಾಕಿನ ಬೆಳೆಗೆ ವಿಧಿಸುತ್ತಿದ್ದ ತೆರಿಗೆ |
| ಹೊಲೆಯ | : | ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ಅಸ್ಪೃಶ್ಯ ಜಾತಿಗೆ ಸೇರಿದ ವ್ಯಕ್ತಿ |
| ಹೊಲ | : | ಕುಷ್ಕಿ ಬೆಳೆ ಮಾಡುವ ನೆಲ |

# ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು - ಒಂದು ಅಧ್ಯಯನ
# (ಕ್ರಿ.ಶ. 1336-1565)

**ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ**
**ಸಲ್ಲಿಸುತ್ತಿರುವ ಮಹಾಪ್ರಬಂಧ**


**ಸಂಶೋಧಕರು**

ಮಹೇಶ್.ಜಿ
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು - 06

**ಮಾರ್ಗದರ್ಶಕರು**

ಡಾ. ಪುಟ್ಟಯ್ಯ *ಎಂ.ಎ., ಪಿಎಚ್.ಡಿ*
ಸಹ ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು - 06



**ಇತಿಹಾಸ ಅಧ್ಯಯನ ವಿಭಾಗ**

ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ
ಮೈಸೂರು - 06

**2013**

## ೧. ಸಂಗಮ ಮನೆತನದ ವಂಶಾವಳಿ




ವಿಜಯನಗರದ ಕೃಷ್ಣದೇವರಾಯನ ಕಾಲ

## ೨. ಸಾಳುವ ಮನೆತನದ ವಂಶಾವಳಿ



ಇ. ತುಳುವ ಮನೆತನದ ವಂಶಾವಳಿ




1. ವೆಂಕಟ I, ಈತನು ಸೋದರಮಾವ ಸಕಲರಾಜು ತಿರುಮಲ ಎಂಬಾತನಿಂದ ಕೊಲ್ಲಲ್ಪಟ್ಟನು ಮತ್ತು ಸಲಕರಾಜು ತಿರುಮಲನೇ ಕೆಲವು ತಿಂಗಳು ರಾಜ್ಯ ಸೂತ್ರ ವಹಿಸಿದನು, ಆಮೇಲೆ ಸದಾಶಿವ ರಾಜನಾದ

ಈ. ಅರವೀಡು ವಂಶವೃಕ್ಷ




ಶ್ರೀರಂಗ III (7)
(ಕಂದನವೊಲು ಗೋಪಾಲರಾಜನಿಗೆ ದತ್ತು (ಕತ್ರಿ. ಶ. 1642-9) 1672ವರೆಗೆ ಬದುಕಿದ್ದ
(ವಿ.ಸೂ. ಕಂಪಗಳಲ್ಲಿ ಕೊಟ್ಟಿರುವ ಅಂಕಿಗಳು ಆಳಿಕೆಗೆ ಬಂದ ಕ್ರಮವನ್ನು ತಿಳಿಸುತ್ತವೆ.)